# ವೀರಶೈವ ಸಂಸ್ಕೃತಿಗೆ ಶಿವಾಚಾರ್ಯರ ಕೊಡುಗೆ!

(ಸಂಪುಟ-೪)

(ಶಿವಾಚಾರ್ಯ ಸಾಂಸ್ಕೃತಿಕ ಇತಿಹಾಸಕ್ಕೆ ಕಾಯಕಲ್ಪ)

ಶ್ರೀಶೈಲ ಸೂರ್ಯ ಸಿಂಹಾಸನಾಧೀಶ್ವರ
ಡಾ॥ ಶ್ರೀ. ಜ. ಚ. ನಿ. ಸನ್ನಿಧಿ

ಶ್ರೀ ಜ.ಚ.ನಿ. ಅಧ್ಯಯನ ಪೀಠ
ಮತ್ತು ಸಂಶೋಧನ ಸಂಸ್ಥೆ
ಶಿವಾಚಾರ್ಯ ತತ್ತ್ವ ತುಂಗೋತ್ರಿ – ಚೈತನ್ಯ ಪಥ
ಬಸವನಗುಡಿ, ಬೆಂಗಳೂರು-೪

ಓಸರಿಸದೆ ಓದಿ !          ಓಂ. ಶಂ.          ಶಿವಾಚಾರ್ಯರ ಕ್ರಾಂತಿ ಚಾರಿತ್ರ !

## ಚಂಗಣಿಗಿಲ ಚಂದೋಟ, - ಚಂಗಣಗಲ ಮಂಟಪ !

### (ಒಂದು ಸೂಳ್ನುಡಿ)

ಮಂಗಳವಾಡದ ಚಂಗಣಿಗಿಲ ಚಂದೋಟದಲ್ಲಿ ಚೆಂಬೊನ್ನದ "ಚಂಗಣಗಲಮಂಟಪ"ದೊಳು ಚಂದ್ರಕಳೆಯು ಶ್ರೀ ರೇವಣಸಿದ್ಧ ಶಿವಾಚಾರ್ಯರೆಂಬ ಜನವನ ವಸಂತೋದಯವಾಗಲು-ಶಿವಾಚಾರ್ಯರು-ಶಿವಾಚಾರಸ್ಥರು-ಶಿವಾಚಾರಿಣಿಯರು ಎಂತೆಂಬ ದುಂಬಿಗಳು ಮೈ-ಮನದುಂಬಿ 'ಸೂಳ್ನುಡಿ'ಗಳೆಂಬ ಅಚ್ಚಗನ್ನಡದ ಅಚ್ಚುಮೆಚ್ಚಿನ ತಂ-ತಂ-ತಂ-ನಾದ ನಿನಾದ ಬನಿಯಾಗಿ ಇನಿದಾಗಿ ಮೊಳಗಿಸಿಹರಯ್ಯ ಹಿರಿಗನ್ನಡ ಸಿರಿನಾಡಿನಲ್ಲಿ ! ಕನ್ನಡತನವ ನಿಲ್ಲಿಸಿಹರಯ್ಯ ! ಅದನು ಮುಮ್ಮೊದಲು ಕಲ್ಯಾಣ ಶರಣ ಶರಣೆಯರು ಮನಸಾರೆ ಆಲಿಸಿ ಆಲಿಸಿ ಆನಂದಿಸಿ ಮರುದನಿಗೈದಿಹರು ನೋಡಾ ತಂತಮ್ಮ ವಚನ ವೈಖರಿಯಲ್ಲಿ ! ಅಚ್ಚಗನ್ನಡ ನುಡಿಬನಕೆ ಬಸಂತವೊದಗಿ ಸುಳಿದೆಗೆದು ನಳಿನಳಿಸಿ ಬೆಳೆದು ಬಂದಿಹುದಯ್ಯ ! ಅಂತಾಗಿ ೧೨ನೆಯ ಶತಮಾನದ ಶರಣ ಶರಣೆಯರಿಗೆ ೧೧ನೆಯ ಶತಮಾನದ ಕಳಾತ್ಮಕ ಕ್ರಾಂತಿಕಾರಿಗಳಾದ ಶಿವಾಚಾರ್ಯ-ಶಿವಾಚಾರಿಣಿಯರೆ ಮೂಲಕಾರಣ ಕಂಡಯ್ಯ ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ !

ಡಾ॥ ಶ್ರೀ. ಜ.ಚ.ನಿ.

# ವೀರಶೈವ ಸಂಸ್ಕೃತಿಗೆ ಶಿವಾಚಾರ್ಯರ ಕೊಡುಗೆ!

(ಸಂಪುಟ ೪)




(ಶಿವಾಚಾರ್ಯ ಸಾಂಸ್ಕೃತಿಕ ಇತಿಹಾಸಕ್ಕೆ ಕಾಯಕಲ್ಪ)
(ಮತ್ತು ಸಂಶೋಧನ ಪ್ರಕಲ್ಪ ಪ್ರಕಲ್ಪ)

ಶ್ರೀಶೈಲ ಸೂರ್ಯ ಸಿಂಹಾಸನಾಧೀಶ್ವರ
**ಡಾ॥ ಶ್ರೀ. ಜ. ಚ. ನಿ. ಸನ್ನಿಧಿ**

ಶ್ರೀ. ಜ.ಚ.ನಿ. ಅಧ್ಯಯನ ಪೀಠ ಮತ್ತು ಸಂಶೋಧನ ಸಂಸ್ಥೆ
ಶಿವಾಚಾರ್ಯ ತತ್ತ್ವ ತುಂಗೋತ್ರಿ – ಚೈತನ್ಯ ಪಥ
**ನಿಜಾನುಭವ ನಿವಾಸ**
ನಂ. ೪೯, ಹ.ಬ. ಸಮಾಜ ಬೀದಿ, ಬಸವನಗುಡಿ
ಬೆಂಗಳೂರು-೫೬೦ ೦೦೪

VEERASHAIVA SAMSKRUTHIGE SHIVACHARYARA KODUGE by Dr. Sri Ja. Cha. Ni. Sannidhi, Publishedby Sri Ja. Cha. Ni. Adhyana Peeta and Samshodhana Samsthe, H. B. Samaja Road, Bangalore-4



Price : 35·00

ಬೆಲೆ : 35-00



ಪ್ರತಿಗಳು : 1000

1990

ಮುದ್ರಕರು : ಲಕ್ಷ್ಮಿ ಮುದ್ರಣಾಲಯ, ಚಾಮರಾಜಪೇಟೆ, ಬೆಂಗಳೂರು-18
ದೂರವಾಣಿ : 627645

ಓಂ. ಶಂ.

# ಮುಮ್ನಾತು

## (ಹಿನ್ನೋಟ)

"ಯಥಾ ಮತ್ಸದೃಶೋ ನಾಸ್ತಿ ಪುರುಷಾಣಾಂ, ತ್ವಯಾ ಸಮಾ-
ಸ್ತ್ರೀಣಾಂ ತಥಾ, ವೀರಶೈವ ಸದೃಶಂ ನಾಸ್ತಿ ವೈ ಮತಂ।"

— ಪಾರಮೇಶ್ವರಾಗಮ

ಶಿವನಿಗೆ ಸಮನಾದ ಪುರುಷನಿಲ್ಲ ; ಶಿವೆಗೆ ಸಮಾನವಾದ ಸ್ತ್ರೀಯಿಲ್ಲ ; ಅಂತೆಯೇ ವೀರಶೈವ ಸಮಾನವಾದ ಮತ್ತೊಂದು ಮತವಿಲ್ಲ.

ವೀರಶೈವ ಸಂಸ್ಕೃತಿ ಸರ್ವ ಸಂಕೀರ್ಣ ಸಂಸ್ಕೃತಿ ! ವೀರಶೈವ ಸಂಸ್ಕೃತಿಯು ಜೀವಾಳ ಶಿವಾಚಾರ ಆಚಾರ ಪದದರ್ಥ ವಿಶಾಲ. ಈ ಪಿಂಡಾಂಡ ವನ್ನು ಮತ್ತು ಬ್ರಹ್ಮಾಂಡವನ್ನು ಬಳಸುವ ಆ ಸಮಂತಾತ್ ಚರತೀತಿ ಆಚಾರ : ಈ ನಿರುಕ್ತಿ ಅರ್ಥವತ್ತಾಗಿದೆ ; ಅವಿರಳವಾಗಿದೆ. ಆಚಾರ ವೆಂದರೆ ನಡತೆ ; ಶಿವಾಚಾರವೆಂದರೆ ಒಳ್ಳೆಯ ನಡತೆ ; ಮತ್ತು ಶಿವನ(ದ) ಆಚರಣೆ ! ಶಿವಾಚಾರವೆಂದರೆ ಸಂಸ್ಕೃತಿಯೆಂದೇ ಅರ್ಥ ! ಸಂಸ್ಕೃತಿಗೆ ಮತ್ತೊಂದು ಪದ, ಅದೇ ಅರ್ಥವುಳ್ಳ ಪದ ಶಿವಾಚಾರ ! ವೀರಶೈವಸಂಸ್ಕೃತಿ ಯೆಂದರೆ ವೀರವತ್ತಾದ ಶಿವ(ಶೈವ) ವತ್ತಾದ ಸಾಧನವೆಂದರ್ಥ ! ಶಕ್ತಿ ಸಂಪನ್ನ ಶಿವ ಸಂಬಂಧ ಕ್ರಿಯೆ (ಕೃತಿ)ಯೆಂದರ್ಥ ! ವೀರಶೈವ ಪದವೆ ವೀರಸಂಸ್ಕೃತಿ ಸೂಚಿತ ! ಅಂತೆಯೇ ವೀರಶೈವ ಪದಕ್ಕೆ ಮೊದಲಿದ್ದ ರುದ್ರ ದೇವ ಉತ್ಪಾದಿತವಾದ ಶಿವಾಚಾರದಲ್ಲಿಯೂ ಸಂಸ್ಕೃತಿ ಸೂಚ್ಯವಾಗಿದೆ. ಒಳ್ನಡತೆಯೆಂದರ್ಥವಾಗುತ್ತದೆ. ಪಾಶುಪತ ಶಿವಾಚಾರವನ್ನು ರುದ್ರ ದೇವನು ಉತ್ಪಾದಿಸಿದರೆ ವೀರಶೈವವನ್ನು ವೀರಭದ್ರನು ಉತ್ಪಾದಿಸು ವನು. ವೀರಶೈವ ಸಂಸ್ಕೃತಿಗೆ ಪುರಾತನ ಪ್ರಭಾನ್ವಿತ ಐತಿಹಾಸಿಕ

ಚಾರಿತ್ರವಿದೆ. ಭಾರತೀಯ ಸಂಸ್ಕೃತಿಗೆ ಅದೇಕೆ ವಿಶ್ವ ಸಂಸ್ಕೃತಿಗೆ ಬುನಾದಿಯಾಗಿದೆ. ವೀರಶೈವ ಸಂಸ್ಕೃತಿಗೆ ಬಹುಮುಖದ ಮೌಲ್ಯವಿದೆ. ವಿಶ್ವ ವಿಶಾಲತೆಯ ತಳಿದ ವೈಶಿಷ್ಟ್ಯವಿದೆ. ಈ ದಿಸೆಯಲ್ಲಿ ಅಧ್ಯಯನ ಚಿಂತನ ಮಾಡಿ ಸುಸ್ಪಷ್ಟವಾಗಿ ಸುಂದರವಾಗಿ ಚಿತ್ರಿಸುವ ಚಿತ್ರಕಾರರಿಲ್ಲ. ಅನಾದಿ ವೀರಶೈವ ಸರ್ವೋತ್ತಮ ಸಾಂಸ್ಕೃತಿಕ ಸೌಧ ನಿರ್ಮಿಸುವ, ನಿರ್ಮಿಸಿ ಆ ಸುಂದರ ಸೌಧದೊಳಗೆ ಸಾಂಸ್ಕೃತಿಕ ಚೈತನ್ಯರಾದ ರುದ್ರ–ಭದ್ರ–ರೇಣುಕ ಮನೋಹರ ಮೌಲ್ಯ ಮೂರ್ತಿಗಳನ್ನು ರೂಪಿಸುವ ರೂವಾರಿಗಳಿಲ್ಲ ; ಶಿಲ್ಪಿಗಳಿಲ್ಲ. ಪುರಾತನ ವೀರಶೈವ ಸಂಸ್ಕೃತಿಯ ಉತ್ಪಾದಕರು ಪ್ರವರ್ತಕರು ಸಂಸ್ಥಾಪಕರು ಪರಿವಿಡಿದು ರುದ್ರ–ಭದ್ರ–ರೇಣುಕ ಶಿವಾಚಾರ್ಯತ್ರಯರು. ಇವರ ಕೊಡುಗೆ ಲೋಕೋತ್ತರವಾಗಿದೆ.

ರುದ್ರೇಣ ದೀಕ್ಷಿತೋ ಭೂತ್ವಾ ಸ್ಕಂದಃ ಶಿವ ಸಮೋಽಭವತ್ ।
ಶಿವಾಚಾರ ರಹಸ್ಯಸ್ಯ ಪಾತ್ರತಾಂಪ್ರಥಮಂ ಗತಃ ॥

ಆದಿತ್ಯ ಪುರಾಣ

"ನಮಾಮಿ ವೀರಭದ್ರಂ ತಂ ಅಸಮಾನ ಪರಾಽಕ್ರಮಂ
ವೀರಶೈವ ಮತಂ ಸ್ಥಾಪ್ಯ ವರ್ಧಯನ್ ಯೋ ಪುರಾ ಭುವಿ ।"

ಸ್ಕಾಂದ ಪುರಾಣ

"ಮದದ್ವೈತ ಪರಂ ಶಾಸ್ತ್ರಂ ವೇದ ವೇದಾಂತ ಸಮ್ಮತಂ ।
ಸ್ಥಾಪಯಿಷ್ಯಸಿ ಭೂಲೋಕೇ ಸರ್ವೇಷಾಂ ಹಿತಕಾರಕಂ ॥"

—ಸಿ. ಶಿಖಾಮಣಿ

ಇದು ಶಿವವಾಣಿ

ಪೂರ್ವದಲ್ಲಿ ಭುವನದಲ್ಲಿ ವೀರಶೈವ ಮತವನ್ನು ಸ್ಥಾಪಿಸಲು ಸಂವರ್ಧಿಸಿದ ವೀರಭದ್ರ ಗುರುವರ್ಯನು ಅಸಮಾನ ಪ್ರರಾಕ್ರಮಿಯು. ಆತನವಿಶಿಷ್ಟ ವೀರತನವನ್ನು ವರ್ಣಿಸಲು – ಅಳೆಯಲು – ಹೋಲಿಸಲು ಅಸದಳ.ಅಷ್ಟೆ ಆತನಪರಾಕ್ರಮು ಪರಿಶುದ್ಧ ; ಶ್ರೇಯ : ಪ್ರದ ಮತ್ತು ಸುರಕ್ಷಿತ, ಶಾಶ್ವತ ; ದೃಢತಮ. ದೃಢಿಕರಿಸುವ ಪರಾಕ್ರಮು. ಹೀಗೆಂದು ವಿಶ್ವದಲ್ಲಿ ವಿಖ್ಯಾತವೀರಭದ್ರ ಗುರುದೇವನಿಗೆ

ಪ್ರಣಾಮ. ಆತನು ಅಂದು ಸಂಸ್ಥಾಪಿಸಿದ ವೀರಶೈವಧರ್ಮ ತನ್ನದೇ ವೀರ್ಯವತ್ತತೆಯಿಂದ ಭದ್ರವತ್ತತೆಯಿಂದ ಅಪ್ರ್ಯಾಹಿತವಾಗಿ ನಡೆದು ಬಂದಿದೆ ; ಬರುತ್ತಿದೆ. ಕಾರಣ ಅದಕ್ಕೆ ಅಂದರೆ ವೀರಶೈವಕ್ಕೆ ಆದರದೇ ಆದ ಸುಪುಷ್ಟ ಸಂಸ್ಕೃತಿಯಿದೆ ; ಸಂಪನ್ನ ಸಂಸ್ಕೃತಿಯಿದೆ. ಸರ್ವ ಪ್ರಾಣಿಗಳಿಗೆ ಸುಖ ಶ್ರೇಯಸ್ಸುಗಳನ್ನುಂಟು ಮಾಡುವ ಸುಸಂಸ್ಕೃತಿಯಿದೆ ; ಸರ್ವ ಸಂಗೋಪನ ಸ್ವಭಾವ ಸಾಮರ್ಥ್ಯವಿದೆ. ಸರ್ವಾಂಗೀಣ ಸಮನ್ವಯ ಭಾವವಿದೆ. ವಿಶಿಷ್ಟ ಅಷ್ಟಾವರಣಗಳನ್ನು ಸೃಷ್ಟಿಸಿದ ರುದ್ರನು, ವೀರಶೈವ ಪಂಚಾಚಾರ ಪ್ರವರ್ತಕನಾದ ವೀರಭದ್ರನು, ಷಟ್‌ಸ್ಥಲ ಸಿದ್ಧಾಂತವನ್ನು ಸಂಸ್ಥಾಪಿಸಿದ ಆದಿರೇಣುಕ ಶಿವಾಚಾರ್ಯರು ಪರಿವಿಡಿದು ಇವುಗಳನ್ನು ವೀರಶೈವಕ್ಕೆ ಕೊಡಮಾಡಿದ್ದಾರೆ– ವಿಶಾಲವಾಗಿ ವಿಕಾಸಮನೋಭಾವದಲ್ಲಿ ; ರುದ್ರ ಭದ್ರರೇಣುಕರು ಭಾರತೀಯರ ಬಾಳಿಗಾಗಿ ಬದುಕಿಗಾಗಿ ಸಂಸ್ಕೃತಿಗಾಗಿ ವಿಶೇಷವಾಗಿ ವೀರಶೈವ ಧರ್ಮಕ್ಕಾಗಿ ಆ ಜೀವ ಶ್ರಮಿಸಿ ಕ್ರಾಂತಿಯೆಸಗಿದ ಕಾರಣಿಕ ಪುರುಷರು. ವಿಶ್ವಾಧಿಕರಾದ ವಿಭೂತಿ ಪುರುಷರು. ವಿಶ್ವಮಾನ್ಯರು. ವಿಶ್ವಕಲ್ಯಾಣವನ್ನೆಸಗಿದ ವಿಶ್ವರೂಪರು. ಜೀವಿಗಳಲ್ಲಿ ಅಸೀಮ ಅನುಕಂಪವುಳ್ಳವರು. ಈ ಮೂವರು ಮಹಾನುಭಾವರು ವೈಯಕ್ತಿಕವಾಗಿ ಅಥವಾ ಕೌಟುಂಬಿಕ (ಆದಿರೇಣುಕ ಶಿವಾಚಾರ್ಯರಿಗೆ ಕುಟುಂಬವಿಲ್ಲ)ವಾಗಿ ಮಾತ್ರ ಬೆಳೆದವರಲ್ಲ. ದೀನ ದಲಿತರಾದಿಯಾಗಿ ಸಾರ್ವಜನಿಕವಾಗಿ ಶ್ರೇಯೋಭ್ಯುದಯಗಳನ್ನು ಸಾಧಿಸಿದವರು ; ಸರ್ವರಲ್ಲಿ ಸಕ್ರಿಯಾಶೀಲತೆಯನ್ನು ರೂಪಿಸಿದವರು. ಪರಿವಿಡಿದು ರುದ್ರ–ಭದ್ರ–ರೇಣುಕರು ರುದ್ರಗಣ–ವೀರಗಣ ಅಂದರೆ ವೀರಮಾಹೇಶ್ವರಗಣ, ಶಿವಾಚಾರ್ಯ ತಿಂತಿಣಿಗಳನ್ನು ಮತ್ತು ಮರುದ್ಗಣ ಭದ್ರಗಣ ಶಿವಗಣರನ್ನು ರೂಪಿಸಿ ಹೆಸರಾಂತವರು. ರುದ್ರಕನ್ನೆಯರನ್ನು ಸಪ್ತಮಾತೃಕೆಯರನ್ನು ಶಿವಾಚಾರಿಣಿಯರನ್ನು ಸೌಜನ್ಯ ಸೌಶೀಲ್ಯಗಳೊಡನೆ ಸರ್ವಸ್ವಾತಂತ್ರ್ಯದಲ್ಲಿ ಯಾವ ನಿರ್ಬಂಧವಿಲ್ಲದೆ ಬೆಳೆಸಿದವರು. ಶಿವಾಚಾರ ಸದಾಚಾರಾದಿಗಳನ್ನು ಬೋಧಿಸಿ ದೃಷ್ಟಿಮನ ಭಾವಗಳ ನಡೆನುಡಿಗಳ ವಿಕಾಸವನ್ನು ಸಾಧಿಸಿದರು. ಪದಾರ್ಥ ನಷ್ಟಾತ್ಮಕ–ಪ್ರಾಣಿಹಿಂಸಾತ್ಮಕ ಯಜ್ಞಯಾಗಾದಿಗಳನ್ನು ನಿರೋಧಿಸಿದರು. ಅಸತ್ಯ ಅಸೂಯೆಗಳನ್ನು ಮದ ಮತ್ಸರಗಳನ್ನು ಅಹಂಕಾರ ಅತ್ಯಾಶೆಗಳನ್ನು ಶೋಷಣೆ ಘರ್ಷಣೆಗಳನ್ನು ಬಿಡಿಸಿದರು. ವೀರಭದ್ರನು ಲಿಂಗದ ವೀರರನ್ನು ವೀರಗಾಸೆಯುವರನ್ನು

ಪುರವಂತ ಕಾಯಕದವರನ್ನು ರೂಪಿಸಿ ಆರ್ಯರಿಂದ ಆಗಾಗ ಆಗುತ್ತಿದ್ದ ಆ ನಿಟ್ಟಿನ ದಾಳಿ ದಬ್ಬಾಳಿಕೆಗಳನ್ನು ನಿಲ್ಲಿಸಿದನು. ರುದ್ರ ರೇಣುಕರು ಓಗರ ನೀರು ಗಳನ್ನಿತ್ತು ಭಾರತಿಯರ ಬಡತನವನ್ನು ಬಳಲಿಕೆಯನ್ನು ನೀಗಿಸಿದರು. ಮುಕ್ತಿ ಮಂಟಪ-ಪೂಜಾಮಂಟಪ-ಚಿಚ್ಛಕ್ತಿಜ್ಞಾನ ನಿಲಯಗಳನ್ನು ಪರಿವಿಡಿದು ರುದ್ರ-ಭದ್ರ-ರೇಣುಕರು ಕಟ್ಟಿ ಭಾರತೀಯರ ಭವಬಂಧನ ಕರ್ಮಬಂಧನ ಅಜ್ಞಾನ ಬಂಧನಗಳನ್ನು ಇಲ್ಲದಂತೆ ಮಾಡಿ ಜೀವನ್ಮುಕ್ತರನ್ನಾಗಿಸಿದರು. ರುದ್ರ ಭದ್ರರು ಗಣತಂತ್ರವನ್ನು ಬೆಳಸಿದರೆ ರೇಣುಕರು ಭೂರುದ್ರ-ಭಕ್ತಸಂಘ, ಮಾಹೇಶ್ವರ ವೀರಮಾಹೇಶ್ವರ ಮಂಡಲಗಳನ್ನು ರೂಪಿಸಿ ಪರಸ್ಪರ ಸಹಕಾರ ಸಹಜೀವನಗಳನ್ನುಂಟು ಮಾಡಿದರು. ಭೇದ-ವಾದಗಳಿಗೆ ಆದಷ್ಟು ಅವಕಾಶ ವಿಲ್ಲದಂತೆಸಗಿದರು. ಪಂಥ ಪಂಗಡಗಳಿಗೆ ಮೌಲ್ಯವಿಲ್ಲದಂತೆಸಗಿದರು. ರುದ್ರ ದೇವನು ವಿಶೇಷವಾಗಿ ವೈದ್ಯ ಚಿಕಿತ್ಸೆಯಿಂದ ಯೋಗ ಪ್ರಸಾರದಿಂದ ಕೃಷಿಯ ಉತ್ಪಾದನೆಯಿಂದ ಪಶುಸಂಗೋಪನದಿಂದ ರೋಗರುಜಿನಗಳನ್ನು ಹಸಿವು ನೀರಡಿಕೆಗಳನ್ನು ಹೊಡೆದೋಡಿಸಿ ಹದುಳಿಗರನ್ನಾಗಿಸಿ ಬಹುಜನಪ್ರಿಯನಾದನು. ಶಿವಾಚಾರ ದೀಕ್ಷೆಯನ್ನಿತ್ತು ಸದಾಚಾರಿಗಳನ್ನಾಗಿಸಿದನು. ಸಂಸ್ಕಾರ ಸಂಸ್ಕೃತಿ ಗಳನ್ನು ವೃದ್ಧಿಸಿ ಶುದ್ಧ ಹೃದಯರನ್ನಾಗಿಸಿದನು. ಸಾರ್ವಜನಿಕರನ್ನು ಸಂಸ್ಕಾರಿ ಗಳನ್ನಾಗಿಸಿದನು ; ಸಂಸ್ಕೃತಿ ಶೀಲರನ್ನಾಗಿಸಿದನು. ರುದ್ರ-ಭದ್ರ-ರೇಣುಕರು ಯಾವ ಬಗೆಯ ರಾಜಕೀಯಕ್ಕೆ ರಾಗಿಸಲಿಲ್ಲ. ರಾಜರಾಗಲು ಬಯಸಲಿಲ್ಲ. ರೇಣುಕ ಶಿವಾಚಾರ್ಯರಂತು ತಮ್ಮ ನಿಡುಗಾಲ ಬಾಳಿನಲ್ಲಿ ಕ್ಷಾತ್ರಬಲಕ್ಕೆ ರಕ್ತ ಕ್ರಾಂತಿಗೆ ಸಾಮೂಹಿಕ ಬಲಿದಾನಕ್ಕೆ ಅದೆಷ್ಟೂ ಅವಕಾಶವನ್ನೀಯಲಿಲ್ಲ. ಆಚಾರ ವಿಚಾರ ಅಹಿಂಸಾದಿಗಳು ವೈಯಕ್ತಿಕವಾಗಿ ಸೀಮಿತವಾಗಿ ಉಳಿಯು ವಂತೆ ಮಾಡದೆ ಸಾಮೂಹಿಕವಾಗಿ ಆಚರಿಸುವಂತೆಸಗಿದರು. ಹತ್ತು ಹನ್ನೆರಡು ಸಾವಿರ ಶಿವಾಚಾರ್ಯರನ್ನು ರೂಪಿಸಿದರು. ರುದ್ರನು ಅಸಂಖ್ಯ ರುದ್ರಗಣ- ಮರುದ್ಗಣರನ್ನು ವೃದ್ಧಿಸಿ ದೇಶ ದೇಶಿಯರ ಸೇವೆ ಸಂರಕ್ಷಣಗಳಿಗೆ ನಿಯಮಿಸಿದನು. ಪಶುಗಳನ್ನೆಲ್ಲ ಸಾಕಿ ಸರ್ವಜೀವ ದಯಾಪಾರಿಯಾದನು. ಪಶುಪತಿಯೆಂದೆನಿಸಿದನು. ವಿಶಾಲ ಕೃಷಿಕಾಯಕದಿಂದ "ಸಂಕರ್ಷಣ ಮೂರ್ತಿ" ಯೆಂದೆನಿಸಿದನು. ವಿಶಾಲವಾದ ವೈದ್ಯಸೇವೆಯಿಂದ 'ಭಿಷಕ್ತಮ' ಎಂಬ ಬಿರುದನ್ನು ಪಡೆದನು, ಅತುಲ ಪರಾಕ್ರಮಿಯಾಗಿ ಧರ್ಮಿಯಾಗಿ "ವೃಷಭ"

ಎಂದೆನಿಸಿದನು. ಅನಂತರುದ್ರನೆಂದೆನಿಸಿದನು. ಆಯುಷ್ಯವನ್ನು ಅಭಿವೃದ್ಧಿಸಿಕೊಂಡು 'ಕಾಲಾಗ್ನಿರುದ್ರ" ನೆಂದೆನಿಸಿದನು ತುಂಬಾ ತೇಜಸ್ವಿಯಾಗಿ 'ಆದಿತ್ಯ' ಪ್ರಶಸ್ತಿ ಪಡೆದನು. ಇವೆಲ್ಲ ಅಮೂಲ್ಯ ಗುಣಗಳಿಂದ "ಏಕಏವರುದ್ರೋ ನ ದ್ವಿತೀಯ...." ಎಂದು ಹೆಸರಾಂತನು. 'ವಿಶ್ವಾಧಿಪೋ ರುದ್ರೋ ಮಹರ್ಷಿಃ' 'ವಿಶ್ವಾಧಿಕೋ ರುದ್ರೋ ವಿಶ್ವಾಧಿಪೋ ರುದ್ರಃ' ಎಂದು ವಿಶ್ವಖ್ಯಾತಿಯನ್ನು ಗಳಿಸಿದನು. ಮಹರ್ಷಿಯೆಂದು ಕವಿಯೆಂದು ಖ್ಯಾತನಾದನು. ಭಾರತದ ಪ್ರಪ್ರಥಮ ವೈದ್ಯನು, ಕೃಷಿಕನು, ಯೋಗಿಯು, ಸ್ಥಿರಾಂಗನೂ, ತೇಜಸ್ವಿಯೂ ಆದಂತೆ ಪ್ರಪ್ರಥಮ ಕವಿಯೂ ಆದನು. ಗಾಯತ್ರೀ ಅನುಷ್ಟುಪ್ ಛಂದಗಳನ್ನು ರೂಪಿಸಿದನು. ಶಿವಧರ್ಮಗಳನ್ನು ಸಂವರ್ಧಿಸುವನು. ಜಗದ್ಗುರು, ಭಗವಾನ್, ಸರ್ವಾತ್ಮ, ಪರಮಾತ್ಮ ಊರ್ಧ್ವರೇತ, ತ್ರಿಯಂಬಕ, ತ್ರಿಪುರಾಂತನ, ರುದ್ರ ಗುರು, ರುದ್ರಲಿಂಗ, ರುದ್ರಜಂಗಮ ವೆಂದೆನಿಸಿದ ಅನುಪಮ ಪ್ರಭಾವಿ ಶ್ರೀರುದ್ರದೇವನು. ದೀನ ದಲಿತರಿಗೆ ಅಷ್ಟಿಷ್ಟು ನೆರವಾದವರು ಇತ್ತೀಚಿನ ವೀರಶೈವ ಚಾರಿತ್ರದಲ್ಲಿ ಸಿಕ್ಕವರು ; ಆದರೆ ದೀನ ದಲಿತರ ಜೊತೆಗೆ ಕಾಡ ಪಶುಗಳನ್ನೂ ಅನುಕಂಪದಿಂದ ಆತ್ಮೀಯತೆಯಿಂದ ಪರಿರಕ್ಷಿಸಿದವರಿಲ್ಲ ; ಪರಿರಕ್ಷಿಸಿದಾತನು ರುದ್ರನೊಬ್ಬನೆ ! ಕುಲಾಲ, ಕರ್ಮಾರ, ಉಗಣ, ಪುಂಜಿಷ್ಟ, ನಿಷಾದ ಹೀಗೆ ಎಲ್ಲ ಪರಿಶಿಷ್ಟ ಜನರನ್ನು ಉದ್ಧರಿಸಿದ ಉದಾತ್ತನು. ನೇಪಾಳದಲ್ಲಿ ಮಹಾದೇವ ಆತನ ಪತ್ನಿಯರಾದ ಅಂಬವ್ವೆ ಆದವ್ವೆ ಪರವ್ವೆಯರ ಪಾವನಗರ್ಭದಲ್ಲಿ ಜನಿಸಿ ತನ್ನ ಏನೆಲ್ಲ ಸಾಂಸ್ಕೃತಿಕ ಕ್ರಾಂತಿಗಳಿಂದ ಭಾರತಾದ್ಯಂತ ಸಂಚರಿಸಿ, ತನ್ನ ರುದ್ರಗಣ ಮರುದ್ಗಣರನ್ನು ಸಂಚರಿಸ ಹಚ್ಚಿ ಸರ್ವೋದ್ಧಾರ ಮಹಾ ಮಣಿಹವನ್ನು ಮಾಡಿ ವಿಶ್ವಪರಿಚಿತನಾಗಿರುವನಲ್ಲದೆ ಅಷ್ಟಾವರಣ ವಿಶಿಷ್ಟ ಮಹಾಪಶುಪತಶಿವಾಚಾರವನ್ನು ಅಂದರೆ ಅನಾದಿ ವೀರಶೈವ ಸಂಸ್ಕೃತಿಯನ್ನು ಸಂರಕ್ಷಿಸಿದ ಸನಾತನ ಶಿವಾಚಾರ್ಯನು ಶ್ರೀರುದ್ರನು ಆಗಿದ್ದನು. ಆತನ ವೈವಿಧ್ಯಮಯ ಕೊಡುಗೆಯನ್ನು ಈ ನಮ್ಮ ಬಡ ಲೆಕ್ಕಣಿಕೆಯು ಬಣ್ಣಿಸಿ ತೀರಿಸಲಾರದು. ಅದರಲ್ಲಿಯೂ ಸಿಂಧೂ ತೀರದ ಉತ್ಖನನದಲ್ಲಿ ದೊರೆತ ಹರಪ್ಪ ಮೊಹೆಂಜೊದಾರೋ ನಗರಗಳ ಪುರಾತನ ನಾಗರಿಕತೆಗೂ ಕಾರಣನಾದ ಸೈಂಧವ ಸಂಸ್ಕೃತಿ ಸಂವರ್ಧಕನಾದ ಶ್ರೀರುದ್ರದೇವನ ಐತಿಹಾಸಿಕತೆಯನ್ನು ಹೇಳಲಳವಿಲ್ಲ. ಶ್ರೀರುದ್ರ ಜಗತ್ತಿನ ತಂದೆ. ಅನಾದಿ ವೀರಶೈವ ಸಂಸ್ಕೃತಿಗೆ

ಆತನೆ ಆದಿ ! ವೀರಶೈವ ಸಂಸ್ಕೃತಿಯನ್ನು ವಿಶ್ವಸಂಸ್ಕೃತಿಯನ್ನಾಗಿಸಿದ ಅಪಾರಕೀರ್ತಿ ಅಸದೃಶ ಆದರ್ಶ ಆತನದು. ನೇಪಾಳಕ್ಕೆ ಅದರಲ್ಲಿಯೂ ಸನಾತನ ಐತಿಹಾಸಿಕ ಹೆಗ್ಗುರುಹುಗಳನ್ನು ಹೊರಹೊಮ್ಮಿಸಿದ ಹರಪ್ಪ ಮೊಹೆಂಜೊದಾರೋಗಳಿಗೆ ಒಮ್ಮೆ ಸಂದರ್ಶನವನ್ನಿತ್ತು ಬಂದಲ್ಲಿ ವೀರಶೈವದ ಏಳೆಂಟು ಸಾವಿರ ವರುಷಗಳ ಇತಿಹಾಸಕ್ಕೆ ಹೊಸ ತಿರುವು, ಹೊಸ ಹರವು ಉಂಟಾಗುವದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಅವು ರುದ್ರನ ರುದ್ರ ಗಣರಭಾವ ಚಿತ್ರಗಳ ಆಗರಗಳು. ವೀರಶೈವ ಲಿಂಗ ಸಂಸ್ಕೃತಿಯ ಆಕರಗಳು. ಭೂರುದ್ರರು ಎಂದು ಪ್ರಖ್ಯಾತರಾಗಿರುವ ಅಸಂಖ್ಯಾತ ರುದ್ರಗಣರು ಅಂದಿಂದಿಗೂ ವೀರಶೈವ ಶಿವಾಚಾರ್ಯರು. ಶಿವಾಚಾರ ಅಂದರೆ ಸುಸಂಸ್ಕೃತಿಯೆ ಇವರ ಜೀವಾಳ. ತಾವು ಸುಸಂಸ್ಕೃತರಾಗಿ ಭಾರತಿಯರನ್ನೆಲ್ಲ ಸುಸಂಸ್ಕೃತರನ್ನಾಗಿಸುವ ಮುಂಚೂಣಿಯಲ್ಲಿದ್ದವರು ; ಇರುವರು. ವೀರಶೈವವು ವೀರಶೈವರು ಭಾರತಾದ್ಯಂತ ನಿಬಿಡವಾಗಿ ಕಾಣದಂತಾಗಿರುವುದು ಭಾರತದ ಅಂದಂದಿನ ಹಲವು ಹತ್ತು ಕಾರಣಗಳ ಸ್ಥಿತ್ಯಂತರವೇ ಪ್ರಬಲ ಕಾರಣ. ಅಲ್ಲಲ್ಲಿನವರು ಅಲ್ಲಲ್ಲಿನ ಹೊಸ ಬದಲಾವಣೆಗಳಿಗೆ ಒಗ್ಗಿಕೊಂಡಿರಬೇಕು ; ಮತಾಂತರಿಸಿರಬೇಕು. ಬೇರೆ ಬೇರೆ ಪ್ರದೇಶಗಳಿಗೆ ವಲಸೆ ಹೋಗಿ ನೆಲಸಿರಬಹುದು. ಇದಕ್ಕೆಲ್ಲ ಪ್ರಾಕೃತಿಕವಿಕೋಪ, ಪರಕೀಯರ ದಾಳಿ ಪ್ರತಾಪ ಅಹಿಂದುಗಳ ಮತಾಂತರ ಇವೇ ಮೊದಲಾದವುಗಳು ಕಾರಣಗಳೆಂದು ಹೇಳಿದರೆ ತೆಗೆದು ಹಾಕುವ ಮಾತೇನಲ್ಲ. ಒಮ್ಮೆ ಏಳಿಗೆ, ಇನ್ನೊಮ್ಮೆ ಬೀಳಿಗೆ ಕಾರಣವಾಗುವುದು ಚಾರಿತ್ರಕವಾಗಿ ಸಹಜ ತಾನೇ ಏನೇ ಇರಲಿ ; ರುದ್ರ-ರುದ್ರಗಣರ ಸಂಸ್ಕೃತಿ ವೀರಶೈವಧರ್ಮದ ಪ್ರಪ್ರಥಮ ಪ್ರಮುಖ ಸಂಸ್ಕೃತಿ ; ಅದಕ್ಕಿದೆ ಅತ್ಯಂತ ಮಹತಿ ; ಮಹಾವ್ಯಾಪ್ತಿ ಅದು ಕೇವಲ ವೀರಶೈವಕ್ಕೆ ಸೀಮಿತವಾಗಿರಲಿಲ್ಲ, ಅದು ಭಾರತೀಯರೆಲ್ಲರ ಭಾವಭೂಮಿಯಲ್ಲಿ ಆಳವಾಗಿ ಬೇರು ಬಿಟ್ಟಿದೆ ರುದ್ರ ಸಂಸ್ಕೃತಿ ! ಭಾರತದ ಎಲ್ಲ ಪ್ರಾಂತಗಳಲ್ಲಿ ಒಂದಿಲ್ಲೊಂದು ಬಗೆಯಲ್ಲಿ ಹಬ್ಬಿ ತನ್ನ ಪ್ರಭಾವವನ್ನು ಇಂದಿಗೂ ಬೀರುತ್ತಿದೆ. ಇವನ್ನು ರುದ್ರವೀಣೆ ಮನಂಬುಗುವಂತೆ ಮಿಡಿಯುತ್ತಿದೆ. ಶ್ಲಾಘನೀಯವೂ ಆಗಿದೆ. ಅದನ್ನು ಸರಿಗಟ್ಟುವ ಸಂಸ್ಕೃತಿ ಇದುವರೆಗೆ ಬರಲಿಲ್ಲ. ಇದು ಸನಾತನಕಾಲದ ಶಿವಾಚಾರ ಜನಕನಾದ ಶ್ರೀರುದ್ರಶಿವಾಚಾರ್ಯನ ಹೆಚ್ಚಳಿಕೆ !

ರುದ್ರನಂತೆ ವೀರಶೈವ ಸಂಸ್ಕೃತಿಗೆ ಆದರ್ಶ ಕೊಡುಗೆಯನ್ನಿತ್ತ ಭದ್ರನು ಎರಡನೆಯುವನು ; ರುದ್ರಪುತ್ರನು. ಈತನದೂ ಅದೇ ನಿಲವು, ಅದೇ ಒಲವು. ಭದ್ರನು ರುದ್ರನ ತರುವಾಯು ಶತರುದ್ರಾಧಿಪತಿಯಾಗಿ ಎರಡು ಕೋಟಿ ವೀರ ಗಣರೊಡೆಯನಾಗಿ ವೀರಮಾಹೇಶ್ವರ ವೃಂದವನ್ನು ರೂಪಿಸಿ, ಆರ್ಯದ್ರಾವಿಡ ಸಮನ್ವಯಚಾರ್ಯನಾಗಿ, ಕಣ್ಣಡಿಕ ನಾಮಾಂಕಿತದಿಂದ ಕನ್ನಡತನಕ್ಕೆ ಕಾರಣ ನಾಗಿ, ತಂದೆಯಿಂದ ಬಂದ ಶಿವಾಚಾರ ಧರ್ಮಕ್ಕೆ ವೀರಶೈವವೆಂಬ ವಿಶಿಷ್ಟನಾಮಾ ಕಿಂತವನ್ನಿರಿಸಿ ಪಂಚಾಚಾರಗಳಿಂದ ಪ್ರವರ್ತಕನಾಗಿದ್ದಾನೆ. 'ಪೂಜಾಮಂಟಪ' ಕರ್ತನಾಗಿ ಪೂಜಾಶಿಕ್ಷಣವನ್ನೀಯುತ್ತಾನೆ. ಪೂಜಾವೇಳೆಯಲ್ಲಿ ಧೂಪಾರ್ತಿಯಲ್ಲಿ ಧೂಪ ಹಾಕುವುದೇ ವೀರಶೈವರ ನಿತ್ಯಯಜ್ಞ–ನಿಷ್ಕಂಟಕಯಜ್ಞ–ನಷ್ಟರಹಿತ ಯಜ್ಞವೆಂದು ಸಾರುತ್ತಾನೆ. ಧೂಪದ ಹೊಗೆಯಿಂದ ಮನೆಯ ಕಲುಷಿತ ವಾತಾವರಣ ಕಲುಷರಹಿತವಾಗಿ ಆರೋಗ್ಯ ಭಾಗ್ಯ ಪುಷ್ಟಿ ತುಷ್ಟಿಗಳೊದಗುತ್ತ ವೆಂಬುದನ್ನು ವಿರೋಧಿಸಿ ಅಂದೆ ಆಚರಣೆಯಲ್ಲಿ ತಂದನು. ಅದನ್ನು ಮುಂದು ವರಿಸಿ ಗುಗ್ಗುಳ ಸೇವೆಯ ಪ್ರಯೋಗದಿಂದ ಊರ ಹವೆಯ ಶುದ್ಧೀಕರಣಕ್ಕೆ ನಾಂದಿ ಹಾಡುವನು. ಪಂಚಾಕ್ಷರೀ ಮಂತ್ರಪ್ರಸ್ಫಾರನು ಯಾಜ್ಞಿಕ ಕ್ರಾಂತಿ ಪ್ರವರ್ತಕನು, ಚರ್ಮವಾದ್ಯ ನಿರ್ಮಾಪಕನು, ವೀರರಸಕಾರಣನು. ವೀರ ಶ್ರೀಮಂತನು, ವೀರಶೈವ ಆಚಾರಾತ್ಮಕ ಸಂಸ್ಕೃತಿ ಪ್ರಚಾರಕನು, ತಂದೆ ರುದ್ರನಂತೆ ಅತುಲ ಪರಾಕ್ರಮನು. ತಂದೆ ಮಗನ ಸಾಂಸ್ಕೃತಿಕ ಸಾಮ್ಯ, ಅಪೂರ್ವ, ಅನುಪಮ, ಇದರ ದ್ಯೋತಕ ವೀರ ಕೆಂಚಣ್ಣ, ಕೆಂಚ ವೀರಣ್ಣ, ಕೆಂಚಮಲ್ಲ ಇತ್ಯಾದಿ ತಂದೆ ಮಗನ ಪುಣ್ಯನಾಮಗಳೆರಡನ್ನು ಹೊಂದಾಣಿಕೆ ಯಾಗಿಸಿ ಹೆಸರಿಸುವ ಸಂಪ್ರದಾಯ ಇಂದಿಗೂ ಅಚ್ಚಳಿಯದೆ ಉಳಿದುಬಂದಿದೆ. ಆರ್ಯರೊಡನೆ ಹೋರಾಡುವಿಕೆ ಇಬ್ಬರಿಗೂ ತಪ್ಪಲಿಲ್ಲ. ಆದರೂ ಇಬ್ಬರೂ ಆರ್ಯಪ್ರೇಮಿಗಳಾಗಿದ್ದಾರೆ. ದ್ರಾವಿಡ ರಕ್ಷಕರಾಗಿದ್ದಾರೆ.

ಅಗ್ನಿಕುಂಡ, ಪುರವಂತಿಕೆ ವೀರಗಾಸೆ ಲಿಂಗದವೀರ ಕಾಯಕಗಳು, ವೀರ ವಡಬುಗಳು, ವೀರಾಚಾರ ಮುಂತಾದವುಗಳು ಇಂದಿಗೂ ಜನಜೀವನದಲ್ಲಿ ಅಚ್ಚಳಿಯದೆ ಉಳಿದು ಬಂದಿವೆ ; ಬರುತ್ತಿವೆ. ವೀರೇಶನ ವಡಬುಗಳೇ ವಿಶ್ವ ಖ್ಯಾತಿಯನ್ನು ಪಡೆದ ವಚನಗಳಿಗೆ ಆಕರಗಳೆಂದರೆ ಆತನ ಕನ್ನಡತನಕ್ಕೆ ಅಚ್ಚರಿ

ಪಡಬೇಕಾಗಿಲ್ಲ. ರುದ್ರ ಸಂಸ್ಕೃತ ಪ್ರವರ್ತಕನಾದರೆ, ಭದ್ರ ಕನ್ನಡ ಪ್ರವರ್ತಕ ! ರುದ್ರ–ಭದ್ರರಿಗೆ ಭೇದವುಳಿದಿಲ್ಲ. ಭದ್ರನನ್ನು ರುದ್ರದೇವನೆಂದೆ ಹಲವರು ಭಾವಿಸುತ್ತಾರೆ. ಆದರೆ ರುದ್ರನಿಗಿಂತ ಭದ್ರನ ಜನಪ್ರಿಯತೆ ಮಾನ್ಯತೆ ಹೆಚ್ಚಿ ಊರೂರಿಗೂ ವೀರ ಮಂದಿರಗಳು ವೀರಗಲ್ಲುಗಳು ವೀರ ಘೋಷಗಳು ವೀರ ವಾದ್ಯಗಳು ನೆಲಸಿವೆ. ವೀರ ಸಂಸ್ಕೃತಿ ಭಾರತಾದ್ಯಂತ ಬಿತ್ತರಿಸಿದೆ. ಶರಭ ಸಾಳ್ವಾವತಾರಿಯಾಗಿ ನರಸಿಂಹನನ್ನ ಸಂಹರಿಸಿ, ನರರ ಕಂಟಕವನ್ನು ನಿವಾರಿಸಿದ ಕೀರ್ತಿ ಈತನದಾಗಿದೆ. ಸಪ್ತ ಮಾತೃಕೆಯರ ಸಂರಕ್ಷಕನೆಂದು ಸತ್ಕೀರ್ತಿಗಳಿಸಿದ್ದಾನೆ. ಹಿಂಸೆಯೆಂದರೆ ಆತನಿಗಾಗದು. ದುರ್ಬಲ ಜೀವನ, ದುರ್ವಿನಿಯೋಗವೆಂದರೆ ಆತನಿಗಾಗದು. ಯಾವ ಪ್ರಾಣಿಯನ್ನು ತನಗೆ ವಾಹನವನ್ನಾಗಿಸಿಕೊಂಡಿಲ್ಲ. ಪ್ರಾಣ ದಯೆಯಲ್ಲಿ ನಿಸ್ಸೀಮ. ದಕ್ಷಯಾಗದಲ್ಲಿ ಅನಿವಾರ್ಯವಾಗಿ ಕೊಂದವರನ್ನೆಲ್ಲ ಪಶುಗಳ ಚಂಡಗಳನ್ನಿರಿಸಿ ಬದುಕಿಸಿದುದು ಹಿಂಸಕರು ಪಶುಗಳಿಗಿಂತ ಕಡೆಯೆಂಬ ನಿತ್ಯ ಸತ್ಯ ಸಂದೇಶವನ್ನು ವಿಶ್ವಕ್ಕೆ ಸಾರಿದುದಾಗಿದೆ. 'ಲೋಕತಾತ'ನೆಂದು ಹೆಸರಾಂತ ವೀರ ಶಿವಾಚಾರ್ಯ ವೀರಭದ್ರ ! ವೀರಶೈವಕ್ಕೆ ವೀರಶೈವ ಸಂಸ್ಕೃತಿಗೆ ಈತ ಕೊಟ್ಟ ಕೊಡುಗೆ ಅಪಾರ ; ಅಸದೃಶ ಶಕ್ತಿಶಾಲಿ. ವೀರೇಶನ ಕಾಯಕ ಭವನ ಬುನಾದಿ ಭದ್ರವಾಗಿದೆ.

ರುದ್ರ ಭದ್ರರ ಕಾಲ ಕ್ರಿ. ಶ. ಪೂರ್ವ ಆರು ಸಾವಿರ ವರುಷವೆಂಬುದು ನಮ್ಮ ಅಭಿಪ್ರಾಯ. ನಮ್ಮೀ ಅಭಿಪ್ರಾಯವನ್ನು ವೀರೇಶನ ಅಪರಾವತಾರಿಯಾದ ಮಾಚಿತಂದೆಯ ಈ ವಚನ ಎತ್ತಿ ಹಿಡಿದಿದೆ ; ಅದಿದು : "ಒಂದು ಕೈಯ ಬಯಲ ನನಗೆ ಕೊಟ್ಟ ; ಒಂದ ಕೈಯ ಬಯಲ ಚನ್ನಬಸವಣ್ಣಂಗೆ ಕೊಟ್ಟ. ನೀವು ಬಂದಾರೆಂದು ಎಂಟು ಸಾವಿರ ವರುಷ ಒಗೆದೊಗೆದು ಬಿಳಿ ಮಾಡುತ್ತಿದ್ದೆನು....ಕಲಿದೇವಯ್ಯ." ಇದು ಹುಬ್ಬಳ್ಳಿ ಮೂ. ಸಾ. ಮಠದ ರಜತ ಮಹೋತ್ಸವದ ಪ್ರಕಟನೆಯಲ್ಲಿದೆ. ಇದನ್ನು ಡಾ॥ ಬಿ. ಆರ್. ಹಿರೇಮಠ ಧಾರವಾಡ ಇವರು ಸಂಪಾದಿಸಿದ್ದಾರೆ. ದಕ್ಷಾದಿಗಳನ್ನು ಕೊಲೆ ಮಾಡಿದ ಕೈ ಕಪ್ಪನ್ನು ಅಂದಿನಿಂದ ಅಂದರೆ ೮ ಸಾವಿರ ವರುಷಗಳಿಂದ ಶಿವಾಚಾರ್ಯರ ಶಿವ ಶರಣರ ಬಟ್ಟೆಗಳನ್ನು ತೊಳೆದು ಮಡಿ ಮಾಡುವ ಕಾಯಕದಿಂದ ಕಳೆಯಲು

ಪ್ರಯತ್ನಿಸುತ್ತಿರುವೆನೆಂದು ಮಾಚಿ ತಂದೆ ಈ ವಚನದಲ್ಲಿ ಹೇಳಿಕೊಂಡಿರುವನು.

ರುದ್ರ-ಭದ್ರರಂತೆ ವೀರಶೈವ ಸಂಸ್ಕೃತಿಗೆ ಭಾರತ ಸಂಸ್ಕೃತಿಗೆ ಅಸದೃಶ ಕೊಡುಗೆಯನ್ನು ಕರುಣಿಸಿದ ಅಸಾಧಾರಣ ಪ್ರತಿಭಾಶಾಲಿ ಜಗದ್ಗುರು ಶ್ರೀ ರೇಣುಕ ಭಗವತ್ಪಾದರು. ಕ್ರಿಯಾಶೀಲ ಕಾಯಕಗಳಲ್ಲಿ ಧರ್ಮ ದಾಸೋಹಗಳಲ್ಲಿ ಕಳಾತ್ಮಕ ಚೈತನ್ಯವನ್ನು ಮನಗಂಡ ಮಹಾಕ್ರಾಂತಿ ಪುರುಷರ್ಷಭರು. ಭಾರತಾದ್ಯಂತ ಮಹಾಮಣಿಹಗಳನ್ನೆಸಗಿ ಯುಗಪ್ರವರ್ತಕ ಶಕ್ತರಾಗಿದ್ದರೂ ಅವರ ಆ ಅಗಾಧ ಚಾರಿತ್ರವಾಹಿನಿ ಗುಪ್ತ ಗಾಮಿನಿಯಾಗಿತ್ತು. ಇದಕ್ಕೆ ಕಾರಣ ವೀರ ಶಿವಾಗಮಗಳ ಸಂಶೋಧನ ಪ್ರಕಾಶವಿಲ್ಲದ್ದೇ ಆಗಿತ್ತು ; ಈಗಲೂ ಆಗಿದೆ. ಇದರಂತೆ ನಾಡಿನಭಕ್ತಿ ಭಂಡಾರಿ ಬಸವಣ್ಣನವರ ಚಾರಿತ್ರಕ್ಕೆ ಅಯ್ವತ್ತು ವರುಷಗಳ ಹಿಂದೆ ಇದೇ ಗತಿಯಾಗಿತ್ತು. ಲಿಂ॥ ಹಳಕಟ್ಟಿಯವರ ಸಾಹಸ ಸಂಶೋಧನ ಪ್ರಕಾಶನಗಳಿಂದ ಈ ಅಯ್ವತ್ತು ವರುಷಗಳಲ್ಲಿ ಬಸವಣ್ಣನವರ ಚಾರಿತ್ರ ಬಿತ್ತರಗೊಂಡಿದೆ ; ಗೊಳ್ಳುತ್ತದೆ. ಅದೊಂದು ಮೊರೆ ; ಅದಕ್ಕೆ ಅಕ್ಕ ಪಕ್ಕದ ಝರಿಗಳೆಲ್ಲ ಬಂದು ಸೇರಿ ಹೆದ್ದೊರೆಯಾಗಿ ಹರಿಯುತ್ತಿದೆ. ಯಾವುದಕ್ಕೂ ಅದೃಷ್ಟ ಬೇಕು ತಾನೆ ? ರಾಮಾಯಣ ಬವರದಿಂದ ಬವಣೆಗೊಂಡಿದ್ದ ಭಾರತವನ್ನು ಬಹು ಮುಖಗಳಲ್ಲಿ ಎತ್ತಿ ಹಿಡಿಯಲು ಕೊರತೆ ಕೊರಗುಗಳನ್ನು ತುಂಬಿ ತರಲು ಭಾರತಾದ್ಯಂತವಾಗಿ ಬಿಡುವಿಲ್ಲದೆ ಹರಿತವಾಗಿ ಹೋರಾಡಿದ ಆ ಕಾಲದ ಮಹಾಮಹಿಮರು ಶ್ರೇಷ್ಠ ಶಿವಾಚಾರ್ಯರು ರೇಣುಕ ಭಗವತ್ಪಾದರು. ಅವರು ಜಗದ್ಗುರುವಾಗಿದ್ದರೂ ವೀರ ಸಿಂಹಾಸನದ ಮೇಲೆ ಮಂಡಿಸಿರದೆ, ಭಾರತೀಯರ ಬಳಲಿಕೆಯನ್ನು ಕಾಣಲಾರದೆ ಕೇಳಲಾರದೆ ಪಾದಚಾರಿಗಳಾಗಿ ಭಾರತದ ಎಲ್ಲ ಮೂರ್ತಿಗಳಲ್ಲಿ ಸಂಚರಿಸಿ, ಪಡುವ ಶ್ರಮ ವಿಭಾಗವನ್ನು ಲೆಕ್ಕಿಸದೆ, ಸ್ವಂತ ಕಾಯಕಗಳನ್ನು ಮಾಡಿ, ತಮ್ಮೊಡನಿರುವ ಶಿವಾಚಾರ್ಯ ಸಮೂಹದಿಂದ ಮಾಡಿಸಿ, ಎಲ್ಲೆಲ್ಲಿಯೂ ಧರ್ಮ ದಾಸೋಹಗಳನ್ನಿರಿಸಿ ಹಸಿದು ಹಳವಳಿಸುತ್ತಿದ್ದವರನ್ನು ತೃಪ್ತಿ ಪಡಿಸುವರು. ಈ ದಾಸೋಹ ಧರ್ಮಕ್ಕೆ ರಾಜಾಧಿರಾಜರನ್ನು ತೊಡಗಿಸಿದರು-ಹುಮ್ಮಸ್ಸಿನಿಂದ ಮಾಡುವಂತೆ ! ಅನ್ನವಿಲ್ಲದವರಿಗೆ ಅನ್ನವನ್ನು, ಅರಿವಿಲ್ಲದವರಿಗೆ ಅರಿವನ್ನು, ಆಚಾರವಿಲ್ಲದವರಿಗೆ ಆಚಾರಗಳನ್ನು

ಒಗ್ಗಟ್ಟಿಲ್ಲದವರಿಗೆ ಒಗ್ಗಟ್ಟನ್ನು, ಕರ್ಮಿಗಳಿಗೆ ಧರ್ಮಗಳನ್ನು ಬೋಧಿಸಿ ಅಳವಡಿಸಿದರು. ಇದರಿಂದಾಗಿ ಶಿವಾಚಾರ್ಯರ ಸಂದಣಿಯಲ್ಲಿ ಅವರಿಗೆ ಅಗ್ರಮಾನ್ಯತೆಯಿದೆ. ಆದಿ ರೇಣುಕರು ಜಗದ್ಗುರುಗಳಾದರೂ ಸ್ವಂತ ಕಾಯಕದಲ್ಲಿ ನಿರತರಾಗಿದ್ದರು. ದೇಶೀಯರ ಉದ್ಧಾರದಲ್ಲಿ ಉತ್ಸಾಹಿತರಾಗಿದ್ದರು ; ಉಲ್ಲಾಸಿತರಾಗಿದ್ದರು. ಜಗದ್ಗುರುವೆಂಬ ಹೆಮ್ಮೆಯಿಂದ ಮೆರೆದವರಲ್ಲ ; ಜನರ ಕಲ್ಯಾಣವೇ ಅವರ ಉಸಿರಾಗಿದ್ದಿತು. ವಿಷಯಾಭಿಲಾಷೆ ಎಳ್ಳನಿತು ಇರಲಿಲ್ಲ. ಅರ್ಥ ಅಧಿಕಾರಗಳ ವ್ಯಾಮೋಹವಿರಲಿಲ್ಲ. ಯೋಗ ಕಾಯರು. ಜೀವನಕ್ಕೆ ಅವಶ್ಯವಿದ್ದಷ್ಟನ್ನೆ ಆರೋಗಣೆ ! ಉಳಿದುದೆಲ್ಲವೂ ಉಳಿದವರಿಗೆ ವಿತರಣೆ ! ಸತ್ಯೇಂದ್ರ ಶತಾನಂದ ವಿಡಂಬಕಾದಿಗಳನ್ನು ಶಿಂಶುಮಾರ ಡಿಂಡಿಮಾರರನ್ನು ಧರ್ಮದಾಸೋಹಕ್ಕೆ ಸಕ್ರಿಯಾಶೀಲ ಕಾಯಕಕ್ಕೆ ಹಚ್ಚಿ ತಾವು ಸುಮ್ಮನಿರುತ್ತಿರಲಿಲ್ಲ. ಕಾಯಕ ದಾಸೋಹಗಳಿಗೆ ಭಾರತವೇ ಒಂದು ಮಹಾಮನೆಯಾಗಿತ್ತು ಅವರಿಗೆ ! ಅವರದು ಸಮಾನತೆಯ ಕ್ರಾಂತಿ ; ಸಮಗ್ರ ಕ್ರಾಂತಿ. ಅವರು ಜನರ ವೃತ್ತಿ ನಿಷ್ಠ ಜಾತಿ ಪಂಥ ಪಂಗಡಗಳ ಹೆಸರುಗಳನ್ನು ಹೇಳುತ್ತಿರಲಿಲ್ಲ. ಸ್ಥಾವರ ಲಿಂಗಗಳ ಅಂಕಿತಕ್ಕೆ ಒಳಪಟ್ಟವರಲ್ಲ. ಹಂತಹಂತಾಗಿ ಸಾಮಾಜಿಕ ಸಮತೆಯನ್ನು ಪೂರ್ಣ ದಾರ್ಶನಿಕ ಧರ್ಮವನ್ನು ಪ್ರತಿಪಾದಿಸುತ್ತಿದ್ದರು ; ಪ್ರತಿಷ್ಠಾಪಿಸುತ್ತಿದ್ದರು. ಅವರದು ಮುಖ್ಯವಾಗಿ ಸಂಸ್ಕಾರ ಆಚಾರ ವಿಚಾರ ಆಹಾರ ಆರ್ಥಿಕ ಕ್ರಿಯಾಶೀಲತೆಗಳನ್ನು ಹುಲುಸಾಗಿ ಹರವಾಗಿ ಹಬ್ಬಿಸುವುದೆ ಆಗಿತ್ತು. ಅಂದಿನ ಭಾರತದ ರಾಜರಾಜರುಗಳನ್ನೆಲ್ಲ ಧರ್ಮದಾಸೋಹ ಸೇವೆಗೆ ಪ್ರೋತ್ಸಾಹಿಸಿ ಬಡ ಬಗ್ಗರಿಗೆ ಆಹಾರವನ್ನೊದಗಿಸಿದ ಅಪೂರ್ವ ಸಮಾಜವಾದಿಗಳಾಗಿದ್ದರು.

ವೀರಶೈವ ಸಾಂಸ್ಕೃತಿಕ ಇತಿಹಾಸ ಸಮಗ್ರವಾಗಿ ಸೃಜನಗೊಂಡಿಲ್ಲ. ಆಗಬೇಕಾಗಿದೆ. ವೀರಶೈವ ಸಂಸ್ಕೃತಿ ಅತ್ಯಂತ ಪುರಾತನದ್ದು. ಅದು ರುದ್ರಭದ್ರ-ರೇಣುಕಾದಿ ಶಿವಾಚಾರ್ಯರಿಂದ ಉತ್ಪಾದಿತವಾಗಿ ಪ್ರವರ್ತಿತವಾಗಿ ಪ್ರತಿಷ್ಠಾಪಿತವಾಗಿದೆ. ಆದರೂ ಇದೆಲ್ಲ ಬೆಳಕಿಗೆ ಬಂದಿಲ್ಲ ; ಬರಬೇಕಾಗಿದೆ. ಬಿಡಿಬಿಡಿಯಾಗಿ ನಿಗಮಾಗಮ ಪುರಾಣಾದಿಗಳಲ್ಲಿ ಚದುರಿ ಹೋಗಿದೆ. ಒಂದೆಡೆಗೆ ಕ್ರೋಢೀಕರಿಸಿ ಪರಿಪೂರ್ಣಗೊಳಿಸಿ ಪ್ರಕಾಶ ಪಡಿಸಬೇಕಾಗಿದೆ. ಇದು ತುಂಬಾ

ಶ್ರಮ ಸಾಧ್ಯವಾದ ಕೆಲಸವಾಗಿದೆ. ಒಬ್ಬಿಬ್ಬರಿಂದಾಗುವ ಬದುಕಲ್ಲ. ಹೀಗೆಂದು ಹೇಳಿ ಬಿಡುವಂತಿಲ್ಲ. ಒಬ್ಬ ವ್ಯಕ್ತಿಗೆ ಅದೆಷ್ಟು ಸಾಧ್ಯವೋ ಅಷ್ಟನ್ನು ಶಕ್ತಿ ಮೀರಿ ಸಾಹಸ ಮಾಡುವ ಸಂಕಲ್ಪ ಫಲವೇ ಈ ಕೃತಿ !

ಅನಾದಿ ವೀರಶೈವ, ಆದಿ ವೀರಶೈವ, ಆಧುನಿಕ ವೀರಶೈವವೆಂದು ವೀರಶೈವವನ್ನು ಮೂರು ಬಗೆಯಾಗಿ ವಿಂಗಡಿಸಿ, ನಾವು ಅಧ್ಯಯನ ಸಂಶೋಧನ ಚಿಂತನ ಮಾಡತೊಡಗಿ ಸು. ೨೫-೩೦ ವರುಷಗಳೇ ಆಗಿವೆ. ವೀರಶೈವೇತಿಹಾಸದ ಬಗೆಗೆ ನಮ್ಮದು ಬಹು ಮುಖದ ಅಧ್ಯಯನ. ಸಂಸ್ಕೃತ ಕನ್ನಡ ಕೃತಿಗಳ ಅತ್ಯಂತ ಅಭ್ಯಾಸ. ಪುರಾತನ ಪರಂಪರೆಯ ಬಗೆಗೆ ವಿನೂತನ ಆಶಯವನ್ನು ಅಭಿವ್ಯಕ್ತಿಗೊಳಿಸಲಾಗಿದೆ. ಅನಾದಿ ವೀರಶೈವೇತಿ ಹಾಸಕ್ಕೆ ಗಟ್ಟಿಮುಟ್ಟಾದ ಆಕರಗಳಿವೆ. ನಿಖರತೆಯ ನಿಲವನ್ನುಂಟು ಮಾಡು ತ್ತವೆ. ಈ ದಿಸೆಯಲ್ಲಿ ಒಂದು ಲೇಖನವನ್ನು ಗಿರಿಯಪುರದ ಭಾಷ್ಯಾಚಾರ್ಯ ಶ್ರೀ ಲಿಂ॥ ಸದಾಶಿವ ಶಿವಾಚಾರ್ಯರ ೬೦ನೇ ಹುಟ್ಟು ಹಬ್ಬದ ಸವಿನೆನಪಿಗಾಗಿ ರೂಪಿಸಿದ 'ವಿಭೂತಿ' ಎಂಬ ಸ್ಮರಣ ಸಂಪುಟದಲ್ಲಿ ಬರೆಯೋಣವಾಗಿದೆ. ಅದರಿಂದ ಆರಂಭವಾದ ವೀರಶೈವ ಸಂಸ್ಕೃತಿ ಸಂಶೋಧನ ಚಿಂತನ ಇಂದಿನ ವರೆವಿಗೂ 'ಚಿಗುರಿಟ್ಟ ಚಿಂತನ' 'ಜಗದ್ಗುರು ಆದಿರೇಣುಕರು' 'ಲಿಂಗವಂತ ಪಾಶುಪತ ಧರ್ಮ' ಮಹಾ ಪಾಶುಪತ ವಿಧಾನ ಅರ್ಥಾತ್ ಅನಾದಿ ವೀರಶೈವ ವಿಧಾನ' 'ವೀರಶೈವ ವಿಚಾರ ವಾಹಿನಿ' 'ಶಿವಾಗಮಗಳಲ್ಲಿ ವೀರಶೈವ ಧರ್ಮ ಸಿದ್ಧಾಂತ' 'ಶಿವಾಗಮ ಸಾಹಿತ್ಯ' ಮತ್ತು 'ಮಾಮಿಡಿ' ತ್ರೈಮಾಸಿಕದ ರುದ್ರಾಂಕ, ಭದ್ರಾಂಕ-೨, ಶಿವಾಂಕ-೨, ಪಂಡಿತಾಚಾರ್ಯಾಂಕ, ರೇಣು ಕಾಂಕ-೨, ಶಿವಾಚಾರ್ಯಾಂಕ. ಪಂಡಿತಾಚಾರ್ಯಾಂಕ, ಶಿವಯೋಗಿ ಶಿವಾ ಚಾರ್ಯಾಂಕ, ವಿರೂಪಾಕ್ಷ ದೇಶಿಕೇಂದ್ರಾಂಕ, ಚಂದ್ರಗುಂಡಾಂಕ, ದೇಂದಾಸ ಮಾಂಕ, ರೇವಣ ಸಿದ್ಧಾಂಕ—

ಇವುಗಳ ಮುಖಾಂತರ ಸಾಗಿ ಬಂದಿದೆ. ಆದರೆ ಇವುಗಳಿಂದ ಏಕೀಭವಿ ಸಿದ ಸಮಗ್ರತೆ ಒದಗಿ ಬಂದಿಲ್ಲ. ಈ ಕೃತಿಯ ಮೂಲಕ ತರಲು ಸಾಹಸ ಮಾಡಲಾಗಿದೆ. ಇದಾದರೂ ಅದೆಷ್ಟರ ಮಟ್ಟಿಗೆ ನಮ್ಮ ಸಂಕಲ್ಪವನ್ನು ಪೂರೈಸಬಲ್ಲುದೊ ? ಆದರೆ ನಮಗೆ ಈ ಸಾಹಸದಿಂದ ಇಷ್ಟು ಮಾತ್ರ ತೃಪ್ತಿ ಯಿದೆ ;- ಶಿವಾಚಾರ್ಯರು ತಮ್ಮ ಸಂಸ್ಕೃತಿಯ ಬಗೆಗೆ ಪೂರ್ವೇತಿಹಾಸದ ಬಗೆಗೆ ತಳೆದ ನಿರ್ಲಕ್ಷ್ಯ-ನಿರಭಿಮಾನ ನೀಗುವಂತಾದೀತೆಂದು ! ಮತ್ತು ತಮ

ಗಿರುವ ಐತಿಹಾಸಿಕ ಉಜ್ವಲ ಪರಂಪರೆಯನ್ನು ಸಾಂಸ್ಕೃತಿಕ ಚಾರಿತ್ರವನ್ನು ಅರಿತು ಅಳವಡಿಸಿಕೊಂಡು ಉಳಿಸಿ ಬೆಳಸಿಕೊಳ್ಳುವಂತಾದೀತೆಂದು !! ಮತ್ತು ಸಮೃದ್ಧಿಗೊಳಿಸುವ ಭವಿಷ್ಯದತ್ತ ಬೃಹತ್ ಪಥದಲ್ಲಿ ಚೈತನ್ಯ ಪೂರ್ಣವಾದ ಹೆಜ್ಜೆ ಹಾಕಲಾದೀತೆಂದು !!!

ಅಖಂಡ ವೀರಶೈವ ಸಾಂಸ್ಕೃತಿಕ ಇತಿಹಾಸದಲ್ಲಿ ಹದಿನಾಲ್ಕನೆ ಶತಮಾನದಿಂದೀಚೆಗೆ ೫-೬ ನೂರು ವರುಷಗಳಲ್ಲಿ ಶಿವಾಚಾರ್ಯರು ವೀರಶೈವ ಸಂಸ್ಕೃತಿಯಲ್ಲಿ ಹಿಂದೆ ತಮಗಿರುವ ಉನ್ನತ ಮಟ್ಟದ ಸ್ಥಾನಮಾನಗಳನ್ನು ಸಾಕಷ್ಟು ಸಂಪಾದಿಸಿಕೊಳ್ಳದೆ ಕಳೆದುಕೊಂಡು ಬಂದಿರುವರೆಂದು ಬರೆಯಲು ಬಹುವಾಗಿ ವಿಷಾದವೆನಿಸುತ್ತದೆ. ಏನೆಲ್ಲ ಸಾಂಸ್ಕೃತಿಕ ಚಟುವಟಿಕೆಗಳಿಗೆ ಶಿವಾಚಾರ್ಯರು ಕಾರಣಕರ್ತರಾಗಿದ್ದರೂ ಅದನ್ನರಿಯದೆ, ಅರಿತು ಬರೆದು ಬೆಳಕಿಗೆ ತಾರದೆ ಇರುವುದು ಸ್ವಾಭಿಮಾನಕ್ಕೆ ಸತ್ ಪರಂಪರೆಯ ಪ್ರಜ್ಞೆಗೆ ತುಂಬಿಬಾರದ ಕುಂದು ಕೊರತೆಗಳಲ್ಲವೇನು ? ಕೊರಗು ಮರುಗುಗಳಿಗೆ ಕಾರಣವಲ್ಲವೇನು ?

ಪುರಾತನ ವಿನೂತನ ಶಿವಾಚಾರ್ಯರ ಬಹುಮುಖ ಕ್ರಾಂತಿಕಾರಕ ಸಾಂಸ್ಕೃತಿಕ ಜೀವನ ಚಾರಿತ್ರವನ್ನು ತಿಳಿಸುವ ಸಾಹಿತ್ಯ ಸಾಮಗ್ರಿ ಸಾಕಷ್ಟಿದೆ. ಹದಿಮೂರನೆಯ ಶತಮಾನದ ಓರಂಗಲ್ಲ ಕಾಕತೀಯ ಪ್ರತಾಪರುದ್ರ(ಮಹಿಳೆ) ನನ್ನು ಸಾಮ್ರಾಜ್ಯ ಸಿಂಹಾಸನಕ್ಕೇರಿಸಿದ ಶ್ರೀ ವಿಶ್ವೇಶ್ವರ ಶಿವಾಚಾರ್ಯರ ವರೆವಿಗೂ ವಿಪುಲವಾಗಿ ಬೆಳೆದು ನಿಂತಿದೆ. ಶಿಲಾಶಾಸನಗಳೂ ಇವೆ. ಜಾನಪದ ಸಾಹಿತ್ಯವೂ ಇದೆ. ಇವೆಲ್ಲವನ್ನು ಸಂಗ್ರಹಿಸಿ ಸಾಹಿತ್ಯಕವಾಗಿ ರೂಪಿಸುವ ಕಾರ್ಯ ಮಾತ್ರ ಆಗದಂತಿದೆ. ಈ ದಿಸೆಯಲ್ಲಿ ಇದೊಂದು ಕಿರಿಹೆಜ್ಜೆ ! ಕಿರುಗೆಜ್ಜೆ !!

"ಆಂಗಿಕಂ ಭುವನಂ ಯೇಷಾಂ ವಾಚಿಕಂ ಸರ್ವ ವಾಙ್ಮಯಂ ।
ಆಹಾರ್ಯಂ ಚಂದ್ರ ತಾರಾದಿ ತಾನ್ ನಮಾಮಿ ಶಿವಾಚಾರಾನ್ ॥"
"ದುಂಡಿ ನಂದಿ ಮಹಾಕಾಲ ಪ್ರಮುಖಾ ಗಣನಾಯಕಾಃ ।
ಚತುರ್ದ್ದಶ ಸಹಸ್ರಂ ಹಿ ಕೈಲಾಸಾವರಣಾಧಿಪಾಃ ॥
ಮತ ಪ್ರವರ್ತ್ತಕಾಃ ಸರ್ವೇ ಗುರು ಪೀಠಾಧಿರೋಹಿಣಃ ।

ಏತೇ ಸರ್ವೇ ಮಹಾಭಾಗಾ ಅತಿವರ್ಣಾಶ್ರಮೇರತಾಃ ॥
ವೀರಶೈವಾಃ ಸಮಾಖ್ಯಾತಾ ಜೀವನ್ಮುಕ್ತಾನ ಸಂಶಯಃ ।"

—ಕ್ರಿಯಾಸಾರ

'ಈ ಉಕ್ತಿಯಂತೆ ಹದಿನಾಲ್ಕು ಸಾವಿರ ಶಿವಾಚಾರ್ಯರು ಆಗಿಹೋಗಿದ್ದು ಅವರೆಲ್ಲ ಮತ ಪ್ರವರ್ತಕರು, ಗುರು ಪೀಠಾಧಿರೋಹಣ ಮಾಡಿದವರು ; ಅತಿವರ್ಣಾಶ್ರಮಿಗಳು, ಮಹಾನುಭಾವರು, ಅಂತೆಯೇ ಮಹಾಭಾಗರು, ಜೀವನ್ಮುಕ್ತರು, ವೀರಶೈವರು ಆಗಿದ್ದರು. ಇದಕ್ಕೆ ಇನ್ನಾವ ಸಂಶಯವಿಲ್ಲ, ಸಮಸ್ಯೆಯಿಲ್ಲ.'

ಶಿವಾಚಾರ್ಯರ ಶ್ರೇಣಿ ಸಣ್ಣದಲ್ಲ. ಶಿವಾಚಾರ್ಯರ ಸಾಮಾಜಿಕ ಸಾಂಸ್ಕೃತಿಕ ಮಾನವೀಯ ಮಣಿಹಗಳು ಸಣ್ಣವಲ್ಲ. ಮತ ಪ್ರವರ್ತಕರಾಗಿ ಗುರು ಪೀಠಾಧಿಪತಿಗಳಾಗಿ ಪ್ರಮುಖರಾಗಿ ಪುರಾತನ ಕಾಲದಿಂದ ಬಾಳಿ ಬೆಳಗಿದರೆಂದು ಸ್ಪಷ್ಟವಾಗಿ ನಿರ್ದಿಷ್ಟವಾಗಿ ನಿರೂಪಿಸಲಾಗಿದೆ. ಇಂದಿನ ಶಿವಾಚಾರ್ಯರಿಗೆಲ್ಲ ಹಿರಿದಾದ ಹೆಮ್ಮೆ ಹರುಷಗಳನ್ನು ತರುವದಾಗಿದೆ. ಸಂಸ್ಫೂರ್ತಿಯ ಉನ್ಮೇಷಿಸುವುದಾಗಿದೆ. ಈ ದೃಷ್ಟಿಯಿಂದ ವೀರಶೈವ ಸಂಸ್ಕೃತಿಗೆ ಶಿವಾಚಾರ್ಯರ ಕೊಡುಗೆ ಕಡಿಮೆಯೇನಲ್ಲ. ಮತ ಪ್ರವರ್ತಕರಾಗಿ ಜೀವನ್ಮುಕ್ತರಾಗಿ ಪ್ರಮುಖರಾಗಿ ಹೋಗಿರುವರೆಂದು ಹೇಳಿರುವುದನ್ನು ಹಿರಿದಾಗಿ ಗಮನಿಸಬೇಕಾಗಿದೆ. ವೀರಶೈವ ಧರ್ಮವನ್ನು ಮೂರು ಜಗತ್ತಿನಲ್ಲಿ ಅಸದೃಶವನ್ನಾಗಿಸಿದ ಶಿವಾಗಮಿಕ ಶಿವಾಚಾರ್ಯರು ಸಂಸ್ಮರಣೀಯರು–ಸಂಸ್ತುತ್ಯರು ; ಮತ್ತು ಸಂಭಾವ್ಯರು.

—ಸನ್ನಿಧಿ

# ಪ್ರಕಾಶಕರ ಪರಿಚಯ

**ಹರಪನಹಳ್ಳಿ ತೆಗ್ಗಿನ ಮಠಾಧ್ಯಕ್ಷರಾದ ಶ್ರೀ ಷ. ಬ್ರ. ಚಂದ್ರಮೌಳೀಶ್ವರ ಶಿವಾಚಾರ್ಯ ಮಹಾಸ್ವಾಮಿಗಳು ಎಂ.ಎ.**

ಬಳ್ಳಾರಿ ಜಿಲ್ಲೆಯ ಹರಪನಹಳ್ಳಿಯಲ್ಲಿರುವ (ತೆಗ್ಗಿನಮಠ) ಹಿರೇಮಠವು ಶ್ರೀ ಮದ್ರಂಭಾಪುರೀ ಶಾಖಾಮಠವಾಗಿದ್ದು ಬಹುಕಾಲದಿಂದಲೂ ಪ್ರಸಿದ್ಧಿ ಪಡೆದಿದೆ. ಶ್ರೀ ಮಠದ ಹಿಂದಿನ ಗುರುಗಳಾದ ಲಿಂ. ಶ್ರೀ ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರು ಲಿಂಗ ಪೂಜಾ ನಿಷ್ಠರೂ ದಾಸೋಹ ಮೂರ್ತಿಗಳೂ ಧರ್ಮ ಪ್ರಚಾರಕರೂ ಸಮಾಜೋದ್ಧಾರಕರೂ ಆಗಿದ್ದರು. ಶ್ರೀಗಳು ತಾವು ಇದ್ದಾಗಲೇ ತಮ್ಮ ವಂಶದವರಾದ ಶ್ರೀ ಚಂದ್ರಮೌಳೀಶ್ವರ ಸ್ವಾಮಿಗಳಿಗೆ ಉಚ್ಚ ಶಿಕ್ಷಣವನ್ನು ಕೊಡಿಸಿದರು. 1968ರಲ್ಲಿ ಶ್ರೀ ಚಂದ್ರಮೌಳೀಶ್ವರ ಸ್ವಾಮಿಗಳು ತತ್ತ್ವದಲ್ಲಿ ಎಂ. ಎ. ಪದವಿಯನ್ನು ಪಡೆದು, ಕಲಬುರ್ಗಿ ಶ್ರೀ ಶರಣ ಬಸವೇಶ್ವರ ಕಲಾ ಮಹಾವಿದ್ಯಾಲಯದಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು. ನಂತರ ಶ್ರೀ ಶೈಲ ಮಠದವರಿಂದ ಸ್ಥಾಪಿಸಲ್ಪಟ್ಟ ಹರಿಹರದಲ್ಲಿಯ ನೂತನ ಮಹಾ ವಿದ್ಯಾಲಯಕ್ಕೆ ಪ್ರಾಂಶು ಪಾಲರಾಗಿ ಅದರ ಪ್ರಗತಿಗೆ ವಿಶೇಷವಾಗಿ ಶ್ರಮಿಸಿದರು.

ಹರಪನಹಳ್ಳಿಯಲ್ಲಿ ಸರ್ವರ ಉನ್ನತಿಗಾಗಿ ಶಿಕ್ಷಣವನ್ನು ನೀಡುವ ಉದ್ದೇಶದಿಂದ ಹಿರಿಯ ಅಭಿಮಾನಿಗಳ ನೆರವನ್ನು ಪಡೆದು 1969ರಲ್ಲಿ ತೆಗ್ಗಿನಮಠ ಆರ್ಟ್ಸ್ ಮತ್ತು ಎಜ್ಯುಕೇಶನ್ ಸೊಸೈಟಿ ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಸಂಸ್ಕೃತಿ ಪಾಠಶಾಲೆ ಮತ್ತು ಪಂ. ಬಸವಲಿಂಗಶಾಸ್ತ್ರಿ ಗ್ರಂಥಾಲಯವನ್ನು ಪ್ರಾರಂಭಿಸಿದರು. 1972ರಲ್ಲಿ ತಮ್ಮ ಸಂಸ್ಥೆಯ ಕಿರಿಯ ಮಹಾ ವಿದ್ಯಾಲಯವನ್ನು ಉಜ್ಜಯಿನಿಯ ಸದ್ಧರ್ಮ ಪೀಠಕ್ಕೆ



ಲಿಂ॥ ಶ್ರೀ ಷ. ಬ್ರ. ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳವರು
ತೆಗ್ಗಿನಮಠ (ಹಿರೇಮಠ), ಹರಪನಹಳ್ಳಿ



ಶ್ರೀ ಷ. ಬ್ರ. ಚಂದ್ರಮೌಳೀಶ್ವರ ಶಿವಾಚಾರ್ಯ ಸ್ವಾಮೀಜಿ
ಹರಪನಹಳ್ಳಿ

ಬಿಟ್ಟುಕೊಟ್ಟರು. 1973 ರಲ್ಲಿ ಶಿಕ್ಷಣ ಮಹಾವಿದ್ಯಾಲಯವನ್ನೂ ಆರಂಭಿಸಿದರು.

ಶ್ರೀ ಷ. ಬ್ರ. ಚಂದ್ರಮೌಳೀಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರು 1973 ಫೆಬ್ರವರಿ 6 ರಂದು ಲಿಂ. ಶ್ರೀ ಮದ್ರಾಂಭಾಪುರೀ ಜಗದ್ಗುರುಗಳವರಿಂದ ಹರಪನಹಳ್ಳಿ ಹಿರೇಮಠದ ಗುರುಪೀಠವನ್ನು ಅಲಂಕರಿಸಿದರು. ಪ್ರಾಂಶುಪಾಲ ಹುದ್ದೆಯನ್ನು ತ್ಯಜಿಸಿ ಧರ್ಮಪಾಲಕರಾದರು. ಹಳ್ಳಿಗಳ ಬೆಳವಣಿಗೆಗೆ ಶೈಕ್ಷಣಿಕ ಧಾರ್ಮಿಕ ಸಾಂಸ್ಕೃತಿಕ ಚಟುವಟಿಕೆಗಳನ್ನು ರೂಪಿಸಿದರು. ಹರಪನಹಳ್ಳಿಯಲ್ಲಿ ಕೀರ್ತನ ಕಾಲೇಜನ್ನು, ಹರಿಹರ ತಾಲ್ಲೂಕಿನ ಧೂಳೆಹೊಳೆಯಲ್ಲಿ ಗುರುಕುಲವನ್ನು ಸ್ಥಾಪಿಸಿ, ಸಂಗೀತ ಧರ್ಮ ಪ್ರಸಾರಕ್ಕೆ ನೆರವಾದರು.

ಶ್ರೀ ಮಠದಲ್ಲಿ ಪ್ರತಿವರ್ಷವೂ ಪುರಾಣ ಪ್ರವಚನಗಳನ್ನು ಸಾಮೂಹಿಕ ಲಗ್ನಗಳನ್ನು ನೆರವೇರಿಸುತ್ತಾ ಬಂದಿದ್ದಾರೆ. ತಿಂಗಳಿಗೊಮ್ಮೆ ಧರ್ಮಸಭೆಗಳನ್ನು ಏರ್ಪಡಿಸಿ ವಿದ್ವಜ್ಜನರಿಂದ ಉಪನ್ಯಾಸಗಳನ್ನು ಸುಪ್ರಸಿದ್ಧ ಸಂಗೀತಗಾರರು ಕವಿಗಮಕಿಗಳಿಂದ ಕಾರ್ಯಕ್ರಮಗಳನ್ನು ಏರ್ಪಡಿಸಿ – ಅವರನ್ನು ಗೌರವಿಸುತ್ತಾ ಬಂದಿದ್ದಾರೆ, "ರಂಭಾಪುರೀ ಜಗದ್ಗುರು ವೀರ ಗಂಗಾಧರ ಪುರಾಣ", "ವಿವಿಧ ಕವನ ಶ್ರೀಮಾಲೆ", "ಭಜನಾ ಭಕ್ತಿ ಗೀತೆಗಳು" ಮೊದಲಾದ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಭಕ್ತಿಗೀತೆಗಳ ಕೆಸೆಟ್ಟುಗಳನ್ನು ತಂದಿದ್ದಾರೆ. ಕಲಾವಿದರು ಸಾಹಿತಿಗಳು ಬಡ ಶಿವಾಚಾರ್ಯರು ಅನಾಥ ವಿದ್ಯಾರ್ಥಿಗಳು–ಇವರಿಗೆ ಶ್ರೀ ಮಠದಲ್ಲಿ ಆಶ್ರಯ ಕೊಟ್ಟಿದ್ದಾರೆ. ಅನೇಕ ಗ್ರಂಥ–ಪತ್ರಿಕೆಗಳಿಗೆ ಕ್ಷೇತ್ರಗಳಿಗೆ ಶಾಲಾ–ಕಾಲೇಜುಗಳಿಗೆ ಸಹಾಯ ಮಾಡಿದ್ದಾರೆ. ಹೀಗೆ ನಾನಾ ರೀತಿಯಲ್ಲಿ ಸಮಾಜದ ಹಿತಕ್ಕಾಗಿ ಅವಿರತವಾಗಿ ಶ್ರಮಿಸುತ್ತಿದ್ದಾರೆ.

ಮುನ್ನೂರಕ್ಕೂ ಹೆಚ್ಚು ಗ್ರಂಥಗಳನ್ನು ಬರೆದು ಸಾಹಿತ್ಯ ಕ್ಷೇತ್ರದಲ್ಲಿ ಶಾಶ್ವತ ಸ್ಥಾನ ಪಡೆದಿರುವ ಡಾ. ಶ್ರೀ ಜಚನಿ ಸನ್ನಿಧಿಯವರ "ವೀರಶೈವ

ಸಂಸ್ಕೃತಿಗೆ ಶಿವಾಚಾರ್ಯರ ಕೊಡುಗೆ" ಎನ್ನುವ ಈ ಗ್ರಂಥವನ್ನು ಮಹಾ ಸ್ವಾಮಿಗಳವರು ತಮ್ಮ ಶ್ರೀ ಮಠದಿಂದ ಪ್ರಕಟಿಸುತ್ತಿದ್ದಾರೆ. ಈ ಅವಕಾಶ ವನ್ನು ಒದಗಿಸಿದ ಪೂಜ್ಯರಾದ ಶ್ರೀ. ಜಚನಿ ಸನ್ನಿಧಿ ಅವರನ್ನು ಹೃತ್ಪೂರ್ವಕ ವಾಗಿ ನೆನೆಯುತ್ತೇವೆ. ಇದನ್ನು ಸಮಸ್ತ ವೀರಶೈವರು ಆದರದಿಂದ ಬರ ಮಾಡಿಕೊಳ್ಳುವರೆಂದು ನಂಬಿದ್ದೇವೆ.

ಹರಪನಹಳ್ಳಿ
5-9-90

ಕಾರ್ಯದರ್ಶಿಗಳು
ಶ್ರೀ ತೆಗ್ಗಿನ ಮಠ

ಓಂ ಶಂ
॥ ಅನಂತರುದ್ರ ಭಗವಾನ್ ಪ್ರಣತೋऽಸ್ಮಿ ಜಗದ್ಗುರೋ ।"

# ಅನಾದಿ ವೀರಶೈವ ಸಂಸ್ಕೃತಿಗೆ, ಅನಾದಿ ಶಿವಾಚಾರ್ಯರ ಕೊಡುಗೆ !

## ವೀರಶೈವ ವಿರಾಡ್ರೂಪ

"ನ ವೀರಶೈವ ಸದೃಶಂ ಮತಮಸ್ತಿ ಜಗತ್ರಯೇ
ಭೋಗ ಮೋಕ್ಷಪ್ರದಂ ಪುಣ್ಯಂ ಶಿವಸಾಯುಜ್ಯದಾಯಕಂ ।"
—ಪಾರಮೇಶ್ವರಾಗಮ.

ವಿಶ್ವಮಾನವ ಬೃಹತ್ ಪಥವನ್ನು ನಿರ್ಮಿಸಿ ನಿರ್ದೇಶಿಸುತ್ತದೆ ವೀರಶೈವ ಧರ್ಮ. ಇದು ವಿಶ್ವಮಾನವ ಮತ. ಮಾನವ ಮಾತ್ರರನ್ನೆಲ್ಲ ಮೇಲಕ್ಕೆತ್ತಿ ಹಿಡಿವ ಧರ್ಮ; ಪ್ರಗತಿ ಪಥದಲ್ಲಿ ಮುನ್ನಡೆಸುವ ಮತ. ಮತವೆಂದರೆ ಪಂಥ ಪಂಗಡವೆಂಥರ್ಥವಲ್ಲ. ಮತವೆಂದರೆ ಅನಿಸಿಕೆ,-ಅಭಿಪ್ರಾಯವೆಂದರ್ಥ. ಪಥ-ತತ್ತ್ವವೆಂದರ್ಥ. ಧರ್ಮ ಪದದ ಹೆಗಲೆಣೆಯಾಗಿ ನಿಲ್ಲುವ ನಿಲುವು. ನಿಶ್ಚಿತ ನಿರ್ಮಲ ಅಭಿಪ್ರಾಯವೆ ಧಾರಣಾರ್ಥದ ಧರ್ಮದ ಮತ್ತು ಕರ್ತವ್ಯದ ಹಿನ್ನೆಲೆ ಅಥವಾ ಆಕರವೆಂದರೆ ತೆಗೆದು ಹಾಕುವ ಮಾತಲ್ಲ. ನಿಶ್ಚಿತ ನಿರ್ಮಲಾಭಿಪ್ರಾಯದ ಅನುಷ್ಠಾನವೆ ಧರ್ಮ. ಸದಭಿಪ್ರಾಯವೆ ಒಳಿತನಿಸಿಕೆಯೆ ಕರ್ತವ್ಯಕ್ರಿಯೆಗೆ ಜೀವಾಳ. ಈ ವಿವರಣೆಯಿಂದ ಮತ ಪದದ ಮೌಲ್ಯ ಮನದಟ್ಟಾಗುತ್ತದೆ.

ವೀರಶೈವಮತ ಎಂಬಲ್ಲಿ ವೀರ-ಶೈವ-ಮತ ಈ ಮೂರೂ ಮುಖ್ಯ ಮತ್ತು ಮೌಲ್ಯ ಪದಗಳ ಸಂಗಮವಾಗಿದೆ. ಮತ ಶೈವವಾಗಿರಬೇಕು ;-ಅಂದರೆ ಶಿವ ಸಂಬಂಧವುಳ್ಳದಾಗಿರಬೇಕು. ಅದು ಮಂಗಳಕರವಾದ ಮತ ; ಶಿವ ಸಂಬಂಧ ಮತ. ಈ ಶ್ಲೇಷಸಂಯುಕ್ತಪದ ಶೈವ ಮತ. ಬರೀ ಶೈವಮತವಾದರೆ ಸಾಲದು ವೀರತನದ್ದಾಗಿರಬೇಕು. ವೀರತನಕ್ಕೆ ಬಹು ಮುಖಗಳಿವೆ. ಕಾಯವೀರ ಕರಣವೀರ ಭಾವವೀರ ಭಕ್ತವೀರ ಜೀವವೀರ ಕ್ರಿಯಾವೀರ ಜ್ಞಾನವೀರ ಅನುಭಾವವೀರ ತ್ಯಾಗವೀರ ಯೋಗವೀರ ಇವೇ

ಮುಂತಾದವುಗಳು. ಇವೆಲ್ಲವೂ ಶಿವ ಸಂಬಂಧದವುಗಳಾಗಿರಬೇಕು. ಶಿವತ್ವ ಸೂಚಕಗಳು ಪ್ರೇರಕಗಳು ಆಗಿರಬೇಕು. ಆದರೆ ಆಗ ಅವು ಭೋಗ–ಮೋಕ್ಷ ಪ್ರದವಾಗುತ್ತವೆ. ಭಾಗ್ಯದ ಕೊರತೆಯಿರದು ; ಬಂಧನದ ಕೊರಗಿರದು. ಪಾವನವಾಗಿದ್ದು ಪುಣ್ಯಪ್ರದವೂ ಶಿವ ಸಾಮರಸ್ಯ ಪ್ರದಾಯಕವೂ ಆಗುತ್ತದೆ. ಶ್ರೇಯೋಭಿವೃದ್ಧಿ ಕಾರಣ, ಸರ್ವಸಮನ್ವಯ ಭಾವನ, ಇಹ–ಪರಸಾಧನ ಆಗಿರುವುದರಿಂದ ವೀರಶೈವಧರ್ಮಕ್ಕೆ ವೈಶಿಷ್ಟ್ಯತೆಯಿದೆ ; ವೈಶಾಲ್ಯತೆಯಿದೆ ; ವಿಶ್ವರೂಪವಿದೆ. ಭವ್ಯವಾದ ಭಾವವಿದೆ.

ವೀರಶೈವ ವಿಸ್ತೀರ್ಣ ವಿಶ್ವವಿಸ್ತೀರ್ಣ ! ಅಂತಾಗುವ ಸಾಮರ್ಥ್ಯ ಅದಕ್ಕಿದೆ. ಅದರ ನಾಮ ರೂಪು ಗುಣ ಕ್ರಿಯೆಗಳಲ್ಲಿ ವಿಶಾಲಾರ್ಥ ವಿನ್ಯಸ್ತ ವಾಗಿದೆ. ಲಿಂಗಾಯತ, ಲಿಂಗವಂತ ಪದಗಳಂತೆ ಸೀಮಿತವಾಗಿಲ್ಲ ; ಸಂಕುಚಿತತೆಯಿಲ್ಲ. ಇವೆರಡೂ ವ್ಯಷ್ಟಿ (ವ್ಯಕ್ತಿ) ನಿಷ್ಠಗಳು. ಲಿಂಗಾಯತ ವೀರಶೈವದಲ್ಲಿ ಸ್ಥೂಲತನುವಿಗೆ ಕೊಡುವ ಸೀಮಿತ ಸಂಸ್ಕಾರ ! ಇಷ್ಟಮಾತ್ರದಿಂದ ಲಿಂಗವಂತಿಕೆ ಪೂರ್ಣವಾಗುವುದಿಲ್ಲ. ಲಿಂಗಸ್ವಾಯತ ಲಿಂಗಸನ್ನಿಹಿತ ಸಂಸ್ಕಾರ ದ್ವಯ ರಹಿತನೆಂದಾಗುತ್ತದೆ. ಕೇವಲ ಲಿಂಗಾಯತತ್ವದಲ್ಲಿ ಪ್ರಾಣಲಿಂಗ–ಭಾವಲಿಂಗ ಶೂನ್ಯ ! ಭೋಗಾಂಗ–ಯೋಗಾಂಗ ಶೂನ್ಯ ! ಲಿಂಗಾಯತನಿಗೆ ಸೂಕ್ಷ್ಮ-ಕಾರಣ ತನುಗಳೆರಡಕ್ಕೆ ಭಕ್ತಿತ್ವ ಶೂನ್ಯ ! ಲಿಂಗಾಯತ ಪದದಲ್ಲಿ ಚಿಹ್ನೆಗೆ ಪ್ರಾಧಾನ್ಯವಿದ್ದು ವಿಸ್ತಾರತೆಗೆ ಅವಕಾಶವಿಲ್ಲ, ತ್ಯಾಗಾಂಗ ಮಾತ್ರದಲ್ಲಿ ಲಿಂಗವಿದ್ದವನೆ ಲಿಂಗಾಯತ ! ಇಲ್ಲದವನು ಅಲ್ಲ. ಹೊರಗಿನವರ ಮಾತಿರಲಿ; ಲಿಂಗಾಯತನ ಅಂತರಂಗವೆ ಲಿಂಗರಹಿತ ! ಅಂಗ ರಹಿತ !! ಮತ್ತೆ ಕೇಳಿದರೆ ಶುದ್ಧಿರಹಿತ ! ಈ ಎಲ್ಲ ಕೊರತೆಗಳು ವೀರಶೈವದಲ್ಲಿಲ್ಲ.

ವೀರಶಿವತ್ವ ಯಾರಲ್ಲಾದರೂ ಇರಬಹುದು; ಇರುತ್ತದೆ ಪಂಥ ಪಂಗಡ ಚೌಕಟ್ಟಿಲ್ಲದೆ ! ಎಲ್ಲ ಸತ್‌ಸಾಧಕರನ್ನು ಅದು ಒಳಕೊಳ್ಳುತ್ತದೆ. ಭೇದಭಾವ ವಿಲ್ಲ. ಕಾರಣ ಮೂರು ಲೋಕಗಳಲ್ಲಿ 'ವೀರಶೈವ'ಕ್ಕೆ ಸಮಾನವಾದುದಿಲ್ಲ ಎಂದು ಆಗಮವಾಣಿ ಉಗ್ಗಡಿಸಿರುವಲ್ಲಿ ಔಚಿತ್ಯವಿದೆ; ಅರ್ಥ ಪೂರ್ಣತೆಯಿದೆ.

"ದ್ವೈತಾದ್ವೈತಮತೇ ಶುದ್ಧೇ ವಿಶೇಷಾದ್ವೈತಸಂಜ್ಞಕೇ
ವೀರಶೈವ ಸಿದ್ಧಾಂತೇ ಸರ್ವಶ್ರುತಿ ಸಮನ್ವಯಃ ।"

—ಶ್ರೀಕರಭಾಷ್ಯ

ವೀರಶೈವ ಸಿದ್ಧಾಂತದಲ್ಲಿ ಸರ್ವಶ್ರುತಿ ಸಮನ್ವಯವಿದೆ ; ಮತ್ತು ಸರ್ವ ಮತ (ಧರ್ಮ) ಸಮನ್ವಯವೂ ಇದೆ. ಇದರಿಂದಾಗಿ ವೀರಶೈವ ಧರ್ಮ ವಿಶ್ವ ಮಾನವ ಧರ್ಮ. ವೀರಶೈವವು ವಿಶ್ವವನ್ನೆ ಒಳಗೊಂಡಿದೆ. ವಿಶ್ವಾಧಾರ ಶಿವಶಕ್ತಿ. ಮೂರು ಲೋಕಾಧಾರವಾದಂತೆ ಮೂವತ್ತಾರು ತತ್ತ್ವಾಧಾರ ಶಿವ ಶಕ್ತಿ. ಈ ಶಿವಶಕ್ತಿಯನ್ನೊಳಗೊಂಡಿದೆ ವೀರಶೈವ. ಅಂತೆಯೇ ಇದನ್ನು ಶಕ್ತಿವಿಶಿಷ್ಟಾದ್ವೈತಸಿದ್ಧಾಂತವೆಂದು ಶಿವಾಚಾರ್ಯರು ನಿರ್ಣಯಿಸಿದ್ದಾರೆ. ಇದನ್ನು ದ್ವೈತಾದ್ವೈತವೆಂದು, ಶುದ್ಧಾದ್ವೈತವೆಂದು, ವಿಶಿಷ್ಟಾದ್ವೈತವೆಂದು, ಹೇಳಲಾಗುತ್ತದೆ. ಶಕ್ತಿ ವಿಶಿಷ್ಟಾದ್ವೈತವೆಂದರ್ಥ ! ಸರ್ವಸಮನ್ವಯ ಧರ್ಮ ! ಪರಶಿವ ಧರ್ಮ ! ಶಿವ ಜೀವೈಕ್ಯ ಬೋಧಕ ಧರ್ಮ ; ಅಂತೆಯೇ ವಿಶ್ವೈಕ್ಯ ಭಾವವುಳ್ಳ ಧರ್ಮ.

## ವೀರಶೈವ ಪುರಾತನತೆ ; ವೀರಶೈವರ ವಿಶಾಲತೆ !

"ವೇದ ಸಿದ್ಧಾಂತಯೋರೈಕ್ಯಮೇಕಾರ್ಥ ಪ್ರತಿಪಾದನಾತ್
ಪ್ರಾಮಾಣ್ಯಂ ಸದೃಶಂ ಜ್ಞೇಯಂ ಪಂಡಿತೈರೇತಯೋಃ ಸದಾ ।
ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ
ನಿರ್ದಿಷ್ಟಮುತ್ತರೇ ಭಾಗೇ ವೀರಶೈವ ಮತಂ ಪರಂ॥
ವಿದ್ಯಾಯಾಂ ಶಿವರೂಪಾಯಾಂ ರಮಂತೇ ಯೇ ವಿಶೇಷತಃ
ತಸ್ಮಾದೇತೇ ಮಹಾಭಾಗಾ ವೀರಶೈವಾ ಇತಿ ಸ್ಮೃತಾಃ ।"

—ರೇಣುಕಾಗಮ

ಎರಡು ಸಾವಿರ ವರುಷಗಳ ಹಿಂದಿನ ಶಿವಾಗಮೋಕ್ತವಾಗಿ ಪುರಾತನತೆ ಯಿದೆ ಮತಕ್ಕೆ ! ಶೈವೀ ವಿದ್ಯೆಯಲ್ಲಿ ವಿಹರಿಸುವವರೆಲ್ಲ ವೀರಶೈವರೆಂದುದಾಗಿ ವಿಕಾಸತೆ ವಿಶಾಲತೆಗಳಿವೆ ವೀರಶೈವರಿಗೆ ! ವೇದಾಂತ ಸಿದ್ಧಾಂತಗಳೆರಡರ ಪ್ರಾಮಾಣ್ಯವಿದೆ. ಸಿದ್ಧಾಂತ ನಿರ್ದಿಷ್ಟವಾಗಿದೆ.

ವೇದ ಮತ್ತು ಸಿದ್ಧಾಂತಗಳು ಒಂದೇ ಅಭಿಪ್ರಾಯವುಳ್ಳವುಗಳಾಗಿವೆ. ಆದರಿಂದ ನಿಗಮಾಗಮಗಳಲ್ಲಿ ಏಕತೆಯಿದೆ. ಸಮಾನ ಪ್ರಮಾಣವುಳ್ಳವು ಗಳಾಗಿವೆ.

ಶಿವಾಗಮಗಳು ಸಿದ್ಧಾಂತವೆಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಇವು ಕಾಮಿಕಾದಿ ವಾತುಲಾಂತವಾಗಿ ಇಪ್ಪತ್ತೆಂಟಾಗಮಗಳಿವೆ. ಇವನ್ನು ಮಹಾ ತಂತ್ರಗಳೆಂದು ಹೇಳಲಾಗುತ್ತದೆ. ಇವು ಶಿವೋದಿತಗಳು, ಅಥವಾ ಶಿವಾ ಚಾರ್ಯೋದಿತಗಳು; ಶಿವನಿಗೂ ಶಿವಾಚಾರ್ಯರಿಗೂ ಭೇದಭಾವವಿಲ್ಲಾಗಿ ! ಇವು ಗಳ ಉತ್ತರ ಭಾಗಗಳಲ್ಲಿ ವಿಶಿಷ್ಟವಾದ ವೀರಶೈವ ಮತವು ನಿರ್ದಿಷ್ಟವಾಗಿದೆ. ಇದರಿಂದ ವೀರಶೈವ ಪ್ರಾಚೀನತೆ ಸಿದ್ಧವಾಗುತ್ತದೆ.

ವಿಶೇಷವಾಗಿ ಶಿವಸ್ವರೂಪ ವಿದ್ಯೆಯಲ್ಲಿ ವಿಹರಿಸುವವರು ವೀರಶೈವರು. ಇವರೇ ಮಹಾಭಾಗರು. ಅಂದರೆ ಅಪಾರ ಅದೃಷ್ಟವಂತರು.

''ಅವಧೂತಶ್ಚ ಸಂನ್ಯಾಸೀ ಯೋಗೀ ಪಾಶುಪತಃ ಶಿವಃ
ಲಿಂಗೀ ವೀರೋ ವೀರಶೈವೋ ಮಹಾ ಮಾಹೇಶ್ವರೋ ಯತಿಃ ।
ಪರ್ಯಾಯನಾಮಾನ್ಯೇತಾನಿ ವೀರಶೈವಸ್ಯ ಯೋಗಿನಃ ॥''

—ಪಾರಮೇಶ್ವರಾಗಮ, ಪ. ೧೦

ಅವಧೂತ, ಸಂನ್ಯಾಸಿ, ಯೋಗಿ, ಪಾಶುಪತ, ಶಿವ, ಲಿಂಗಿ, ವೀರ, ವೀರಶೈವ, ಮಹಾಮಾಹೇಶ್ವರ, ಯತಿ–ಈ ಹತ್ತು ವೀರಶೈವನಿಗೆ ಪರ್ಯಾಯ ನಾಮಗಳು. ಇನ್ನು ವೀರಶೈವ ಧರ್ಮದ ಪರ್ಯಾಯ ನಾಮಗಳಿವು :

''ಅತ್ಯಾಶ್ರಮಂ ಪಾಶುಪತಂ ಶಾಂಭವಂ ತಚ್ಛಿರೋವ್ರತಂ
ಇತ್ಯೇವಂ ನಾಮಭಿಃ ಪುಣ್ಯೈರ್ನಿಗಮಾಂತೇಷು ಗೀಯತೇ ।''

—ಕಾರಣಾಗಮ

ಅತ್ಯಾಶ್ರಮ, ಪಾಶುಪತ, ಶಾಂಭವ, ಶಿರೋವ್ರತ ಇವು ವೀರಶೈವ ಧರ್ಮದ ವೇದಾಂತೋಕ್ತ ನಾಮಾಂತರಗಳು. ಸಿದ್ಧಾಂತನಾಮಗಳು, ಇವೆಲ್ಲವೂ ಪಾವನನಾಮಗಳು.

## ಅನಾದಿ ವೀರಶೈವ ಉಗಮ–ನಿಗಮ :

(ಕ್ರಿ.ಶ.ಪೂ. ಆರು ಸಾವಿರ ವರುಷಗಳು)

''ಕಥಿತಾಃ ಶ್ರೀ ರುದ್ರೇಣೈವ ಲಿಂಗಸ್ಯಾರ್ಚನ ಸೂಚಕಾಃ ।
ಭವತಾ ಹಿ ಪುರಾ ಪ್ರೋಕ್ತಂ ಕರುಣಾ ಯಂತ್ರಿತಾತ್ಮನಾ

ವೀರಶೈವೀಯ ಧರ್ಮಾಸ್ತು ಸರ್ವ ಧರ್ಮೋತ್ತಮಾ ಇತಿ
ತಾನದ್ಯ ಶ್ರೋತುಮಾಸ್ಮಿ ಪ್ರಸನ್ನೋ ಬ್ರೂಹ್ಯಶೇಷತಃ ॥''

— ಕಾರಣಾಗಮ

**ಶಿವನನ್ನ ಕುರಿತು ಶಿವೆಯ ಕೇಳಿಕೆಯಿದು :** ಶಿವನಿಗೆ ಹಿಂದಿದ್ದವನು ಶ್ರೀರುದ್ರನು. ಆತನಿಂದ ಕಥಿತಗಳಾಗಿವೆ ಲಿಂಗಾರ್ಚನ ಸಂಕೇತಗಳಾದ ಧರ್ಮಗಳು. ಅವು ವೀರಶೈವೀಯ ಧರ್ಮಗಳು. ಸರ್ವ ಧರ್ಮೋತ್ತಮಗಳು. ಅವು ನಿನ್ನ ಕಾರುಣ್ಯ ಮಾಧ್ಯಮದಿಂದ ಅಥವಾ ನನ್ನ ಮೇಲಿನ ಕಾರುಣ್ಯಕ್ಕೆ ಕಟ್ಟು ಬಿದ್ದು ಪೂರ್ವದಲ್ಲಿ ಪ್ರೋಕ್ತಗಳಾಗಿವೆ. ಅವೆಲ್ಲವೂ ಅನಾದಿ ವೀರಶೈವಕ್ಕೆ ಸಂಬಂಧಿಸಿದವುಗಳು; ಅಷ್ಟಾವರಣಗಳು. ಅಷ್ಟಾವರಣಗಳಲ್ಲಿ ಒಂದೊಂದು ಒಂದು ಧರ್ಮ. ಅಂದರೆ ಕರ್ತವ್ಯಕ್ರಿಯೆ, ಜ್ಞಾತವ್ಯಜ್ಞಾನಭಾವ್ಯ. ಭಾವ–ಇವು ಧರ್ಮನಿಷ್ಠಾರ್ಥಗಳು. ಗುರು ಧರ್ಮ, ಲಿಂಗಧರ್ಮ, ಜಂಗಮ ಧರ್ಮ, ವಿಭೂತಿ ಧರ್ಮ, ರುದ್ರಾಕ್ಷ ಧರ್ಮ, ಮಂತ್ರಧರ್ಮ, ಪಾದೋದಕಧರ್ಮ, ಪ್ರಸಾದ ಧರ್ಮಗಳೆಂದೆನಿಸುತ್ತವೆ. ಇವು ರುದ್ರಕಥಿತಗಳು. ಲಿಂಗಾರ್ಚನ ಲಿಂಗಾರ್ಪಣ ಲಿಂಗಾನುಭವ ಮಾಧ್ಯಮಗಳು. ಅಥವಾ ಸೂಚಕಗಳು. ಇವನ್ನೇ ಅನಾದಿ ವೀರಶೈವೀಯ ಧರ್ಮಗಳೆಂದು ನಿರೂಪಿತವಾಗಿದೆ. ಇವು ಸರ್ವಧರ್ಮಗಳಿಗಿಂತ ಶ್ರೇಷ್ಠವಾದವುಗಳು.

ಅನಾದಿ ವೀರಶೈವವೆನಿಸಿದ ಪಶುಪತಿ ರುದ್ರನಿಂದುತ್ಪಾದಿತವಾದ ಪಾಶುಪತ ತತ್ತ್ವಜ್ಯೋತಿ ಚಂದ್ರಜ್ಞಾನಾಗಮದಲ್ಲಿ ತುಂಬಿ ತೊಳಗಿದೆ. ವೀರಶೈವದ ಮೂಲಾಧಾರವಾದ ಅಷ್ಟಾವರಣ – ಪಂಚಾಚಾರಗಳ ನಿರೂಪಣ ವಿವರವಾಗಿದೆ. ಅವುಗಳಿಂದ ಅಂತಃಕರಣ ವಿಕಾಸವಾಗಿ ಅಂತಶ್ಚಕ್ಷು ತೆರೆಯುತ್ತದೆ. ಅಂತಃಪ್ರಕಾಶ ಅಳವಡುತ್ತದೆ. ಅದಿಲ್ಲದಿದ್ದರೆ, "ಜಗತ್ಕಿಲಾಂಧತಮಿಸ್ರೇ ನಿಮಜ್ಜೇದ್ ಜ್ಞಾನವರ್ಜಿತಂ!" ಎಂಬಂತಾಗುತ್ತಿದ್ದಿತು. ಆಗುತ್ತಿದೆ ; ಸತ್ಯಜ್ಞಾನರಹಿತವಾದ ಅಂಧಕಾರದಲ್ಲಿ ಜಗತ್ತು ಮುಳುಗಿರುತ್ತಿತ್ತೆಂದು ಚಂದ್ರಜ್ಞಾನಾಗಮ ತ್ರೈಕಾಲಿಕ ಸತ್ಯವಾಗಿ ನಿರೂಪಿಸಿದೆ. ಅಂತೆಯೇ ಆಗಮ ಸಂಹಿತೆಗಳನ್ನರಿಯದವರು ಪಶುಗಳೆಂಬುದು ಸತ್ಯಸಿದ್ಧವಾದ ಅದರ ಆಶಯ. ಅಂಧತಾಮಿಶ್ರವೆ ಪಾಶ. ಜೀವಾತ್ಮನೆ ಪಶು. ಇದನ್ನು ಬಿಡಿಸುವ ವೀರಶ್ರೀಯುಳ್ಳ ಧರ್ಮ ದೀಪ್ತಿಗಳು ಚಂದ್ರಜ್ಞಾನಾಗಮದಲ್ಲಿವೆ :

"ವೇಧಾ ಮನು ಕ್ರಿಯಾಭಿಖ್ಯ ದೀಕ್ಷಾತ್ರಯ ಶೋಭಿತಂ
ಷಡಧ್ವಶುದ್ಧಿ ಕಲಿತಂ ಗುರುಕಾರುಣ್ಯಸಂಭೃತು
ಭಸ್ಮ ರುದ್ರಾಕ್ಷ ಶ್ರೀಲಿಂಗ ಧಾರಣಾತ್ಮಕ ಮುತ್ತಮಂ
ಶಾಂಭವವ್ರತಮೇತದ್ಧಿ ವೇದ ಶಾಸ್ತ್ರೈಕ ಬೋಧಿತಂ ।
ಇದಂ ಶಿವ ಪ್ರಸಾದೈಕ ಕಾರಣಂ ಭವವಾರಣಂ
ಏಕೈಕಮಪಿ ಚಾಸ್ಯಾಂಗಂ ಮುಕ್ತಿದಂ ಕೀರ್ತಿತಂ ಶ್ರುತೌ
ಕಿಮು ವಾಚ್ಯಂ ನು ಸರ್ವಾಂಗಕಲಿತಂ ಮೋಕ್ಷದಂತ್ವಿತಿ॥"

ಅನಾದಿ ವೀರಶೈವ ಪರ್ಯಾಯ ನಾಮವಾದ ಶಾಂಭವ ವ್ರತದ ಲಕ್ಷಣ ಇಲ್ಲಿ ನಿರ್ದಿಷ್ಟವಾಗಿದೆ. ವೀರಶೈವ ಅಷ್ಟಾವರಣ ವ್ರತವೇ ಶಾಂಭವ ವ್ರತ ವಲ್ಲದೆ ಬೇರೆಯಿಲ್ಲ. ಇದು ವೇದ ಶಾಸ್ತ್ರ ಬೋಧಿತವಾಗಿದೆ. ಶಿವಪ್ರಸಾದೈಕ ಕಾರಣವಾಗಿದೆ. ಇದಕ್ಕೆ ಕಾರಣ ಗುರು ಕಾರುಣ್ಯ. ತ್ರಿವಿಧ ದೀಕ್ಷೆಗಳು ಅಷ್ಟಾವರಣಗಳು ಶಿವಾಚಾರ್ಯ ಕೊಡುಗೆ ! ಇವು ವೀರಶೈವ ಸಂಸ್ಕೃತಿ ಕಾರಣ ಗಳು. ಇವುಗಳಲ್ಲಿ ಒಂದೊಂದು ಅಂಗದ ಪ್ರಭಾವವೇ ಇಷ್ಟೊಂದು ಶ್ರೇಷ್ಠ ವಾಗಿರುವಾಗ ಇನ್ನು ಸರ್ವಾಂಗಧರ್ಮದ ಅಂದರೆ ಅಷ್ಟಾವರಣಾಂಗ ಧರ್ಮದ ಅತ್ಯದ್ಭುತ ಪ್ರಭಾವದ ಸಂಗತಿಯನ್ನು ಬೇರೆ ಬಿತ್ತರಿಸಬೇಕಾಗಿಲ್ಲ; ಬಿತ್ತರಿಸಲು ಸಾಧ್ಯವೂ ಇಲ್ಲ. ಅಷ್ಟಾವರಣಕ್ಕೆ ಮೂಲ ಕಾರಣನಾದ ಗುರು ಮಹಿಮೆ ಅಪಾರ. "ಗುರ್ವಾಜ್ಞಾ ಪಾಲಕೋ ಯಸ್ಮಾದ್ ಜ್ಞಾನ ಸಂಪತ್ತಿಮಶ್ನುತೇ!" ಎಂಬಂತೆ ಸ್ವಯಜ್ಞಾನಸಂಪತ್ತಿಗೆ ವೀರಶೈವ ಶಿವಾಚಾರ್ಯನೇ ವಿಶಿಷ್ಟ ಕಾರಣನಾಗಿದ್ದಾನೆ. ಶಿವಾಚಾರ್ಯನಿಲ್ಲದೆ ಲಿಂಗ ಜಂಗಮಾದಿಗಳು ಲಭ್ಯ ವಾಗವು ; ವೀರಶೈವ ಧರ್ಮ ಮತ್ತು ಸಮಾಜ ಉದಯಿಸವು. ಲಿಂಗ ಅದೊಂದು ಅಂತಶ್ಚಿತ್ಕಳೆ ! ಸ್ವಯಾನುಭವಾನಂದ ಕಳೆ ! ಸತ್ಕ್ರಿಯೆಯ ಸತ್ಕಲೆ ! ಇವನ್ನು ಕರುಣಿಸುವಾತ ಶಿವಾಚಾರ್ಯ. ಇದನ್ನು ಅನಾದಿ ಕಾಲ ದಲ್ಲಿ ಮೊತ್ತಮೊದಲು ಉತ್ಪಾದಿಸಿ ಕರುಣಿಸಿದಾತ ಶ್ರೀ ರುದ್ರ ವಿಶ್ವಗುರು; ಆತ ವಿಶ್ವಾಧಿಕ. ಆತನ ಆ ಮೌಲ್ಯ ಮೇರೆಯಿಲ್ಲದ್ದು. ಸ್ವಯ ಸಂವಿತ್ತಿ. ಸಂಪತ್ತಿಯನ್ನುಂಟು ಮಾಡಿಕೊಡುವಂತಹದು. ಆತ ದಿಟಕ್ಕೂ ಕ್ರಿಯಾ-ಮಂತ್ರ-ವೇಧಾತ್ಮಕ ದೀಕ್ಷಾಚೇತನನು : ಶಿವಾಚಾರ ಸಂಸ್ಕಾರ ಮೂಲ ಕಾರಣನು ;

"ರುದ್ರೇಣ ದೀಕ್ಷಿತೋ ಭೂತ್ವಾ ಸ್ಕಂದಃ ಶಿವ ಸಮೋಽಭವತ್
ಶಿವಾಚಾರ ರಹಸ್ಯ ಸ್ಯ ಪಾತ್ರತಾಂ ಪ್ರಥಮಂ ಗತಃ ।"

—ಆದಿತ್ಯಪುರಾಣ.

ಇಲ್ಲಿ ಶಿವಾಚಾರ (ವೀರಶೈವ)ದ ಉಗಮ ನಿರ್ದಿಷ್ಟವಾಗಿದೆ ಸ್ಪಷ್ಟ ವಾಗಿ ! ಮತ್ತು ನಿಗಮ (ಪಥ)ವೂ ನಿರ್ದಿಷ್ಟವಾಗಿದೆ. ಶಿವಾಚಾರವೇ ನಿಗಮ. ನಿಗಮ ಮಾನವೀಯ ಶಿವಾಚಾರ ಸಕ್ಕಲತಿ ಸಂಕೇತ. ಸಕ್ಕಲತಿಯೆ ಸಂಸ್ಕೃತಿ. ಇದು ವೀರಶೈವ ಸಂಸ್ಕೃತಿ. ಈ ವೀರಶೈವ ಸಂಸ್ಕೃತಿಯಾದ ಶಿವಾಚಾರ ವನ್ನುಬೋಧಿಸಿದ ಶ್ರೀರುದ್ರನೇ ಸನಾತನ ಶಿವಾಚಾರ್ಯ ! ಆತನ ಈ ಅಸದೃಶ ಕೊಡುಗೆ ಅದೆಂದಿಗೂ ಮರೆಯುವಂತಹದಲ್ಲ. ಶ್ರೀರುದ್ರ ಶಿವಾಚಾರ್ಯನ ಶಿಷ್ಯ ಸ್ಕಂದ. ಬೇರೆ ಯಾರಲ್ಲ. ಬಸವಣ್ಣ, (ಎರಡನೆಯ ಭವಾಂತರದಲ್ಲಿ ಸ್ಕಂದನೆಂಬ ಗಣೇಶ್ವರನೆಂದು ಹೆಸರಿಟ್ಟು ಕರೆದು ನಿಮ್ಮ ಕಾರುಣ್ಯವ ಮಾಡಿ ಯೆನ್ನನಿರಿಸಿಕೊಂಡಿದ್ದಿರಿ....) ಎಂದು ಸಾಕ್ಷಾತ್ತಾಗಿ ಬಸವಣ್ಣನವರೇ ತಮ್ಮೀ ವಚನದಲ್ಲಿ ಒಪ್ಪಿಕೊಂಡಿರುವರು ಕಾರುಣ್ಯವ ಪಡೆದಂತೆ ! ಇದರಿಂದಾಗಿ ವೀರಶೈವದ ಉಗಮ ಅನಾದಿ. ಅನಾದಿ ಶ್ರೀರುದ್ರಶಿವಾಚಾರ್ಯನಿಂದುಗಮ. ಬಸವಣ್ಣನು ಶ್ರೀರುದ್ರಗಣೇಶ್ವರನ ಆಜ್ಞೆವಿಡಿದು ಬಂದ ಶ್ರೀ ರುದ್ರಗಣೇಶ್ವರನ ಅನುಯಾಯಿ ! ವೀರಶೈವ ನಿಗಮ (ಪಥ)ದ ಬಗೆಗೆ ಪಾರಮೇಶ್ವರ ತಂತ್ರವು ನಿರ್ದಿಷ್ಟವಾಗಿ ನಿರ್ದೇಶಿಸಿದೆ ಹೀಗೆ :

"ಜ್ಞಾನಂ ಕ್ರಿಯಾ ಚ ಚರ್ಯಾ ಚ ಯೋಗಶ್ಚೇತಿ ನಗಾತ್ಮಜೇತಿ
ಚತುಷ್ಪಥಃ ಸಮಾಖ್ಯಾತಃ ಶಿವಧರ್ಮಃ ಸನಾತನಃ ।

ಪಶು-ಪಾಶ-ಪತಿಜ್ಞಾನಂ ಜ್ಞಾನಮಿತ್ಯಭಿಧೀಯತೇ
ಷಡಧ್ವಶುದ್ಧಿರ್ವಿಧಿನಾ ಗುರ್ವಧೀನಾ ಕ್ರಿಯೋಚ್ಯತೇ ।

ವೀರಶೈವ ಪ್ರಯುಕ್ತಸ್ಯ ಶಿವೇನ ವಿಹಿತಸ್ಯಚ
ಲಿಂಗಾರ್ಚಾನೇಃ ಸ್ವಧರ್ಮಸ್ಯ ಚರ್ಯಾ ಚರ್ಯೇತಿ ಕಥ್ಯತೇ ।

ತದುಕ್ತೇನೈವ ಮಾರ್ಗೇಣ ಶಿವಸುಸ್ಥಿತ ಚೇತಸಃ
ವೃತ್ಯಂತರ ನಿರೋಧೋಽಯಂ ಸಯೋಗ ಇತಿ ಕಥ್ಯತೇ
ಅಶ್ವಮೇಧ ಶತಾಚ್ಛ್ರೇಷ್ಠಂ ದೇವಿ ಚಿತ್ತಪ್ರಸಾದತಃ ॥"

— ಪಾರಮೇಶ್ವರ ತಂತ್ರ

ಶಿವಾಚಾರ್ಯರು ಹಾಕಿಕೊಟ್ಟ ವೀರಶೈವ ಸಂಸ್ಕೃತಿಯ ಚೆನ್ನಾದ ಚತುಷ್ಪಥ (ನಾಲ್ಕು ನಿಗಮ) ಇಲ್ಲಿದೆ. ಇದೋ ಆಲಿಸಿ:

ಜ್ಞಾನ, ಕ್ರಿಯೆ, ಚರ್ಯೆ ಯೋಗ ಇವು ಸನಾತನ ಶಿವಧರ್ಮಕ್ಕೆ ಅಂದರೆ ಅನಾದಿ ಆದಿ ವೀರಶೈವಕ್ಕೆ ಚತುಷ್ಪಥ, ಅಂದರೆ ನಾಲ್ಕು ಹಸನಾದ ಹೊಲಬುಗಳು; ಹಿರಿದಾದ ಹೊಲಬುಗಳು. ಸತ್ಯಾನ್ವೇಷಣದ ನಿಕಟ ನಿಗಮಗಳು. ಸನಾತನ ಶಿವಧರ್ಮ ಅಂದರೆ ವೀರಶೈವಧರ್ಮ ಈ ಚತುಷ್ಪಥದಿಂದ ಶಾಶ್ವತ ವಾಗಿದೆ. ಸಮುಜ್ವಲವಾಗಿದೆ. ಸಂಪೂರ್ಣವಾಗಿದೆ. ಸುಪ್ರಸಿದ್ಧವಾಗಿದೆ, ಈ ನಾಲ್ಕು ನಿಗಮಗಳ ನಿಷ್ಕೃಷ್ಟ ಲಕ್ಷಣಗಳು ಇಂತು ನಿರೂಪಿತವಾಗಿದೆ.

**ಜ್ಞಾನ :** ಪಶು-ಪಾಶ-ಪತಿ ಜ್ಞಾನವೇ ನಿಜಜ್ಞಾನ. ಅಂದರೆ ಜೀವ-ಮಲ-ಶಿವ ಇವುಗಳ ಅರಿಮೆ: ಅಥವಾ ವಿವೇಚನೆ. ತನುತ್ರಯ-ಜೀವತ್ರಯ ಮಲತ್ರಯ ಪತಿ (ಲಿಂಗ)ತ್ರಯ ಜ್ಞಾನ ಶಿವಧರ್ಮದ ಶಿವಾಗಮಿಕಜ್ಞಾನವೇ ಜ್ಞಾನ. ದೀಕ್ಷಾತ್ರಯದಿಂದ ಮಲ(ಪಾಶ)ತ್ರಯವನ್ನು ಕಳೆದುಕೊಂಡಲ್ಲಿ ಪಶುತನ ಪರಿಹಾರವಾಗಿ ಪತಿತನ ಪ್ರಾಪ್ತಿಸುತ್ತದೆ. ಆ ತ್ರಿವಿಧ ಲಿಂಗಪತಿ ಜ್ಞಾನವೇ ಮಹಾಜ್ಞಾನ.

"ರುದ್ರಃ ಪಶೂನಾಮಧಿಪತಿರಿತಿ, ವಯಂ ಬ್ರಹ್ಮಾದಯಃ
ಸರ್ವೇ ಪಶವಃ, ಅಸ್ಮಾಕಂ ತ್ವಮೇಕಃ ಪತಿರೀತಿ।" – ಯಜುರ್ವೇದ.

"ತನುತ್ರಯಗತಾನಾದಿ ಮಲತ್ರಯಮಸೌ ಗುರುಃ
ದೀಕ್ಷಾತ್ರಯೇಣ ಸಂದಹ್ಯ ಲಿಂಗತ್ರಯಮುಪಾದಿಶತ್ ।"

– ಕಾರಣಾಗಮ.

"ಲಿಂಗಾಂಗಸಂಗಿನಾಂ ವಕ್ಷ್ಯೇ ಪುನರ್ಜನ್ಮನ ವಿದ್ಯತೇ
ಏಷಃ ಪಾಶುಪತಾಚಾರಃ ಪಶುಪಾಶ ನಿವೃತ್ತಯೇ ।
ಸರ್ವವೇದಾಂತಸಾರೋಽಯಮತ್ಯಾಶ್ರಮ ಇತಿ ಶ್ರುತಿಃ
ಪರಬ್ರಹ್ಮಾಭಿದಂ ಲಿಂಗಂ ಪಶುಪಾಶ ವಿಮೋಚಕಂ ।
ಯೋ ಧಾರಯತಿ ಸದ್ಭಕ್ತ್ಯಾ ಸ ಪಾಶುಪತ ಉಚ್ಯತೇ
ಶರೀರತ್ರಿತಯೇ ಭಕ್ತ್ಯಾ ಲಿಂಗಂ ಪರಶಿವಾತ್ಮಕಂ ॥"

ಲಿಂಗಸ್ವರೂಪನಾದ ರುದ್ರನು ಪಶುರೂಪರಾದ ಜೀವಾತ್ಮರಿಗೆಲ್ಲ ಪತಿ ಎಂದು ಯಜುರ್ವೇದ ವೀರಶೈವ ಧರ್ಮವನ್ನು ಪ್ರತಿಪಾದಿಸುವ ಜೊತೆಗೆ ರುದ್ರ

ದೇವನು ಪತಿಧರ್ಮಿಯೆಂದು ಅನಾದಿ ವೀರಶೈವಕರ್ತನೆಂದು ಹೇಳಿದಂತಾಗಿದೆ. ತನುತ್ರಯಗಳೆ ಪಶುಗಳು, ಮಲತ್ರಯಗಳೆ ಪಾಶಗಳು. ಲಿಂಗತ್ರಯಗಳೇ ಪತಿಗಳು ಎಂದು ಹೇಳಿ ಕ್ರಿಯೆ ಮಂತ್ರವೇಧಾ ದೀಕ್ಷಾತ್ರಯದಿಂದ ಮಲತ್ರಯ ಗಳು ಸುಟ್ಟು ತನುತ್ರಯತ್ವ ತೊಲಗಿ ಲಿಂಗತ್ರಯದ ಉಪದೇಶದಿಂದ ಪ್ರತಿಷ್ಠಾನವಾಗುತ್ತದೆಂದು ಕಾರಣಾಗಮ ನಿರೂಪಿಸಿದೆ. ಹೀಗೆ ಅಂಗತ್ರಯ ದಲ್ಲಿ ಲಿಂಗತ್ರಯ ಸಂಗವುಳ್ಳವರಿಗೆ ಪುನರ್ಜನ್ಮವಿಲ್ಲೆಂದು, ಇದು ಪಾಶುಪತಾಚಾರ ವೆಂದು, ಇದರಿಂದ ಪಶುಪಾಶ ನಿವೃತ್ತಿಯೆಂದು, ಇದು ಎಲ್ಲ ವೇದಾಂತಸಾರ ವೆಂದು, ಅತ್ಯಾಶ್ರಮವೆಂದು, ಪರಶಿವ ಬ್ರಹ್ಮಸ್ವರೂಪವೆ ಲಿಂಗವೆಂದು, ಇದರಿಂದ ಪಶುಪಾಶ ವಿಮೋಚನವೆಂದು ನಿರ್ದಿಷ್ಟವಾಗಿ ಲಿಂಗಪುರಾಣ ಸ್ಕಂದ ಪುರಾಣಗಳು ನಿರೂಪಿಸಿವೆ. ಅಲ್ಲದೆ ಇವು ಮುಂದುವರಿದು ಪರಶಿವಬ್ರಹ್ಮ ಸ್ವರೂಪ ಲಿಂಗಧಾರಣ ಮಾಡಿದಾತನು ಪಾಶುಪತನೆನಿಸುತ್ತಾನೆ. ಭಕ್ತಿಯಿಂದ ಅಂಗತ್ರಯದಲ್ಲಿ ಪರಶಿವಾತ್ಮಕ ಲಿಂಗವನ್ನು ಧರಿಸುವಾತನೇ ಪಾಶುಪತನೆಂದು ಸ್ಪಷ್ಟಪಡಿಸಲಾಗಿದೆ. ಇದರಿಂದ ರುದ್ರಪಶುಪತಿಯಿಂದ ಉತ್ಪಾದಿತವಾದ ಪಾಶುಪತ ಮತವೇ ಅನಾದಿ ವೀರಶೈವವೆಂಬುದೆಂದು ಹೇಳಲು ಯಾವ ಅಭ್ಯಂತರವಿಲ್ಲವಾಗಿದೆ. ಆ ಪಾಶುಪತಮತವನ್ನೇ ಶಿವಾಚಾರವೆಂದು. ಅದು ರುದ್ರರೂಪಿತವೆಂದು ನಿರ್ದಿಷ್ಟವಾಗಿದೆ.

**ಕ್ರಿಯೆ** : ವರ್ಣ, ಪದ, ಮಂತ್ರ, ಭುವನ, ತತ್ತ್ವ, ಕಲಾ-ಈ ಷಡಧ್ವಶುದ್ಧಿ ವಿಧಿಯಿಂದ ಗುರುದೇವನ ಅಧೀನವಾಗಿರುವುದೆ ಕ್ರಿಯೆ. ವೀರ ಶೈವ ಧರ್ಮದ್ದು 'ಗುರ್ವಧೀನಾ ಕ್ರಿಯಾ' ಎಂದು ನಿರೂಪಿಸಿದುದು ಗಮನೀಯ. ಗುರುವೇ ಲಿಂಗವಾಗಿ ಶಿಷ್ಯನಲ್ಲಿ ಅವತರಣಗೊಂಡಿರುವುದಾಗಿ ವೀರಶೈವ ಧರ್ಮ ದಲ್ಲಿ ಕ್ರಿಯೆ ಗುರುದೇವನ ಅಧೀನ. ಗುರುವಿಲ್ಲದೆ ಯಾವ ಕ್ರಿಯೆ ನೇರವೇರದು; ಫಲಿಸದು. ಗುರುಬೋಧಿಸಿದ ಕ್ರಿಯೆ ಅಜಡ. ಅರ್ಚನಕ್ರಿಯೆಯೂ ಗುರು ಕಾರುಣ್ಯಕ್ಕಾಗಿ; ಗುರುಪ್ರಸಾದಕ್ಕಾಗಿ ! ಗುರುವಿಲ್ಲದೆ ಕ್ರಿಯಾಚರಣೆಯನ್ನು ನೆರವೇರಿಸಬಾರದು. ಮನೆಯಲ್ಲಿ ಏನನ್ನೇ ಮಾಡಲಿ ಗುರುಮುಖದಿಂದಲೆ ಮಾಡಿ ಸಬೇಕು. ಗುರುಸಾಕ್ಷಿಯಾಗಿ ಮಾಡಬೇಕು. ದೀಕ್ಷಾ ಗುರುವೆಂದರೆ ಕ್ರಿಯಾಗುರು ವೆಂದರ್ಥ! ಗುರುಬೋಧದಿಂದ ಕ್ರಿಯೆಯಪ್ರಾಪ್ತಿ; ಕ್ರಿಯಾಲಿಂಗಪ್ರಾಪ್ತಿ ಅಂದರೆ ಕ್ರಿಯಾಯೋಗ ಪ್ರಾಪ್ತಿ. ಕ್ರಿಯಾಯೋಗದಿಂದ ವಿಶ್ವಜೀವನಶುದ್ಧಿ, ಸಿದ್ಧಿ !

ಗುರುದತ್ತ ಲಿಂಗಾರ್ಚನ ಕ್ರಿಯೆಗೆ ಬೇರೆ ಯಜ್ಞ ತಪಸ್ಸು ಯೋಗಾದಿಗಳು ಸರಿ ಬಾರವು. ಕ್ರಿಯೆಯಿಲ್ಲದ ಭಕ್ತಿ ಜ್ಞಾನ ಭಾವಾದಿಗಳು ಜಡ, ಕ್ರಿಯೆಯೆಂದರೆ ಆಚಾರ, ಆಚಾರವೆಂದರೆ ಒಳ್ನಡತೆ

**ಚರ್ಯೆ** : ಸ್ವಧರ್ಮವೆ ಲಿಂಗಧರ್ಮ; ಲಿಂಗಧರ್ಮವೇ ಸ್ವಧರ್ಮ. ಲಿಂಗಾರ್ಚನ ಸ್ವರೂಪ ಸ್ವಧರ್ಮ ಪ್ರೇರಣೆಯೆ ಚರ್ಯೆ ! ಲಿಂಗಾಚರಣೆಯೆಂದರೆ ಆತ್ಮಾಚರಣೆ ! ಗುರುಚರ್ಯೆಯಲ್ಲಿ ಲಿಂಗಚರ್ಯೆಯಲ್ಲಿ ಚರಚರ್ಯೆಯಲ್ಲಿ ನಿರತನಾಗಿರುವಿಕೆಯೆ ವೀರಶೈವ ಚರ್ಯೆ ! ಅದುವೆ ಶಿವಚರ್ಯೆ, ವಿಹಿತಚರ್ಯೆ, ಇದು ವೀರಶೈವ ವಿಶಿಷ್ಟರೀತಿ; ವಿಶಿಷ್ಟಸ್ಥಿತಿ. ಅದುವೆ ವೀರಶೈವ ಪ್ರಯುಕ್ತ; ವಿಹಿತ ಚೈತನ್ಯ ರೂಪವೃತ್ತಿ ಚರ್ಯೆಯೆನಿಸುತ್ತದೆ. ವಿಹಿತ ವೃತ್ತಿ ಚರ್ಯೆ. ಅಂದರೆ ಸತ್ಯಶುದ್ಧ ಕ್ರಿಯೆ ಅಥವಾ ಆಚಾರ ! ಒಳ್ನಡತೆ ! ಚಲನಾತ್ಮಕವಾಗಿ ಚರ್ಯೆಯೆನಿಸಿದೆ. ಚಲನೆ ಚೈತನ್ಯಕಾರಿ! ಶಿವಾಚಾರಚಾರಿ !!

**ಯೋಗ** : ವೀರಶೈವ ಪ್ರಯುಕ್ತ ಮಾರ್ಗದಿಂದ ಚರಿಸಲು ಚಿತ್ತ ಶಿವನ(ದ)ಲ್ಲಿ ಸುಸ್ಥಿತವಾಗುತ್ತದೆ. ಶಿವೇತರದಲ್ಲಿ ವೃತ್ಯಂತರದಲ್ಲಿ ಚಲಿಸದು ಚಿತ್ತ. ಶಿವಾಧ್ಯಾನದಲ್ಲಿ ನಿಂತ ಚಿತ್ತದಲ್ಲಿ ಶಿವನು ಸುಸ್ಥಿತನಾಗುತ್ತಾನೆ. ಅದುವೆ ವೀರಶೈವಯೋಗ; ಶಿವಯೋಗ. ಇದು ನೂರಾರು ಅಶ್ವಮೇಧಕ್ಕಿಂತ ಶ್ರೇಷ್ಠ. ವೀರಶೈವರ ಯೋಗ ಚಿಚ್ಚೇತನ ಸಾಧನ ಮತ್ತು ಸಿದ್ಧಿ. ಚಿತ್ತ ಶಿವನಲ್ಲಿಗೆ ಚರಿಸುವಿಕೆ-ಇರುವಿಕೆ ! ಅಂತೆಯೇ ವೀರಶಿವಾಗಮಗಳು ಈ ನಾಲ್ಕನ್ನು ಪ್ರಧಾನವಾಗಿ ಅಂಗೀಕರಿಸಿ ನಿರೂಪಿಸಿವೆ. ವೀರಶೈವ ಕಾಮಧೇನುವಿಗೆ ಜ್ಞಾನ ಕ್ರಿಯೆ ಚರ್ಯೆಯೋಗ ಇವು ನಾಲ್ಕು ಮೊಲೆಗಳು. ಕ್ಷೀರಾಮೃತವನ್ನು ಕೊಡುವವು ಗಳು. ಈ ಚತುಷ್ಟಯದ ಮೌಲ್ಯ ಇಲ್ಲಿದೆ. ಎಲ್ಲ ಶಿವಾಗಮಗಳ ಪಾದ ಪಥ ವೀರಶೈವದ ಚತುಷ್ಪಥ ! ಈ ನಾಲ್ಕು ನಿಗಮಗಳು ಪ್ರಗತಿಕಾಂಕ್ಷಿಗೆ ಬೇಕೇಬೇಕು. ಇವುಗಳಿಂದ ಅಂದರೆ ಈ ಚತುಷ್ಪಥ ಸಂಕ್ರಮಣದಿಂದ ಸಂಸ್ಕೃತಿ ಸಂಸೃಜಿತವಾಗುತ್ತದೆ. ಇಲ್ಲಿ ವಿವರಿಸಿದ ಈ ಅಪೂರ್ವ ಲಕ್ಷಣ ಎಲ್ಲ ಬಗೆಯು ಮನ್ನಣೆಗೆ ಅರ್ಹವಾಗಿದೆ. ಪ್ರತಿ ಲಕ್ಷಣವೂ ಅರ್ಥವತ್ತಾಗಿದೆ. ಅಸನ್ಯ ಸಾಧಾರಣವಾಗಿದೆ. ಅದರಲ್ಲಿ ವೀರಶೈವಕ್ಕೆ ಮೀಸಲಾಗಿದೆ. ವೀರಶೈವ ಧರ್ಮಕ್ಕೆ ತತ್ತ್ವಕ್ಕೆ ಅನುಗುಣವಾಗಿದೆ ವೀರಶೈವ ಪುರಾತನತೆಯನ್ನು ಪ್ರತಿಪಾದಿಸಿದೆ.

ಪಶುಪತಿ ರುದ್ರಜನ್ಯತ್ವ ಸ್ಪಷ್ಟವಾಗಿದೆ. ವೀರಶೈವ ಸನಾತನ ಸಂಸ್ಕೃತಿ ಸೌಂದರ್ಯವನ್ನು, ದಾರ್ಶನಿಕ ದೀಪ್ತಿಯನ್ನು, ಸೈದ್ಧಾಂತಿಕ ಸಂಪುಷ್ಟಿಯನ್ನು ಶಿವಾಚಾರ್ಯರ ಸಮ್ಯಕ್ ದೃಷ್ಟಿಯನ್ನು ಪಥ ಪಥಕ್ಕೂ ಪದಪದಕ್ಕೂ ಇರುವ ವಿಶಿಷ್ಟ ಲಕ್ಷಣವನ್ನು ವಿಶ್ಲೇಷಣ ವಿಮರ್ಶೆಗಳನ್ನು ವಿನ್ಯಸಿಸಿದೆ. ನಿರೂಪಿಸಿದ ಆ ಜ್ಞಾನ ಶಿವಜ್ಞಾನ; ಆ ಕ್ರಿಯೆ ಶಿವಕ್ರಿಯೆ; ಆ ಚರ್ಯೆ ಶಿವಚರ್ಯೆ; ಆ ಯೋಗ ಶಿವಯೋಗ. ಈ ಎಲ್ಲ ಭಾವಾನುಭಾವಗಳನ್ನು ಮುಂದಿನ ಈ ಶ್ಲೋಕಗಳಲ್ಲಿ ಚೆನ್ನಾಗಿ ಅಭಿವ್ಯಕ್ತ ಮಾಡಲಾಗಿದೆ; ಚತುಷ್ಪಥ ಗಮನದಿಂದುಂಟಾಗುವ ಪ್ರಯೋಜನವನ್ನು ಪ್ರತಿಪಾದಿಸಲಾಗಿದೆ.

ಶಿವಜ್ಞಾನಂ ಸಮಾಸಾದ್ಯ ಪರಂ ಶಿವಮಥಾಶಶ್ನುತೇ
ಅರ್ಚಯೇದಂಬಿಕಾನಾಥಂ ಸರ್ವಗಂ ಸರ್ವ ಹೇತುನಾ ।
ಮಮಧರ್ಮರತೋ ದೇವಿ ಶ್ರೇಯಸೇ ತತ್ಕೃತೋದ್ಯಮಃ
ವೈರಾಗ್ಯಾಜ್ಜಾಯತೇ ಜ್ಞಾನಂ ಜ್ಞಾನಾದ್ಯೋಗಃ ಪ್ರವರ್ತತೇ
ಯೋಗಜ್ಞಃ ಪತಿತೋಪ್ಯಾಪಿ ಮುಚ್ಯತೇ ನಾತ್ರಸಂಶಯಃ
ಶಿವಭಾವಂ ಸಮಾಶ್ರಿತ್ಯ ಶಿವಯೋಗ ಮಥಾಚರೇತ್ ॥''

ಶಿವಜ್ಞಾನದಿಂದ ಶಿವತ್ವಪ್ರಾಪ್ತಿ. ಶಿವಾರ್ಚನ ಕ್ರಿಯೆಯಿಂದ ಶ್ರೇಯಸ್ಸು. ವೈರಾಗ್ಯದಿಂದ ಅಂದರೆ ವಿಷಯ ವಿರತಿಯಿಂದ ಶಿವಯೋಗ ಪ್ರವರ್ತನ; ಅಂದರೆ ಚರ್ಯ. ಭಕ್ತಿಭಾವ ಜ್ಞಾನ ಧ್ಯಾನ ಅರ್ಚನಾತ್ಮಕ ಶಿವಯೋಗ. ಶಿವಯೋಗ ಶಿವ ಸಾಮರಸ್ಯ ಮೂಲ. ವಿರತಿ ಶಿವಯೋಗಕ್ಕೆ ಮೂಲ, ಜೀವನ್ಮುಕ್ತಿಗೆ ಮೂಲ.

''ಸಹಾನುಭಾವಾ ಯಾ ಸೇವಾ ಸಾ ಭಕ್ತರಿತಿ ಕಥ್ಯತೇ
ಸಾ ಪುನರ್ವಿದ್ಯತೇ ತ್ರೇಧಾ ಮನೋವಾಕ್ಕಾಯ ಭೇದತಃ ।
ಪರಾಂ ಭಕ್ತಿಂ ಸಮಭೇತ್ಯ ಶಿವಧರ್ಮರತೋನರಃ
ಪರಾಮಾ ಚ ತಯಾ ಭಕ್ತ್ಯಾ ಪ್ರಸಾದಂ ಲಭ್ಯತೇ ॥
ಶಿವಭಾವಂ ಸಮಾಶ್ರಿತ್ಯ ಶಿವಯೋಗಮಥಾ ಚರೇತ್ ॥ —ಪಾ. ತಂ.

ಶಿವಯೋಗಾಚರಣೆಯನ್ನು ಸುಂದರವಾಗಿ ಸ್ವಾನುಭೂತಿಯಿಂದ ಇಲ್ಲಿ ನಿರೂಪಿಸಲಾಗಿದೆ. "ಸಹಾನುಭಾವಾ ಸೇವಾ ಭಕ್ತಿಃ" ಅರ್ಥವತ್ತಾದ ಭಕ್ತಿ ಸೂತ್ರವಿದು. ಭಾವಪೂರ್ಣವೂ ಶ್ಲೇಷಯುಕ್ತವೂ ಆಗಿದೆ. ಸಹಾನುಭಾವ

ಎಂಬಲ್ಲಿ ಸಹಾನುಭೂತಿ ಮತ್ತು ಅನುಭೂತಿ ಸಹಿತ ಎಂದು ಅರ್ಥಗಳಾಗುತ್ತವೆ. ಇಂಗಿತವರಿತು ಭಾವ ಬೆರೆತು ಅನುಭಾವದೊಡನೆ ಮಾಡಿದ ಸೇವೆ ಭಕ್ತಿಯೆನಿಸುತ್ತದೆ. ಭಕ್ತಿಯು ಬಗೆಗೆ ಅನನ್ಯ ಸಾಧಾರಣ ನಿರೂಪಣ ! ಲಕ್ಷಣ ! । ಸೇವೆ ಅಂದರೆ ಉಪಚಾರ, ಆರಾಧನಗಳು. ಈ ಬಗೆಯ ಸೇವೆಯಿಲ್ಲದ ಭಕ್ತಿ ಜಡ, ನಿಷ್ಫಲ. ಸಹಾನುಭಾವ ಸೇವೆಯಿಂದೊಡಗೂಡಿದ ಭಕ್ತಿ ಕಾಯವಾಙ್ಮನಸಗಳಿಂದ ಮೂರು ಬಗೆಯಾಗಿದೆ. ಕಾಯಭಕ್ತಿ, ವಾಕ್‌ಭಕ್ತಿ, ಮನೋಭಕ್ತಿ ಇವು ತ್ರಿವಿಧ ಭಕ್ತಿಗಳು. ಇವು ಒಂದೊಂದು ಎರಡೆರಡಾಗಿ ಆರಾಗುತ್ತವೆ. ಅವು ಶ್ರದ್ಧೆ-ನಿಷ್ಠೆ, ಅವಧಾನ-ಅನುಭವ, ಆನಂದ-ಪರಾ ಎಂಬ ಹೆಸರಿನ ಭಕ್ತಿಗಳು. ಮೂರು-ಆರು ಸೇರಿ ಒಂಬತ್ತಾಗುತ್ತವೆ. ಇವುಗಳಲ್ಲಿ ಕೊನೆಯದಾದ ಪರಾ ಭಕ್ತಿಯೊಡನೆ ಶಿವಧರ್ಮನಿರತನಾದವನು ಶಿವಪ್ರಸಾದವನ್ನು ಪಡೆಯುತ್ತಾನೆ. "ಪ್ರಸಾದಂ ಲಭತೇ" ಎಂಬುದು ಭಾವಧ್ವನಿಯುಳ್ಳದಾಗಿದೆ. ಪ್ರಸಾದ, ಪ್ರಸಾದಲಿಂಗ, ಪ್ರಸಾದಿಕವಾಣಿ ಎಂದು ತ್ರಿವಿಧಾರ್ಥಗಳಾಗುತ್ತವೆ. ಈ ಮೂರನ್ನು ಪಡೆವುದೇ ವೀರಶೈವ ಐಕಸ್ಥಲಿಯ ಧ್ಯೇಯ. ಕಾರಣ ಶಿವಭಾವಿಯಾಗಿ ಶಿವಯೋಗವನ್ನಾಚರಿಸಬೇಕು-ಎಂದು ಶಿವಾಚಾರ್ಯರು ನಿರೂಪಿಸಿ ತಮ್ಮ ಶಿವಭಕ್ತಿ ಶಿವಯೋಗಗಳ ಬಗೆಗಿರುವ ಅಪಾರ ಅನುಭೂತಿಯನ್ನು ಅಭಿವ್ಯಕ್ತಿಗೊಳಿಸಿದ್ದಾರೆ-ಅಂದೆ ! ಇದಿಷ್ಟನ್ನೆ ಅಲ್ಲ ವೀರಶೈವ ಧರ್ಮಕ್ಕೆ ಸಂಸ್ಕೃತಿಗೆ ಬೇಕಾದುದೆಲ್ಲವನ್ನೂ ಅನ್ವೇಷಿಸಿ ಅನುಸಂಧಾನಿಸಿ ಸಿದ್ಧಾಂತೀಕರಿಸಿದ್ದಾರೆ. ನೈತಿಕಾಚರಣೆಯ ನೆಲಗಟ್ಟಿನ ಮೇಲೆ ವೀರಶೈವ ಸುಂದರ ಸೌಧವನ್ನು ಸಂಪೂರ್ಣಗೊಳಿಸಿದ್ದಾರೆ. ನವಾಂಗ-ನವಲಿಂಗ, ನವಭಕ್ತಿ-ನವಶಕ್ತಿ, ನವಹಸ್ತ-ನವಮುಖ, ನವಪದಾರ್ಥ-ನವಪ್ರಸಾದ ಸಕೀಲಗಳನ್ನು ಸೃಜಿಸಿದ್ದಾರೆ. ೨೧೬ ಸಕೀಲಗಳನ್ನು ರೂಪಿಸಿದ್ದಾರೆ. ೨೧ ದೀಕ್ಷೆಗಳನ್ನು ಅಷ್ಟಾವರಣ-ಪಂಚಾಚಾರಗಳನ್ನು ಷಟ್‌ಸ್ಥಲಗಳನ್ನು ನೂರೊಂದು ಉಪಸ್ಥಲಗಳನ್ನು ಅರ್ಚನ ಅನುಭವಗಳನ್ನು ೬೩ ಶೀಲಗಳನ್ನು ೬೪ ವಿದ್ಯೆಗಳನ್ನು ಕ್ರಿಯಾಶೀಲತೆಯನ್ನು ಅಂದರೆ ಕಾಯಕಗಳನ್ನು ಧರ್ಮದಾಸೋಗಳನ್ನು ಮುಕ್ತಿಮಂಟಪ-ಪೂಜಾ ಮಂಟಪದ-ಚಿಚ್ಛಕ್ತಿ ಜ್ಞಾನ ನಿಲಯ-ಅನುಭವಗೋಷ್ಠಿಗಳನ್ನು, ನಿರಶವಾಗಮಗಳನ್ನು ವಚನವಾಙ್ಮಯವನ್ನು ಸ್ತ್ರೀ ಸ್ವಾತಂತ್ರವನ್ನು ಅಸ್ಪೃಶ್ಯೋದ್ಧಾರವನ್ನು, ಜಾತಿ ಕುಲ ಪಂಥ ಪಂಗಡ ವರ್ಗ ವರ್ಣ ಭೇದರಹಿತ ಮಾನವತಾವಾದ

ವನ್ನು ಸಕಲಜೀವ ದಯಾಮಯತೆಯನ್ನು ರೂಪಿಸಿ ವೀರಶೈವವನ್ನು ವಿಶ್ವಧರ್ಮವನ್ನಾಗಿಸುವ ವಿಶ್ವಪ್ರಯತ್ನವನ್ನು ಮಾಡಿರುವರು. ಕಾಲ ಕರ್ಮ ಮಲ ಮಾಯೆಗಳನ್ನು ಜಯಿಸುವ ಸಾಂಸ್ಕಾರಿಕ ಶಕ್ತಿಯನ್ನು ಕರುಣಿಸಿರುವರು. ಇದೆಲ್ಲ ರುದ್ರದೇವನಿಂದ ಪ್ರಾರಂಭವಾಗಿ ರೇಣುಕಾದಿ ಆದಿಶಿವಾಚಾರ್ಯರಿಂದ ಅಭಿವೃದ್ಧಿ ಹೊಂದಿತು, ಸಿದ್ಧಾಂತಗೊಂಡಿತು.

"ಮಲಯಾದಿಭಿ : ಪಾಶೈರ್ಬಧ್ನಾತಿ ಪಶೂನ್ ಪತಿ :
ಸ ಏವ ಮೋಚಕಸ್ತೇಷಾಂ ಭಕ್ತ್ಯಾಸಮ್ಯಗುಪಾಶಿತಃ ।
ಚತುರ್ವಿಂಶತಿ ತತ್ತ್ವಾನಿ ಮಾಯಾ ಕರ್ಮಗುಣಾ ಅಪಿ
ವಿಷಯಾ ಇತಿಕಥ್ಯಂತೇ ಪಾಶಾ ಜೀವ ನಿಬಂಧನಾತ್ ।
ತಸ್ಮಾತ್ ಪಶುಪತಿಂ ರುದ್ರಂ ಜ್ಞಾತ್ವಾ ಲಿಂಗಾರ್ಚಕಂ ಶಿವೇ
ಛಿತ್ವಾ ಪಾಶಾನವಿದ್ಯೋತ್ಥಾನ್ ಪರಂ ನಿರ್ವಾಣ ಮೃಚ್ಛತಿ ।
ಭುಕ್ತಿ ಮುಕ್ತಿಪ್ರದೋ ದೇವಿ, ಪಶುತ್ವವಿನಿವರ್ತಕಃ
ಪೂಜನೀಯತುಃ ಸದಾರುದ್ರೋ ಯಥಾ ಶ್ರದ್ಧಂ ಯಥಾ ವಿಧಿ ॥"

— ಪಾರಮೇಶ್ವರಾಗಮ

ಇವು ಅನಾದಿ ಪಾಶುಪತ ವೀರಶೈವದ ಅಧಿನಿಯಮಗಳು. ಇವನ್ನು ವಿಧಿಸಿದ ಅನಾದಿ ಶಿವಾಚಾರ್ಯನು ಶ್ರೀರುದ್ರದೇವನು. ಮಲ ಮಾಯಾ ಕಾಲ ಕರ್ಮ ಮೊದಲಾದವುಗಳು ಪಾಶಗಳು. ಇವುಗಳಿಂದ ಬದ್ಧರಾದ ಜೀವಾತ್ಮರು ಪಶುಗಳು. ಇವುಗಳ ಬಂಧನಕ್ಕೊಳಗಾಗದ ರುದ್ರನು ಪಶುಪತಿ ! ರುದ್ರ ಪಶುಪತಿಯನ್ನು ರಸಪೂರ್ಣ ಭಕ್ತಿಯಿಂದ ಉತ್ತಮವಾಗಿ ಉಪಾಸನ ಮಾಡಿದಲ್ಲಿ ಆ ರುದ್ರಪಶುಪತಿಯೇ ಮಲ ಮಾಯಾದಿ ಬಂಧನಗಳನ್ನು ಬಿಡಿಸುತ್ತಾನೆ. ೨೪ ತತ್ತ್ವಗಳು ಮಾಯೆ ಕರ್ಮಗುಣ ವಿಷಯಗಳು ಪಾಶಗಳೆನಿಸುತ್ತವೆ–ಸಕಲ ಜೀವರನ್ನು ಬಂಧಿಸುವುದರಿಂದ ! ಇವುಗಳಿಂದ ಬಿಡುಗಡೆ (ಮುಕ್ತಿ)ಯನ್ನು ಪಡೆಯಬೇಕಾದರೆ ಲಿಂಗಾರ್ಚಕನಾದ ರುದ್ರಪಶುಪತಿಯನ್ನು ಗುರು–ಚರ–ಲಿಂಗವೆಂದು ಬಗೆದು ಆರಾದಿಸಿದಲ್ಲಿ ಅವಿದ್ಯೆ ಅಸ್ಮಿತೆ ರಾಗ ದ್ವೇಷ ಅಸ್ಮಿತಗಳಿಂದುಂಟಾದ ಪಾಶಗಳನ್ನು ಕತ್ತರಿಸಿ ಪರಿಹರಿಸಿ ನರತಿಶಯ ನಿರ್ವಾಣವನ್ನು ಅನುಗ್ರಹಿಸುತ್ತಾನೆ-ರುದ್ರದೇವನು. ಶ್ರೀರುದ್ರದೇವನು ಪಶುತ್ವ ನಿವರ್ತಕನು, ಸದಾ ಪೂಜನೀಯನು, ಭಕ್ತಿ–ಮುಕ್ತಿಪ್ರದನು. ಆದ್ದರಿಂದ ಶ್ರದ್ಧೆ ನಿಷ್ಠೆಗಳಿಂದ

ಆಗಮೋಕ್ತ ವಿಧಿವಿಧಾನಗಳಿಂದ ಅರ್ಚಿಸಬೇಕು. ರುದ್ರ ಪಶುಪತಿ ಶಿವಾಚಾರ್ಯನ ಸತ್‌ಕೃಪೆಗೆ ಪಾತ್ರರಾಗಬೇಕು. ಆತನಿಂದ ಭೋಗ ಮೋಕ್ಷಗಳ ಭಾಗ್ಯವನ್ನು ಪಡೆಯಬೇಕು. ಪಡೆಯಬೇಕಾದರೆ ಶಿವಾಚಾರ್ಯನಿಂದ ಶಿವ ದೀಕ್ಷಾ ಸಂಸ್ಕಾರವನ್ನು ಹೊಂದಬೇಕು.

"ಯಃ ಕುರ್ಯಾದಾಂತಿಕೀಂ ದೀಕ್ಷಾಮಾದೇಹಾಂತಮನಾಕುಲಃ
ವೀರಶೈವಂ ಪ್ರಕುರ್ವೀತ ಸ ವೈ ನೈಷ್ಠಿಕ ಉಚ್ಯತೇ ।
ಸೋಽತ್ಯಾಶ್ರಮೀ ಚ ವಿಜ್ಞೇಯೋ ಮಹಾ ಮಾಹೇಶ್ವರ ಃ ಶಿವಃ
ಸ ಏವ ಯತೀನಾಂ (ತಪಸಾಂ) ಶ್ರೇಷ್ಠಃ ಸ ಏವ ಮಹಾವ್ರತೀ ।
ನ ತೇನ ಸದೃಶಃ ಕ್ಯತ್ ಕೃತಕೃತ್ಯೋ ಮುಮುಕ್ಷುಷು ॥
ಆದೇಹಾಂತಮಿಯಂ ದೀಕ್ಷಾ ಮಹಾಪಾತಕನಾಶಿನೀ
ಕೃತಕೃತ್ಯಶ್ಚ ನಿಷ್ಕಾಮೋ ಯಶ್ಚರೇದ್ವೀರಶೈವಗಃ ।
ಶಿವಾರ್ಪಿತಾತ್ಮಾ ಸತತಂ ನ ತೇನ ಸದೃಶಃ ಕ್ವಚಿತ್ ॥
ಯಃ ಪಶ್ಯೇದ್ವೀರಶೈವಸ್ಥಂ ಬ್ರಹ್ಮಹತ್ಯಾದಿ ಸಂಭವೈಃ
ಪಾಪೈರ್ವಿಮುಚ್ಯತೇ ಸದ್ಯೋ ಮುಚ್ಯತೇ ಚಭವಾರ್ಣವಾತ್ ।
ಶಿವಾಗ್ನೇರ್ಯರಂ ವೀರ್ಯಂ ತದ್ವೀರ್ಯಂ ವೀರಶ್ವೆವಿನಃ
ತಸ್ಮಾತ್ ಸರ್ವೇಷು ಕಾಲೇಷು ವೀರ್ಯವಾನ್ ಶಿವಮರ್ಚಯೇತ್ ॥"
—ಪಾರಮೇಶ್ವರಾಗಮ.

ಶಿವಾಚಾರ್ಯರು ಭಕ್ತಿಪರಂಪರೆಗೆ ನಾಂದಿ ಹಾಕಿದಂತೆ. ದೀಕ್ಷಾರೂಪ ಕಾರುಣ್ಯರಸ ಪ್ರವಾಹಕ್ಕೂ ಕಳಾಮಯ ತುಂಗೋತ್ರಿಯಾಗಿದ್ದಾರೆ. ಅನಾದಿ ಪಾಶುಪತ ವೀರಶೈವರ ಅಧಿನಿಯಮಗಳನ್ನು ಅನುವಿಡಿದು ಮುಂದುವರಿಸಿ ಈ ಬಗೆಯಲ್ಲಿ ಬಿಚ್ಚಳಿಸಿದ್ದಾರೆ :

ಆ ದೇಹಾಂತ ದೀಕ್ಷೆಯನ್ನು ಪಡೆದಾಚರಿಸುವಾತನೆ ಚರಮದೇಹಿ,-ನಿರ್ದೇಹಿ ; ಆತನೇ ಲಿಂಗಾಂಗಿ ; ಜೀವಭಾವ ನಿಸ್ಸಂಗಿ. ಆತನೇ ಆಕುಲ ರಹಿತ ; ಆಕಾರ ರಹಿತ, ಆತನೆ ವೀರಶೈವ,-ನೈಷ್ಠಿತ ಮತ್ತು ಅತ್ಯಾಶ್ರಮಿ, ಮಹಾಮಹೇಶ್ವರ, ಶಿವಸ್ವರೂಪ, ಆತನೇ ಯತಿ ತತಿಗಳಲ್ಲಿ ತಪಸ್ವಿತಿಂತಿಣಿಯಲ್ಲಿ ಶ್ರೇಷ್ಠ. ಆತನೇ ಮಹಾವ್ರತಿ. ಆತನ ಆ ನಿಲುವು ಮಹತಿ. ಮುಮುಕ್ಷುಗಳಲ್ಲಿ ಆತನಿಗೆ ಸಮಾನಕೃತ ಕೃತ್ಯರಿಲ್ಲ. ಮಹಾಪಾತಕನಾಶಕವಾದ ಆದೇಹಾಂತ ದೀಕ್ಷೆಯ ಪ್ರಭಾವ ಅಂತಹದು ; ವೈಭವ ಅಂತಹದು. ಹೀಗೆ

ನಿಷ್ಕಾಮನೂ ಕೃತಕೃತ್ಯನೂ ಸತತ ಶಿವಾರ್ಪಿತಾತ್ಮನೂ ಆದ ವೀರಶೈವನಿಗೆ ಸರಿಸಮಾನನಿಲ್ಲ. ಶಿವಾಚಾರ್ಯನಿಂದ ಶಿವಸಂಸ್ಕಾರವನ್ನು ಪಡೆದು ಧನ್ಯನಾದ ಅಂತಹ ವೀರಶೈವಸ್ಥನನ್ನು ಕಂಡರೆ, ಕಂಡವನ ಬ್ರಹ್ಮಹತ್ಯಾದಿಗಳಿಂದುಂಟಾದ ಪಾಪಗಳೆಲ್ಲ ಪರಿಹಾರವಾಗುತ್ತವೆ. ಭವಾರ್ಣವದಿಂದ ಬಿಡುಗಡೆಯಾಗಿ ಸದ್ಯೋಮುಕ್ತಿ ಸಿದ್ಧಿಸುತ್ತದೆ. ಶಿವಾಗ್ನಿಗಿಂತ ಶ್ರೇಷ್ಠವೂ ವೀರ್ಯವತ್ತವೂ ಆದುದಾಗಿದೆ ವೀರಶೈವನ ಸಾಮರ್ಥ್ಯ ಮತ್ತು ಸತ್ಕಾಂತಿ ! ಅಂತೆಯೇ ವೀರ ಶೈವನೆನಿಸುತ್ತಾನೆ. ಸರ್ವಕಾರ್ಯಗಳಲ್ಲಿ ಕಾಲಗಳಲ್ಲಿ ವೀರ್ಯವಂತನಾಗಿ ಶಿವಾರ್ಚನೆಯನ್ನೆಸಗಬೇಕು–ವೀರಶೈವನು ; ಆತನೇ ಸರ್ವರಿಗಿಂತ ಶ್ರೇಷ್ಠನು ; ವಿಶ್ವವಿಶಿಷ್ಟನು. ಇಂತಾಗುವುದು ಶಿವಾಚಾರ್ಯರ ಸಚ್ಚಿತ್ಕಾರುಣ್ಯದ ಸತ್ಫಲ ವಲ್ಲದೆ ಮತ್ತೊಂದಿಲ್ಲ. ದೀಕ್ಷೆಯ ದೀಪ್ತಿಗೆ ದಿವ್ಯದೀಪ್ತಿ ಪ್ರಾಪ್ತಿಗೆ ಸರಿ ಮಿಗಿಲಾದ ಕೊಡುಗೆ ಬೇರೊಂದಿಲ್ಲ. ಇದನ್ನು ಈ ಕೆಳಗಿನ ಉಕ್ತಿಗಳಿಂದ ಮನಗಾಣಬೇಕು.

**ವೀರಶೈವಾಧಿಕ್ಯ :–**

''ಕ್ರಿಮಿಕೀಟ ಪತಂಗೇಭ್ಯಃ ಪಶವಃ ಪ್ರಜ್ಞಯಾಧಿಕಾಃ
ಪಶುಭ್ಯೋಽಪಿ ನರಾಃ ಶ್ರೇಷ್ಠಾಸ್ತೇಷು ಶ್ರೇಷ್ಠಾ ದ್ವಿಜಾತಯಃ ।
ದ್ವಿಜಾತಿಷ್ವಧಿಕಾ ವಿಪ್ರಾ ವಿಪ್ರೇಷು ಕ್ರತು ಬುದ್ಧಯಃ
ಕ್ರತುಬುದ್ಧಿಷು ಕರ್ತಾರಸ್ತೇಭ್ಯಃ ಸಂನ್ಯಾಸಿನೋಽಧಿಕಾಃ ।
ತೇಷು ವಿಜ್ಞಾನಿನಃ ಶ್ರೇಷ್ಠಾಸ್ತೇಷು ಶಂಕರ ಪೂಜಕಾಃ
ತೇಷು ಶ್ರೇಷ್ಠಾ ಮಹಾದೇವಿ ಮಮ ಲಿಂಗಾಂಗ ಸಂಗಿನಃ ।
ಲಿಂಗಾಂಗ ಸಂಗಿಷ್ವಧಿಕಾ ಮಮ ಯೋಗರತಾಃ ನರಾಃ
ತೇಷು ಶ್ರೇಷ್ಠಾ ಮಹಾವೀರಶೈವ ದೀಕ್ಷಾಪರಾ ನರಾಃ ।
ತೇಷಾಮಪ್ಯಧಿಕೋ ನಾಸ್ತಿ ತ್ರಿಷು ಲೋಕೇಷು ಶೈಲಜೇ
ಮತ್ತಂ, ಪರತರಂ ನಾಸ್ತಿ ಮನ್ಮತಂ ತು ತಥೈವ ಹಿ ॥''

—ಪಾರಮೇಶ್ವರಾಗಮ

ಪತಂಗಾದಿಗಳಿಗಿಂತ ಪಶುಗಳು, ಪಶುಗಳಿಗಿಂತ ನರರು, ನರರಿಗಿಂತ ದ್ವಿಜರು, ದ್ವಿಜರಿಗಿಂತ ವಿಪ್ರರು, ವಿಪ್ರರಿಗಿಂತ ಯಾಜ್ಞಿಕರು, ಯಾಜ್ಞಿಕರಿಗಿಂತ ಕರ್ತಾರರು, ಕರ್ತಾರರಿಗಿಂತ ಸಂನ್ಯಾಸಿಗಳು, ಸಂನ್ಯಾಸಿಗಳಿಗಿಂತ ವಿಜ್ಞಾನಿಗಳು,

ವಿಜ್ಞಾನಿಗಳಿಗಿಂತ ಶಿವಾರ್ಚಕರು, ಶಿವಾರ್ಚಕರಿಗಿಂತ ಲಿಂಗಾಂಗಸಂಗಿಗಳು, ಲಿಂಗಾಂಗಸಂಗಿಗಳಿಗಿಂತ ಯೋಗರತರು, ಯೋಗರತರಿಗಿಂತ ಶಿವಾಚಾರ್ಯರಿಂದ ಶಿವ ದೀಕ್ಷೆಯನ್ನು ಪಡೆದ ಮಹಾವೀರಶೈವರು ಶ್ರೇಷ್ಠರು. ಮಹಾವೀರ ಶೈವರಿಗಿಂತ ಅಧಿಕರು ಈ ಮೂರು ಲೋಕಗಳಲ್ಲಿಲ್ಲ. ಶಿವನಿಗಿಂತ ಪರವಸ್ತು ಬೇರೆಯಿಲ್ಲ ; ಶಿವ ಮತಕ್ಕಿಂತ ಮತ ಮತ್ತೊಂದಿಲ್ಲ.

ಮಹಾವೀರಶೈವ ದೀಕ್ಷಾವಂತರಿಗೆ ಮತ್ತು ಮಹಾವೀರಶೈವ ಮತಕ್ಕೆ ಇತ್ತ ಸರ್ವೋತ್ತಮತೆ ಇಲ್ಲಿ ನಿರ್ದಿಷ್ಟವಾಗಿದೆ. ಇಲ್ಲಿ ಹೇಳಿದ ಲಿಂಗಾಂಗಸಂಗಿಗಳು ಗುರು ದೀಕ್ಷೆಯಾಗದವರು. ದೀಕ್ಷೆಯಿಲ್ಲದೆ ಕೇವಲ ಸ್ಥೂಲಕಾಯವೊಂದರಲ್ಲಿ ಲಿಂಗವಿರುವ ಲಿಂಗಾಯತರಿಗಿಂತ ಯೋಗಿಗಳು ಶ್ರೇಷ್ಠರೆಂಬುದನ್ನಿಲ್ಲಿ ಸ್ಮರಿಸಿಕೊಳ್ಳಬೇಕು. ಲಿಂಗಾಯತರಾದವರಿಗೆ ಪ್ರಾಣಲಿಂಗ–ಭಾವಲಿಂಗಗಳಿರುವುದಿಲ್ಲ. ಇವರು ಪೂರ್ಣ ತ್ರಿವಿಧಾಂಗ ಲಿಂಗಿಗಳಲ್ಲ. ಅಂತರಂಗ ಭವಿಯಾಗಿರುವರು. ಭವಭಾರಿಗಳು. ಆಯತ ಪದ ಸ್ಥೂಲಾಂಗ ಮಾತ್ರ ಸೂಚಕ ; ಇಷ್ಟಲಿಂಗ (?) ಮಾತ್ರ ಸೂಚಕ ! ಮಹಾವೀರ ಶೈವರು ತ್ರಿವಿಧ ದೀಕ್ಷಾವಂತರು : ತ್ರಿವಿಧಾಂಗಗಳಲ್ಲಿ ತ್ರಿವಿಧ ಲಿಂಗಸಂಗಿಗಳು. ಕೊರತೆಯಿಲ್ಲದ ನಿಲುವುಳ್ಳವರು. ಶಿವಾಚಾರ್ಯ ಕರಕಂಜ ಸಂಜಾತರು.

**ವೀರಶೈವ ಶ್ರದ್ಧಾ ವಶ್ಯಃ :–**

ನ ಕರ್ಮಣಾ ನ ತಪಸಾ ನ ಜಪ್ಯೈರ್ನ ಸಮಾಧಿಭಿಃ
ನ ದಾನೇನ ನ ಚಾನ್ನೇನ ವಶ್ಯೋಽಹಂ ಶ್ರದ್ಧಯಾ ವಿನಾ ।
ಯಸ್ಯ ಶ್ರದ್ಧಾಽಸ್ತಿ ದೇವೇಶಿ ಯೇನ ಕೇನಾಪಿ ಹೇತುನಾ
ತಸ್ಯ ವಶ್ಯೋಽಹ್ಯಹಂ ದೇವಿ ಯೋಗಿನಾಂ ವೀರಶೈವಿನಾಂ ।
ವಂದ್ಯಃ ಸ್ಪೃಶ್ಯಶ್ಚ ದೃಶ್ಯಶ್ಚ ಪೂಜ್ಯಃ ಸಂಭಾವ್ಯ ಏವ ಚ
ಸಾಧ್ಯಾ ತಸ್ಮಾತ್ಸದಾ ಶ್ರದ್ಧಾ ತಸ್ಯ ವಶ್ಯೋ ಭವಾಮ್ಯಹಂ ।
ಶ್ರದ್ಧಾ ಮಮ ಮತಸ್ಥಸ್ಯ ಮಯಿ ಭಕ್ತಿಃ ಪ್ರಜಾಯತೇ
ತಸ್ಯೈವ ಭವತಿ ಶ್ರದ್ಧಾ ಮಯಿ ನಾಽನ್ಯಸ್ಯ ಕಸ್ಯ ಚಿತ್ ॥''

—ಪಾರಮೇಶ್ವರ ತಂತ್ರ

ಶ್ರದ್ಧೆಯೊಂದರಿಂದಲ್ಲದೆ ಕರ್ಮ ತಪ ಜಪ ಸಮಾಧಿ ದಾನ ಅನ್ನ ಇವು ಯಾವುದರಿಂದ ಶಿವನು ವಶನಲ್ಲ. ಯಾವ ಕಾರಣದಿಂದಾಗಲಿ ಶ್ರದ್ಧೆಯಿರುವ

ವೀರಶೈವ ಯೋಗಿಗಳಿಗೆ ವಶ್ಯನು. ಶ್ರದ್ಧೆಗೆ ಶಿವನೊಲುಮೆ ಸಾಧ್ಯ. ಶ್ರದ್ಧಾವಂತ ವೀರಶೈವರಿಂದ ಶಿವನು ವಂದ್ಯನು, ಸ್ಪೃಶ್ಯನು, ದೃಶ್ಯನು, ಪೂಜ್ಯನು, ಸಂಭಾವ್ಯನು, ಸಾಧ್ಯನು. ಆದರಿಂದಾಗಿ ಅನುಗಾಲ ಶ್ರದ್ಧೆಯು ಸಾಧ್ಯವಾಗಲಿ ; ಶ್ರದ್ಧೆಗೆ ವಶ್ಯನು ನಾನಾಗುವೆನು. ಶ್ರದ್ಧೆ, ವಿಶ್ವಾಸ, ನಂಬುಗೆಗಳಿಲ್ಲದವರಿಗೆ ನಾನು ವಶನಲ್ಲ. ಶಿವ ಮತದಲ್ಲಿ ಶ್ರದ್ಧೆಯುಳ್ಳವನಿಗೆ ಶಿವನಲ್ಲಿ ಭಕ್ತಿ(ಶ್ರದ್ಧೆ)ಯು ಬೆಳೆಯುತ್ತದೆ. ಕಾರಣ ಶ್ರದ್ಧಾಮಯಿಯಾದ ವೀರಶೈವನಿಗೆ ಜೀವನ್ಮುಕ್ತಿ ಸಂಭವಿಸುತ್ತದೆ. ಬೇರೆ ಯಾರಿಗೂ ಉಂಟಾಗದು. ನಂಬುಗೆಗಿಂಬು ಅನಾದಿ ವೀರಶೈವದಲ್ಲಿ !

ಶಿವನು ವೀರಶೈವ ಶ್ರದ್ಧೆಗೆ ವಶ್ಯನು. ಏಕೆಂದರೆ, ಶ್ರದ್ಧೆಯು ಶಿವ ಸದೃಶನಾದ ಶ್ರೀಗುರುವಿನ ಕಾರುಣ್ಯರಸ ತುಂಗೋತ್ರಿ. ಆದರಿಂದ ಶಿವ ಶಾಂತಿ ಶಿವ ಸುಖಗಳು ಸವಿಸ್ತಾರವಾಗಿ ಜೀವನದಲ್ಲಿ ಪ್ರವಹಿಸುತ್ತವೆ. ಇದರಿಂದ ಬಾಳು ಬೆಳುವಾಗುತ್ತದೆ. ರಸಮಯಿಯಾಗುತ್ತದೆ ; ಭಾವಮಯಿ ಯಾಗುತ್ತದೆ. ಭಕ್ತಿ ಶಕ್ತಿ ಸಂಪನ್ನವಾಗುತ್ತದೆ. ಶಿವನ ಕಾರುಣ್ಯವನ್ನು ಕೈ ಗೂಡಿಸಿ ಕೊಡಲು ಭಕ್ತಿ ಸಮರ್ಥಶಾಲಿಯಾಗುತ್ತದೆ. ಶ್ರದ್ಧಾರಸ ಶಿವರಸದಲ್ಲಿ ಸೇರಿ ಸಮರಸವಾಗುತ್ತದೆ. ಅದುವೆ ವೀರಶೈವ ಶಿವಯೋಗ. ಅದರ ಮೌಲ್ಯ ಮುಗಿಲೆತ್ತರ ; ಬಿತ್ತರ. ಶಿವಜ್ಞಾನ-ಶಿವಧ್ಯಾನ-ಶಿವಾರ್ಚನಾರ್ಪಣ-ಶಿವಾನು ಭಾವ ಮೊದಲಾದ ಅಧಿನೇಮವುಳ್ಳುದು. ಶ್ರದ್ಧೆಯೊಂದಿಲ್ಲದಿದ್ದರೆ ಕರ್ಮ ತಪ ಜಪ ದಾನ ಅನ್ನ ಮೊದಲಾದವೆಲ್ಲವೂ ರಸವಿಲ್ಲದ ಹಣ್ಣಿದ್ದಂತೆ ! ಇವಾವು ಶಿವ ಪ್ರಿಯವಾಗವು ; ಆಗುವುದಿಲ್ಲ. ಶ್ರದ್ಧೆಯೇ ಶ್ರದ್ಧಾಚರಣೆಯೆ ಜೀವನ ಸರ್ವಸ್ವ. ವೀರಶೈವ ಶ್ರದ್ಧಾಚರಣೆ ಶಿವ ಸಾಕ್ಷಾತ್ಕಾರ ಕಾರಣ. ಅಂತಹ ಅಮೂಲ್ಯ ಶ್ರದ್ಧೆ ಶಿವಕಾರುಣ್ಯದಿಂದ ಸಾಧ್ಯವಲ್ಲದೆ ಬೇರೊಂದರಿಂದಿಲ್ಲ. ಗುರು ಕಾರುಣ್ಯದಿಂದ ಬಂದ ಶ್ರದ್ಧಾ ಭಕ್ತಿ ಶಿಷ್ಯನನ್ನು ಶಿವಭಕ್ತನನ್ನಾಗಿಸು ತ್ತದೆ. ಮುಂದೆ ಮಾಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನನ್ನಾಗಿ ಮುಂದುವರಿಸುತ್ತದೆ, ಚಚ್ಚೈತನ್ಯಮಯಿಯನ್ನಾಗಿಸುತ್ತದೆ. ಚಿನ್ನದ ಚಿದ್ಬಿಂದು ಚಿತ್ಕಳಾಮಯಿಯನ್ನಾಗಿಸುತ್ತದೆ. ಈ ದಿಸೆಯಲ್ಲಿ ಶಿವಾಚಾರ್ಯ ಕೊಡುಗೆ ವೀರಶೈವಕ್ಕೆ ಶ್ರೀಮಂತವಾದುದು ; ಮಹಂತವಾದುದು.

## ಸರ್ವಂ ಲಿಂಗಮಯಂ

"ಮಯಿ ಭಕ್ತಿಮತಾಮೇವ ಲಿಂಗಿನಾಂ ವೀರಶೈವಿನಾಂ
ಅಧಿಕಾರೋ ನ ಚಾನ್ಯೇಷಾಮಿತ್ಯಾಜ್ಞಾ ಮಾಮಕೀ ದೃಢಾ ।
ಸರ್ವಂ ಲಿಂಗಮಯಂ ಧ್ಯಾಯೇಜ್ಜಗದೇತಚ್ಚರಾಚರಂ
ಕಥಿತಂ ತು ಮಯಾ ದೇವಿ ವೀರಮಾಹೇಶ್ವರಾಗಮಂ ॥"

—ಪಾರಮೇಶ್ವರಾಗಮ

ಪರಶಿವ ಭಕ್ತಿಮಂತರೂ ಲಿಂಗವಂತರೂ ಆದ ವೀರಶೈವರಿಗೆ ಮಾತ್ರ ಶಿವಯೋಗದಲ್ಲಿ ಷಡಕ್ಷರಾನುಷ್ಠಾನದಲ್ಲಿ, ಶಿವ ಸಾಮರಸ್ಯದಲ್ಲಿ ಅಧಿಕಾರ ವುಂಟಲ್ಲದೆ ಅನ್ಯರಿಗಿಲ್ಲೆಂಬುದು ಶಿವನ ಸದೃಢವಾದ ಶಾಸನ! ಚರಾಚರ ಜಗತ್ತೆಲ್ಲವನ್ನೂ ಲಿಂಗಮಯವನ್ನಾಗಿ ಧ್ಯಾನಿಸಬೇಕೆಂದು ವೀರಮಾಹೇಶ್ವರಾಗ ಮವು ನಿರೂಪಿಸಿದೆ. ಇದು ವೀರಶೈವ ವಿಶಿಷ್ಟ ರಹಸ್ಯ. ಶಿವಾಚಾರ್ಯರ ಸತ್ಯ ಸಂದೇಶ. ಇದರಲ್ಲಿದೆ ಪುರಾತನ ಚಾರಿತ್ರ್ಯಾಂಶ; ವೈಶಾಲ್ಯ ಮನೋ ಭಾವ. ಕಾರಣ ಕಾರ್ಯಗಳೆರಡನ್ನೂ ಲಿಂಗಮಯವಾಗಿ ಕಂಡ ವಿಶ್ವವಿಶಾಲ ಸಂಸ್ಕೃತಿ-ವಿಶುದ್ಧ ಸಂಸ್ಕೃತಿ ಶಿವಾಚಾರ್ಯರದು. ಪರಶಿವ ಬ್ರಹ್ಮವನ್ನು ಪರ ಶಿವನಿಂದಾದ ಬ್ರಹ್ಮಾಂಡವನ್ನು ಮತ್ತು ಪಿಂಡಾಂಡವನ್ನು ಸಮಷ್ಟೀಕರಿಸಿ ಲಿಂಗವನ್ನಾಗಿಸಿದ ಅಸಾಧಾರಣ ಸಾಮರ್ಥ್ಯ ಗುರುಧರ್ಮಿಯಾದ ಶಿವಾಚಾರ್ಯ ನದು. ಹೀಗೆ ವಿರಾಟ್ ಗರ್ಭವುಳ್ಳ ಲಿಂಗತತ್ತ್ವವನ್ನು ರೂಪಿಸಿದ ರೂವಾರಿ ಶಿವಾಚಾರ್ಯನು ವೀರಶೈವ ಸಂಸ್ಕೃತಿಗೆ ಕೊಟ್ಟ ಕೊಡಿಗೆ ಅಪೂರ್ವ ಮತ್ತು ಅಪ್ರಮಾಣ! ಲಿಂಗೋಪಾಸನೆಯು ಉತ್ಪಾದಕ ಮೂಲ ಮಹಾ ಚೈತನ್ಯ ಆಚಾರ್ಯ! ಈ ಅನುಭಾವಿಕ ಅಧಿಕಾರ ಆಚಾರ್ಯನದಲ್ಲದೆ ಅನ್ಯರಿಗಿಲ್ಲ. ಇದು ದೃಢವಾದ ಶೈವೀ ಶಾಸನ! ಶಿವಾಚಾರ್ಯನದು ಈ ಚರಾಚರ ಜಗತ್ತನ್ನೆಲ್ಲ ಲಿಂಗ ವನ್ನಾಗಿಸಿದ ಮಹಾಚೇತನ!! ಅಂತೆಯೇ ಆತನು ವೀರಮಾಹೇಶ್ವರ! ಆತ ನದು ವಿಶ್ವಮಯ ವೀರ ಸಂಸ್ಕೃತಿ; ಪರಶಿವ ತತ್ತ್ವಮಯ ಸಂಸ್ಕೃತಿ! ಚರಾ ಚರ ಜಗನ್ಮಯ ಸಂಸ್ಕೃತಿ! ನಿತ್ಯ ನೂತನವಾದ ಪೂರ್ಣಾಖಂಡ ಕೊಡುಗೆ,- ಮಾನವೀಯ ಬಾಳಿಗೆ!

ಲಿಂಗ ಚಿಹ್ನೆಯುಳ್ಳ ವೀರಶೈವರು, ಲಿಂಗ ಚಿಹ್ನೆಯಿಲ್ಲದ ವೀರಶೈವರು ಇದ್ದರೆಂದು ತಿಳಿದು ಬರುತ್ತದೆ-'ಲಿಂಗಿನಾಂ ವೀರಶೈವಾನಾಂ । ಎಂಬ ಉಕ್ತಿ

ಯಿಂದ ! ವೀರಶಿವತ್ವವನ್ನು ಬೇರೆ ಸಾಧನದಿಂದ ಸಾಧಿಸುವವರನ್ನು ಶಿವಾಚಾರ್ಯರು ಅಂಗೀಕರಿಸುತ್ತಿದ್ದರೆಂದು ತಿಳಿದು ಬರುತ್ತದೆ. ಅಂತೆಯೇ ಶಿವಾಚಾರ್ಯರು ವಿಶ್ವ ಮಾನವತಾವಾದಿಗಳು. ವಿಶಾಲ ಮನೋಭಾವವುಳ್ಳವರು. "ಯತ್ರ ಜೀವಸ್ತತ್ರ ಶಿವಃ" ಎಂಬುದು ವಿಶ್ವಜೀವ ಭಾವೈಕ್ಯ ಭಾವವಲ್ಲವೆ ? ಲಿಂಗ ಚಿಹ್ನೆಯಿಲ್ಲದವರು ನಿರುಪಾಧಿಕ ಲಿಂಗಿಗಳು !

ಇಲ್ಲಿ ಇನ್ನೊಂದು ವಿಶೇಷವಿದೆ. 'ವೀರ ಮಾಹೇಶ್ವರಾಗಮದ ಉಲ್ಲೇಖವಿದೆ. ಅದು ದೊರೆತರೆ ವೀರ ಮಾಹೇಶ್ವರ ಚಾರಿತ್ರಕ್ಕೆ ಹೊಸ ತಿರುವು, ಹೊಸ ಹರವು ಮೂಡಿ ಬರಲು ಬೇರೆ ಯಾವ ಸಂದೇಹವಿರದು, ವೀರೇಶನ ಕಾಲದಲ್ಲಿ ವೀರೇಶನಿಂದ ರೂಪಿತರಾದ ವೀರ ಮಾಹೇಶ್ವರರಿದ್ದರು. ಅಪ್ರತಿಮ ಕ್ರಾಂತಿಯನ್ನೆಸಗಿರುವರು. ಅವರ ಆ ಸಂಸ್ಕೃತಿಯನ್ನು ಉತ್ಕ್ರಾಂತಿಯನ್ನು ಒಳಗೊಂಡಿರಬೇಕು ಆ ವೀರ ಮಾಹೇಶ್ವರಾಗಮ ! ಅದನ್ನು ಸಂಗ್ರಹಿಸುವ ಕಾರ್ಯ ನಡೆಯಬೇಕಾಗಿದೆ. "ಮಾಹೇಶ್ವರ–ವೀರಮಾಹೇಶ್ವರ" ಎಂಬ ಹೆಸರಿನ ಏಕೈಕ ಕೃತಿಯನ್ನು ಬರೆದು ಹೊರ ಹಾಕಿದ್ದೇವೆ. ವೀರಮಾಹೇಶ್ವರರ ಬಗೆಗೆ ವಿಶೇಷವಾಗಿ ಅರಿಯಬೇಕೆನ್ನುವರು ಅದನ್ನು ಕೊಂಡೋದಬೇಕು.

"ವೀರವ್ರತಪರಾ ಯೇ ಚ ತಸ್ಯವ್ರತ ಪರಾಯಣಾಃ । ವೀರಮಾಹೇಶ್ವರಾಚಾರ ಭಕ್ತಾಸ್ತೇ ಚೋತ್ತಮೋತ್ತಮಾಃ ॥ ಎಂದಿದೆ ಸೂಕ್ಷ್ಮಾಗಮ. ವೀರಶೈವ ಭಕ್ತರಲ್ಲಿ ವೀರ (ವೀರೇಶ) ವ್ರತ. ವೀರಮಾಹೇಶ್ವರಾಚಾರವುಳ್ಳ ಭಕ್ತರು ಉತ್ತಮೋತ್ತಮರೆಂದು ಹೇಳಲಾಗಿದೆ. ಇವರಿಂದಲೂ ವೀರಾಗಮ ವಿರುವಂತೆ ವೀರಮಾಹೇಶ್ವರಾಗಮವೂ ಒಂದು ಇರುವಂತೆ ತಿಳಿದು ಬರುತ್ತದೆ. ಅಂತೆಯೇ ಪಾರಮೇಶ್ವರಾಗಮವು 'ವೀರ ಮಾಹೇಶ್ವರಾಗಮ' ನಾಮವನ್ನು ಉಲ್ಲೇಖಿಸಿದೆ.

"ಸರ್ವಂ ಲಿಂಗಮಯಂ" "ಜಗದೇತಚ್ಚರಾಚರಂ" ಇವೆರಡು ಪದ ಪ್ರಯೋಗಗಳು ಶಿವಾಚಾರ್ಯರ ಲಿಂಗ ಲಕ್ಷಣ ವೈಶಾಲ್ಯದ್ಯೋತಕವಾಗಿದೆ. ಚರಾಚರ ಜಗನ್ಮಯ ಲಿಂಗವೆಂದಿರುವುದರಿಂದ ಚರ–ಅಚರ (ಸ್ಥಾವರ)ಗಳೆರಡಕ್ಕೂ ನಿತ್ಯ ಸತ್ಯತ್ವ ಸಿದ್ಧವಾಗಿದೆ. "ಸ್ಥಾವರಕ್ಕಳಿವುಂಟು" ಎಂಬ ಮಾತು ವೀರಶೈವರಿಗೆ ಒಪ್ಪಿತವಲ್ಲವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಲಿಂಗಪೂಜೆಗೆ ಮೊದಲು ಬೇರೆ ದೇವರುಗಳನ್ನು ಅರ್ಚಿಸಿ ಆರಾಧಿಸಬಾರದು. ಲಿಂಗ

ಪೂಜೆಯಾದ ಬಳಿಕ ಲಿಂಗಾಂಶಗಳಾದ ಬೇರೆ ದೇವರುಗಳನ್ನು ಸರ್ವ ಸಾಮಾನ್ಯವಾಗಿ ಆರಾಧಿಸಿ ಆದರಿಸುವಲ್ಲಿ ಉಪಚರಿಸುವಲ್ಲಿ ಲಿಂಗನಿಷ್ಠೆಗೆ ಕೊರತೆಬಾರದು. ಇದರಿಂದ ಶಿವಾದ್ವೈತತತ್ತ್ವವನ್ನು ಸಾಧಿಸಿದಂತಾಗುತ್ತದೆ. ಇದು ಇಂದಿಗೂ ರೂಢಿಯಲ್ಲಿ ಬಂದುದೂ ಆಗಿದೆ. ಇದನ್ನು ಬಿಡಿಸುವುದು ಪೂರ್ಣ ಪ್ರಜ್ಞೆಯ ಕುರುಹಲ್ಲ. ಅವುಗಳಲ್ಲಿಯೂ ಲಿಂಗವನ್ನೆ ಕಾಣುವ ಸಮದರ್ಶಿತ್ವವುಂಟಾಗುತ್ತದೆ. ಇದೂ ಒಂದು ವೀರಶೈವ ವಿಶಾಲ ಸಂಸ್ಕೃತಿಗೆ ವೀರಶಿವಾಚಾರ್ಯರ ಕೊರತೆಯಿಲ್ಲದ ಕೊಡುಗೆ! ವಿಶಿಷ್ಟ ಕೊಡುಗೆ !

ಚರಾಚರ ಜಗತ್ತನ್ನು ಲಿಂಗಮಯವಾಗಿ ನೋಡಿ ನೆನೆಯುವಿಕೆಯಲ್ಲಿದೆ ವೀರಶೈವ ವಿಶಾಲತೆ ! ವೀರಶಿವಾಚಾರ್ಯರ ವಿಶ್ವ ಸಾಂಸ್ಕೃತಿಕ ನಿಯಾಮಕತೆ ! ಚರಾಚರ ಜಗತ್ತೆಲ್ಲವೂ ಲಿಂಗಮಯವೆಂದರಿಯಲು ಸಾಧನವಾಗಿದೆ ಶ್ರೀಗುರು ಕರುಣಿಸಿದ-ಕರುಣಿಸುವ ಲಿಂಗ ! ವ್ಯಷ್ಟಿ ಸಮಷ್ಟಿಲಿಂಗ !

## ಅನಾದಿ ರುದ್ರ-ಭದ್ರ ಶಿವಾಚಾರ್ಯರು

"ದೃಷ್ಟವಾನ್ ಸಿತಂ ಪಾರ್ಥ ವಿಶ್ವಾಷಂ ವಿಶ್ವತೋಮುಖಂ ।
ಪ್ರತ್ಯಕ್ಷಮೇವ ಸರ್ವೇಶಂ ರುದ್ರಂ ಸರ್ವಜಗದ್ಗುರುಂ ॥"

—ಕೂರ್ಮ ಪುರಾಣ

ಚರಾಚರ ಜಗತ್ತು ಬೇರೆಯಲ್ಲ; ಕರದಿಷ್ಟ ಲಿಂಗ ಬೇರೆಯಲ್ಲ. ಇದರಿಂದ ವಿಶ್ವಮಯ ಲಿಂಗತತ್ತ್ವವನ್ನು ಅಂದರೆ ಪರಶಿವಶಕ್ತಿ ತತ್ತ್ವವನ್ನು ಪ್ರತಿಪಾದಿಸುವ ಅನಾದಿ ವೀರಶೈವವನ್ನು ರೂಪಿಸಿದವರು ರುದ್ರ-ಭದ್ರ-ಶಿವ-ರೇಣುಕ-ದಾರುಕಾದಿ ಶಿವಾಚಾರ್ಯರು. ಇವರು ಪ್ರಥಮಿಗರು, ಪ್ರಧಾನರು. ರುದ್ರ ಭದ್ರರು ವೀರಶೈವಕ್ಕೆ ಮೂಲರಾದಂತೆ ವೀರಶೈವ ಸಂಸ್ಕೃತಿಗೆ ಅಷ್ಟೇಕೆ ಭಾರತ ಸಂಸ್ಕೃತಿಗೂ ಮೂಲಕಾರಣರು. ಮಾನವ ಕಲ್ಯಾಣ ದೃಷ್ಟಿಯಿಂದ ನಡೆನುಡಿಗಳ ಒಳಿತಿಗಾಗಿ ಸ್ವಯಂಧರ್ಮ ಸಮಾಜಗಳಿಗಾಗಿ ಶಾಂತಿ ಸುಖಗಳಿಗಾಗಿ, ಆಚಾರ ವಿಚಾರಗಳಿಗಾಗಿ ಸಾತಿಶಯ ಸಾಹಸ ಮಾಡಿದರು ; ಸಾಧಿಸಿದರು. ಜನಗಳಲ್ಲಿ ಪರಸ್ಪರ ಶೋಷಣೆ-ಘರ್ಷಣೆಗಳು ನಡೆಯದಂತೆ ಅಣಗಿಸಲು ಕಾರಣರಾದರು. ಆರ್ಯದ್ರಾವಿಡ ಭೇದವನ್ನು, ದಾಳಿಗಳನ್ನು, ಧರ್ಮಯಜ್ಞಗಳ ನೆಪದಲ್ಲಿ ನಡೆಯುತ್ತಿದ್ದ ಘರ್ಷಣ-ಶೋಷಣ ಮಾರಣಗಳನ್ನು

ನಿವಾರಿಸಿದರು. ಕಾಡಪಶುಗಳನ್ನು ಸಾಕಿ ನಾಡಹಸುಗಳನ್ನಾಗಿಸಿ ಜನಜೀವನೋಪಯುಕ್ತಗಳನ್ನಾಗಿಸಿದರು. ರುದ್ರನುಭಿಷಕ್ತಮನಾಗಿ ಜನತೆಯ ರೋಗರುಜುನಗಳನ್ನು ಕಳೆದು ಹದುಳಿಗರನ್ನಾಗಿಸುತ್ತಿದ್ದನು. ಕೃಷಿಕಾರ್ಯವನ್ನು ಪ್ರಾರಂಭಿಸಿ ಧಾನ್ಯ ಧನಗಳನ್ನು ಉತ್ಪಾದಿಸಿ, ಜನರಿಂದಲೂ ಉತ್ಪಾದಿಸಿ ಹಚ್ಚಿದನು. ಪಶು(ಜೀವ), ಪಾಶ(ಮಲ), ಪತಿ(ಪರಶಿವ)ಗಳನ್ನು ಪರಿಶೋಧಿಸಿ, ಪರಿಷ್ಕರಿಸಿ ಅಂದರೆ ತ್ರಿವಿಧ ಸಂಸ್ಕಾರಗಳಿಂದ ತ್ರಿವಿಧಪಾಶ(ಮಲ)ಗಳನ್ನು ಕಳೆದು ಪಶು ಅಂದರೆ ಜೀವಾತ್ಮನ ಜೀವಭಾವವನ್ನು ತೊಲಗಿಸಿ, ಪತಿಭಾವವನ್ನು ಅಂದರೆ ಲಿಂಗ ಭಾವವನ್ನುಂಟು ಮಾಡಿ ಪಾಶುಪತ ಶಿವಾಚಾರ ಧರ್ಮವನ್ನು ರೂಪಿಸಿ ಶಿವಸಂಸ್ಕೃತಿಯನ್ನು ಶ್ರೀ ರುದ್ರನು ಸಂವೃದ್ಧಿಸುವನು. ತ್ರಿಪುರ ಸಂಹಾರಜನ್ಯಭಸ್ಮವನ್ನು, ಅದೇ ಸಂಹಾರ ಕಾರ್ಯದಲ್ಲಿ ಶ್ರೀರುದ್ರಯೋಗೀಶ್ವರನ ಕಣ್ಣುಗಳಿಂದ ಕೆಳಕ್ಕೆ ಉದುರಿದ ಕಂಬನಿಗಳಿಂದ ನೆಲಸಂಪರ್ಕದಿಂದ ಉದ್ಭವವಾದ ರುದ್ರಾಕ್ಷಿಯನ್ನು, (ರುತಂ-ಶಬ್ದಂ-ದದಾತೀತಿ ರುದ್ರಃ) ಎಂಬ ವ್ಯುತ್ಪತ್ತಿಯಿಂದ ಮಂತ್ರವನ್ನು, "ರುದ್ರಘ್ರಾತಂಜಿಘ್ರೇತ, ರುದ್ರಪೀತಂಪಿಬೇತ, ರುದ್ರೇಣಾತ್ತಮಶ್ನಂತಿ...." ಎಂಬೀ ಪ್ರಮಾಣದಿಂದ ಪಾದೋದಕ ಪ್ರಸಾದಗಳನ್ನು ಉತ್ಪಾದಿಸಿ ಶ್ರೀ ರುದ್ರನು ಪಾಶುಪತ ಶಿವಾಚಾರ ಧರ್ಮದ ಅನಾದಿ ಶಿವಾಚಾರ್ಯನೆನಿಸುವನು; ಜಗದ್ಗುರುವೆನಿಸುವನು. ಇದರಿಂದಾಗಿ ವೀರಶೈವ ಸಂಸ್ಕೃತಿ ಅನಾದಿ ಪರಂಪರೆಯಿಂದ ಬಂದುದಾಗಿದೆ. ವೀರಶೈವ ಸಂಸ್ಕೃತಿಯನ್ನು ಮಾನವರೆಲ್ಲರೂ ಆಚರಿಸಲು ಅಭಿವೃದ್ಧಿ ಹೊಂದಲು ಅಭ್ಯಂತರವೇನಿಲ್ಲ. ಅವರಿವರೆಂಬ ಭೇದವಿಲ್ಲ. · ಎಲ್ಲರಲ್ಲಿರುವವನು ಪರಶಿವನೊಬ್ಬನೆ ! ವೀರಶೈವ ಸಂಸ್ಕಾರದಿಂದ ಸರ್ವರೂ ಶಿವಸ್ವರೂಪರಾಗುವರು. ಇದನ್ನು ಅಂದೇ ರುದ್ರದೇವನು ಎಲ್ಲ ಪಂಥ ಪಂಗಡ ಜನಗಳ ಮೇಲೆ ಉಪಯೋಗಿಸುವನು. ತನ್ನ ತ್ರಿವಿಧ ದೀಕ್ಷೆಗಳಿಂದ ಎಲ್ಲರನ್ನು ಸಂಸ್ಕರಿಸಿ ತನ್ನಂತೆ ಮಾಡಿಕೊಳ್ಳುವನು. ಅವರೇ ಗಂಗೆವಾಲುಕ ಸಮರುದ್ರರು ; ಮತ್ತು ಮರುದ್ಗಣರು ; ರುದ್ರಕರ್ಣಿಕೆಯರು. ಅವರೆಲ್ಲರೂ ಮಹಾ ಪಾಶುಪತ ಶಿವಾಚಾರದವರು. ಅಂದರೆ ಅನಾದಿ ವೀರಶೈವರು ; ಅನಾದಿ ವೀರಮಾಹೇಶ್ವರರು. "ಸಹಸ್ರಾಣಿ ಸಹಸ್ರಶೋ ಯೇರುದ್ರಾ ಅಧಿಭೂಮ್ಯಾಂ...." ಎಂಬಂತೆ ರುದ್ರಗಣರು ಭೂಮಿಯಲ್ಲೆಲ್ಲಾ ಹರಡಿಕೊಂಡರು. ಅನಾದಿ ವೀರಶೈವ ಸಂಸ್ಕೃತಿ

ಯನ್ನು ಎಲ್ಲೆಲ್ಲಿಯೂ ಹರಡಿದರು. ಆ ರುದ್ರಗಣರಲ್ಲಿ ಎಲ್ಲ ವೃತ್ತಿಯವರೂ ಇದ್ದರು. ಬಡವ-ಬಲ್ಲಿದರು, ಶಕ್ತಾಶಕ್ತರು, ಸೈನಿಕರು-ಸೇನಾನಿಗಳು, ಗಣರು-ಗಣಪತಿಗಳು, ವಿರೂಪರು-ವಿಶ್ವರೂಪರು, ಬಾಣ-ಧನುಗಳುಳ್ಳ ವರು, ಎಚ್ಚತ್ತವರು-ಎಚ್ಚರಿಲ್ಲದವರು, ಅಂದರೆ ನನಸಿಗರು-ಕನಸಿಗರು, ಸಭಿಕರು-ಸಭಾಪತಿಗಳು, ಅಶ್ವಪತಿಗಳು, ಕುಳಿತವರು, ನಿಂತವರು, ಓಡಾಡು ವವರು, ವ್ರಾತರು-ವ್ರಾತಪತಿಗಳು, ರಥಪತಿಗಳು, ರಥಶಿಕ್ಷಕರು, ರಥಿಕರು, ಸಾರಥಿಗಳು, ರಥಕಾರರು, ಬಡಿಗರು, ಕುಂಬಾರರು, ಕಮ್ಮಾರರು, ವ್ಯಾಧರು ಜಾಲಗಾರರು, ಇಷುಕಾರರು, ಧನುಕಾರರು, ಮೃಗಶ್ವಾನಾದಿಗಳನ್ನು ಪೋಷಿ ಸುವವರು, ಇವರೇ ಮೊದಲಾದವರಿದ್ದರು. ಇವರನ್ನೆಲ್ಲ ಮನ್ನಿಸಿ ಆರ್ಯರೂ ಸಹ ಇವರಿಗೆ ನಮಸ್ಕರಿಸಿ ಪುರಸ್ಕರಿಸುವಂತೆ ಮಾಡಿದ್ದನು ಶ್ರೀರುದ್ರ ದೇವನು. ಆತನ ಆ ಸತ್ಯ ಸಾಮ್ರಾಜ್ಯದಲ್ಲಿ ಏನೆಲ್ಲ ವೃತ್ತಿಗಳಿಗೆ ಅಂದರೆ ಕ್ರಿಯಾಶೀಲಕಾಯಕಗಳಿಗೆ ಮಾನ್ಯತೆಯಿದ್ದಿತು. ಉಚ್ಚ ನೀಚವೆಂಬ ವ್ಯತ್ಯಾಸ ವಿರಲಿಲ್ಲ. ಸಮಸ್ತ ವೃತ್ತಿ ಶಿಕ್ಷಣ ಸಮಾಜವನ್ನು ರಚಿಸಿದ್ದನು. ಆತನ ಸಮಾಜದಲ್ಲಿ ರುದ್ರಗಣ, ಮರುದ್ಗಣ, ಆರ್ಯಗಣ, ದ್ರಾವಿಡಗಣ, ರುದ್ರ ಕನ್ನಿಕೆಯರ ಗಣ, ನಾಗಗಣ ಮೊದಲಾಗಿ ಎಲ್ಲರೂ ಇದ್ದರು. ಇವರೆಲ್ಲ ಸಂಪಾದಿಸದ ಸಂಪತ್ತನ್ನು ಸಂಗ್ರಹಿಸಿ ಇರಿಸಿಕೊಳ್ಳುತ್ತಿರಲಿಲ್ಲ. ಸಹಜದಾನಿ ಯಾಗಿದ್ದನು. ಸರ್ವರನ್ನು ಸಮವಾಗಿ ಕಂಡು ಸಮವಾಗಿ ವರ್ತಿಸುತ್ತಿದ್ದನು.

ಶ್ರೀ ರುದ್ರದೇವನು ವಿಶ್ವಾಧಿಪನಾಗಿದ್ದನು. ವಿಭವಕ್ಕೆ ಕೊರತೆಯಿರ ಲಿಲ್ಲ. ರುದ್ರದೇವನು ವಿಸ್ತಾರವಾದ ವನಕ್ಕೆ ಒಡೆಯನಾಗಿದ್ದನು. ಪಶು ಗಳಿಗೆಲ್ಲ ಪತಿಯಾಗಿದ್ದನು. ಔಷಧಿಗಳಿಗೆ ಪತಿಯಾಗಿದ್ದನು. ದಿಕ್ಪತಿಯಾಗಿ ದ್ದನು. ಅನ್ನ ಪತಿಯಾಗಿದ್ದನು. ಸರ್ವ ಸಾಮೂಹಿಕ ಕ್ಷೇತ್ರಗಳಲ್ಲಿ ಅನ್ನ ದಾಸೋಹಗಳನ್ನು ಏರ್ಪಡಿಸಿದ್ದನು. ಸಾರ್ವಜನಿಕ ರೋಗಗಳಿಗೆ ಔಷಧಿಗಳನ್ನು ಕೊಟ್ಟು ರೋಗಗಳನ್ನು ಪರಿಹರಿಸುತ್ತಿದ್ದನು. ಬೃಹತ್ಕೃಷಿಕಾರನಾಗಿದ್ದನು. ಆತನು ಹಿರಣ್ಯಬಾಹು ಮತ್ತು ಸಿಂಹಕೇಶಿಯಾಗಿದ್ದರಿಂದ ಸತ್ವಶಾಲಿಯಾಗಿ ದ್ದನು. ಪ್ರಯಾಣಿಕರನ್ನು ಪೋಷಿಸುತ್ತಿದ್ದನು. ಭವರೋಗ ನಿವಾರಕನಾಗಿ ದ್ದನು. ಅಂತೆಯೇ ಯೋಗದ ಆದ್ಯಪ್ರವರ್ತಕನಾಗಿದ್ದನು. ಅಸಂಖ್ಯ ಕ್ಷೇತ್ರ ಪತಿಯಾಗಿದ್ದನು, ಜಗತ್ಪತಿಯಾಗಿದ್ದನು, ಶಬ್ದಸ್ರಷ್ಟಾರನಾಗಿದ್ದನು. ಆಗಿ ದ್ದರೂ ಅಹಂಕಾರ ಸ್ವಾರ್ಥಗಳಿರಲಿಲ್ಲ ; ಅನುಕಂಪ ಹೃದಯಿಯಾಗಿದ್ದನು.

ಆತನ ಆ ಸಾಂಸ್ಕೃತಿಕ ಕ್ರಾಂತಿಯಲ್ಲಿ ಸ್ತ್ರೀಯರಿಗೆ ಸರ್ವ ಸ್ವಾತಂತ್ರ್ಯವಿದ್ದಿತು. ಆ ಸ್ವಾತಂತ್ರ್ಯ ಸಾಂಸ್ಕೃತಿಕವಾಗಿದ್ದಿತು. "ನಮ ಉಗಣಾಭ್ಯಸ್ತೃಗ್ಂ ಹತೀಭ್ಯಶ್ಚವೋ ನಮೋ ಗೃತ್ಸೇಭ್ಯೋ ಗೃತ್ಸಪತಿಭ್ಯಶ್ಚವೋ ನಮೋ ನಮೋ ವ್ರಾತೇಭ್ಯೋ ವ್ರಾತಪತಿಭ್ಯಶ್ಚವೋ ನಮೋ....ಮಹದ್ಭ್ಯಃ ಕ್ಷುಲ್ಲಕೇಭ್ಯಶ್ಚವೋ ನಮೋ....ನಮಃ ಕುಲಾಲೇಭ್ಯಃ ಕರ್ಮಾರೇಭ್ಯಶ್ಚವೋ ನಮೋ ನಮ ಪುಂಜಿಷ್ಟೇಭ್ಯೋ ನಿಷಾದೇಭ್ಯಶ್ಚವೋ ನಮೋ....ನಮಃಶ್ವಭ್ಯಃಶ್ವಪತಿಭ್ಯಶ್ಚವೋ ನಮಃ॥" —ಶ್ರೀರುದ್ರ ಸೂಕ್ತದಲ್ಲಿನ ಚತುರ್ಥೋನುವಾಕದ ಈ ನುಡಿಗಳಲ್ಲಿ ವೃತ್ತಿನಿಷ್ಠ ಮೌಲ್ಯವನ್ನು ನಿಮ್ನ ವರ್ಗಕ್ಕಿತ್ತ ಮೌಲ್ಯವನ್ನು ಮನಗಾಣಬೇಕು. ಸರ್ವ ವೃತ್ತಿಗಳಿಗಿತ್ತ ಪ್ರೋತ್ಸಾಹವನ್ನಿಲ್ಲಿ ಪರಿಕಿಸಬೇಕು.

ರುದ್ರಕನ್ನೆಯರಿಗೆ ದುಷ್ಟರನ್ನು ದಂಡಿಸುವ ಅಧಿಕಾರವಿದ್ದಿತು. ಅಂತೆಯೆ ಶಿಷ್ಟರನ್ನು ರುದ್ರಲೋಕಕ್ಕೆ ಕರೆದೊಯ್ಯುವ ಹೊಣೆಯಿದ್ದಿತು. ರುದ್ರಕನ್ನೆಯಿಲ್ಲದೆ ಅಥವಾ ಒಪ್ಪದೆ ರುದ್ರಲೋಕಕ್ಕೆ ಹೋಗಲು ಯಾರಿಗೂ ಅವಕಾಶವಿರಲಿಲ್ಲ. 'ತೃಗ್ಂ ಹತೀಭ್ಯ" ಎಂಬಲ್ಲಿ ದಂಡಿಸುವ ಹಕ್ಕು ನಿರ್ದಿಷ್ಟವಾಗಿದೆ.

"ಆರುಹ್ಯ ಪುಷ್ಪಕಂ ದಿವ್ಯಂ ರುದ್ರಕನ್ಯಾ ಸಮನ್ವಿತಂ ।
ಬ್ರಹ್ಮಾಂಡ ಕಟಹಾದೂರ್ಧ್ವಂ ರೇಣುಕೈ : ಪ್ರಮಥೈ : ಸಹ ॥
ವ್ರಜಂತಿ ರುದ್ರಕನ್ಯಾಢ್ಯಂ ಗುರುತ್ವಂ ಯೋಗಿನಾಮಪಿ ।
ಅಶೇಷ ಪ್ರಮಥಾನಾಂ ಚ ಸತ್ಯಂ ಸತ್ಯಂ ವದಾಮ್ಯಹಂ ॥

ಇತ್ಯಾದಿಯಾಗಿ ವೀರಾಗಮದಲ್ಲಿ ರುದ್ರ ಕನ್ನೆಯರ ಅಧಿಕಾರ ಮಾನ್ಯತೆಗಳು ಅಭಿವ್ಯಕ್ತವಾಗಿವೆ.

ಸ್ತ್ರೀ ಸಾಮ್ಯವಾದ ಸ್ವಾತಂತ್ರ್ಯತೆ ರುದ್ರದೇವನಿಂದಲೇ ಅಸ್ತಿತ್ವದಲ್ಲಿದ್ದು, ದ್ರಾವಿಡ ಸಂಸ್ಕೃತಿಯಲ್ಲಿ ಸ್ತ್ರೀ ಪಾರತಂತ್ರ ಯಾವಾಗಲೂ ಇರಲಿಲ್ಲ ; ಇಲ್ಲ. ರುದ್ರಪತ್ನಿ ರುದ್ರಾಣಿಯ ವ್ಯಕ್ತಿತ್ವ ರುದ್ರದೇವನಿಗೆ ಯಾವಾಗಲೂ ಹೊಯ್‌ಕೆಯ್ ಆಗಿದ್ದಿತೆಂಬುದು, ಇಂದಿಗೂ ಇಡೀ ಭಾರತದ ಭಕ್ತರಲ್ಲಿ ಅವಳಿಗಿರುವ ಅತ್ಯಧಿಕ ಪೂಜ್ಯತೆಯೆ ಪ್ರತ್ಯಕ್ಷ ಸಾಕ್ಷಿಯಾಗಿದೆ. ಇಂತಹ ಕಾಳಿಕಾಭವಾನಿ ಬಗೆಗೆ 'ಬೇರೊಂದು ಕೃತಿ'ಯನ್ನು ಬರೆದಿರೋಣವಾಗಿದೆ.

ಮುಮ್ಮೊದಲು ಶಿವಾಚಾರವನ್ನು ಉತ್ಪಾದಿಸಿ ಶಿವಾಚಾರ್ಯನೆಂಬ

ಅಸ್ಪರ್ಧಿಕ ನಾಮಕ್ಕೆ ತಕ್ಕವನಾಗಿದ್ದನು. ಅಷ್ಟೇ ಅಲ್ಲ, ಸಕಲ ಶಿವಾಚಾರ್ಯ ಶಿಖಾಮಣಿಯೂ ಆಗಿದ್ದನು. ಇದರಿಂದಾಗಿ ಭಾರತದ ಇತಿಹಾಸದಲ್ಲಿ ರುದ್ರ ದೇವನ ಇತಿಹಾಸ ಇಮ್ಮಿಗಿತಾದುದು, ನಿಡುಗಾಲದ್ದು ; ನೆನೆಯುವಂತಹದು. ಇದಕ್ಕೆ ಆತನಿಗಿದ್ದ ತೇಜೋಬಲಗಳೇ ಕಾರಣ ; ವಿಶಾಲ ಮನೋಭಾವವೆ ಕಾರಣ.'ವಿಶ್ವಾಧಿ ಕೋ ರುದ್ರಃ' 'ವಿಶ್ವಾಧಿಪೋರುದ್ರಃ''ವಿಶ್ವರೂಪೋದೇವಃ' 'ಏಕಏವ ರುದ್ರೋ ನದ್ವಿತೀಯಾಯ ತಸ್ಥೇ' 'ಸರ್ವೋಪೈರುದ್ರಃ' 'ರುದ್ರಃ ಸರ್ವೇಷಾಮುತ್ತಮೋತ್ತಮಃ' 'ಓಂ ನಮೋ ಭಗವತೇ ರುದ್ರಾಯ' ಇವೇ ಮುಂತಾದ ನಿಗಮಾಗಮ ನುಡಿಗಳು ಸಾಕ್ಷಿಯಾಗಿವೆ. ಇವುಗಳಿಂದ ಶ್ರೀ ರುದ್ರ ಶಿವಾಚಾರ್ಯ ಸಾಧನೆಯ ಎತ್ತರ ಬಿತ್ತರಗಳು ಬಗೆಗೊಳ್ಳುತ್ತವೆ. ಸರ್ವಸಾಮಾನ್ಯ ಈ ಭುವನ ಮಾನವತೆಯಿಂದ ಆ ಅಸಾಮಾನ್ಯ ಭಗವಂತತೆಗೇರಿ ನಿಲ್ಲುತ್ತಾನೆ, ಸರ್ವರಿಗೆ ಸಲ್ಲುತ್ತಾನೆ–ಶ್ರೀ ರುದ್ರ ಶಿವಾಚಾರ್ಯ ತಾನು ಸ್ವತಃ ಶಿವಾಚಾರಿಯಾಗಿ ಅಸಂಖ್ಯಗಣರನ್ನು ಶಿವಾಚಾರದವರನ್ನಾಗಿಸಿ, ಬೇರೆ ಬೇರೆ ಜನಗಳಲ್ಲಿರುವ ಅವಿದ್ಯಾ ಅಸ್ಮಿತಾ ರಾಗ ದ್ವೇಷ ಅಭಿನಿವೇಶಗಳೆಂಬ ಪಂಚಕ್ಲೇಶಗಳನ್ನು ಪರಿಹರಿಸಿ, ಆರ್ಯದ್ರಾವಿಡ ಜನಾಂಗದ ಸಮನ್ವಯ ಜೀವನಕ್ಕೆ ಮಾರ್ಗ ವನ್ನುಂಟು ಮಾಡಿ, ಸಕಲರ ಸಕಲ ವೃತ್ತಿ ಪ್ರವೃತ್ತಿಗಳನ್ನು ಮನ್ನಿಸಿ, ವೃತ್ತಿ ಪ್ರವೃತ್ತಿಗಾರರನ್ನು ಮನ್ನಿಸಿ, ತಾನು 'ಸಂಕರ್ಷಣಮೂರ್ತಿ' ಯಾಗಿ ಬಹು ಜನ ಗಣರನ್ನು ಕೃಷಿಕರನ್ನಾಗಿಸಿ, ಮಹಾಯೋಗಿಯಾಗಿ ರುದ್ರಯೋಗಕ್ಕೆ ಆದಿ ಪ್ರವರ್ತಕನಾಗಿ, ಮಹಾ ವೈದ್ಯನಾಗಿ ಸರ್ವರ ರೋಗ-ಭವರೋಗಗಳನ್ನು ಪರಿಹರಿಸಿ ಮಹಂತ ಭಗವಂತ ಸ್ವರೂಪನಾಗುವನು ಶ್ರೀರುದ್ರಶಿವಾಚಾರ್ಯನು. ಯಾವ ಕ್ಷೇತ್ರದ ಕೃಷಿಯನ್ನಾಗಲಿ ಅದನ್ನು ಬೃಹತ್ತಾಗಿ ಮಹತ್ತಾಗಿ ಮಾಡುವುದೇ ಶ್ರೀರುದ್ರಶಿವಾರ್ಯನ ಸರ್ವೋನ್ನತ ಸಾಮರ್ಥ್ಯ, ಸರ್ವಾದರ್ಶ ಸಾಮರ್ಥ್ಯ. ಇದರಿಂದ ಆತನು "ಭುವನಸ್ಯ ಪಿತರಂ ಗರ್ಭೀರಾಭೇರುದ್ರಂ...." ಎಂಬಂತೆ ಲೋಕಕ್ಕೆ ತಂದೆಯೂ ತಾಯಿಯೂ ಆಗಿ ಪರಿಣಮಿಸುವನು. ಆಷ್ಟೊಂದು ಲೋಕಹಿತಕಾರಿಯಾಗಿದ್ದನು: ಮಾತೃಹೃದಯಿಯಾಗಿದ್ದನು. ಎಲ್ಲರನ್ನು ತಂದೆಯಂತೆ ದೃಕ್ಕ್ರಿಯಾಶೀಲರನ್ನಾಗಿಸುತ್ತಿದ್ದನು ; ತಾಯಿಯಂತೆ ಜಲಾನ್ನಗಳನ್ನಿತ್ತು ಪ್ರೀತಿಸುತ್ತಿದ್ದನು. ಅಲ್ಲದೆ ಪದಾರ್ಥನಷ್ಟವಿಲ್ಲದ ಪ್ರಾಣಿ ಹಿಂಸೆಯಿಲ್ಲದ ನಿಸರ್ಗಯಜ್ಞಗಳನ್ನು ಋತು ಋತುಗಳಿಗೊಂದೊಂದರಂತೆ ವರುಷಕ್ಕೆ

ಆರು ಯಾಗಗಳನ್ನು ಮಾಡಿ ಪರಿಸರ ವಾತಾವರಣವನ್ನು ವಿಶುದ್ಧಿಗೊಳಿಸಿ, ಸಾಲದ್ದಕ್ಕೆ ಸತ್ವಶಾಲಿ ಔಷಧಿಗಳನ್ನಿತ್ತು ಜನರನ್ನು ಗಣರನ್ನು ಆರೋಗ್ಯ ಶೀಲರನ್ನಾಗಿಸುತ್ತಿದ್ದನು ; ಪುಷ್ಟ-ತುಷ್ಟರನ್ನಾಗಿಸುತ್ತಿದ್ದನು. 'ಪುಷ್ಟಾನಾಂ ಪತಯೇ ನಮೋ ಭವಸ್ಯಹೇತ್ಯೈ ಜಗತಾಂ ಪತಯೇ ನಮೋ ನಮೋ ರುದ್ರಾಯ।" ಎಂದು ಶ್ರೀರುದ್ರಸೂಕ್ತದ ದ್ವಿತೀಯಾನುವಾಕ ಉಗ್ಗಡಿಸಿದೆ. ರುದ್ರದೇವನಿಗೆ ಯಾವ ಬಗೆಯಲ್ಲಿಯೂ ಬಡವರನ್ನು ಕಂಡರೆ ಆಗುತ್ತಿರಲಿಲ್ಲ. ಅದು ಶಾರೀರಕತೆ ಇರಲಿ, ಮಾನಸಿಕವೇ ಇರಲಿ, ಬೌದ್ಧಿಕವೇ ಇರಲಿ, ಭಾವಿಕತೆ ಇರಲಿ, ಮತ್ತು ಆತ್ಮಿಕವೇ ಇರಲಿ, ಆರ್ಥಿಕವೇ ಇರಲಿ, ಮತ್ತೇನೆ ಇರಲಿ- ಅವನ್ನೆಲ್ಲ ತುಂಬಿ ತರುತ್ತಿದ್ದನು. ಯಾರೇ ಇರಲಿ, ಅವರಿವರೆನ್ನದೆ ಬಳಿಗೆ ಬಂದವರ ಕೊರತೆ ಕೊರಗುಗಳನ್ನು ಕಳೆಯುತ್ತಿದ್ದನು. ಮನೆ ಮೈಮನಗಳನ್ನು ಬುದ್ಧಿಭಾವಗಳನ್ನು ತುಂಬಿ ತರುತ್ತಿದ್ದನು. ಇದರಿಂದ ಲೋಕ ಪ್ರಿಯನಾಗಿದ್ದನು.

"ಅಗ್ನಿರ್ ಹೋತಾ ಕವಿಃ ಕ್ರತುಃ ಸತ್ಯಶ್ಚಿತ್ರಶ್ರವಸ್ತಮಃ ।
ದೇವೋ ದೇವೇಭಿರಾಗಮತ್ ॥''—ಋಗ್ವೇದ.

ರುದ್ರದೇವನು ತೇಜಸ್ವಿಯೂ ಹೋತೃವೂ (ಯೋಗದೀಕ್ಷಿತನೂ) ಆತ್ಮದ್ರಷ್ಟನಾದ ಕವಿಯೂ ಕ್ರತುಶಕ್ತಿಸಂಪನ್ನನೂ ಸತ್ಯವಂತನೂ ಸತ್ಯ ಸ್ವರೂಪನೂ ಆರಾಧಕರಿಗೆ ಫಲಪ್ರದಾತನೂ ದೇವಸ್ವರೂಪನೂ ಅಂದರೆ ಮಾನವದೇವನೂ ಆದ ಶ್ರೀ ರುದ್ರಶಿವಾಚಾರ್ಯನು ತನ್ನ ರುದ್ರಗಣ ಸಮೂಹ ದೊಡನೆ ಆಗಮಿಸಲಿ, ಎಂದು ಆರ್ಯರೂ ಸಹ ಆಶಿಸುತ್ತಿದ್ದರು. ದ್ವೇಷಿಗಳೂ ಆಗಮಿಸುವ ಆಕಾಂಕ್ಷೆಯನ್ನು ಅಭಿವ್ಯಕ್ತಿಗೊಳಿಸಬೇಕಾದರೆ ಶ್ರೀ ರುದ್ರಶಿವಾ ಚಾರ್ಯನ ಸಮುದರ್ಶಿತ್ವದ ಮಟ್ಟ ಎಂತಹದಿತ್ತೆಂಬುದು ಎರಕವಾಗುತ್ತದೆ. ಆಗದವರನ್ನೂ ಆಗುವಂತೆ ಮಾಡಿಕೊಳ್ಳುವ ಕ್ಷಮೆ ಮತ್ತು ಅಪಕಾರ ಮಾಡಿದ ವರಿಗೆ ಉಪಕಾರ ಮಾಡುವ ಉತ್ತಮ ಗುಣಧರ್ಮ ಆತನಲ್ಲಿದ್ದವೆಂಬುದು ಅರಿಕೆ ಯಾಗುತ್ತದೆ. ಬರೀ ಆರ್ಯರನ್ನು ಮಾತ್ರವಲ್ಲ, ಭುವನವನ್ನೇ ಭರಿಸುವ ಬೃಹತ್ ಸಾಮರ್ಥ್ಯ ಆತನಲ್ಲಿದ್ದಿತು.

"ಸ್ಥಿರೇಭಿರಂಗೈಃ ಪುರುರೂಪ ಉಗ್ರೋ
ಬಭ್ರುಃ ಶುಕ್ರೇಭಿಃ ಪಿಪಿಶೇ ಹಿರಣ್ಯೈಃ ।

ಈಶಾನಾದಸ್ಯ ಭುವನಸ್ಯ ಭೂರೇಃ ನ ವಾಉ
ಯೋಷದ್ರುದ್ರಾದಸೂರ್ಯಮ್ ॥''—ಋಗ್ವೇದ.

'ರುದ್ರದೇವನು ಚಲಿಸದ, ಚಿರಕಾಲ ನಿಲ್ಲುವ, ಸಲ್ಲುವ ಗಟ್ಟಿಮುಟ್ಟಾದ ಅಂಗೋಪಾಂಗಗಳುಳ್ಳವನು, ಸಲೆ ಚೆನ್ನಿಗನು, ಸಲೆ ತೇಜಸ್ವಿಯು, ಸತ್ವ ಶಾಲಿಯು, ಹೊಂದೊಡಿಗೆಗಳಿಂದ ಹೊಳೆವವನು ; ಈ ಭುವನದ ಪ್ರಭುವಾಗಿ ಭರಿಸಿದಾತನು ; ಕುಗ್ಗದ ಕಲಿತನವುಳ್ಳವನು.'

ಈ ಅಭಿಪ್ರಾಯಗಳನ್ನು ಅದೇ ಋಗ್ವೇದದ ಈ ಋಕ್ಕು ಇಂತು ಸಮರ್ಥಿಸಿಕೊಂಡಿದೆ.

"ಅರ್ಹನ್ ಬಿಭರ್ಷಿ ಸಾಕಾನಿ ಧನ್ವಿ ಅರ್ಹನ್ನಿಷ್ಕಂ
ಯಜತಂ ವಿಶ್ವರೂಪಮ್ ।
ಅರ್ಹನ್ನಿವಂ ದಯಸೇ ವಿಶ್ವಮಭ್ಯಂ ನವಾ
ಓಜಿಯೋ ರುದ್ರ ತ್ವದಸ್ತಿ ॥''

ಆ ಮಹಾರುದ್ರದೇವನ ಅರ್ಹತೆಯನ್ನು ಅದೆಷ್ಟು ಸಲ ಅಭಿಮತಿಸಿದರೂ ಸಾಲದು. ಮೂರು ಸಲ ಅರ್ಹನ್ ಎಂದು ಹೇಳಿರುವುದರಿಂದ ಆಧಿಭೌತಿಕದಲ್ಲಿ ಆಧ್ಯಾತ್ಮಿಕತೆಯಲ್ಲಿ ಆಧಿದೈವಿಕದಲ್ಲಿ ಸರ್ವಸಮರ್ಥನೆಂದು ಹೇಳುವಂತೆ ಪ್ರೇರಪಣೆ ಯುಂಟಾಗುತ್ತದೆ.

ಓ ರುದ್ರದೇವನೆ, ನೀನು ಸರ್ವಸಮರ್ಥ : ಅಂತೆಯೆ ಧನುರ್ಬಾಣಗಳನ್ನು ಧರಿಸಿರುವೆ. ವಿಶ್ವವೇ ಒಂದು ಸುವರ್ಣಮಾಲೆ. ಇದನ್ನು ಅಲಂಕರಿಸಿಕೊಂಡಿರುವೆ. ವಿಶ್ವಧಾರಣ ಭರಣ ಕಾರ್ಯ ಆತನಿಗೆ ಸುವರ್ಣಾಭರಣವನ್ನು ಅಲಂಕರಿಸಿಕೊಳ್ಳು ವಷ್ಟು ಆಸಕ್ತಿ ; ಸುಲಭಧಾರ್ಯ. ಸರ್ವರಕ್ಷಣ ಸಮರ್ಥನಾದ ನೀನು ಈ ಹಿರಿದಾದ ವಿಶ್ವವನ್ನು ದಯೆಯಿಂದ ಕಾಪಾಡುವೆ. ನಿನಗಿಂತ ಬಲವಂತರು ಬೇರಾರೂ ಇಲ್ಲ. ನೀನು ಆಜೀವ ತರುಣನು.

ರುದ್ರನು ಧನುರ್ಬಾಣಗಳನ್ನು ಧರಿಸಿದ್ದುದು ದ್ವೇಷಕ್ಕಾಗಿಯಲ್ಲ. ಪರ ರನ್ನು ಆರ್ಯರನ್ನು ಜಯಿಸಿ ಅವರ ಆಸ್ತಿ ಪಾಸ್ತಿಗಳನ್ನಾಗಲಿ ಪ್ರಾಂತ ಪ್ರದೇಶ ಗಳನ್ನಾಗಲಿ ಇನ್ನೇನನ್ನಾಗಲಿ ಕಿತ್ತುಕೊಳ್ಳಲಿಕ್ಕಾಗಲಿ ಅಲ್ಲ. ಆತನಿಗೆ ಸ್ವಾರ್ಥ ಸಂಕುಚಿತತೆ ಆಶೆ ದುರಾಶೆಗಳಿರಲಿಲ್ಲ. ಪರದೇಶದಿಂದ ಬಂದ ಆರ್ಯರು ಕಾಮ

ಕ್ರೋಧಗಳಿಂದ ಕೂಡಿದ್ದರು, ದ್ರಾವಿಡರನ್ನು ದ್ವೇಷಿಸುತ್ತಿದ್ದರು, ದಸ್ಯು ಪ್ರಾತ್ಯರೆಂದು ಕರೆವ ಹೀನ ಮನೋಭಾವವುಳ್ಳವರಾಗಿದ್ದರು. ತಾವೇ ಸರ್ವ ಶ್ರೇಷ್ಠರೆಂದು ಭಾವಿಸಿದ್ದರು. ತಾವು ದುಡಿಯಲಾರದೆ ದುಃಖ ಪಡಲಾರದೆ ದಟ್ಟ ದರಿದ್ರರಾಗಿದ್ದರು. ದ್ರಾವಿಡರ ದ್ರವ್ಯ ಧಾನ್ಯ ಮನೆ ಹೊಲ ದನಕರು ಗಳನ್ನು ದೋಚುತ್ತಿದ್ದರು. ಯಾವಾಗಲೂ ಶೋಷಣ ಘರ್ಷಣ ನಿರತರಾಗಿ ದ್ದರು. ಇಂದ್ರನನ್ನು ಮುಂದು ಮಾಡಿಕೊಂಡು ಬಂದು ಪುರ (ಊರು)ಗಳನ್ನು ಹಾಳು ಮಾಡುತ್ತಿದ್ದರು. ಪುರಂದರರೆಂದು ಹೆಸರಾಗಿದ್ದರು ; ಆಗಿರುವರು. ದ್ರಾವಿಡರು ಬಾಳಿ ಬದುಕುವುದು ಬಲು ದುಸ್ತರವಾಗಿತ್ತು. ದ್ರಾವಿಡರು ಆರ್ಯರನ್ನು ಎದುರಿಸಲು ಅಸಮರ್ಥರಾಗಿದ್ದರು. ದ್ರಾವಿಡರಲ್ಲಿ ಒಗ್ಗಟ್ಟಿರಲಿಲ್ಲ. ದ್ರಾವಿಡರನ್ನು ರಕ್ಷಿಸುವ ಆರ್ಯರನ್ನು ದಾರಿಗೆ ತರುವ ದ್ರಾವಿಡರ ಮೇಲೆ ದಾಳಿ ಮಾಡದಂತೆ ಮಾಡುವ ಕರ್ತವ್ಯ ಕಾರ್ಯಗಳು ಸಾಕಷ್ಟಿದ್ದವು, ಇದಕ್ಕಾಗಿ ಧನು ರ್ಬಾಣಗಳ ಧಾರಣ ; ದುಷ್ಟ ದಂಡನ ಶಿಷ್ಟ ರಕ್ಷಣಗಳು ಧನುರ್ಬಾಣಧಾರಣ ಕಾರಣಗಳು. ನಿರ್ನಿಮಿತ್ತವಾಗಿ ಸ್ವಾರ್ಥಕ್ಕಾಗಿ ಯಾರ ಮೇಲೆ ಆತ ಕೈ ಮಾಡು ತ್ತಿರಲಿಲ್ಲ. ವಿಶ್ವರೂಪನೆಂದು ವಿಶ್ವಾಧಿಪನೆಂದು ಹೆಸರಾಂತ ಆತನು ಯಾರನ್ನೂ ದ್ವೇಷಿಸಬೇಕಾಗಿರಲಿಲ್ಲ : ದ್ವೇಷಿಸುತ್ತಿರಲಿಲ್ಲ. ದ್ವೇಷಿಸುತ್ತಿದ್ದರೆ ವಿಶ್ವಶಕ್ತಿ ಯನ್ನು ವಿಶ್ವ ಮೈತ್ರಿಯನ್ನು ವಿಶ್ವಾಧಿಪತ್ಯವನ್ನು ಸಂಪಾದಿಸಲಾಗುತ್ತಿರಲಿಲ್ಲ. ವಿಶ್ವ ಸಂಸ್ಕೃತಿಯನ್ನು ರೂಪಿಸಲಾಗುತ್ತಿರಲಿಲ್ಲ. ವಿಶ್ವಕೀರ್ತಿಯನ್ನು ಗಳಿಸುತ್ತಿರ ಲಿಲ್ಲ. ಕ್ರೂರ ಮೃಗಗಳಾದ ಹುಲಿ ಸಿಂಹ ಮೊದಲಾದವುಗಳನ್ನೇ ಆತನು ಕೊಲ್ಲುತ್ತಿರಲಿಲ್ಲ. ಪ್ರತಿಯಾಗಿ ಪ್ರೀತಿಸುತ್ತಿದ್ದನು. ಅತ್ಯಂತ ದಯಾಮಯಿ ಯಾಗಿ ! ಧನುರ್ಧಾರಿಯಾಗಿದ್ದರೂ ದಯಾಮಯಿಯಾಗಿರುವಿಕೆ ರುದ್ರದೇವನ ಒಂದು ವಿಶಿಷ್ಟ ಧರ್ಮ ! ರುದ್ರನು ಕ್ರೂರನಾಗಿರಲಿಲ್ಲ ; ಕುಹಕನಾಗಿರಲಿಲ್ಲ. ಕುತ್ಸಿತ ಮತಿಯಾಗಿರಲಿಲ್ಲ. ಶಾಂತನೂ ಶಿವರೂಪನು ಸಕಲ ಜೀವಾತ್ಮರಿಗೆ ಲೇಸ ಬಯಸುವಾತನೂ ಆಗಿದ್ದನು. "ಯಾತ ಇಷುಃ ಶಿವತಮಾ, ಶಿವಂ ಬಭೂವ ತೇ ಧನುಃ । ಶಿವಾ ಶರವ್ಯಾ ಯಾ ತವ ತಯಾ ನೋ ರುದ್ರ ಮೃಡಯ । **ಯಾತೇ ರುದ್ರ ಶಿವಾ ತನೂ ರಾಘೋರಾ ಪಾಪಕಾಶಿನೀ ।** ತಯಾನಸ್ತನುವಾ ಶಂತಮಯಾ ಗಿರಿಶಂತಾಭಿಚಾಕಶೀಹಿ। ಯಾಮಿಷುಂ ಗಿರಿಶಂಚ ಹಸ್ತೇ ಬಿಭಷ್ಯಸ್ತವೇ ॥ ಶಿವಾಂಗಿರಿ ತ್ರತಾಂಕುರು...." ಎಂದು ಮುಂತಾಗಿ

ಯಜುರ್ವೇದೀಯ ಶ್ರೀ ರುದ್ರ ಸೂಕ್ತ ಸ್ತುತಿಸುತ್ತಿರಲಿಲ್ಲ. ಅಷ್ಟೇ ಅಲ್ಲ, ರುದ್ರದೇವನು "... ಪ್ರಥಮೋ ದೈವ್ಯೋ ಭಿಷಕ್ ॥" ಆಗಿದ್ದನು. ಅಂದರೆ ದಿವ್ಯ ವೈದ್ಯನಾಗಿದ್ದನು. ಅರುಣ ವರ್ಣವುಳ್ಳವನು ಕಾಷಾಯ ವಸ್ತ್ರಧಾರಿಯೂ ಆಗಿದ್ದನು. ಅಧಿವಕ್ತನು ಅಧಿಕರ್ತನು ಅಧಿಸಂಕಲ್ಪನು ಆಗಿ ಆಚಾರ್ಯನಾಗಿದ್ದನು ಶಿವತಮನೆಂದು ಭಿಷಕ್ತಮನೆಂದು ವಿಶ್ವೋತ್ತಮನೆಂದು ವಿಖ್ಯಾತನಾಗಿರುವನು. ಶ್ರೀ ರುದ್ರದೇವನು 'ಹಿರಣ್ಯಬಾಹು' ಮಾತ್ರವಾಗಿರಲಿಲ್ಲ ; ಜೊತೆಗೆ ಹಿರಣ್ಮಯವಪ್ರಷ (ಕಾಯ)ನೂ ಹಿರಣ್ಮಯ ಪುರುಷನೂ ಆಗಿದ್ದನು. "ಅಸೌಯಸ್ತಾಮ್ರೋ ಅರುಣ ಉತ ಬಭ್ರುಸ್ಸುಮಂಗಲಃ। ಇದು ರುದ್ರರೂಪವರ್ಣನ! ರುದ್ರದೇವನ ಬಣ್ಣ ತಾಮ್ರಗೆಂಪು, ವರುಣಗೆಂಪು, ಬಭ್ರು ಅಂದರೆ ಹೊನ್ನುಗೆಂಪು, ಜೊತೆಗೆ ಸುಮಂಗಲ ರೂಪು. 'ಸುಮಂಗಲ'–ಇದು ಅರ್ಥಬಾಹುಲ್ಯವುಳ್ಳ ಪರುಷ ಸದೃಶ ಪದ. ಶುಭಕರ, ಶ್ರೇಯಕರ, ಕಲ್ಯಾಣಕರ, ಸುಂದರ, ಸಲಕ್ಷಣ, ಪ್ರಗತಿಪರ, ಪರಿಣಾಮಕರ ಎಂದು ಮುಂತಾದ ಮಸಂಬುಗುವ ಅರ್ಥಗಳಿವೆ. ಶ್ರೀ ರುದ್ರಶಿವಾಚಾರ್ಯನ ವಿಷಯದಲ್ಲಿ ಇವೆಲ್ಲ ಅರ್ಥಗಳು ಅನ್ವರ್ಥಕಗಳಾಗಿದ್ದವು, ಸಮರ್ಪಕಗಳಾಗಿದ್ದವು ; ಸಾರ್ಥಕಗಳಾಗಿದ್ದವು. ಆತನ ಆ ಬಹುಮುಖ ಪಾತ್ರ–ಬಾಹುಲ್ಯ ಪಾತ್ರ ಕಲ್ಯಾಣಕರವಾಗಿದ್ದಿತ್ತು. ಶ್ರೀ ರುದ್ರಶಿವಾಚಾರ್ಯನ ಪಶುಪತಿ ಪಾತ್ರ, ಭಿಷಕ್ತಮ ಪಾತ್ರ, ಸಂ–ಕರ್ಷಣ ಪ್ರವೀಣ ಪಾತ್ರ, ಸಿದ್ಧ ಶಿವಯೋಗಪಾತ್ರ, ಗಣತಂತ್ರಪಾತ್ರ, ಮೇಘಮಂಡಲಪಸಂಗತ ಪಾತ್ರ, ತ್ರಿಪುರಸಂಹಾರಪಾತ್ರ, ಮುಕ್ತಿಮಂಟಪರಚನಾಪಾತ್ರ, ಧನುರ್ಧಾರಿ ಪಾತ್ರ, ಲೋಕೋತ್ತರ ಮನೋಹರಪಾತ್ರ, ರುದ್ರಾಕ್ಷೋತ್ಪತ್ತಿ ಪಾತ್ರ, ಕಾಳಿಕಾದೇವೀಧವಪಾತ್ರ, ಪಾಶುಪತ ಧರ್ಮೋತ್ಪಾದನಪಾತ್ರ, ಶಿವಾಚಾರ ಪ್ರಚಾರ ಶಿವಾಚಾರ್ಯ ಪಾತ್ರ, ಶಿವಾಚಾರ್ಯ ತಿಂತಿಣಿ ನೇತಾರ ಪಾತ್ರ, ಕೇದಾರಾದಿ ಕ್ಷೇತ್ರ ನಿರ್ಮಾಣ ಪಾತ್ರ, ಅನಾದಿ ವೀರಶೈವೋತ್ಪಾದನ ಪಾತ್ರ, ಭಾರತೀಯ ಸಂಸ್ಕೃತಿ ಸೃಜನಪಾತ್ರ, ಹರಪ್ಪ–ಮೊಹೆಂಜೊದಾರೊ ನಾಗರಿಕತೆಯ ಪಾತ್ರ, ಅಷ್ಟಾವರಣ ಸೃಜನಪಾತ್ರ, ಲಿಂಗಶಿರೋಧಾರಿ ಪಾತ್ರ, ಆದಿತ್ಯ, ಚಿದಾದಿತ್ಯ ಪಾತ್ರ ಮುಂತಾದವುಗಳು ಒಂದೊಂದೂ ಲೋಕೋತ್ತರ ಪಾತ್ರಗಳು, ಉಜ್ವಲ ಊರ್ಜಿತ ಪಾತ್ರಗಳು. ಪರಮಾದ್ಭುತ ಪವಾಡ ಪಾತ್ರಗಳು. ಪ್ರಗತಿ ಪಾತ್ರಗಳು ಶಾಶ್ವತ ಚಾರಿತ್ರಿಕ ಪಾತ್ರಗಳು. ಮಹಾಮೌಲ್ಯ ಪಾತ್ರಗಳು. ಇವು

ಗಳಿಂದಾಗಿ ಆತನು ಅನಂತರುದ್ರನೆಂದೆನಿಸಿರುವನು. ಅನಂತರುದ್ರನಿಗೆ ಅಸಂಖ್ಯಾತರುದ್ರಗಣರು ಸಹಕಾರಿಗಳು ; ರುದ್ರಸಂಸ್ಕೃತಿ ಅಂದರೆ ಶಿವಾಚಾರ ಸಂಸ್ಕೃತಿ ಪ್ರಚಾರಕರು. "ಯೇ ಚೇ ಮಾಗ್ಂ ರುದ್ರಾ ಅಭಿತೋ ದಿಕ್ಷು, ಶ್ರಿತಾಃ ಸಹಸ್ರಶೋಽ ವೈಷಗ್ಂ ಹೇಡ ಈ ಮಹೇ ।" ಎಂದು ಮನ್ನಿಸಿ ಸನ್ನುತಿಸಿತು ಶ್ರೀರುದ್ರ ಸೂಕ್ತ ! ದಿಕ್ಕುದಿಕ್ಕುಗಳಲ್ಲಿ ರುದ್ರಗಣರು ; ರುದ್ರ ಶಿವಾಚಾರ್ಯ ಸಂಸ್ಕೃತಿ ! ಅಂದಿನ ಭಾರತೀಯರಿಗೆಲ್ಲ ವರದಾನವಾಗಿ ಪರಿಣಮಿಸಿತ್ತು ; ಈಗಲೂ ಕೆಲಮಟ್ಟಿಗೆ ಪರಿಣಮಿಸಿದೆ. ಇಂದಿನವರು ಹಲವು ಹತ್ತು ಪದ್ಧತಿಗಳನ್ನು ಅನುದಿನ ಅನುಸರಿಸುತ್ತಿದ್ದರೂ ಇವು ರುದ್ರದೇವನಿಂದ ಬಂದವುಗಳೆಂದು ಅರಿತಿರುವುದಿಲ್ಲ. ಹಸುಗಳ ಸಾಕಾಣಿಕೆ, ಜಯನವನ್ನು ಉಪಯೋಗಿಸುವಿಕೆ, ಬೇಸಾಯ ಗೈಯುವಿಕೆ, ನಾರು ಬೇರುಗಳಿಂದ ಮದ್ದು ಕೊಡುವಿಕೆ, ವೀಣೆಗಳನ್ನು ಉಪಯೋಗಿಸುವಿಕೆ, ಯೋಗದರ್ಶನ, ಗಣತಂತ್ರ, ಕಾವಿ ಬಟ್ಟೆಗಳ ಉಡುವಿಕೆ ಇತ್ಯಾದಿಗಳು ಸಾರ್ವಜನಿಕ ಪದ್ಧತಿಗಳು ; ಇನ್ನು ಅಷ್ಟಾವರಣಾಚರಣೆಗಳು, ತ್ರಿವಿಧ ದೀಕ್ಷಾ ಸಂಸ್ಕಾರಗಳು, ಅಭಿಷೇಕ, ಅಭಿಷೇಕಿಸುವ ಪಾತ್ರೆ (ಧಾರಾಪಾತ್ರೆ-ಇದುರುದ್ರಗಿಂಡಿ), ಇವೇ ಮೊದಲಾದವುಗಳು ವೀರಶೈವ ಪದ್ಧತಿಗಳು ಶ್ರೀ ರುದ್ರಶಿವಾಚಾರ್ಯನಿಂದ ಬಂದವುಗಳೆಂಬುದನ್ನರಿತವರು ಅದೆಷ್ಟು ಜನರಿದ್ದಾರೆ ? ಅಧಿಭೌತಿಕ ಜೀವನದಿಂದ ಅಧ್ಯಾತ್ಮಿಕ ಜೀವನಕ್ಕೆ ನಾಂದಿ ಹಾಡಿದಾತನು ರುದ್ರದೇವನೆಂಬುದನ್ನು ಅರಿತವರಾರು ? ಜೀವನ್ಮುಕ್ತಿಯನ್ನು ಪ್ರಪ್ರಥಮದಲ್ಲಿ ಬೋಧಿಸಿದವರಾರು ? ಸತ್ತವರಿಗೆ ಮೂರು ಗಂಟೆಯೊಳಗಾಗಿ ತಾರಕಮಂತ್ರೋಪದೇಶವನ್ನು ಮಾಡಿ ಪಾಪಗಳಿಂದ ಮುಕ್ತರನ್ನಾಗಿಸುವ ಮುಕ್ತಿಮಂಟಪವನ್ನು ಸ್ಥಾಪಿಸಿದವರಾರೂ ತನ್ನಂತೆ ಎಲ್ಲ ಬಗೆಯಲ್ಲಿ ಸಮಾನ ಶಕ್ತಿ ಸಾಮರ್ಥ್ಯವುಳ್ಳ ಏಕಾದಶ ರುದ್ರರನ್ನು ಬಳಿಕ ಶತರುದ್ರರನ್ನು ರೂಪಿಸಿದ ಸರ್ವಾದಶ್ಯ ಸಾಮರ್ಥ್ಯರುದ್ರನದೆಂಬುದನ್ನು ತಿಳಿದವರಾರು ? ತನ್ನಂತೆ ಇನ್ನೊಬ್ಬರನ್ನು ಮಾಡಿದ ಮಹಾನುಭಾವರು ವಿಶ್ವ ಚರಿತ್ರದಲ್ಲಿಯೇ ಇಲ್ಲದಿರುವಾಗ ಇದು ರುದ್ರದೇವನ ಅಸಾಧಾರಣಕಾರಣಿಕತನವಲ್ಲವೆ ? ಸತ್ತಮೇಲೆ ಹನ್ನೊಂದನೆಯ ದಿನಾರಾಧನೆಯ ಸಂಕೇತವೇನು ? ಹನ್ನೊಂದು ರುದ್ರರ ತೃಪ್ತಿ ಸಂಕೇತವೆಂಬುದನ್ನು ಇದರಿಂದ ಮೃತರ ಆತ್ಮಶಾಂತಿಯಾಗುವುದೆಂಬುದನ್ನು ಅರಿದು ಆಚರಿಸುವವರಾರು ? 'ಹೊತ್ತಾರೆಯೆದ್ದು ಎಳ್ಳು ಬೆಲ್ಲ

ಬೆಳೆವ ಭೂಮಿಯ' ನೆನೆಯಿರೆಂದು ಹೇಳುವ ಜಾನಪದ ಕವಿಗಳಿರುವಂತೆ, ಭೂಮಿ ಬೆಳೆದಂತೆ ಮಾಡುವ ಕೃಷಿಯನ್ನು ಕಂಡು ಹಿಡಿದ, ಕಾಡ ಹಸುಗಳನ್ನು ಸಾಕಿ ಕೃಷಿಗೆ ಬೇಕಾದ ಹೋರಿ ಎತ್ತುಗಳನ್ನು ಕರುಣಿಸಿ ಒದಗಿಸಿ ಕೊಟ್ಟ ಶ್ರೀ ರುದ್ರ ಶಿವಾಚಾರ್ಯನನ್ನು ನೆನೆಯಿರೆಂದು ಹೇಳುವವರಾರು ? ನೆನೆವರಾರು ?

ಗಂಗೆವಾಳುಕ ಸಮರುದ್ರರು ಮರುದ್ಗಣರು ರುದ್ರ ಕನ್ನೆಯರು ಎಲ್ಲರನ್ನೂ ಕ್ರಿಯಾವಂತರನ್ನು ನೀತಿವಂತರನ್ನು ಮತಿವಂತರನ್ನು ಮಾಡಿದ ಮಹಂತತೆ ರುದ್ರದೇವನದು. ಯಾರನ್ನೂ ಸುಮ್ಮನೆ ಕುಳ್ಳಿರಿಸಿಕೊಡುತ್ತಿರಲಿಲ್ಲ. ಗ್ರಾಮಗ್ರಾಮಗಳಿಗೆ ಕಳಿಸಿ ಅವುಗಳ ಕುಂದು ಕೊರತೆಗಳನ್ನು ಪೂರೈಸಿ ಸರ್ವ ಗ್ರಾಮಗಳನ್ನು ಸಮತೋಲನಕ್ಕೆ ತರುವಂತೆ ಮಾಡುತ್ತಿದ್ದನು. ಗ್ರಾಮಗಳ ಸುಧಾರಣೆ ಆತನ ಪ್ರೇಮದ ಕಾರ್ಯವಾಗಿತ್ತು. ಅಪಾರ ಆರ್ಥಿಕ ಅಸಮಾನತೆಯನ್ನು ನಿವಾರಿಸುತ್ತಿದ್ದನು. ಈ ಕಾರ್ಯ ಇಂದಿನ ಪಾಂಚವಾರ್ಷಿಕ ಯೋಜನಗಳಿಂದಲೂ ಸಾಧ್ಯವಾಗುತ್ತಿಲ್ಲ. ಇಂತಹ ಒಂದು ಮಹಾಕಾರ್ಯವನ್ನು ಆ ರುದ್ರದೇವನು ಮಾಡುತ್ತಿದ್ದನೆಂದರೆ ಆತನ ಆ ಮಹಾಕ್ರಿಯಾ ಶೀಲ ನಿಲವು ಎಂತಹದು, ಕ್ರಿಯಾಸಿದ್ಧಿ ಎಂತಹದು ಎಂಬುದನ್ನು ಊಹಿಸಲು ಸಾಧ್ಯವಿಲ್ಲದಂತಿದೆ. ಆತನ ಅಂತಹ ಯೋಜನೆಯೆಂದರೆ ಕೃಷಿ ಕೈಗಾರಿಕೆಗಳು. ಇವುಗಳಿಂದ ಸಂಪನ್ಮೂಲಗಳನ್ನು ಹೆಚ್ಚಿಸುತ್ತಿದ್ದನು. ಪ್ರಧಾನವಾಗಿ ಕೃಷಿ ವೃತ್ತಿಯವರನ್ನು ಮನ್ನಿಸುತ್ತಿದ್ದಂತೆ ಕೈಗಾರಿಕೆಯ ಉಪವೃತ್ತಿಕಾರರನ್ನು ಮನ್ನಿಸುತ್ತಿದ್ದನು. ಎಲ್ಲರಲ್ಲಿ ಉದ್ಯಮಾಸಕ್ತಿಯನ್ನು ಅಭಿವೃದ್ಧಿಗೊಳಿಸುತ್ತಿದ್ದನು. ಸುವ್ಯವಸ್ಥಿತವಾಗಿ ನಡೆವಂತೆ ಪ್ರಾಮಾಣಿಕವಾಗಿ ವರ್ತಿಸುವಂತೆ ಏರ್ಪಡಿಸಿದ್ದನು. ಅಲ್ಲದೆ ಎಲ್ಲರೂ ರೋಗರುಜಿನಗಳಿಗೆ ಒಳಗಾಗಿ ಬಳಲದಂತೆ ಮಾಡುತ್ತಿದ್ದನು. ಅಷ್ಟಕ್ಕೂ ಅದಕ್ಕೆ ಗಮನಿಸದೆ ಭೋಗಾತಿಶಯದಿಂದ ರೋಗಿಗಳಾದವರಿಗೆ ತಕ್ಕ ಚಿಕಿತ್ಸೆಯನ್ನು ಮಾಡುತ್ತಿದ್ದನು. ತನ್ನ ಕ್ಷೇತ್ರದಲ್ಲಿ ಆರೋಗ್ಯಧಾಮವೊಂದನ್ನಿರಿಸಿದ್ದನು. ಮತ್ತು ಗ್ರಾಮಾಂತರಗಳಿಗೆ ಹೋಗಿ ಗ್ರಾಮೀಣ ರೋಗಿಗಳಿಗೆ ಔಷಧಿಗಳನ್ನು ಕೊಟ್ಟು ಬರುವಂತೆ ರುದ್ರಗಣರನ್ನು ವೈದ್ಯರನ್ನಾಗಿ ತಯಾರಿಸಿದ್ದನು. ಮಿಗಿಲಾಗಿ ತಾನೂ ಔಷಧಿಗಳನ್ನೀಯುತ್ತಿದ್ದನು.

"ತ್ವಾ ದತ್ತೇಭೀ ರುದ್ರ ಶಂತಮೇಭಿಃ
ಶತಂ ಹಿಮಾ ಅಶೀಯ ಭೇಷಜೇಭಿಃ ।
ವ್ಯಸ್ಮದ್ವೇಷೋ ವಿತರಂ ವ್ಯಂಹೋ
ವ್ಯಮೀ ವಾಶ್ಚಾತಯಸ್ವಾ ವಿಷೂಚಿಃ ॥"-ಋಗ್ವೇದ

ರುದ್ರನೆ, ನೀನು ಕರುಣಿಸಿದ ಅತ್ಯಂತ ಗುಣಕಾರಿಯಾದ ಸುಖಕರವಾದ ಔಷಧಿಗಳಿಂದ ನಾವು ನೂರು ವರುಷ ಜೀವಿಸುವಂತಾಗಲಿ. ನಮ್ಮ ದ್ವೇಷಗಳನ್ನು ದುಃಖಗಳನ್ನು ದೂರಮಾಡು. ಬಂದ ಬೇನೆಗಳನ್ನು ಬೇಗ ಹೋಗುವಂತೆ ಸಗು ! ಎಂದು ರೋಗಿಗಳು ಪ್ರಾರ್ಥಿಸುತ್ತಿದ್ದರು. ಅವರ ಪ್ರಾರ್ಥನೆಯಂತೆ ಉತ್ತಮ ಔಷಧಿಗಳನ್ನಿತ್ತು ರೋಗಮುಕ್ತರನ್ನಾಗಿಸುತ್ತಿದ್ದನು. ಆರ್ಯರು ತಮ್ಮ ದ್ವೇಷವನ್ನು ದೂರಮಾಡು ಎಂದು ಕೇಳಿಕೊಳ್ಳುವುದರಿಂದ ಅವರು ದ್ರಾವಿಡ ದ್ವೇಷಿಗಳಾಗಿದ್ದರೆಂಬುದು ಸ್ಪಷ್ಟವಾಗುತ್ತದೆ. ಅಂತೆಯೇ ಅವರು.

"ಆತೇ ಪಿತರ್ಮರುತಾಂ ಸುಮ್ಮಮೇತು
ಮಾ ನಃ ಸೂರ್ಯಸ್ಯ ಸಂದೃಶೋಯುಯೋಥಾಃ ।
ಅಭಿನೋವೀರೋ ಅರ್ಥತಿ ಕ್ಷಮೇಥಾಃ
ಪ್ರಜಾಯೇಮಹಿ ರುದ್ರ ಪ್ರಜಾಭಿಃ ॥-ಋಗ್ವೇದ

ಮರುತ್ತುಗಳ ತಂದೆಯಾದ ಓ ರುದ್ರನೆ. ಮರುತ್ತರನ್ನು ಕರುಣಿಸಿರುವಂತೆ, ನಿನ್ನ ಕೃಪೆ ನಮಗೂ ಆಗಲಿ. ನಮ್ಮನ್ನು ಸೂರ್ಯನ ಸಂದರ್ಶನದಿಂದ ದೂರ ಮಾಡಬೇಡ. ಚಿದಾದಿತ್ಯನಾದ ನಿನ್ನ ಬೆಳಕು ನಮಗಿಲ್ಲದಂತೆ ಮಾಡಬೇಡ. ಜ್ಞಾನಹೀನರನ್ನಾಗಿಸಬೇಡ. ನಿನ್ನ ದೀಕ್ಷೆ ಗುರು ದೀಕ್ಷೆಯನ್ನು ಕರುಣಿಸಿ ಜ್ಞಾನಿಗಳನ್ನಾಗಿಸು. ಮರುತ್ತರಂತೆ ನಮಗೂ ಪಿತನಾಗು. ನಾವು ನಿನ್ನ ಶಿಷ್ಯರಾಗಿ ಪ್ರಜರಾಗಿ ಬಾಳಿ ಬೆಳೆಯುತ್ತೇವೆ. ವೀರಧರ್ಮಿಯಾದ ಓ ರುದ್ರನೆ, ನಮ್ಮನ್ನು ಕ್ಷಮಿಸುವವನಾಗು !

ಇದರಿಂದ ಶ್ರೀರುದ್ರ ಶಿವಾಚಾರ್ಯನು ಮರುದ್ಗಣರಿಗೆಲ್ಲ ಶಿವದೀಕ್ಷಾ ಸಂಸ್ಕಾರವನ್ನು ಕರುಣಿಸಿ ಗುರು ತಂದೆಯಾಗಿದ್ದನೆಂಬುದು ಸ್ಪಷ್ಟವಾಗುತ್ತದೆಯಲ್ಲದೆ, ವೈರಿಗಳಾದ ಆರ್ಯರೂ ಸಹ ಶ್ರೀರುದ್ರ ಶಿವಾಚಾರ್ಯನ ಪ್ರಭಾವಕ್ಕೊಳಗಾಗಿ ನಮಗೂ ಗುರುಕಾರುಣ್ಯವನ್ನು ಕೊಡೆಂದು ಕೇಳಿಕೊಂಡಿರುವುದು

ಇನ್ನೂ ಮತ್ತೂ ಶ್ರೀರುದ್ರನ ಶಿವಾಚಾರ್ಯತ್ವ ಸುಸ್ಪಷ್ಟವಾಗಿದೆ. ಅಲ್ಲದೆ ನಿನ್ನ ಪ್ರಜರಾಗಿರುವೆವೆಂದು ಕೇಳಿರುವುದರಿಂದ ನಿನ್ನ ಧಾರ್ಮಿಕ ಪ್ರಜರಾಗಿರುವೆಂಬುದು ದಿಟಪಟವಾಗುತ್ತದೆ. ಅಂದರೆ ವೀರಧರ್ಮ ಸಂತತಿಯವರಾಗುವೆವೆಂದು ಶಿವಾಚಾರ ಧರ್ಮಕ್ಕೆ ಸೇರುವೆವೆಂದು ಅರ್ಥವಾಗುತ್ತದೆ. ಶಿವದೀಕ್ಷೆಯಿಂದ ಪ್ರಕೃಷ್ಟ ಜನನ (ದ್ವಿಜತ್ವ) ವುಂಟಾಗುತ್ತದೆ. ಗುರು ಸಂತತಿಗೆ ಗುರುವಂಶಕ್ಕೆ ಸೇರುವವರಾಗಲು ಇಷ್ಟಪಟ್ಟುದು ಅಭಿವ್ಯಕ್ತಿಯಾಗಿದೆ. ಅರಸರ ಆಳ್ವಿಕೆಗೆ ಸೇರಿದವರೆ ಪ್ರಜರೆಂದಲ್ಲ ; ಧಾರ್ಮಿಕ ದೀಕ್ಷೆಗೆ ಒಳಪಟ್ಟ ಶಿಷ್ಯರೂ ಗುರುಧರ್ಮ ಸಾಮ್ರಾಜ್ಯದ ಪ್ರಜರಾಗಿ ಬಾಳಿ ಬೆಳಗುವರು. ಹೀಗೆ ಬಾಳಿ ಬೆಳಗುವಿಕೆ ವೀರಶೈವ ಸಂಸ್ಕೃತಿ ! ಇದನ್ನು ಕೊಟ್ಟವರು ವೀರಶೈವ ಶಿವಾಚಾರ್ಯರು.

"ಮಾ ತ್ವಾ ರುದ್ರ ಚಕ್ರುಧಾಮಾ ನಮೋಭಿರ್ಮಾ
ದುಷ್ಟುತೀ ವೃಷಭ ಮಾಸರೂತಿ ।
ಉನ್ನೋ ವೀರಾನ್ ಅರ್ಪಯ ಭೇಷಜೇ ಭಿಷಕ್ತಮಂ
ತ್ವಾ ಭಿಷಜಾಂ ಶ್ರುಣೋಮಿ ॥" ಋಗ್ವೇದ.

ಈ ಋಗ್ವೇದ ಮಂತ್ರದಿಂದ ಶ್ರೀರುದ್ರದೇವನ ಸರ್ವೋನ್ನತೆ ಚಿಕಿತ್ಸ ಜಾಣ್ಮೆಯು ಆತನ ಭಿಷಕ್ತಮತ್ವವು ವೆಗ್ಗಳಿಸುತ್ತಿವೆ. ಆತನ ಆ ಭಿಷಕ್ತಮ ಬೃಹತ್ಕಲೆ ಮುಂದೆ ಆದಿರೇಣುಕರ ಶಿಷ್ಯನಾದ ಅಗಸ್ತ್ಯನವರವಿಗೂ ಅಖಂಡ ವಾಗಿ ಸಾಗಿಬಂದಿತು. ಅಗಸ್ತ್ಯನು ವೈದ್ಯತಂತ್ರದಲ್ಲಿ ಅವರ ರುದ್ರನಂತಿದ್ದನು. ಶ್ರೀರುದ್ರದೇವನು ಆರ್ಯರು ಮಾಡುತ್ತಿರುವ ಕ್ಷುದ್ರಕರ್ಮಗಳಿಗಾಗಿ ವಿಧಿಯಿಲ್ಲದೆ ಮುನಿಸುತ್ತಿದ್ದನಾದರೂ ಅವರ ಪ್ರಾಣ ಹರಣ ಮಾಡಲು ಮುನಿಯುತ್ತಿರಲಿಲ್ಲ. ಅವರ ಅವಗುಣಗಳಿಗಾಗಿ ಮುನಿಸಿದ್ದಿತು. ಅಂತೆಯೆ ಮುನಿಸಿದ್ದನು ; ಅಂದರೆ ಋಷಿಯಾಗಿದ್ದನು. ಋಷಿ ಮಾತ್ರವಲ್ಲ ಮಹರ್ಷಿಯಾಗಿದ್ದನು. "ವಿಶ್ವಾದಿಷೋ ರುದ್ರೋ ಮಹರ್ಷಿಃ" ಆತನಿಂದ ಮುನಿ ಶಬ್ದ ಋಷಿಯತಿ ಜ್ಞಾನಿ ಈ ಅರ್ಥ ಗಳನ್ನು ತಳೆದು ಖ್ಯಾತವಾಗಿದೆ. ಅಂದಿನ ಮರ್ತ್ಯರು ರುದ್ರನನ್ನು ಮೃತ್ಯುವಿ ನಿಂದ ನಮ್ಮನ್ನು ರಕ್ಷಿಸು ಎಂದು ಪ್ರಾರ್ಥಿಸುತ್ತಿದ್ದರು. 'ಮೃತ್ಯೋರ್ಮಾಂಪಾಹಿ' 'ತಮೋವಿವಿಪಿತಾ ಅತಿಮೃತ್ಯುಮೇಲಿ' ಈ ಬೇಡಿಕೆ ಈ ಪಡೆವಿಕೆಗಳನ್ನು ನೆನೆಯ ಬೇಕು. ರುದ್ರನೇ ಎಲ್ಲ ಬಲ್ಲಿದನು, ಎಲ್ಲರಿಗಿಂತ ಉನ್ನತನೂ ಉತ್ತಮನೂ

ಆಗಿದ್ದನು. ಅದರಿಂದ ಆತ ವೃಷಭ ವಾಚ್ಯನಾಗಿರುವನು. ವೈದ್ಯವಲ್ಲಿಯೂ ಸರ್ವೋತ್ಕೃಷ್ಟನು. ಭಿಷಜರಲ್ಲಿ ಭಿಷಕ್ತಮನು. ವೈದ್ಯವೃಷಭನು, ವೀರ ವೃಷಭನು; ತ್ಯಾಗ ವೃಷಭನು ; ಯೋಗವೃಷಭನು : ಕೃಷಿವೃಷಭನು ; ರುದ್ರಗಣ ಮರುದ್ಗಣ ವೃಷಭನು, ವಿಶ್ವವೃಷಭನು, ದೇವ ವೃಷಭನು ಆಗಿದ್ದನು. ಧರ್ಮವೃಷಭನೂ ಆಗಿದ್ದನು. ರುದ್ರನು ವೃಷಭ ಸಂಸ್ಕೃತಿಗೆ ಮುಮ್ಮೊದಲಿಗನು. ಆತನು ಲೋಕಹಿತಕ್ಕಾಗಿ ಭಿಷಕ್ತಮನಾಗಿದ್ದನು. ರುದ್ರ ಜಗದ್ಗುರು ನಿರಂತರ ನಿರೋಗಿ ನಿರ್ಯೋಗಿಯಾಗಿದ್ದನು. ಆತನಿಗೆ ಮುಪ್ಪಿರಲಿಲ್ಲ. ತರುಣನಾಗಿಯೇ ತೇಜಸ್ವಿಯಾಗಿಯೇ ಇರುತ್ತಿದ್ದನು. ನಿರಾಮಯನೂ ಆಗಿದ್ದನು.

"ಶ್ರೇಷ್ಠೋ ಜಾತಸ್ಯ ರುದ್ರ ಶ್ರಿಯಾಸಿ
ತವಸ್ತಮಸ್ತವಸಾಂ ವಜ್ರಬಾಹೋ ।
ಪರ್ಷಿಣಃ ಪಾರಮಂಹಸಃ ಸ್ವಸ್ತಿ ವಿಶ್ವಾ
ಅಭೀತಿ ರಪಸೋ ಯುಯೋಧಿ" -ಋಗ್ವೇದ.

ರುದ್ರನೆ, ನಿನ್ನ ಶ್ರೀಮಂತವಾದ ಯಶಸ್ವಿನಿಂದ ನೀನು ಸರ್ವಶ್ರೇಷ್ಠನು. ತಪಸ್ವಿಗಳಲ್ಲಿ ತಪಸ್ತಮನು. ಬಾಹುಬಲದಲಿ ವಜ್ರಬಾಹು, ದುಃಖದಿಂದ ಬಂದು ನಿನ್ನನ್ನು ಮರೆಹೊಕ್ಕಿದ್ದೇವೆ. ನಮ್ಮನ್ನು ನಿಡಿದಾದ ನೋವಿನಿಂದ ಪಾರುಮಾಡು, ನಿಡುಗಾಲ ನಲಿವಂತೆ ಮಾಡು. ನಮ್ಮ ಎಲ್ಲ ಬಗೆಯ ಶಾರೀರಕವ್ಯಾಧಿಗಳನ್ನು ನಾಶಮಾಡು ; ಎಂದು ಪ್ರಾರ್ಥೇಯತೆಯಿಂದ ಪ್ರಾರ್ಥಿಸುತ್ತಿದ್ದರು. 'ಗಾಥಪತಿ ಮೇಧಪತಿ' ಯಾದ ರುದ್ರನನ್ನು ಗಾಯಕರು ಯಾಜ್ಞಿಕರು ವೈದಿಕರು ಎಲ್ಲರೂ ಮೊರೆಯಿಡುತ್ತಿದ್ದರು. ಆತನು ಗಾನಗಾರರಿಗೆ ಒಡೆಯನೂ ಮಂತ್ರಗಳಿಗೆ ಒಡೆಯನೂ ಆಗಿದ್ದಂತೆ ಯಜ್ಞಗಳಿಗೆ ಒಡೆಯ ನಾಗಿದ್ದನು. ಆತನದು ನಿಸರ್ಗಯಾಗಾಧಿಪತ್ಯ ! ಆತ ಮಂತ್ರಗಾನ ಪ್ರವೀಣ. ಶ್ರೀರುದ್ರ ಶಿವಾಚಾರ್ಯನ ಹಸ್ತ ತ್ಯಾಗಹಸ್ತ, ಅಭಯಹಸ್ತ : ಪರುಷಹಸ್ತ "ಕ್ವಸ್ಯತೇ ರುದ್ರ ಮೃಳಯಾಕುರ್ ಹಸ್ತೋಯೋ ಅಸ್ತಿ ಭೇಷಜೋಜಲಾಷ" ಆತನ ಆಶ್ರಯ ಘನಕ್ಕೆ ಘನವಾಗಿತ್ತು; ಅಪರಿವರೆನ್ನದೆ ಸರ್ವನಿಷ್ಠವಾಗಿತ್ತು. ಆತನ ಆ ಹೃದಯ ಶ್ರೀಮಂತಿಕೆ ಯೋಗ ಶ್ರೀಮಂತಿಕೆ ಹೇಳಲಳವಲ್ಲ.

ಮಕ್ಕಳು ತಂದೆ ತಾಯಿಗಳ ಬಳಿಗೆ ಬರುವಂತೆ ಬರುತ್ತಿದ್ದರು ಬಾಳು ಬದುಕುಗಳಿಂದ ಬಡವರಾದವರು. ಅಷ್ಟೇ ಅಲ್ಲ ಮನು ಮನು ವಂಶಜರು ಮರುತ್ತರು ಎಲ್ಲರೂ ಬರುತ್ತಿದ್ದರು.

"ಯಾ ವೋ ಭೇಷಜಾ ಮರುತಃ ಶುಚೀನಿ
ಯಾ ಶಂತಮಾ ವೃಷಗೊಯಾ ಮಯೋಭು ।
ಯಾನಿ ಮನುರವೃಣೀತಾ ಪಿತಾನಸ್ತಾ
ಶಂಚ ಯೋಶ್ಚ ರುದ್ರಸ್ಯ ವಶ್ಮಿ ॥ -ಋಗ್ವೇದ

ಶ್ರೀರುದ್ರಭಿಷಕ್ತಮನಲ್ಲಿಗೆ ಮನು ಬಂದು ಚಿಕಿತ್ಸೆಯನ್ನು ಪಡೆದು ಹದುಳಿಗನಾಗಿದ್ದನು. ಅದರಂತೆ ಆತನ ತನುಜಾದಿಗಳು ರುದ್ರನಲ್ಲಿಗೆ ಬಂದು ಸುಖಪ್ರದವೂ ಶಕ್ತಿಶಾಲಿಯೂ ಶುಚಿಯೂ ಭೀಕರ ರೋಗ ಶಮನಕಾರಿಯೂ ಆದ ಔಷಧ ಚಿಕಿತ್ಸೆಯನ್ನು ಪಡೆಯುತ್ತಿದ್ದರು. ಅಲ್ಲದೆ ನಮಗೆ ಯಜ್ಞಗಳಲ್ಲಿ ಭಾಗ ಸಿಕ್ಕುವಂತೆ ಮಾಡೆಂದು, ಕಷ್ಟ ಕಾರ್ಪಣ್ಯಗಳಲ್ಲಿ ನಮ್ಮನ್ನು ಕೈ ಬಿಡದಿರೆಂದು, ನಮ್ಮನ್ನು ಕರುಣಿಸಿ ನಮ್ಮ ಪಾಪಗಳನ್ನು ಪರಿಹರಿಸೆಂದು, ನಮಗೆ ಸುಬುದ್ಧಿಯನ್ನುಂಟುಮಾಡೆಂದು ಸುಖ ಸಂಪತ್ತುಗಳನ್ನು ಕೊಡೆಂದು ಮಂತ್ರೋಪದೇಶವನ್ನೀಯೆಂದು, ಅಂತರಿಕ್ಷದಿಂದುಂಟಾಗುವ ಆಧಿ ದೈವಿಕ ತಾಪಗಳನ್ನು ತೊಡೆದು ಹಾಕೆಂದು, ಅಂತೆಯೇ ಅಧ್ಯಾತ್ಮಿಕ ಆದಿಭೌತಿಕ ತಾಪಗಳನ್ನು ತೊಲಗಿಸೆಂದು ಬಗೆಬಗೆಯಾಗಿ ಬಂದು ಬೇಡಿಕೊಳ್ಳುತ್ತಿದ್ದರು. ಇದರಿಂದ ಆತನ ಪ್ರಜಾಪ್ರೇಮಿತ್ವ ಪುರೋಗಾಮಿತ್ವಗಳು ಪ್ರಕಾಶಿತವಾಗುತ್ತವೆ. ಸರ್ವರ ಹಿತಕ್ಕಾಗಿ ಆತನು ಶ್ರಮಿಸುತ್ತಿದ್ದನು ಹತ್ತು ಹಲವು ಬಗೆಗಳಲ್ಲಿ ! ನೀತಿ ರೀತಿಗಳಿಂದ ಮಾನವೀಯ ಮೌಲ್ಯವನ್ನು ಉಳಿಸಿ ಬೆಳೆಸಲು ನಿರಂತರ ಪ್ರಯತ್ನಿಸುತ್ತಿದ್ದನು. ಆತನು ಕವಿಯಾಗಿ ಕಲಾಬಿದನಾಗಿ ಕ್ರತು ಶಕ್ತಿವಂತನಾಗಿ, ಕಾಂತದರ್ಶಿಯಾಗಿ ಕಳಾವಂತನಾಗಿ ಮಿಗಿಲಾಗಿ ಶಿವಾಚಾರ–ವಿಚಾರವಂತನಾಗಿ, ನಿಯಂತೃವಾಗಿ, ನಿಯಮ ನಿರತಿ ನಿಯಾಮಕನಾಗಿ, ನಿಷ್ಪನ್ನಮತಿವಂತನಾಗಿ, ನಿರತಿಶಯ ನಿಯೋಗಿಯಾಗಿ, ನಿರಪೇಕ್ಷನಾಗಿ, ನಿರಾಳ ಮನಸ್ಕನಾಗಿ, ನಿರೋಧ ನಿಪುಣನಾಗಿ, ವಿಜಿತ ಶತೃಷಡ್ವರ್ಗವುಳ್ಳವನಾಗಿ, ನಿರ್ಭಯನಾಗಿದ್ದನು. ಶ್ರೀರುದ್ರ ಶಿವಾಚಾರ್ಯನು ಆಹಾರ ಆರ್ಥಿಕ ನೈತಿಕ ಸಾಂಘಟಿಕ ವೈದ್ಯಕ ಕಾಷ

ಣಿಕ ಸಾಂಸ್ಕೃತಿಕ ಮೊದಲಾಗಿ ಯಾವ ಯೋಜನೆಯನ್ನೇ ಮಾಡಲಿ ಯಶಸ್ವಿಯಾಗಿ ಮಾಡುತ್ತಿದ್ದನಲ್ಲದೆ ಯಶಸ್ಸಿಗಾಗಿ ಮಾಡುತ್ತಿರಲಿಲ್ಲ. ಪರಾರ್ಥಕ್ಕಾಗಿ ಕೈಕೊಳ್ಳುತ್ತಿದ್ದನಲ್ಲದೆ ಸ್ವಾರ್ಥಕ್ಕಾಗಿ ಕೈಕೊಳ್ಳುತ್ತಿರಲಿಲ್ಲ. ಸಂಕುಚಿತ ಸೀಮಿತ ಮನೋಭಾವವಿರಲಿಲ್ಲ. ವಿಶಾಲವಾಗಿ ವಿಕಾಸಗೊಳ್ಳುವಂತೆ ವಿನ್ಯಾಸಗೊಳಿಸುತ್ತಿದ್ದನು. ಅರೆ ಕೊರೆಯಾಗಿ ಕೈಬಿಡುತ್ತಿರಲಿಲ್ಲ. ದೂರ ಚಿಂತನ ಮಂಥನ ಮಾಡಿ ಕೈಕೊಳ್ಳುತ್ತಿದ್ದನು. ಹೆಣ್ಣು ಗಂಡೆಂಬ ಪಶು ಪ್ರಾಣಿಯೆಂಬ ಭೇದ ಭಾವವಿಲ್ಲದೆ ಮಣಿಹಗಳನ್ನು ಮಾಡುತ್ತಿದ್ದನು. ಯಾರಿಂದಾಗದ ಬದುಕನ್ನೇ ಮಾಡುತ್ತಿದ್ದನೆಂಬುದಕ್ಕೆ ತ್ರಿಪುರ ಸಂಹಾರವೇ ಸತ್ಯಸಾಕ್ಷಿ ! ಕಾಡ ಕವಿತೆಗಳ ಸಾಕಿ ಕೃಷಿ ಕೃತ್ಯವನ್ನು ವಿಶಾಲ ಕ್ಷೇತ್ರದಲ್ಲಿ ಪ್ರಾರಂಭಿಸಿದ್ದುದೂ ಅದು ಭಾರತಾದ್ಯಂತ ಇಂದಿಗೂ ಮಾನವ ಜೀವನ ಮೂಲವೃತ್ತಿಯಾಗಿ ಮುಂದುವರಿಯುತ್ತಿರುವುದು ಮತ್ತೊಂದು ಉತ್ತಮೋತ್ತಮ ಸಾಕ್ಷಿ ! ತನ್ನ ಯೋಜನೆಗಳ ಸಹಾಯ ಸಹಕಾರ ನೀಡಿ ದುಡಿಯುತ್ತಿರುವವರ ವ್ಯಕ್ತಿತ್ವವನ್ನು ಪ್ರಭಾವವನ್ನು ಮೊಟಕುಗೊಳಿಸುತ್ತಿರಲಿಲ್ಲ. ಪ್ರತಿಯಾಗಿ ಪ್ರಬಲ ಪ್ರೋತ್ಸಾಹವನ್ನೀಯುತ್ತಿದ್ದನು. ಯಾಂತ್ರಿಕ ಯಾವ ಸೌಕರ್ಯಗಳಿಲ್ಲದ ಕಾಲದಲ್ಲಿ ರುದ್ರಗಣ ಮರುದ್ಗಣ ರುದ್ರಕನ್ನೆಯರುಗಳೇ ಜೀವಂತ ಉಪಕರಣಗಳಾಗಿದ್ದರು ; ಸಹಕಾರಿಗಳಾಗಿದ್ದರು. ಆಗ ಯಾರೂ ಯಾವ ಬಗೆಯ ಸ್ವಾತಂತ್ರ್ಯಕ್ಕೆ ಹೋರಾಡಬೇಕಾಗಿರಲಿಲ್ಲ. ಅದು ಎಲ್ಲರಿಗೂ ಸಹ ಸಿದ್ಧವಾಗಿದ್ದಿತು, ಯಾರಲ್ಲಿಯೂ ಸ್ವಾತಂತ್ರ್ಯದ ದುರುಪಯೋಗವಾಗುತ್ತಿರಲಿಲ್ಲ. ಎಲ್ಲರೂ ಶ್ರೀರುದ್ರದೇವನ ಪ್ರಭಾವದಿಂದ ಭಯ ಭಕ್ತಿಯುಳ್ಳವರಾಗಿ ಮಾನಿಸತ್ವದ ಹೊಲಬಿನಲ್ಲಿಯೇ ಹೋಗುತ್ತಿದ್ದರು. ಪರಸ್ಪರ ಸಾಮರಸ್ಯಭಾವವಿದ್ದಿತು ; ಸತ್ ಸಾಹಸ ಮನೋಭಾವವಿದ್ದಿತು. ರುದ್ರದೇವನಿಂದ ಪ್ರೇರಿತರಾಗಿ ಪದ್ಧತಿವಿಡಿದು ಕ್ರಾಂತಿಕಾರಿಗಳಾಗಿದ್ದರು ; ಕಾಂತಿಧಾರಿಗಳಾಗಿದ್ದರು. ಕ್ರಿಯಾಶೀಲರಾಗಿದ್ದರು. ಉಳಿದವರಲ್ಲಿ ಉದ್ಯಮಶೀಲತೆಯನ್ನು ಅಭಿವೃದ್ಧಿಗೊಳಿಸುತ್ತಿದ್ದರು . ಉತ್ಸುಕರನ್ನಾಗಿಸುತ್ತಿದ್ದರು. ಹೀಗೆ ಸರ್ವ ಕ್ಷೇತ್ರಗಳಲ್ಲಿ ಸಕ್ರಮವಾಗಿ ಸಾಗುತ್ತಿದ್ದ ರುದ್ರಗಣ ಮರುದ್ಗಣ ಮತ್ತು ವೀರಗಣರನ್ನು ಸಕ್ರಮವಾಗಿ ಸಮರ್ಥವಾಗಿ ನಿರ್ವಹಿಸುವ ನಿರುಪಮ ಶಕ್ತಿ ಶ್ರೀರುದ್ರದೇವನದು. ಇದರ ಮೂಲ ರಹಸ್ಯವೇನೆಂದರೆ ಇದಕ್ಕೆ ರುದ್ರದೇವನ ಹಣದ ಶಕ್ತಿ ಕಾರಣ

ವಾಗಿರಲಿಲ್ಲ ; ಗುಣದ ಶಕ್ತಿ ಕಾರಣವಾಗಿದ್ದಿತು. ಅಂದಿನ ಕೊಡಕೊಳ್ಳುವಿಕೆ (ವ್ಯಾಪಾರ) ವಸ್ತು ಅಥವಾ ಧಾನ್ಯಗಳ ವಿನಿಮಯದಿಂದ ನಡೆಯುತ್ತಿದ್ದಿತಲ್ಲದೆ ದ್ರವ್ಯದಿಂದಲ್ಲ. ಇದರಿಂದಾಗಿ ಆರ್ಥಿಕ ಆಶೆ ಆಮಿಷಗಳು ನೈತಿಕ ಅಸ್ತವ್ಯಸ್ತಗಳು ನಡೆಯುತ್ತಿರಲಿಲ್ಲ. ವಿಶ್ವಾಧಿಪನಾದ ರುದ್ರಲೋಕದಲ್ಲಿ ಅಧಿಕಾರಗಳು ಉದ್ಯಮಗಳ ಹೊಣೆಗಾರಿಕೆಗಳು ಅರ್ಥನಿಷ್ಠವಾಗಿರಲಿಲ್ಲ. ರುದ್ರಗಣ ಮರುದ್ಗಣ ವೀರಗಣರಿಗೆ ಯಾವ ಆಸ್ತಿ ಪಾಸ್ತಿಗಳಿರಲಿಲ್ಲ. ಅವರೆಲ್ಲರೂ ಶಿವಾಚಾರನಿರತರು. ಶಿವಸಂಸ್ಕೃತಿ ಪ್ರಸಾರಕರು. ಶಿವಾಚಾರ್ಯ ವೃತ್ತಿ ನಿಷ್ಠರು ಪ್ರತಿಫಲದ ಏರ್ಪಾಟಿಲ್ಲದ ಕಾರಣ ಪ್ರತಿಫಲಾಕಾಂಕ್ಷೆಯಿರಲಿಲ್ಲ. ಇದ್ದಿದ್ದರೆ ಜನರ ಕಷ್ಟ ಸುಖಗಳನ್ನೂ ಅವರು ಲಕ್ಷಿಸುತ್ತಿರಲಿಲ್ಲ. ಸಾಂಸ್ಕೃತಿಕ ಪ್ರಸಾರ ಸೇವೆ ಸರಾಗವಾಗಿ ಸಾಗುತ್ತಿರಲಿಲ್ಲ. ಇದಕ್ಕೆ ಇಂದಿನ ರಾಷ್ಟ್ರದ ಅಭಿವೃದ್ಧಿ ಯೋಜನೆಗಳೇ ಸಾಕ್ಷಿ ! ಇವು ಆರ್ಥಿಕನಿಷ್ಠ ಅಧಿಕಾರ ನಿಷ್ಠವಾಗಿರುವುದರಿಂದ ಯೋಜನೆಗಳು ಯೋಚನೆಗಳಿಗೆ ಕಾರಣಗಳಾಗಿವೆ. ಆರ್ಥಿಕ ಆಶೆ ಲಂಚಕ್ಕೆ ಮೂಲವಾಗಿದೆ ; ಅಧಿಕಾರದಾಶೆ ಪಕ್ಷಾಂತರಕ್ಕೆ ಮೂಲವಾಗಿದೆ. ಈ ಯಾವ ಅವಾಸ್ತವ ಅಸ್ತವ್ಯಸ್ತಗಳು ರುದ್ರದೇವನ ಕಾಲದಲ್ಲಿರಲಿಲ್ಲ. ಅವರಿಗೆ ಸಂಸ್ಕೃತಿ ಮೂಲವಾದಶಿವಾಚಾರವೊಂದೇ ಸಕಲ ಸಂಪತ್ತಾಗಿತ್ತು.

## ಪಶುಪತಿ ಸಂಸ್ಕೃತಿ–ವಿಶ್ವ ಮಹತಿ !

ವೀರಶೈವ ಸಂಸ್ಕೃತಿಗೆ ಶ್ರೀರುದ್ರ ಶಿವಾಚಾರ್ಯ ಕೊಡುಗೆ ಪಶುಪತಿತನದ ಕೊಡುಗೆ ! ಧರ್ಮ ಮೂಲದ ಆದರ್ಶ ಕೊಡುಗೆ ! ಆದ್ಯ ಕೊಡುಗೆ ! ವೀರಶೈವ ಸಂಸ್ಕೃತಿಗೆ ಮಾತ್ರವಲ್ಲ, ವಿಶ್ವ ಸಂಸ್ಕೃತಿಗೆ ಮೂಲ ಕೊಡುಗೆ ! ಮಾನವೀಯ ಧರ್ಮ ವಿಕಾಸಕ್ಕೂ ಇದು ಮೂಲವಾಗಿದೆ. ಪಶುಪತಿ ಶ್ರೀರುದ್ರನೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ರುದ್ರ ಪಶುಪತಿಯೆಂದೇ ಖ್ಯಾತನಾಮನಾಗಿದ್ದಾನೆ. ಈತನ ಪಶುಪತಿತನಕ್ಕೆ ಇಮ್ಮೊಗಗಳಿವೆ. ಮೊದಲಿನದು ಪಶು ಪ್ರಾಣಿಗಳ ಸಂಬಂಧ. ಎರಡನೆಯದು ಪಶುಗಳಂತಿರುವ ಪ್ರಜೆಗಳ ಸಂಬಂಧ. ಇವೆರಡನ್ನು ಶ್ರೀರುದ್ರನು ಅನನ್ಯ ಸಾಧಾರಣವಾಗಿ ನಡೆಸುವಲ್ಲಿ ಅತ್ಯಂತ ಯಶಸ್ವಿಯಾಗಿದ್ದಾನೆ. ನಾಗರಿಕತೆಯ ಹಂತಕ್ಕೆ, ಸಾಂಸ್ಕೃತಿಕ

ಮಟ್ಟಕ್ಕೆ ಬಾರದ ಮೊದಲು ಪಶು ಪ್ರಾಣಿಗಳ ಮಾನವನ ಜೀವನಗಳಲ್ಲಿ ಯಾವ ಅಂತರವಿರಲಿಲ್ಲ. ನಾಲ್ಕು, ಎರಡು ಕಾಲುಗಳಿರುವ ಅಂತರವೆ ಅಂತರ ! ಇಂತಿರುವ ಪಶು ಪ್ರಾಣಿಗಳಲ್ಲಿ ಮಾನವಪ್ರಾಣಿಗಳಲ್ಲಿ ಸಮಾನ ಸಂಬಂಧವನ್ನಿಟ್ಟುಕೊಂಡು, ಸಮಾನ ಸ್ನೇಹ (ಪ್ರೇಮ)ವನ್ನುಟ್ಟುಕೊಂಡು, "ಶಂನೋ ಅಸ್ತು ದ್ವಿಪದೇ ಶಂ ಚತುಷ್ಪದೇ ।" ಎಂಬೀ ಶ್ರುತಿ ಸದ್ಭಾವವನ್ನು ಮೊತ್ತ ಮೊದಲಿಗೆ ನಡೆವಳಿಕೆಯಲ್ಲಿ ತಂದ ಕೀರ್ತಿ ಶ್ರೀರುದ್ರ ಶಿವಾಚಾರ್ಯನದು. ಇದು ಆತನ ಪ್ರಥಮ ಶಿವಾಚಾರ. ಇದೇ 'ಪಾಶುಪತ ಶಿವಾಚಾರ'ವೆಂದು ಪ್ರಖ್ಯಾತವಾಯಿತು ; ಆಗಿದೆ. ಇದು ಆತನ ಬಾಳಿನೊಂದಿಗೆ ಬೆರೆತು ಹೋಗಿತ್ತು. ಕವಲಿಸಲು ಅಳವಿಲ್ಲ ಅಂದು ಇಂದು ಮುಂದು ! ಹಸುಗಳನ್ನು ಮೊದಲು ಮಾಡಿಕೊಂಡು ಹುಲಿ ಸಿಂಹ ಕೊನೆಯಾಗಿ ಎಲ್ಲ ಪ್ರಾಣಿಗಳು ಅವನಲ್ಲಿ ತಮ್ಮ ಜಾತಿ ವೈರವನ್ನು ಬಿಟ್ಟು ಮೈತ್ರಿ ಭಾವದಿಂದ ಕೂಡಿ ಆಡಿ ಬಾಳು ತ್ತಿದ್ದವು ; ಬಾಳಿದ್ದವು. ಎಲ್ಲ ಪಶು ಪ್ರಾಣಿಗಳು ಮಾನವರಂತೆ ಮಿಗಿಲಾಗಿ ರುದ್ರಗಣ-ಮರುದ್ಗಣರಂತೆ ಶ್ರೀರುದ್ರದೇವನಿಗೆ ತೀರ ಹತ್ತಿರದವಾಗಿದ್ದವು. ತನ್ನಂತೆ ಅವುಗಳನ್ನು ಕಾಣುವ ಕಾಪಾಡುವ ಅನುಕಂಪ ಹೃದಯ ಶ್ರೀ ರುದ್ರ ದೇವನದಾಗಿದ್ದಿತು. ಅಷ್ಟೇ ಅಲ್ಲ, "ಯತ್ರ ಜೀವಸ್ತತ್ರ ಶಿವಃ" ಎಂಬ ಭಾವ ಆತನದಾಗಿತ್ತು. ಯಾವ ಪ್ರಾಣಿಯದಾಗಲಿ ಅದರ ಜೀವ ಆ ಪರಶಿವ ಸ್ವರೂಪವೆಂಬ ಸದ್ಭಾವ ಶ್ರೀರುದ್ರನದಾಗಿತ್ತು. ಇದು ಆತನದೇ ಆದ ಸದ್ಭಾವ ಶ್ರೀಮಂತಿಕೆ ! ಆತನದೇ ಆದಸುವಿಶಾಲ ಸಂಸ್ಕೃತಿ ! ಆ ಎತ್ತರದ ನಿಲುವಿಗೆ ನಿಲುಕಿದವರು ಇಂದಿಗೂ ಬೇರೆ ಯಾರೂ ಇಲ್ಲ. ಒಂದು ವೇಳೆ ನುಡಿದಿರಬಹುದು: ನಡೆಯಲ್ಲಿ ತಂದವನೊಬ್ಬನೆ! ಆತನ ಆ ಸಂಸ್ಕೃತಿಯನ್ನು ಪೂರ್ಣವಾಗಿ ಆಚರಣೆಯಲ್ಲಿ ತಂದವರಿಲ್ಲೆಂದರೆ ತೆಗೆದು ಹಾಕುವ ಮಾತೇನಲ್ಲ. ಅವನಿಂದೀಚೆಗೆ ಮಾನವ ಜೀವನಕ್ಕೆ ಉಪಯುಕ್ತವಾದ ಪಶು ಪ್ರಾಣಿ ಗಳನ್ನು ಸಾಕುವ ರೂಢಿ ಸಾರ್ವತ್ರಿಕವಾಗಿ ಬಂದಿರುತ್ತದೆ. ಅಪಾಯ ವನ್ನುಂಟು ಮಾಡುವ ಕ್ರೂರ ಪ್ರಾಣಿಗಳನ್ನು ಸಾಕುವವರಾರಿರುವರು ? ಸಾಯಿಸುವವರಿರುವರು. ಬೋಧಿಸುವವರಿರುವರು. ಸಾಧಿಸಿ ಸಾಕು ವವರು ತೀರ ವಿರಳ. ಈ ವಿರಳರಲ್ಲಿ ಸರ್ಕಸ್ಸಿನವರಿರುವರು. ಇವರ

ಉದ್ದೇಶವೇ ಬೇರೆ: ಇವರ ವರ್ತನವೇ ಬೇರೆ. ಇವರು ಭೀತಿಯಿಟ್ಟು ಸ್ವಾರ್ಥಕ್ಕೆ ಸಾಕುವುದಲ್ಲದೆ, ಪ್ರೀತಿಯಿಟ್ಟು ಸಹಜಕ್ಕೆ ಸಾಕುವವರಲ್ಲ ; ಸ್ವಾಭಾವಿಕ ಸಂಸ್ಕೃತಿ (ಧರ್ಮ)ಗಾಗಿ ಸಾಕುವವರಲ್ಲ. ಇದಲ್ಲದೆ ಸಾತ್ವಿಕ ಪ್ರಾಣಿಗಳನ್ನು ಕೊಂದು ತಿನ್ನುವ ಅಮಾನುಷ ಕೃತ್ಯದವರು ಅಂದೂ ಇದ್ದರು, ಇಂದೂ ಇರುವರು. ಅಂದಿನ ಆರ್ಯರು ಪವಿತ್ರ ಯಜ್ಞಗಳಲ್ಲಿ ಕೊಂದು ತಿನ್ನುತ್ತಿದ್ದ ವಿಷಯವನ್ನು ಮರೆಮಾಚುವಂತಿಲ್ಲ. ಇದನ್ನು ಪ್ರತಿಭಟಿಸಿದವನು ಶ್ರೀ ರುದ್ರನು. ಇದು ಭಾರತೀಯ ಪ್ರಪ್ರಥಮ ಕ್ರಾಂತಿ ! ಇದರಲ್ಲಿ ಶ್ರೀರುದ್ರ ದೇವನಿಗೆ ವಿಜಯಶ್ರೀ ಆರ್ಯರು ಶ್ರೀರುದ್ರನಿಗೆ ಶರಣಾಗಿ ಬಾಳಿದರು. ಇದು ಋಗ್ವೇದದಲ್ಲಿ ಮತ್ತು ರುದ್ರಸೂಕ್ತದಲ್ಲಿ ಉಲ್ಲಿಖಿತವಾಗಿದೆ. "ಮೊನೋ ವಧಿ ರುದ್ರಮಾ ಪರಾದಾ, ಮಾತೇ ಭೂಮ ಪ್ರಸಿತೌ ಹೀಳಿತಸ್ಯ !"— ಋಗ್ವೇದ. "ಮಾ ನೋ ಮಹಾಂತಮುತ ಮಾನೋ ಅರ್ಭತಂ...." ಶ್ರೀರುದ್ರ ಸೂಕ್ತ.

ಸಿಂಧೂ ತೀರದ ಭೂ ಉತ್ಖನನದಲ್ಲಿ ದೊರೆತ ಹರಪ್ಪಾ-ಮೊಹೆಂಜೊ ದಾರೊ ನಗರಗಳಲ್ಲಿ ದೊರೆತ ಪಶುಪತಿ ರುದ್ರ ಚಿತ್ರದಲ್ಲಿ ಶ್ರೀ ರುದ್ರದೇವನು ಹುಲಿ ಮೊದಲಾದ ಕ್ರೂರ ಪ್ರಾಣಿಗಳನ್ನು ಮುದ್ದು ಮಕ್ಕಳಂತೆ ಲಾಲಿಸುವಿಕೆ ಯನ್ನು ಕಾಣಬೇಕು ಅದೇನು ಆ ಪ್ರೀತಿ, ಅದೇನು ಆ ಸಂಬಂಧ ! ಮಾನವ ಮಾನವರಲ್ಲಿ ಇರಲಿಕ್ಕಿಲ್ಲ ಆ ಪ್ರೀತಿ, ಆ ಸಂಬಂಧ ; ಆ ಆನಂದ ! ಶ್ರೀರುದ್ರದೇವನೆ ಪಶು ಪ್ರಾಣಿಗಳ ಆರೈಕೆಯನ್ನು ಮಾಡುತ್ತಿದ್ದನೊ, ಆಗುಹೋಗುಗಳನ್ನು ನೋಡಿಕೊಳ್ಳುತ್ತಿದ್ದನೊ ಎನ್ನಿಸುತ್ತದೆ—ಆ ಚಿತ್ರವನ್ನು ನೋಡಿದರೆ ! ಹುಲಿಯಂತೂ ಮಗುವಿನಂತೆ ಶ್ರೀರುದ್ರದೇವರ ತೋಳ ಮೇಲೇರಿ ಮುಖಕ್ಕೆ ಮುಖ ಕೊಡುತ್ತಿರುವಂತೆ ನಿಂತಿದೆ. ಪಶುಪತಿ ರುದ್ರನೊ ಹಸುವಿನ ತಲೆಕೊಂಬುಗಳೆರಡನ್ನೇ ತನ್ನ ಶಿರೋಭೂಷಣವನ್ನಾಗಿಸಿ ಕೊಂಡು ಕುಳಿತಿದ್ದಾನೆ. ಆತನ ಸುತ್ತಲೂ ಬಳಸಿಕೊಂಡು ಬಗೆ ಬಗೆಯ ಪಶುಪ್ರಾಣಿಗಳಿವೆ ; ಜೊತೆಗೆ ರುದ್ರಗಣರೂ ಹಲವರಿದ್ದಾರೆ. ಪ್ರಪಂಚದಲ್ಲಿ ಆತನಂತೆ ಪಶುಸಂಗೋಪನ ಮಾಡಿದವರಿನ್ನೊಬ್ಬರಿಲ್ಲೆನಿಸುತ್ತದೆ. ಶ್ರೀ ರುದ್ರದೇವನೇ ಆ ಪಶುಪ್ರಾಣಿಗಳ ಜನಕ ಜನನಿಯರೆನ್ನುವಷ್ಟು ಭಾವ ಬರುತ್ತದೆ. ಅಷ್ಟೊಂದು ಅನ್ಯೋನ್ಯಭಾವ ; ಅನ್ಯೋನ್ಯ ಜೀವನ.

ಮುಕ್ತ ಆಹಾರ, ಮುಕ್ತ ವಿಹಾರ ! ಮತ್ತು ಮುಕ್ತ ಆ ವಾಸ ! ಇಂದಿನ ಪಶು ಪ್ರಾಣಿ ಸಂಗ್ರಹಾಲಯದಂತೆ ಅವುಗಳಿಗೆ ಆ ರುದ್ರನ ನಿವಾಸ ಸೆರೆಮನೆಯಾಗಿರಲಿಲ್ಲ. ಅವುಗಳದೇ ಮನೆಯಾಗಿದ್ದಿತು. ಅವುಗಳೇ ಮಕ್ಕಳಾಗಿದ್ದವು. ಅವುಗಳ ಮೇಲೆ ಆತನಿಗೆ ಅಷ್ಟೊಂದು ಹೃದಯ, ಅಷ್ಟೊಂದು ದಯ; ಅಷ್ಟೊಂದು ಅಂತಃಕರಣ. ಅಷ್ಟೊಂದು ಆತ್ಮೀಯ ರಕ್ಷಣೆ ! ಅದರಿಂದ ಆತನು ಸಾವಿರಾರು ಹಸುಗಳನ್ನು ಪೋಷಿಸಿದ್ದನು; 'ಪಶುಪತಿ'ಯೆಂಬ ಪ್ರತಿಷ್ಠೆಯ ಪ್ರಶಸ್ತಿಯನ್ನು ಪಡೆದಿರುವನು. ಇದು ಅತನ ವಾಚ್ಯಾರ್ಥವಾಗಿ ಮಾತ್ರ ಉಳಿಯಲಿಲ್ಲ. ಆತನ ಅಂತಃಸಾಧನೆಯಿಂದ, ಅಂತರ್ಮುಖಿಯಾಗಿರುವುದರಿಂದ ಕಾಯಕರಣೇಂದ್ರಿಯ ಒಡೆಯನೆನಿಸಿ ಲಕ್ಷ್ಯಾರ್ಥಕ್ಕೆ ದಾರಿಯನ್ನು ಮಾಡಿಕೊಟ್ಟನು. ಅಷ್ಟೇ ಅಲ್ಲದೆ ರುದ್ರಗಣ ಮರುದ್ಗಣ ಮೊದಲಾದವರ ಒಡೆಯನಾಗಿದ್ದನು. ಪಶುಗಳಂತೆ ವರ್ತಿಸುವ ಮಾನವರಿಗೆ ಬೋಧಿಸಿ ಅವರನ್ನು ಸಂಸ್ಕರಿಸಿ ಅಂದರೆ ತನ್ನದೇ ಆದ ಪಾಶುಪತ ಧರ್ಮಾಚರಣೆಯಲ್ಲಿರಿಸಿ ಪಾಶುಪತಾಚಾರ್ಯನೆನಿಸಿದನು. ಪಾಶುಪತ ಧರ್ಮವೆಂದರೆ ಶಿವಾಚಾರ ಧರ್ಮ; ಶಿವಾಚಾರಧರ್ಮಿಯಾಗಿ ಶಿವಾಚಾರ್ಯನೂ ಎಂದೆನಿಸಿದನು. ಪ್ರಸಾದ ಚಿಂತಾಮಣಿಯೆಂಬ ಗ್ರಂಥದಲ್ಲಿ 'ಶಿವ, ಈಶ್ವರ, ಮಹೇಶ್ವರ, ರುದ್ರರೆಂಬ ನಾಲ್ವರಾಚಾರ್ಯರು ಅನಾದಿಯಲ್ಲಿ, ಪಂಚಾಕ್ಷರ ಚತುರಕ್ಷರ ತ್ರ್ಯಕ್ಷರ ದ್ವ್ಯಕ್ಷರ ಏಕಾಕ್ಷರರೆಂಬ ಪಂಚಾರ್ಯರು ಕೃತಯುಗದಲ್ಲಿ, ರೇಣುಕ, ದಾರುಕ, ಶಂಭುಕರ್ಣ ಗೋಕರ್ಣರೆಂಬ ಆಚಾರ್ಯರು ತ್ರೇತಾಯುಗದಲ್ಲಿ, ಪಂಚವಕ್ತ್ರ, ಚತುರ್ವಕ್ತ್ರ, ತ್ರಯವಕ್ತ್ರ, ದ್ವಿವಕ್ತ್ರ, ಏಕವಕ್ತ್ರರೆಂಬ ಆಚಾರ್ಯರು ದ್ವಾಪರದಲ್ಲಿ, ರೇವಣಸಿದ್ಧೇಶ್ವರ ದೇವರು, ಮರುಳಸಿದ್ಧೇಶ್ವರ ದೇವರು, ಏಕೋರಾಮಯ್ಯ ದೇವರು, ಪಂಡಿತಾರಾಧ್ಯರು ಎಂಬ ಆಚಾರ್ಯರು ಕಲಿಯುಗದಲ್ಲಿ....ಎಂದು ಮುಂತಾಗಿ ಆಚಾರ್ಯ ಸಂಪ್ರದಾಯವನ್ನು ಉಲ್ಲೇಖಿಸಲಾಗಿದೆಯೆಂದು ಶ್ರೀ ಕಪಟರಾಳ ಕೃಷ್ಣರಾಯರು ತಾವು ಬರೆದ "ಕರ್ನಾಟಕ ಸಂಸ್ಕೃತಿಯ ಸಂಶೋಧನ" ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ. ಅನಾದಿ ಶಿವಾಚಾರ್ಯನಾದ ಶ್ರೀ ರುದ್ರದೇವನು ಕೇವಲ ಪಶು ರಕ್ಷೆಯನ್ನಲ್ಲ ವನ, ವನಿತೆ, ಔಷಧಿ ಗಣ, ಜನ ಮೊದಲಾಗಿ ಏನೆಲ್ಲವನ್ನೂ ರಕ್ಷಣೆ ಮಾಡಿ, ಪಶುಪತಿಯಾಗಿದ್ದಂತೆ ಕ್ಷೇತ್ರಪತಿ, ವನಪತಿ, ವೃಕ್ಷಪತಿ, ಔಷಧಪತಿ, ಪಕ್ಷಿಪತಿ, ಸತ್ವಪತಿ

ಮುಂತಾಗಿ ಅನಂತ ಪತಿತನವುಳ್ಳವನ್ನಾಗಿದ್ದನು. ಹೀಗೆ ಸರ್ವ ಸಂರಕ್ಷಣೆಯ ಸಂಸ್ಕೃತಿಯನ್ನು ಅನಾದಿಯಲ್ಲಿಯೇ ಅಭಿವೃದ್ಧಿಸಿಕೊಂಡಿದ್ದನು ; ಆದರ್ಶನಾಗಿ ರುವನು.

ವ್ಯಷ್ಟಿಯಾಗಿ ಅಂದರೆ ವೈಯುಕ್ತಿಕವಾಗಿ ಜೀವಿಸುವುದೊಂದು ಹೆಚ್ಚಲ್ಲ ; ಸಮಷ್ಟಿಯಾಗಿ ಅಂದರೆ ಸಾಮೂಹಿಕವಾಗಿ ಜೀವಿಸುವುದೇ ಹೆಚ್ಚು. ಇದರಿಂದ ಮದ ಮತ್ಸರಗಳು ಲೋಭ ಮೋಹಗಳು ಕೋಪತಾಪಗಳು ತೊಲಗುತ್ತವೆ. ಮಾನವ ಜೀವನ ಪ್ರಗತಿಯಾಗಿ ಮಹಾನುಭಾವತ್ವ ಮೈಗೂಡಿ ಬರುತ್ತದೆ. ವಿಶ್ವೈಕ್ಯ ಮನೋಭಾವವುಂಟಾಗುತ್ತದೆ. ಶ್ರೀರುದ್ರ ಶಿವಾಚಾರ್ಯನಿಗೆ ಇವುಂಟಾಗಿದ್ದವು. ಅಂತೆಯೇ ಆತನನ್ನು ವಿಶ್ವಾಧಿಕ-ವಿಶ್ವಾಧಿಪ-ವಿಶ್ವರೂಪ ಎಂದು ಆರ್ಯರು ಕರೆದರು.

ದಯೆ ಧರ್ಮದ ಮೂಲವೆಂಬುದು ದಿಟ. ಆದರೆ ಅದು ಆಚರಣೆಯಲ್ಲಿ ಬಾರದಿದ್ದರೆ ಅದು ಧರ್ಮವೆನಿಸದು ; ಅನಿಸಿದರೆ ಜಡಧರ್ಮವೆನಿಸಬಲ್ಲುದು ; ಎನಿಸುತ್ತದೆ. ಆಚಾರ್ಯರು ಇದನ್ನು ಮನ್ನಿಸುವುದಿಲ್ಲ. ದಯಾಚರಣೆಯೇ ಇವರ ಮೂಲ ಧಾತು. ಇದನ್ನೇ ಕಾರುಣ್ಯವೆಂದು ಕರೆಯುತ್ತಾರೆ. ಕರುಣ ರಸ ಪ್ರಧಾನರು ಶಿವಾಚಾರ್ಯರು. ಕರುಣಾಸಾಗರರು. ಅನುಕಂಪ ದಾಗರರು. ನೂತನ ಶಿವಾಚಾರ್ಯರಲ್ಲಿ ಒಬ್ಬರಾದ ಸೊನ್ನಲಿಗೆಯ ಸಿದ್ಧರಾಮ ತಂದೆಯು, ಭೂತಾನುಕಂಪ ಹೃದಯಿಯಾಗಿದ್ದನು. 'ಭೂತಂಗಳೊಳನು ಕಂಪ, ಆತನ ಬಾಳಿನ ಜೀವಾಳವಾಗಿದ್ದಿತು. ಪಶುಪಕ್ಷಿ ಮೊದಲಾದ ಪ್ರಾಣಿ ಗಳೂ ಸಹ ನೀರ್ಗುಡಿದು ನಲಿಯಲೆಂದು ಕೆರೆ ಬಾವಿಗಳನ್ನು ಕಟ್ಟಿಸುತ್ತಿದ್ದನು. ಮನೆಗಳಲ್ಲಿ ಗುಡಿಸಿಲುಗಳಲ್ಲಿ ಹೆಚ್ಚು ತಾವವಿಲ್ಲದ ಬಡಬಗ್ಗರು ಬಂದು ನೆಲಸಿ ನಲಿಯಲೆಂದು ಮಂದಿರಗಳನ್ನು ಕಟ್ಟಿಸುತ್ತಿದ್ದನು. ಇವು ಸಾರ್ವಜನಿಕರ ನಿವಾಸಗಳೆಂಬುದನ್ನು ಯಾರೂ ಮರೆಯಬಾರದು. ಜಡದೇವರುಗಳಿಗೆ ಮಾತ್ರ ಅವು ಆವಾಸಗಳಾಗಿರಲಿಲ್ಲ. ಮೂಲ ಉದ್ದೇಶ ಜಂಗಮ ದೇವರು ಗಳಿಗಾಗಿತ್ತು. ಮನೆ ಮಠಗಳಿಲ್ಲದ ಅನಾಥರಿಗೆ ಮುಖ್ಯವಾಗಿ ಮಂದಿರಗಳು ಆವಾಸಗಳಾಗಿದ್ದವು. ಸಿದ್ಧರಾಮ ತಂದೆ ಮಂದಿರಗಳನ್ನು ನಿರ್ಮಾಣ ಮಾಡುವ ಗುಡ್ಡರಿಗೆಲ್ಲ ತಾನೇ ಶಿವದೀಕ್ಷಾ ಸಂಸ್ಕಾರವನ್ನು ಮಾಡಿ-ಮಾಡುತ್ತ ಶಿವಾಚಾರ್ಯನಾಗಿದ್ದನು. ರೇವಣಸಿದ್ಧ ಶಿವಾಚಾರ್ಯರು ಆತನ ದೀಕ್ಷಾಗುರುಗಳು;

ಕೇದಾರ ಗುರು (ಶಿವಾಚಾರ್ಯ)ಗಳು ಆತನ ಅನುಗ್ರಹ ಗುರುಗಳು ಆಗಿದ್ದರು. ಹೀಗೆ ಆಚಾರ ಸಹಿತ ದಯೆ ಕರುಣೆ ಅನುಕಂಪಗಳು ಶಿವಾಚಾರ್ಯರು ವೀರ ಶೈವಕ್ಕೆ ಮಾತ್ರವಲ್ಲ ಭಾರತ ವಿಶ್ವ ಸಂಸ್ಕೃತಿಗಳಿಗೆ ಕೊಟ್ಟ ಹಿರಿದಾದ ಕೊಡುಗೆ !

ಪಶುಪತಿ ರುದ್ರದೇವನ ಮಹಾಪಾಶುಪತ ಶಿವಾಚಾರ ಸಂಸ್ಕೃತಿಯ ಕೊಡುಗೆ ಸಾಮಾಜಿಕ ಆರ್ಥಿಕ ಮೊದಲಾದ ಅಭಿವೃದ್ಧಿಗೆ ಅತ್ಯಂತ ಅನು ವಾಯಿತು. ಪಶು ಸಂಗೋಪನದಿಂದ ಭಾರತದ ಭಾಗ್ಯೋದಯವಾಯಿತು. ಹಸುಗಳು ಎತ್ತುಗಳು ಹಿರಿದಾದ ಸಂಪತ್ತು. ಹಸುಗಳಿಂದ ಜೀವನದ ಮುಖ್ಯ ಆಹಾರವಾದ ಹಾಲು ಮೊಸರು ಬೆಣ್ಣೆ ತುಪ್ಪಗಳು ಉತ್ಪಾದಿತವಾದವು. ಮೂಲಭೂತ ವೃತ್ತಿಯಾದ ಮತ್ತು ಸಂಪನ್ಮೂಲವಾದ ಬೇಸಾಯ ಬೆಳೆದು ಬರಲು ಅನುವಾಯಿತು. ಪಾಶುಪತ ಧರ್ಮದಿಂದ ಶಿವಾಚಾರ ಸಂಸ್ಕೃತಿ ಸಮೃದ್ಧಿ ಗೊಂಡಿತು. ಆಚಾರ ವಿಚಾರಗಳು ನಡೆ ನುಡಿಗಳು ಶಿವವಾಗುವುದಕ್ಕಿಂತ ಬೇರೆ ಸಂಸ್ಕೃತಿಯಿಲ್ಲ; ಸತ್ಪ್ರಗತಿಯಿಲ್ಲ.ಜಗತ್ತಿನ ಜನತೆಯ ಸಂಪನ್ಮೂಲವನ್ನು ಸಮರ್ಥ ವಾಗಿ ಬಳಸಿಕೊಂಡು ಅಂದರೆ ಉಪಯೋಗಿಸಿಕೊಂಡು ಉತ್ಪಾದನೆಯನ್ನು ಉತ್ತಮಗೊಳಿಸಲು ಸಹಾಯವಾಯಿತು. ಸಾಮೂಹಿಕ ಜೀವನದಲ್ಲಿ ಸೇವೆ ಯಲ್ಲಿ ಎಲ್ಲರಿಗೂ ಉದ್ಯೋಗಾವಕಾಶವನ್ನು ಉಂಟು ಮಾಡುವಂತಾಯಿತು. ಜನದ ಜೀವನ ಆಹಾರ ಅರ್ಥಗಳಿಂದ ಸುಸೂತ್ರವಾಗಿ ಸಾಗುವಂತಾಯಿತು. ನಿರುದ್ಯೋಗ ಸಮಸ್ಯೆ ಬಹುಮಟ್ಟಿಗೆ ಇಲ್ಲದಂತಾಯಿತು. ಹಸಿವನ್ನು ಹಿಂಗಿಸಿ ಕೊಳ್ಳುವಂತಾಯಿತು. ಜೊತೆಗೆ ಪಾಶುಪತ ಶಿವಾಚಾರ ಧರ್ಮದಿಂದ ತ್ರಿಕರಣ ತ್ರಿವಿಧಾಂಗ ಶುದ್ಧಿಗೊಂಡು ಸಾಂಸ್ಕೃತಿಕವಾಗಿ ವೃದ್ಧಿಗೊಳ್ಳಲು ಸಹಾಯ ವಾಯಿತು. ಅರ್ಚನ ಅರ್ಪಣ ಅನುಭವಗಳು ಅಳವಡಲು ಅನುವಾಯಿತು. ಕ್ರಿಯಾಶೀಲತೆಯಿಂದ ಪ್ರಾಮಾಣಿಕತೆಗೆ ಸ್ಥಾನವೊದಗಿತು. ರುದ್ರದೇವನ ಈ ಮೂಲಭೂತ ಕೊಡುಗೆಯಿಂದ ಭಾರತ ಕೃಷಿ ಪ್ರಧಾನ ಮತ್ತು ಋಷಿ ಪ್ರಧಾನ ದೇಶವೆಂದೆನಿಸಿತು. ಈ ವಿಜ್ಞಾನ ಯುಗಕ್ಕೆ ಮುನ್ನ ಶ್ರೀ ರುದ್ರ ಶಿವಾಚಾರ್ಯ ಸಂಸ್ಕೃತಿಯಿಂದ ಭಾರತ ಸಾಮಾಜಿಕವಾಗಿ ಸಾಂಪತ್ತಿಕವಾಗಿ ಇದ್ದು ದರಲ್ಲಿಯೇ ಸಂತೃಪ್ತಿಕರವಾಗಿದ್ದಿತು. ಇಂದಿನ ಈ ವೈಜ್ಞಾನಿಕ ಕೃತಕ ಜೀವನ

ದಿಂದ ಅಭಾವಗಳು ಅಧಿಕವಾದವು. ಅತೃಪ್ತಿ ಅಶಾಂತಿ ಅನಿಶ್ಚಿತತೆಗಳು ಹೆಚ್ಚಿದವು. ನಿರುದ್ಯೋಗ ನಿಷ್ಕ್ರಿಯಾತ್ಮಕತೆ ಅನಾಚಾರ ಅತ್ಯಾಚಾರ ಭ್ರಷ್ಟಾಚಾರ ಬೆಳೆದು ನಿಂತವು ; ನಿಂತಿವೆ. ಕಿತ್ತು ತಿನ್ನುವ, ಕೊಲ್ಲುವ ಕಂಡಂತೆ ವರ್ತಿಸುವ ಹಳಿವ ಹುಸಿಯಾಡುವ ಅಸಹಕಾರ ಅಸಹನೆ ಅಬ್ಬರಗಳಿಂದ ಮಾನವೀಯ ಸಂಸ್ಕೃತಿ ಭಾರತದ ಪ್ರಗತಿ ಕುಸಿದು ಬಿದ್ದಿದೆ. ಎಲ್ಲರಲ್ಲಿ ಜಾತೀಯತೆ ಅಸಮಾನತೆ ಅನಿಷ್ಟತೆ ಅಭಿಚಾರ ಅಭಿಹತಿಗಳು ಅತಿಯಾಗಿವೆ. ವಿಷಯಾಸಕ್ತಿ ಮನೋರಂಜನ ರಕ್ತಿ ಮಿತಿಮೀರಿ ಜನಸಂಖ್ಯೆಯೊಡನೆ ಬಡತನ ಬಲವಾಗುತ್ತದೆ. ನೆಮ್ಮದಿ ನಮ್ಮುಗೆ ನಿಮ್ಮಲತೆಗಳಿಗೆ ನೆಲೆಯೆಲ್ಲಿದೆಯೊ ? ಲೆಕ್ಕಾಚಾರವಾಗಿ ಕೊಡಕೊಳ್ಳುವ ಶಕ್ತಿಯಿಲ್ಲದೆ ಕಳವು ಮೋಸ ವಂಚನೆ ಹುಸಿ ಹೆಚ್ಚಿವೆ. ಮಾರುಕಟ್ಟೆಗಳಲ್ಲಿ ಪರಿಶುದ್ಧವಾದ ಆಹಾರ ಪದಾರ್ಥಗಳ ಅಭಾವ ಹೆಚ್ಚಿದೆ ; ಇತರ ಪದಾರ್ಥಗಳಲ್ಲಿ ಪ್ರಾಮಾಣಿಕತೆ ಅಲಭ್ಯವಾಗಿದೆ. ದೇಶೀಯತೆ ದಿವಾಳಿಯಾಗಿದೆ. ಉಡಿಗೆ ತೊಡಿಗೆಗಳಲ್ಲಿ ದೇಶೀಯ ಸಂಸ್ಕೃತಿ ಸಂಹೃತಿಗೊಂಡಿದೆ. ಓಟುಗಳ ಅವಾಂತರದಿಂದ ಹಳ್ಳಿಯವರ ಬಾಳು ಇನ್ನೂ ಬೀಳಾಗಿದೆ. ಇಷ್ಟಕ್ಕೆ ಏನು ಕಾರಣವೆಂದರೆ ಆಚಾರದ ಅಭಾವವೆಂದು ಬೇರೆ ಹೇಳಬೇಕಾಗಿಲ್ಲ. ಆಚಾರದ ಬೆಳವಣಿಗೆಗೆ ಬೇಕಾದ ಸಂಸ್ಕಾರ ಕೊಡುವ ಶಿವಾಚಾರ್ಯರ ಅಭಾವವೆಂದು ಹೇಳೋಣವೆ ? ಇಲ್ಲವೆ ಶಿವಾಚಾರ–ಶಿವಾಚಾರ್ಯರ ಮೌಲ್ಯ ಅಭಾವವೆಂದು ಹೇಳೋಣವೆ ? ಉಭಯ ಅಭಾವವೆಂದು ಒಪ್ಪಿಕೊಳ್ಳೋಣವೆ ? 'ಕಾಲಾಯ ತಸ್ಮೈ ನಮಃ' ಎಂದು ತೆಪ್ಪಗಿರುವುದೇ ಲೇಸೆನಿಸುತ್ತದೆ. ರಾಜ ಪ್ರಧಾನ ರಾಜ್ಯವಲ್ಲ ; ಪ್ರಜಾಪ್ರಧಾನ ರಾಜ್ಯ ತಾನೆ ? ಜೊತೆಗೆ ಮಂತ್ರಿ ಪ್ರಧಾನ ರಾಜ್ಯ ತಾನೆ ? ಇಂದಿನ ಈ ಧಾರ್ಮಿಕ ಕ್ಷೇತ್ರದಲ್ಲಿಯೂ ಇಂತೆಯೆ ! ಹೊತ್ತು ಹೆತ್ತವರು ಬೇಕಿಲ್ಲ ; ಮೊತ್ತ ಮಿಗಿಲುಳ್ಳವರು ಬೇಕು. ಸ್ಥಿತಿ ಗತಿಗಳನ್ನು ಮೃತಿಗೊಳಿಸುವವರು ಬೇಕು. ಇಂದಿನ ಈ ಸಾಮಾಜಿಕ ಧಾರ್ಮಿಕ ಕ್ಷೇತ್ರಗಳಲ್ಲಿ ಇದೊಂದು ಮೋಡಿಮಾಟ, ಮೋಡಿಯಾಟ ; ಗಾರುಡಿ ನೋಟ ! ಮತ್ತು ಬಸವಳಿವ ಚಲ್ಲಾಟ ! !

ಇದಕ್ಕೆಲ್ಲ ಕಾರಣ ವೀರಶೈವ ಸಾಮಾಜಿಕ ಸಾಂಸ್ಕೃತಿಕ ಪೂರ್ಣ ಪ್ರಜ್ಞೆಯಿಲ್ಲದಿರುವುದೆ ಕಾರಣವೆಂದು ದೃಢವಾಗಿ ಹೇಳಬಹುದಾದರೂ ಜೊತೆಗೆ

ಈಚೆಗೆ ಹಲವರು ನೂತನೀಕರಣದ ಭ್ರಾಂತಿವಿಡಿದು ಬುನಾದಿಯಿಲ್ಲದ ಸಾಮಾಜಿಕ ಭವನವನ್ನು ಕಟ್ಟಲೆಳಸುತ್ತಿದ್ದಾರೆ. ಸಮಾಜ ಸೃಜಕರು ಸನಾತನ ಶಿವಾಚಾರ್ಯರೆಂಬ ಸಹಜ ಭಾವವಿಲ್ಲದೆ ಅಸಹಜವಾಗಿ ಅವಾಸ್ತವವಾಗಿ ಸೃಜಕತ್ವದ ಬಗೆಗೂ ನೂತನೀಕರಣಕ್ಕೆ ಕೊನೆ ಮೊದಲಿಲ್ಲದ ಕೈವಾಡವನ್ನು ಮಾಡುತ್ತಿದ್ದಾರೆ. ತಮ್ಮ ಅನುಚಿತ ಅಭಿಪ್ರಾಯವನ್ನೆ ಒಪ್ಪದವರನ್ನು ಸೃಜಕರನ್ನಾಗಿಸಲು ವ್ಯರ್ಥ ಸಾಹಸಕ್ಕಿಳಿದಿದ್ದಾರೆ. ಇದು ದಿಟಕ್ಕೂ ವಿಫಲ ವಿಪರ್ಯಾಸ ! ಹಾಗು ಆಭಾಸ !

## ಅನಾದಿ ವೀರಶೈವ, ಅನಾದಿ ರುದ್ರದೇವ.

"ಅನಾದಿವಿಡಿದು ಬಂದ ಗುರು ಅನಾದಿವಿಡಿದು ಬಂದ ಲಿಂಗ-ಜಂಗಮ ;........ ಅನಾದಿವಿಡಿದು ಬಂದ ಪ್ರಸಿದ್ಧವಾದ ವೀರಶೈವಾಚಾರ ಸಂಪತ್ತು. ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ !"—ತೋಂಟದ ಸಿದ್ಧಲಿಂಗಯತಿ.

ಆದಿಯಿಂದ ಆಚೆಯದು ಅನಾದಿ ! ಭಾರತೀಯ ಇತಿಹಾಸಕ್ಕೆ ಆದಿ ಋಗ್ವೇದ. ಭಾರತೀಯ ಸಾಹಿತ್ಯಕ್ಕೂ ಅದೇ ಆದಿಯಾಗಿದೆ. ಅದಕ್ಕೆ ಹಿಂದಿರುವುದು ಅನಾದಿ. ಆ ಅನಾದಿಯಲ್ಲಿದ್ದಿತು ಮಹಾಪಾಶುಪತ ಶಿವಾಚಾರ ! ಶ್ರೀ ರುದ್ರದೇವ ಅದರ ಸ್ರಷ್ಟಾರ ; ಅದರ ದ್ರಷ್ಟಾರ !

"ಅನಾದ್ಯಂತಂ ಪರಂ ರುದ್ರಂ ನ ದೇವಾ ಋಷಯೋ ವಿದುಃ !''-ಮಹಾಭಾರತ.

"ಓಂ ದೇವಾ....ರುದ್ರಮಪೃಚ್ಛನ್, ಕೋಭದಾನ್ ಇತಿ ; ಸೋಽಬ್ರವೀತ್-ಅಹಮೇಕಃ ಪ್ರಥಮಮಾಸಂ ವರ್ತಾಮಿ ಚ ಭವಿಷ್ಯಾಮಿ ಚ....!''
—ಅಥರ್ವ ಶಿರ ಉಪನಿಷತ್.

ರುದ್ರ ಅನಾದಿ, ಅನಂತ, ಪರ ಅಂದರೆ ಶ್ರೇಷ್ಠ. ಅನಾದಿ ರುದ್ರದೇವನನ್ನು ಆದಿ ದೇವತೆಗಳು-ಋಷಿಗಳು ಸರಿಯಾಗಿ ತಿಳಿಯಲಾಗಿಲ್ಲ ಎಂದು ಮಹಾಭಾರತ ಹೇಳಿದರೆ, ದೇವತೆಗಳ ಕೇಳಿಕೆಗೆ, ರುದ್ರನು ಪ್ರಥಮದಲ್ಲಿ ಅಂದರೆ ಪೂರ್ವದಲ್ಲಿ ನಾನೊಬ್ಬನೆ ಇದ್ದೆ, ಇಂದು ಇರುತ್ತೇನೆ ಮುಂದೆಯೂ ಇರುವೆನು; ಎಂದು ಅಥರ್ವ ಶಿರೋಪನಿಷತ್ತು ಅಭಿವಾದಿಸಿದೆ. ಇದೇ ಅಭಿಪ್ರಾಯವನ್ನು ಶ್ವೇತಾಶ್ವತರೋಪನಿಷತ್ತು ಎತ್ತಿ ಹಿಡಿದಿದೆ.

"ಯೋ ದೇವಾನಾಂ ಪ್ರಭವಶ್ಚೋದ್ಭವಶ್ಚ
ವಿಶ್ವಾದಿಪೋ ರುದ್ರೋ ಮಹರ್ಷಿಃ ।
ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ
ಸನೋ ಬುದ್ಧ್ಯಾ ಶುಭಯಾ ಸಂಯುನಕ್ತು ॥''

ಶ್ರೀ ರುದ್ರನು ದೇವಪ್ರಭವನು, ಉದ್ಭವ ಕಾರಣನು, ವಿಶ್ವಾಧಿಪನು, ಮಹರ್ಷಿಯು ಆಗಿರುವನು. ಪೂರ್ವದಲ್ಲಿ ಹಿರಣ್ಯಗರ್ಭನಾದ ಅಜನ ಜನಿತಕ್ಕೆ ಕಾರಣನು ಆಗಿರುವನು. ಅಂತಹ ಆ ಶ್ರೀ ರುದ್ರನು ನಮಗೆಲ್ಲ ಲೇಸನ್ನುಂಟು ಮಾಡಲಿ ಎಂದು ಅನಾದಿತನವನ್ನು ದೇವಾದಿಗಳ ಕಾರಣತ್ವದಿಂದ ಖಚಿತ ಗೊಳಿಸಿದೆ ಶ್ರುತಿ ! ಆ ಅನಾದಿರುದ್ರನೇ ಪಾಶುಪತ ಶಿವಾಚಾರ ಧರ್ಮದ ಶಿವಾಚಾರ್ಯನು ಅಂತೆಯೇ ಆತನು ಆ ಮಹಾಪಾಶುಪತಾಚಾರ್ಯನೆಂದು ಉಕ್ತನಾಗಿದ್ದಾನೆ.

''ಅಹಂ ಪಶುಪತಿರ್ನಾಮ ಮದ್ಭಕ್ತಾ ಯೇ ಚ ಮಾನವಾಃ ।
ಸರ್ವೇ ಪಾಶುಪತಾಜ್ಞೇಯಾ ಭಸ್ಮದಿಗ್ಧತನು ರುಹಾಃ ।
ರಕ್ಷಾರ್ಥಂ ಮಂಗಲಾರ್ಥಂ ಚ ಪವಿತ್ರಾರ್ಥಂ ಚ ಭಾಮಿನಿ ।
ಲಿಂಗಾರ್ಥಂ ಚೈವ ಭಕ್ತಾನಾಂ ಭಸ್ಮದತ್ತಂ ಮಯಾ ಪುರಾ ॥

—ಮಹಾಭಾರತ ; ಅನುಶಾಸನಪರ್ವ.

''ಕಥಿತಾಃ ಶ್ರೀ ರುದ್ರೇಣೈವ ಲಿಂಗಸ್ಯಾರ್ಚನ ಸೂಚಿತಾಃ ।
ಸಂತಿ ರುದ್ರೇಣ ಕಥಿತಾಃ ಶಿವಧರ್ಮಾಃ ಸನಾತನಾಃ ॥''-ಸ್ಕಂದ.
''ರುದ್ರೇಣ ದೀಕ್ಷಿತೋ ಭೂತ್ವಾ ಸ್ಕಂದಃ ಶಿವ ಸಮೋಽಭಿವತ್ ।
ಶಿವಾಚಾರ ರಹಸ್ಯಸ್ಯ ಪಾತ್ರತಾಂ ಪ್ರಥಮಂ ಗತಃ ॥''

—ಆದಿತ್ಯಪುರಾಣ.

ಇವೇ ಮೊದಲಾದ ಪ್ರಮಾಣಗಳಿಂದ ಲಿಂಗವಂತ ಪಾಶುಪತವು ಲಿಂಗವಂತ ಪಾಶುಪತರು ಉಂಟಾದವೆಂಬುದನ್ನು ನಿಸ್ಸಂದೇಹವಾಗಿ ಅರಿತುಕೊಳ್ಳಬಹುದಾಗಿದೆ. ಆ ಲಿಂಗವಂತ ಪಾಶುಪತಕ್ಕೆ 'ಶಿವಾಚಾರ' ಎಂದು ಮತ್ತೊಂದು ಹೆಸರು. ಆ ಪಾಶುಪತ ಶಿವಾಚಾರವನ್ನೆ ಅತ್ಯಾಶ್ರಮವೆಂದು, ಪಾಶುಪತವೆಂದು, ಶಾಂಭವವೆಂದು, ಶಿರೋವ್ರತವೆಂದು ಹೇಳಲಾಗುತ್ತದೆ. ಇದನ್ನು ಚಂದ್ರಜ್ಞಾನಾಗಮವು ಹೀಗೆ ನಿರೂಪಿಸಿದೆ :

"ಭವತಾ ಹಿ ಪುರಾ ಪ್ರೋಕ್ತಾಂ ಕರುಣಾಯಂತ್ರಿತಾತ್ಮನಾ
ವೀರಶೈವೀಯ ಧರ್ಮಾಸ್ತು ಸರ್ವಧರ್ಮೋತ್ತಮಾ ಇತಿ
ತಾನದ್ಯ ಶ್ರೋತು ಕಾಮ್ಯಾಸ್ಮಿ ಪ್ರಸನ್ನೋ ಬ್ರೂಹ್ಯಶೇಷತಃ ॥"

ದೇವಿಯು, ಮಹಾದೇವನೆ, ಸರ್ವಧರ್ಮೋತ್ತಮಗಳಾದ ವೀರಶೈವೀಯ ಧರ್ಮಗಳನ್ನು ಪೂರ್ವದಲ್ಲಿ ನೀನು ನಿರೂಪಿಸಿದೆ. ಅವನ್ನೇ ಇಂದು ಮರಳಿ ಕೇಳಬಯಸಿರುವೆ. ಪ್ರಸನ್ನನಾಗಿ ಅವನ್ನೆಲ್ಲ ಅಧಿಬೋಧಿಸು ಎಂದು ಗಿರಿಜೆ ಕೇಳುವಳು. ಇದಕ್ಕೆ ಆ ಮಹಾದೇವನು :

"ಅತ್ಯಾಶ್ರಮಂ ಪಾಶುಪತಂ ಶಾಂಭವಂ ತಚ್ಛಿರೋವ್ರತಂ
ಇತ್ಯೇವಂ ನಾಮಭಿಃ ಪುಣ್ಯೈರ್ನಿಗಮಾಂತೇಷು ಗೀಯತೇ ॥
ತನುತ್ರಯ ಗತಾನಾದಿ ಮಲತ್ರಯ ಮಸೌ ಗುರುಃ
ದೀಕ್ಷಾತ್ರಯೇಣ ಸಂದಹ್ಯ ಲಿಂಗತ್ರಯಮುಪಾದಿಶೇತ್ ॥
ಸ್ವಾಗ್ರೇಸ್ಥಿತಸ್ಯ ಶಿಷ್ಯಸ್ಯ ದೇಶಿಕಃ ಕರುಣಾನಿಧಿಃ ।
ಕುರ್ಯಾದ್ದೀಕ್ಷಾಂ ಮಹಾಶೈವೀಮಾವಿದ್ಯಾಪಾಶಕೃಂತಿನೀಂ ॥"

ವೀರಶೈವ ಧರ್ಮಗಳು, ಅತ್ಯಾಶ್ರಮ-ಪಾಶುಪತ-ಶಾಂಭವ-ಶಿರೋವ್ರತ ಈ ಪುಣ್ಯ ನಾಮಗಳಿಂದ ವೇದಾಂತಗಳಾದ ಉಪನಿಷತ್ತುಗಳಲ್ಲಿ ನಿರೂಪಿತವಾಗಿದೆ.

ಕರುಣಾನಿಧಿಯಾದ ಶ್ರೀಗುರುವು ತನ್ನ ಮುಂದಿರುವ ಶಿಷ್ಯನಿಗೆ ಅವಿದ್ಯೆಯನ್ನು ತೊಡೆವ ಮಹಾಶೈವೀಯ ಅಂದರೆ ವೀರಶೈವದ ದೀಕ್ಷೆಯನ್ನು ದಯಪಾಲಿಸಬೇಕು. ಇಲ್ಲಿ ಶೈವೀಯ ಎಂದರೆ ಪರಶಿವ ಸಂಬಂಧಿ ಎಂದರಿಯಬೇಕು.

## ವೀರಶೈವ ನಿರ್ವಚನ

"ವೀರವ್ರತ ಸಮಾಯೋಗಾದ್ವೀರಶೈವಮಿತಿ ಸ್ಮೃತಂ ।
ಇಷ್ಟಲಿಂಗ ವಿಯೋಗೇ ವಾ ವ್ರತಾನಾಂ ವಾ ಪರಿಚ್ಯುತಾ
ತೃಣವತ್ಪ್ರಾಣ ಸಂತ್ಯಾಗ ಇತಿ ವೀರವ್ರತಂ ಮತಂ ।
ಭಕ್ತ್ಯುತ್ಸಾಹ ವಿಶೇಷೋಽಪಿ ವೀರತ್ವಮಿತಿ ಕಥ್ಯತೇ ।
ವೀರವ್ರತ ಸಮಾಯೋಗಾದ್ವೀರಶೈವಂ ಪ್ರಕೀರ್ತಿತಂ ॥"

—ಚಂದ್ರಜ್ಞಾನಾಗಮ

ವೀರವ್ರತಾಚರಣೆಯ ಸಂಬಂಧದಿಂದ ವೀರಶೈವವೆನಿಸಿದೆ. ವೀರವ್ರತ

ವೆಂದರೆ ಇಷ್ಟಲಿಂಗ ವಿಯೋಗವಾಗದಂತೆ ಲಿಂಗವ್ರತ ಚ್ಯುತಿಯಾಗದಂತೆ ಇರುವಿಕೆ! ಒಂದು ವೇಳೆ ಇಷ್ಟಲಿಂಗ ವಿಯೋಗವಾದಲ್ಲಿ ವ್ರತಕ್ಕೆ ಚ್ಯುತಿ ಬಂದಲ್ಲಿ ತೃಣವಂತೆ ತಕ್ಷಣ ಪ್ರಾಣತ್ಯಾಗ ಮಾಡುವಿಕೆಯೂ ವೀರವ್ರತ ವೆನಿಸುತ್ತದೆ. ಅಲ್ಲದೆ ಭಕ್ತಿಯ ಉತ್ಸಾಹ ವಿಶೇಷವು ವೀರತ್ವವೆನಿಸುತ್ತದೆ. ಈ ಲಕ್ಷಣಲಕ್ಷಿತ ವೀರವ್ರತ ಸಮಾಯೋಗದಿಂದ ವೀರಶೈವವೆನಿಸುತ್ತದೆ. ಅನಾದಿ ಪಾಶುಪತ ಶಿವಾಚಾರವು ಈ ಅರ್ಥದಲ್ಲಿ ವೀರಶೈವವೆನಿಸಿದ್ದಿತು. ವೀರ ಶೈವ ಪದ ವ್ಯಕ್ತಿನಿಷ್ಠವೂ ಸಮಾಜನಿಷ್ಠವೂ ಆಗಿದೆ. ಅನಾದಿ ರುದ್ರನನ್ನು ಅನಾದಿ ವೀರಶೈವನೆಂದು ವೀರಾಗಮವು ಸ್ಪಷ್ಟಗೊಳಿಸಿದೆ.

> "ಅನಾದಿ ವೀರಶೈವಾಯ ನಿರಾಲಂಬಾಯ ತೇನಮಃ
> ಏಕೋತ್ತರ ಶತಸ್ಥಾನ ಭೇದ್ಯತತ್ತ್ವ ಸ್ವರೂಪಿಣೇ ।
> ನಮೋ ರುದ್ರಾಯ ಬೀಮಾಯ ಭೂರುದ್ರ ಪ್ರಿಯ ಮೂರ್ತಯೇ
> ಭೂ ಪಾವನಾಯ ಸರ್ವಾಯ ಶಾಂತಿಕಾಮಾಯ ತೇ ನಮಃ
> ಸ್ತುವಂತಿ ರುದ್ರಸೂಕ್ತೈಶ್ಚ ರುದ್ರಧ್ಯಾನ ಪರಾಯಣಾಃ ॥
>
> —ವೀರಾಗಮ

ವೀರಾಗಮದ ವರ್ಣನೆಯು ಪ್ರತಿಪದದರ್ಥ ವ್ಯರ್ಥವಾದುದಲ್ಲ ; ಇದ್ದ ಇತಿಹಾಸವನ್ನು, ಸಿದ್ಧಿಸಿದ ಚಾರಿತ್ರವನ್ನು, ನೂರೊಂದು ನೆಲೆಯ ತತ್ತ್ವ ವನ್ನು, ಶ್ರೀರುದ್ರನ ತತ್ತ್ವಸ್ವರೂಪವನ್ನು ಮತ್ತು ಆತನ ವೀರಶೈವತ್ವವನ್ನು ವೀರಶೈವದ ಕಾಲವನ್ನು ಆ ರುದ್ರದೇವನ ಭೂರುದ್ರರೆಲ್ಲರ ಪ್ರಿಯತ್ವವನ್ನು ಆತನ ಭೂಪಾವನ ಮಹಿಮವನ್ನೂ ಸರ್ವರಿಗೆ ಶಾಂತಿಯನ್ನುಂಟು ಮಾಡುವ ಧ್ಯೇಯವನ್ನು, ರುದ್ರಧ್ಯಾನಾರ್ಚನ ಪರಾಯಣರು ಶ್ರೀರುದ್ರ ಸೂಕ್ತಗಳ ಪಠಿಸುವಿಕೆಯನ್ನು, ಶ್ರೀರುದ್ರಸೂಕ್ತ ಪಠನವೇ ರುದ್ರಧ್ಯಾನ ರುದ್ರಾ ರಾಧನವೆಂಬ ಧ್ವನಿಯನ್ನು ಈ ಪಂಚಪಂಕ್ತಿಗಳಲ್ಲಿ ಪರಿಣಾಮಕಾರಿಯಾಗಿ ಪ್ರಾಮಾಣಿಕವಾಗಿ ಸ್ವೈಜಪ್ರಜ್ಞೆಯಿಂದ ಸ್ವೈಜಾನುಭೂತಿಯಿಂದ ನಿರೂಪಿಸ ಲಾಗಿದೆ.

ಅನಾದಿ ವೀರಶೈವನಾದ ಶ್ರೀರುದ್ರಶಿವಾಚಾರ್ಯನ ಪ್ರಭಾವ ಅಷ್ಟೊಂದು ಪ್ರಭೂತವಾಗಿದ್ದಿತು. ಇಂದಿಗೂ ಅದಕ್ಕಿಂತ ಕಡಿಮೆಯೇನಿಲ್ಲ. ಭಾರತದಲ್ಲಿ ಎಲ್ಲೆಲ್ಲಿಯೂ ರುದ್ರಕುರುಹಗಳಿವೆ : ರುದ್ರಹೊಳಹುಗಳಿವೆ.

ರುದ್ರ ಸಂಸ್ಕೃತಿಯಿದೆ ; ರುದ್ರಸಂಭೂತಿಯಿದೆ. ರುದ್ರನೆಲೆಗಳಿವೆ. ರುದ್ರ ಕಲೆಗಳಿವೆ. ಸುದ್ರವೀಣೆ ರುದ್ರ ಪುಷ್ಪಗಳಿವೆ. ರುದ್ರ ಕ್ಷೇತ್ರಗಳಿವೆ ; ರುದ್ರ ಪಾತ್ರಗಳಿವೆ. ಅಂದರೆ ಗುರು-ಜಂಗಮರಿರುವರು.

## ತ್ರಿಪುರಾಂತಕ ಶ್ರೀರುದ್ರ ಶಿವಾಚಾರ್ಯ !

ಲೋಕ ಕಂಟಕರಾದ ವ್ಯೋಮ ವಾಸಿಗಳಾದ ವ್ಯೋಮದಲ್ಲಿ ಪುರ ನಿರ್ಮಾಣ ವಿಜ್ಞಾನಿಗಳಾದ ಅಜೇಯರಾದ ನಿರಂತರ ಚಲನಶೀಲರಾದ ರಕ್ತಾಕ್ಷ, ತಾರಕಾಕ್ಷ, ವಿದ್ಯುನ್ಮಾಲಿಗಳನ್ನು ಸಂಹರಿಸಿ ಲೋಕ ಕಲ್ಯಾಣವನ್ನುಂಟು ಮಾಡಿದ, ಸಂಹಾರ ಕಾರ್ಯದಲ್ಲಿಯೂ ಸಂಸ್ಕೃತಿಯ ನಿರ್ಮಾಣ ಮಾಡಿದ ಲೋಕೋತ್ತರ ಮಹಿಮ ಮಹಾರುದ್ರ ಶಿವಾಚಾರ್ಯನದು. ತ್ರಿಪುರಾಂತಕ ಲೀಲೆಯ ಫಲವಾಗಿ ವಿಭೂತಿ ರುದ್ರಾಕ್ಷಿಗಳು ಸಾಧಕ ಲೋಕಕ್ಕೆ ಲಭ್ಯವಾಗಿವೆ. ಕರ್ಮ ಕಳೆದು ಕಣ್ಣು ತಂದುಕೊಳ್ಳುವ ಸತ್ವಶಾಲಿ ಸಂಕೇತಗಳಾಗಿವೆ. ವಿಭೂತಿ ಧರಿಸದ ಶೈವ ವೀರಶೈವರಿಲ್ಲ. ರುದ್ರಾಕ್ಷಿ ಧರಿಸದ ಸಾಧು ಸಂತರಿಲ್ಲ ; ಶೈವ ವೀರಶೈವರಿಲ್ಲ. ಇವೆರಡಿಲ್ಲದೆ ಅಷ್ಟಾವರಣವೆನಿಸುವುದಿಲ್ಲ. ಗುರುಲಿಂಗ ಜಂಗಮರಾಗುವುದಿಲ್ಲ ; ಪಾದೋದಕ ಪ್ರಸಾದಗಳು ಸಿದ್ಧವಾಗುವುದಿಲ್ಲ. ಶಿವತ್ವ ಸಂಸ್ಕೃತಿಯ ಕುರುಹುಗಳಾಗಿವೆ, ಅನಿಷ್ಟ ಕರ್ಮಗಳನ್ನು ಕಳೆವುದಲ್ಲದೆ ಅನಾರೋಗ್ಯವನ್ನು ಕಳೆವ ಔಷಧಿಗಳೂ ಆಗಿವೆ.

ತ್ರಿವಿಧ ತನುಗಳಲ್ಲಿರುವ ತ್ರಿವಿಧ ಮಲಗಳೆಂಬ ತ್ರಿಪುರರನ್ನು ತ್ರಿವಿಧ ದೀಕ್ಷೆಗಳಿಂದ ಸಂಹರಿಸುವ ಶಿವಾಚಾರ್ಯರೆಲ್ಲರೂ ಶ್ರೀರುದ್ರರೇ ಆಧ್ಯಾತ್ಮಿಕ ವಾಗಿ ! ಈ ವ್ಯಷ್ಟಿಗತ ತ್ರಿಪುರಾರಿಯು ಆ ಶ್ರೀರುದ್ರನೂ ಆಗಿದ್ದನಾಗಿ ಅಂದು ಆತನೂ ಶಿವಾಚಾರ್ಯನು.

ತ್ರಿಪುರಾಂತಕ ಲೀಲೆಯ ಸ್ಮಾರಕವಾಗಿ 'ತ್ರಿಪುರಾಂತಕ' ಎಂಬ ಮನೆ ಹೆಸರ ಗಳು, ತ್ರಿಪುರಾಂತಕಪ್ಪ ಎಂಬ ಹೆಸರಿನವರು, ಮತ್ತು ತ್ರಿಪುರಾಂತಕ ಕೆರೆಗಳು ಜನ ಜೀವನದ ಬಳಕೆಯಲ್ಲಿ ಬಂದಿವೆ. ತ್ರಿಪುರಾಂತಕ ಹೆಸರಿನ ಮಠಗಳೂ ಇವೆ. ತ್ರಿಪುರ ಜಯಕ್ಕೆ ಆತನ ಪಾಶುಪತಾಸ್ತ್ರವೇ ಕಾರಣ. ಶ್ರೀರುದ್ರ ಶಿವಾಚಾರ್ಯನ ಪಾಶುಪತಾಸ್ತ್ರದ ಪ್ರಭಾವ ಪ್ರಭೂತವಾಗಿದೆ.

ಈ ಬಗೆಗೆ ಮುಂದೆ ಬರೆಯೋಣವಾಗುತ್ತದೆ. "....ನೀನು ತ್ರಿಪುರ ಸಂಹಾರವ ಮಾಡುವಲ್ಲಿ ನಾನು ವೃಷಭನೆಂಬ ವಾಹನವಾಗಿದ್ದೆನಯ್ಯ...." ಎಂದು ಭಕ್ತಿ ಭಂಡಾರಿ ಬಸವಣ್ಣನು ವಚಿಸಿದ್ದಾನೆ. ಇದು ರುದ್ರ–ವೃಷಭರ ಮತ್ತು ಬಸವಣ್ಣಗಳ ಪೂರ್ವಾಪರ ಸಂಬಂಧ ! ತ್ರಿಪುರಾಂತಕ ರುದ್ರ ಗುರುವಿನ ಭಕ್ತನಾಗಿ ವೃಷಭನಾಗಿ ಸೇವೆ ಗೈದಿರುವನು. ಇದು ಮೂರನೆಯ ಭವಾಂತರ !

## ರುದ್ರಗಣರು–ಮರುದ್ಗಣರು

"ವೀರಭದ್ರೋ ಯಥಾ ರುದ್ರಸ್ತ್ವನ್ಯೇ ಚ ಗುರುವಃ ಸ್ಮೃತಾಃ
ಗುರೋರ್ಜ್ಞಾತಾಶ್ಚ ಗುರವೋ ವಿಖ್ಯಾತಾ ಭುವನತ್ರಯೇ ॥
—ಸ್ಕಾಂದ

ಇವರೆಲ್ಲ ಶ್ರೀರುದ್ರ ಶಿವಾಚಾರ್ಯನ ಪ್ರತೀಕರು; ಅಂದರೆ ಪ್ರತಿನಿಧಿಗಳು; ಪ್ರತಿರೂಪರು. ರುದ್ರಪುತ್ರರು. ಅಂದರೆ ರುದ್ರ ಶಿವಾಚಾರ್ಯರ ಕರಕಂಜ ಸಂಜಾತರು. ರುದ್ರ ಸಂಸ್ಕೃತಿಯ ಪ್ರಸಾರಕರು. ರುದ್ರ ದೇವನಲ್ಲಿ ಅವರಿಗೆ ಅಪಾರವಾದ ಆದರಾಭಿಮಾನಗಳು. ಆತನ ಆಜ್ಞೆಯನ್ನು ಅದೆಂದಿಗೂ ಅದೆಷ್ಟು ಮೀರಿ ವರ್ತಿಸುತ್ತಿರಲಿಲ್ಲ. ಅವರೆಲ್ಲ ರುದ್ರದೇವನೊಡನಿದ್ದು ಆತನ ವೈದ್ಯ ವೃತ್ತಿಗೂ ಕೃಷಿ ಕಾಯಕಕ್ಕೂ ರುದ್ರನು ನಿಸರ್ಗವಾಗಿ ನಿಷ್ಕಂಟಕವಾಗಿ ಮಾಡುತ್ತಿದ್ದ ಯಜ್ಞ ಸಂಸ್ಕೃತಿಗೂ ಆರ್ಯರು ಮಾಡುತ್ತಿದ್ದ ಪದಾರ್ಥ ನಷ್ಟಾತ್ಮಕ ಪ್ರಾಣಿ ಹಿಂಸಾತ್ಮಕ ಅಸ್ವಾಭಾವಿಕ ಯಜ್ಞ ನಿರೋಧಕ್ರಾಂತಿಗೂ ದ್ರಾವಿಡರ ಮೇಲೆ ನಿರ್ನಿಮಿತ್ತವಾಗಿ ಮಾಡುವ ಆರ್ಯರ ದುಷ್ಟದಾಳಿಗಳನ್ನು ಅಡಗಿಸಲಿಕ್ಕೂ ದೀನ ದಲಿತರನ್ನು ಉದ್ಧರಿಸುವ ಕಾರ್ಯಕ್ಕೂ ಸಹಾಯಕರಾಗಿದ್ದರು. ಅವರೆಲ್ಲರು ಒಗ್ಗಟ್ಟಿನಿಂದಿದ್ದು ಸಾಮಾಜಿಕ ಸಾಂಸ್ಕೃತಿಕ ಧಾರ್ಮಿಕಾದಿಗಳ ಸೇವೆಗಳನ್ನು ಸಮರ್ಥನೀಯವಾಗಿ ಸಲ್ಲಿಸುತ್ತಿದ್ದರು. ಆತನ ಅಪ್ಪಣೆಯಂತೆ ಲೋಕ ಕಲ್ಯಾಣ ಕಾರ್ಯ ನಿರತರಾಗಿದ್ದರು. ಘನತೆ–ಗೌರವಗಳಿಂದ ಬಾಳುತ್ತಿದ್ದರು. ಶುದ್ಧಾಂತಃಕರಣಿಗಳಾಗಿ ಶುದ್ಧಾಚಾರ ವಿಚಾರವುಳ್ಳವರಾಗಿ ಬದುಕುತ್ತಿದ್ದರು. ಶಿಷ್ಟರಾಗಿ ಸಂತುಷ್ಟರಾಗಿರುತ್ತಿದ್ದರು. ಪ್ರಶಾಂತರಾಗಿ ನಿಭ್ರಾಂತರಾಗಿ ನಿಶ್ಚಿಂತರಾಗಿ ನೆಲಸಿದ್ದರು. ಇತರರನ್ನು ಶೋಷಿಸದೆ, ಸ್ವಯಾರ್ಜಿತವನ್ನು

ಶೇಖರಿಸದೆ ತ್ಯಾಗಿಗಳಾಗಿದ್ದರು. ಸತ್ಯಾನ್ವೇಷಣ–ಸತ್ಯಾನುಸಂಧಾನ ನಿರತರಾಗಿದ್ದರು. ಶೋಚನೀಯ ಸ್ಥಿತಿಯೆಂದರೆ ಅವರು ಕಂಡರಿಯರು. ಶೌರ್ಯಶಾಲಿಗಳು; ಧೀರೋದಾತ್ತರು. ಸರ್ವರಿಗೆ ಶ್ರೇಯೋಭಿಲಾಷಿಗಳಾಗಿದ್ದರು. ಷಡ್ರಿಪುಗಳನ್ನು ಜಯಿಸಿದ್ದರು. ಶಿಷ್ಯರಿಗೆ ಶಿವಸಂಸ್ಕಾರಗಳನ್ನಿತ್ತು ಶಿವಾಚಾರ್ಯಪದದಲ್ಲಿದ್ದರು. ಮುಮ್ಮೊದಲು ಏಕಾದಶರುದ್ರರಾಗಿ ಶತರುದ್ರರಾಗಿ ಬರಬರುತ್ತ ಅಸಂಖ್ಯಾತರುದ್ರರಾಗಿ ರುದ್ರಗಣರು ಬೆಳೆದರು. ಗಂಗೆ ವಾಲುಕಸಮುದ್ರರೆಂದೆ ಪರಿಗಣಿತರಾದರು. ಗಣತಂತ್ರದ ಪರಾಕಾಷ್ಠತೆಯಿದು. ಶ್ರೀರುದ್ರಗಣರ ವರ್ಣನೆಯನ್ನು ಯಜುರ್ವೇದೀಯ ಶ್ರೀರುದ್ರಸೂಕ್ತದ ಏಕಾದಶೋನುವಾಕದಲ್ಲಿ ಏಕೋಭಾವದಿಂದ ಏಕೀಭವಿಸಿ ಓದಿ ನೋಡಬೇಕು. ನಿದರ್ಶನಕ್ಕಾಗಿ ನಸು ಉದ್ಧರಿಸಲಾಗಿದೆ. "ಸಹಸ್ರಾಣಿ ಸಹಸ್ರಶೋ ಯೇ ರುದ್ರಾ ಅಧಿಭೂಮ್ಯಾಂ ತೇಷಾಗ್‌ಂ ಸಹಸ್ರಯೋ ಜನೇಽವಧನ್ವಾನಿ ತನ್ಮಸಿ ।....ಯೇ ಅನ್ನೇಷು ವಿವಿಧ್ಯಂತಿ ಪಾತ್ರೇಷು ಪಿಬತೋ ಜನಾನ್, ಯೇ ಪಥಾಂಪಥಿ ರಕ್ಷಯ ಐಲಬೃದಾಯ ವ್ಯಧಃ। ಯೇ ತೀರ್ಥಾನಿ ಪ್ರಚರಂತಿ ಸೃಕಾವಂತೋ ನಿಷಂಗಿಣಃ । ಯ ಏತಾವಂತಶ್ಚ ಭೂಯಾಗ್‌ಂಸಶ್ಚ ದಿಶೋರುದ್ರಾ ವಿತಸ್ಥಿರೇ । ನಮೋ ರುದ್ರೇಭ್ಯೋ ಯೇ ಪೃಥಿವ್ಯಾಂ ಯೇಽಂತರಿಕ್ಷೇ ಯೇ ದಿವಿ ಯೇಷಾಮನ್ನಂ ವಾತೋ ವರ್ಷಮಿಷವ ಸ್ತೇಭ್ಯೋ ದಶಪ್ರಾಚೀರ್ದಶ ದಕ್ಷಿಣಾ ದಶಪ್ರತೀಚೀರ್ದಶೋದೀಚೀರ್ದಶೋ ರ್ಧ್ವಾಸ್ತೇಭ್ಯೋ ನಮಸ್ತೇನೋ ಮೃಡಯಂತು ತೇ ಯಂ ದ್ವಿಷ್ಮೋಯಶ್ಚನೋ ದ್ವೇಷ್ಟಿತಂ ವೋ ಜಂಭೇ ದಧಾಮಿ ॥"

ಸಹಸ್ರ ಸಹಸ್ರ ಸಂಖ್ಯೆಯಲ್ಲಿ ರುದ್ರರು ಈ ಭೂಮಿಯಲ್ಲಿದ್ದರು. ಅನ್ನ ನೀರುಗಳನ್ನಿತ್ತು ಜನರನ್ನು ಕಾಪಾಡುತ್ತಿದ್ದರು. ಧನುರ್ಧಾರಿಗಳಾಗಿ ದಾರಿ ಹೋಕರನ್ನು ರಕ್ಷಿಸುತ್ತಿದ್ದರು. ಎಲ್ಲ ತೀರ್ಥಗಳಲ್ಲಿ ಸಂಚರಿಸಿ ಪಾವನಗೊಳಿಸುತ್ತಿದ್ದರು. ಪೃಥಿವಿಯಲ್ಲಿ ದಿಕ್ಕುದಿಕ್ಕುಗಳಲ್ಲಿ ಅಂತರಿಕ್ಷದಲ್ಲಿ ದಿವಿಯಲ್ಲಿದ್ದು ಅನ್ನ ನೀರು ಗಾಳಿಗಳನ್ನೊದಗಿಸುತ್ತಿದ್ದ ರುದ್ರಗಣರಿಗೆ ನಮನವು. ಇದು ರುದ್ರಗಣರ ಅಂದರೆ ಗುರುವರ್ಗದ ವಿಶ್ವಕಲ್ಯಾಣ ಸೇವೆಯು.

ಇನ್ನು ರುದ್ರ ಶಿಷ್ಯರಾದ ಮರುದ್ಗಣರು ಸಾಕಷ್ಟಿದ್ದರು. ಅವರು ಮಹಾಶ್ರೀಮಂತರೂ, ಮಹಾಶಕ್ತಿವಂತರೂ ಮಹಾಧೀಮಂತರೂ ಆಗಿದ್ದರು.

ತಂದೆ ರುದ್ರದೇವನಿಂದ ಯೌಗಿಕ ವಿಜ್ಞಾನದಲ್ಲಿ ಪಳಗಿದ್ದರು. ಮಳೆಯಿಲ್ಲದಲ್ಲಿ ಮಳೆಯನ್ನು ಬರಿಸುತ್ತಿದ್ದರು. ರಥಾರೂಢರಾಗಿ ವೇಗದಲ್ಲಿ ಸಂಚರಿಸುತ್ತಿದ್ದರು. ಮಹಾತೇಜಸ್ವಿಗಳಾಗಿದ್ದರು. ಪ್ರಾಣಿಗಳ ಪ್ರಾಣಪೋಷಕರಾಗಿದ್ದರು. ತಮಗಿರುವ ಸಂಗೀತಕಲೆಯಿಂದ ಸರ್ವರನ್ನು ಸಂತೋಷಪಡಿಸುತ್ತಿದ್ದರು. ತಂದೆ ಶ್ರೀ ರುದ್ರ ಶಿವಾಚಾರ್ಯನಂತೆ ಸೋಲನ್ನರಿಯದವರು. ದಾನಶೀಲರು. ವಾಯು ಮಂಡಲದ ಮೇಲೆ ತಮ್ಮದೇ ಆದ ಅಧಿಕಾರವುಳ್ಳವರು. ವಾಯುವ್ಯ ದಿಕ್ಕಿನಲ್ಲಿ ಇವರ ವಾಸ. ಇವರಿಗೆ ಬಡವರು–ಬಲ್ಲಿದರು ಎಂಬ ಭೇದವಿರಲಿಲ್ಲ. ಇವರ ಮಕ್ಕಳು ಮಹಾಶೂರರು; ಮಹಾ ಸಾಹಸಿಗರು. ನಂಬುಗೆಗಿಂಬುಳ್ಳವರು. ಮರು ಮಾತಿಲ್ಲದೆ ಸಾರ್ವಜನಿಕ ಸೇವೆ ಸಲ್ಲಿಸುವವರು. ಅಸಾಧ್ಯಸಾಧಕರು. ಅಭೇದ್ಯ ಭೇದಕರು. ಮರುಜೀವಣಿ ಅಂದರೆ ಸಂಜೀವಿನಿ ಔಷಧಿಯನ್ನು ಬಲ್ಲಿದರು. ರುದ್ರಶಿವಾಚಾರ್ಯನಂತೆ ವೈದ್ಯದಲ್ಲಿ ಕೃಷಿಯಲ್ಲಿ ಪಳಗಿದವರು. ಋಗ್ವೇದದಲ್ಲಿ ಇವರ ವರ್ಣನೆ ಮನೋಹರವಾಗಿದೆ.

ರುದ್ರಗಣರು ರುದ್ರ ಸದೃಶರು. ಮಿಗಿಲಾಗಿ ಹನ್ನೊಂದು ಜನ ರುದ್ರರು ಮತ್ತು ನೂರು ಜನರುದ್ರರು ರುದ್ರಸಮಸದೃಶರು. ಎಲ್ಲ ಬಗೆಯಲ್ಲಿ ತನ್ನ ಸಮಾನ ಸಾಮರ್ಥ್ಯವುಳ್ಳವರನ್ನಾಗಿಸಿದ್ದ ವೈಶಿಷ್ಟ್ಯ ಶ್ರೀರುದ್ರ ಶಿವಾಚಾರ್ಯನದು. ವಿಶ್ವದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಉಲ್ಲೇಖಿಸಿ ಉಗ್ಗಡಿಸ ತಕ್ಕ ಉದಾತ್ತ ಚಾರಿತ್ರಕ ಸಂಸ್ಕೃತಿಯಿದು. ಇವರೆಲ್ಲರೂ ಜನಜೀವನದಲ್ಲಿ ಜನ ಜನಿತವಾಗಿದ್ದಾರೆ. ಶ್ರೀರುದ್ರ ಸೂಕ್ತದಿಂದ ! ಶತರುದ್ರೀಯ ಜಪವಿಧಾನ ವಿನ್ಯಾಸವಾಗಿದೆ; ವಿನಿಯೋಗವಾಗುತ್ತಿದೆ. ಇದನ್ನು ನಿಯತವಾಗಿ ನಿಯಮದಿಂದ ನಿತ್ಯ ಅನುಷ್ಠಾನಿಸಿದಲ್ಲಿ ಸಂಪದಭಿವೃದ್ಧಿ ಶಾಂತಿ ಸಂತೋಷಾಭಿವೃದ್ಧಿಗಳಾಗುತ್ತವೆ. ದಾರಿದ್ರ್ಯ ದುರದೃಷ್ಟಗಳು ದೂರಾಗುತ್ತವೆ. ಶತರುದ್ರೀಯ ಶ್ರೀರುದ್ರಸೂಕ್ತ ಪಠನದಿಂದ ಪಠಕರ ಶ್ರಾವಕರ ಪ್ರಾಣಶಕ್ತಿ ಪರಿವರ್ಧಿಸುತ್ತದೆ. ನಾದ ಬಲ ಬಿಂದು ಬಲ ಕಲಾ (ಳಾ) ಬಲಗಳುಂಟಾಗುತ್ತವೆ. ಸ್ಥಿತಿಗತಿಗಳು ಪ್ರಗತಿಶೀಲವಾಗುತ್ತವೆ. ಸನಾತನ ಕಾಲದಿಂದ ಶ್ರೀರುದ್ರ ಸೂಕ್ತ ಭಾರತಾದ್ಯಂತ ಭಾವಪೂರ್ಣವಾಗಿ ಸುಸ್ವರೋಕ್ತವಾಗಿ ಪಠಿತವಾಗುತ್ತಿದೆ. ಜೊತೆಗೆ ರುದ್ರಾಭಿಷೇಕ ವೈಯಕ್ತಿಕವಾಗಿ ಸಾಮೂಹಿಕವಾಗಿ ಅದ್ದೂರಿಯಾಗಿ ನಡೆಯು

ತ್ತಿದೆ. ರುದ್ರಾಭಿಷೇಕದಲ್ಲಿ 'ರುದ್ರಗಿಂಡಿ'ಯನ್ನೆ ಬಳಸಲಾಗುತ್ತದೆ. ರುದ್ರ ತಟ್ಟೆ ರುದ್ರಪುಷ್ಪಗಳನ್ನು ಉಪಯೋಗಿಸಲಾಗುತ್ತದೆ. ಗಾನಕಲೆಯಲ್ಲಿ 'ರುದ್ರ ವೀಣೆ'ಯ ವಾದನವನ್ನು ಮಾಡಲಾಗುತ್ತದೆ. ಹೀಗೆ ರುದ್ರ ಸಂಸ್ಕೃತಿ ಹತ್ತು ಹಲವು ಬಗೆಯಲ್ಲಿ ಬಳಕೆಯಲ್ಲಿರುತ್ತದೆ. ಜನ ಜೀವನವನ್ನು ಹಸನಾಗಿಸುತ್ತದೆ. ಹೊಸ ತಿರುವನ್ನು ತಂದು ಹರುಷಿಸುವಂತೆಸಗುತ್ತಿದೆ. ಹೀಗೆ ತ್ರೈಕಾಲಿಕ ಸಾತತ್ಯವಾಗಿ ಜನಜೀವನದಲ್ಲಿ ಒಂದಿಲ್ಲೊಂದು ರೀತಿಯಲ್ಲಿ ನೆಲೆನಿಂತ ಭಾಗ್ಯ ವಿಶ್ವದ ಇತಿಹಾಸದಲ್ಲಿ ಇನ್ನಾರಿಗೂ ಇರದೆಂದರೆ ಒಪ್ಪುವ ಮಾತಾಗಿದೆ.

ರುದ್ರದೇವನದು ನಿಜಕ್ಕೂ ಗಣರಾಜ್ಯ. ಅಲ್ಲಿ ಮೇಲು ಕೀಳಿಲ್ಲ. ಆತನಲ್ಲಿ ಸೇರಿದವರೆಲ್ಲರೂ ಒಂದೇ ಮಟ್ಟದ ಗಣರು; ಒಂದೇ ನಿಟ್ಟಿನಲ್ಲಿ ಮುನ್ನಡೆದವರು. ಒಗ್ಗಟ್ಟಿನಲ್ಲಿದ್ದು ಸಾಮಾಜಿಕ ಸಾಂಸ್ಕೃತಿಕ ಸೇವೆಗೆ ಒದಗುವವರು. ಒಂದೇ ಗುರಿ ನಿಂಗೆ ಒಚ್ಚತರು. ಲೋಕ ಕಲ್ಯಾಣವೇ ಅವರ ಬಾಳಿನ ಜೀವಾಳ. ಅವರ ಆ ಸಾಮಾಜಿಕ ಮತ್ತು ಸಾಮುದಾಯಕ ಸೇವೆ ಸರ್ವಾದರ್ಶವಾಗಿತ್ತು. ಎಲ್ಲರ ಸುಖ ಸೌಲಭ್ಯಕ್ಕಾಗಿ ಶಾಂತಿ ಸಮಾಧಾನಗಳಿಗಾಗಿ ಸಮರ ಸ್ವಭಾವಕ್ಕಾಗಿ ಪ್ರಯತ್ನಿಸುವ ಮಹತ್ತರ ಪಾತ್ರವನ್ನು ಅವರು ವಹಿಸುತ್ತಿದ್ದರು. ತಮ್ಮ ಈ ಸದ್ಗುಣ ಸತ್ಕ್ರಿಯೆಗಳಿಂದ ಶತೃಗಳ ಹೃದಯಗಳನ್ನು ಆಕರ್ಷಿಸಿಕೊಂಡಿದ್ದರು. ಅತ್ಯುತ್ಸಾಹದಿಂದ ಅತ್ಯಾದರದಿಂದ ಬೇಗ ನಮ್ಮಲ್ಲಿಗೆ ಆಗಮಿಸಲಿ ಎಂದು ಕೋರುವಷ್ಟು ಅವರುಗಳ ವ್ಯಕ್ತಿತ್ವ ಉತ್ತಮಗೊಂಡಿತ್ತು. ಅವರ ಕರ್ತೃತ್ವ ಶಕ್ತಿ ಉನ್ನತಕ್ಕೇರಿತ್ತು. ಅವರನ್ನು ಎತ್ತರದ ಗದ್ದುಗೆಯ ಮೇಲೆ ಕುಶಾಸನಗಳನ್ನು ಹಾಕಿ ಕೂರಿಸಿ, ನಮಗೆ ಸುಖಸಂಪತ್ತುಗಳನ್ನು ಕರುಣಿಸಿರೆಂದು ಭಯ ಭಕ್ತಿಯಿಂದ ಬೇಡಿಕೊಳ್ಳುವಷ್ಟು ಉದಾರಚರಿತರಾಗಿ ಬಾಳಿ ಬದುಕಿದ್ದರು; ಬೆಳಕಿಗೆ ಬಂದಿದ್ದರು.

ರುದ್ರಗಣ ಮರುದ್ಗಣರು ಆಕಾಶ ದೇವತೆಗಳಲ್ಲ; ಭೂಮಿ ತಾಯಿಯ ಮಕ್ಕಳು; ರುದ್ರದೇವನ ಶಿಷ್ಯರು. ಅವರಿಗೆ ಯಾವ ಕುಂದು ಕೊರತೆಗಳಿರಲಿಲ್ಲ ಉಡಲು ತೊಡಲು ಉಣ್ಣಲು ಕೊಡಲು ಬೇಕಾದಷ್ಟಿದ್ದಿತು. ಅವರದು ಸಮೃದ್ಧ ಜೀವನ, ಪರಿಶುದ್ಧ ಭಾವನ, ಪ್ರಬುದ್ಧ ಚೇತನ, ವಿಶೇಷವಾಗಿ ರುದ್ರಗಣರು ಅನ್ನದಾನಿಗಳು; ಮರುದ್ಗಣರು ಜಲದಾನಿಗಳು, ವೀಣಾವಾದನ

ನಿಪುಣರು, ಗಾನಶೀಲರು, ರುದ್ರವೀಣೆಯನ್ನು ಗಾನಕ್ಕೆ ಬಳಸುತ್ತಿದ್ದರು. ತುಪ್ಪ ಜೇನುತುಪ್ಪ ಅವರ ಆಹಾರದಲ್ಲಿ ಇದ್ದಾಗುತ್ತಿದ್ದಿತು. ವೀರರು, ವಿಜಯ ಶಾಲಿಗಳು; ಮಹಿಮರು, ಮಹೋನ್ನತರು. ತ್ರಿವಿಷ್ಟವ್ ಅಂದರೆ,ತಿಬಿಟ್ಟಿಗೂ ಹೋಗಿ ಅಲ್ಲಿಯೂ ನೆಲಸಿದ್ದರು. ಸಿರಿವಂತಿಕೆಯಲ್ಲಿ ಇಂದ್ರನಿಗೆ ಹೆಗಲೆಣೆಯಾಗಿ ಬಾಳಿದರು. ತಂದೆಯಂತೆ ಕ್ರಾಂತಿಕಾರರು. ನಿಸರ್ಗವನ್ನು ಮೀರಿದ ಯಥಾರ್ಥ ವಲ್ಲದ ಯಜ್ಞ ಯಾಗಾದಿಗಳನ್ನು ನಿಲ್ಲಿಸುತ್ತಿದ್ದರು. ಆರ್ಯರ ಶೋಷಣೆ-ಘರ್ಷಣೆಗಳನ್ನು ಅಣಗಿಸುತ್ತಿದ್ದರು. ಮಳೆ ಬರಿಸುವ ವೈಜ್ಞಾನಿಕ ಶಕ್ತಿ ಅವರಿಗಿದ್ದಿತು. ಚಿತ್ಕಳಾನ್ವಿತರಾಗಿದ್ದರು. ಇಂದ್ರ ಉಪೇಂದ್ರರೆಂದರೆ ಅವರಿಗೆ ಲೆಕ್ಕವಿರಲಿಲ್ಲ.

ವಿಶ್ವಶಾಂತಿ ಸೌಖ್ಯಗಳೆ ಶ್ರೀ ರುದ್ರಶಿವಾಚಾರ್ಯನ ಧ್ಯೇಯ. ರುದ್ರಗಣ-ಮರುದ್ಗಣರಿಗೆ ತಮ್ಮ ಆ ಗುರುದೇವನ ಧ್ಯೇಯವೇ ಧ್ಯೇಯವಾಗಿದ್ದಿತು. ಆದೇ ಧ್ಯೇಯದಲ್ಲಿ ಅವರು ಅಂದು ಧೈರ್ಯದಿಂದ ಮುನ್ನಡೆದರು. ಹಗೆಗಳೊಡನೆ ಹೋರಾಡಿ ತಮ್ಮ ಹೊಲಬಿಗೆ ಅವರನ್ನು ತಂದರು. ಮಾನವ್ಯ ಮಾರ್ಗದಲ್ಲಿ ಹೆಜ್ಜೆ ಹಾಕುವಂತೆಸಗಿದರು. ನೀತಿ ರೀತಿಗಳಲ್ಲಿ ಗುಣಕ್ರಿಯೆಗಳಲ್ಲಿ ಅವರಿಗೆ ಆಸಕ್ತಿಯನ್ನು ಹುಟ್ಟಿಸಿದರು. ರುದ್ರರು ಕುಲ ಕೋಮುಗಳನ್ನು ನಿರ್ಮಿಸಿ ಜನರನ್ನು ಎದುರಾಳಿಗಳಂತೆ ಒಡೆಯುತ್ತಿರಲಿಲ್ಲ. ಒಡೆದು ಶೋಷಿಸುತ್ತಿರಲಿಲ್ಲ. ತಾವೇ ಇಲ್ಲದವರಿಗೆ ಇತ್ತು ಬಾಳುತ್ತಿದ್ದರಲ್ಲದೆ, ಪಶುಗಳಂತೆ ಮತ್ತೊಬ್ಬರಿಂದ ಕಿತ್ತು ತಿನ್ನುತ್ತಿರಲಿಲ್ಲ, ತಿಣುಕುತ್ತಿರಲಿಲ್ಲ. ಅವರದು ಸಮತಾಭಾವದ ಸೂತ್ರ ಬದ್ಧ ನಿಲುಮೆ. ಸರ್ವಸಮರಸಭಾವದ ಪರಿಶುದ್ಧ ಒಲುಮೆ. ಅವರು ಕೃಷಿ ಪ್ರೇಮಿಗಳು; ಕಷ್ಟಜೀವಿಗಳು ಅದರಿಂದ ಅವರಿಗೆ ದುರ್ಭಿಕ್ಷವಿರಲಿಲ್ಲ. ದುರ್ಬುದ್ಧಿ ಯಿರಲಿಲ್ಲ. ದುರಾಚಾರವಿರಲಿಲ್ಲ. ಕೃಷಿಕೃತ್ಯವು ಸಂಕರ್ಷಣಮೂರ್ತಿಯಾದ ರುದ್ರದೇವನಿಂದ ಗಣರಿಗೆ ಆಳವಟ್ಟಿತ್ತು. ಅವರ ಆರ್ಥಿಕ ವ್ಯವಸ್ಥೆ ಆರ್ಯರಿಗಿಂತ ಅತ್ಯಂತ ಎತ್ತರದ ನೆಲೆಯಲ್ಲಿದ್ದಿತು. ಅದರಿಂದ ಅವರು ವೈಜ್ಞಾನಿಕ ಯಂತ್ರಗಳ ನಿರ್ಮಾಣದಲ್ಲಿಯೂ ಮುಂದುವರಿದಿರಬೇಕೆನಿಸುತ್ತದೆ. ವಾಯುಮಂಡಲ, ವ್ಯೋಮ ಮಂಡಲಗಳಲ್ಲಿ ಅವರ ರಥಗಳು ಸಂಚರಿಸುತ್ತಿದ್ದವೆಂದು ಅವರ ಎದು ರಾಳಿಗಳೇ ಬಗೆದುಂಬಿ ಬಣ್ಣಿಸಿದ್ದಾರೆ. ಅವರದು ಸಮಗ್ರ ಜೀವನ;

ಸರ್ವೋನ್ನತ ಜೀವನ ಮತ್ತು ಮಹತ್ವಪೂರ್ಣ ಜೀವನ. ಭಾರತಕ್ಕೆ ಅವರದು ಅಂದಿಂದಿಗೂ ಆದರ್ಶಪೂರ್ಣ ಜೀವನದ ಜೀವಂತ ಕೊಡುಗೆ. ಶಾಂತಿ ಸಮತಾ ಜೀವನಕ್ಕೆ ಬುನಾದಿಯಾದ ಮೈತ್ರಿಸೂತ್ರವನ್ನು ರೂಪಿಸಲು ಕಾರಣವಾಗುವ ಕ್ರಾಂತಿ ಅವರದು. ಸಹಕಾರಕ್ಕೂ ಮಾರ್ಗ ಮಾಡುತ್ತಿತ್ತು-ಅವರ ಆ ಸಾಂಸ್ಕೃತಿಕ ಸತ್ಕ್ರಾಂತಿ ! ಸಕ್ರಿಯಾಕ್ರಾಂತಿ !! ರುದ್ರದೇವನು ಆ ರುದ್ರಗಣ ಮರುದ್ಗಣ ಪತಿಯಾಗಿ ಪಿತನಾಗಿ ಮಾರ್ಗದರ್ಶನ ಮಾಡುತ್ತಿದ್ದನು. ಪಾಶ ನಿವೃತ್ತಿ ಮಾಡಿ ಧರ್ಮದರ್ಶಿಯೂ ಆಗಿದ್ದನು; ಶಿವಾಚಾರ್ಯನೂ ಆಗಿದ್ದನು. ಹೀಗೆ ಶ್ರೀರುದ್ರ ಶಿವಾಚಾರ್ಯನಿಂದ ಸಂಸ್ಕಾರ ಪಡೆದ ರುದ್ರಗಣರು ರುದ್ರನಂತೆ ವಂದ್ಯರಾದರು. ಭಕ್ತಾಭೀಷ್ಟಪ್ರದರಾದರು. ಬ್ರಹ್ಮಾಂಡದಲ್ಲೆಲ್ಲ ಅವರ ಕೀರ್ತಿ ಹಬ್ಬಿತು. ಅವರೆಲ್ಲ ಲಿಂಗವಂತರೂ ಆಗಿದ್ದರು. ಶ್ರೀರುದ್ರಸೂಕ್ತದ ಧ್ಯಾನ ಶ್ಲೋಕ ಗಳಿವು.

"ಆಪಾತಾಳನಭಃ ಸ್ಥಲಾಂತ ಭುವನ ಬ್ರಹ್ಮಾಂಡಮಾವಿಸ್ಫುರತ್
ಜ್ಯೋತಿಃ ಸ್ಫಾಟಕಲಿಂಗ ಮೌಳಿ ವಿಲಸತ್ ಪೂರ್ಣೇಂದು ವಾಂತಾಮೃತೈಃ ।
ಅಸ್ತೋಕಾಪ್ಲುತಮೇಕವಾರಮನಿಶಂ ರುದ್ರಾನುವಾಕಾನ್ ಜಪನ್
ಧ್ಯಾಯೇದೀಪ್ಸಿತ ಸಿದ್ಧಯೇ ಧ್ರುವಪದಂ ಭಕ್ತೋಽಭಿಷಿಂಚೇಚ್ಛಿವಂ ॥

ಬ್ರಹ್ಮಂಡವ್ಯಾಪ್ತದೇಹಾ ಭಸಿತ ಹಿಮರುಚಾ ಭಾಸಮಾನಾ ಭುಜಂಗೈಃ
ಕಂಠೇ ಕಾಲಾಃ ಕಪರ್ದಾ ಕಲಿತ ಶಶಿಕಲಾಶ್ಚಂಡ ಕೋದಂಡ ಹಸ್ತಾಃ ।
ತ್ರ್ಯಕ್ಷಾ ರುದ್ರಾಕ್ಷ ಭೂಷಾಃ ಸುಲಲಿತ ವಿಭವಾಃ ಶಾಂಭವಾ ಮೂರ್ತಿಭೇದಾ
ರುದ್ರಾಃ ಶ್ರೀರುದ್ರ ಸೂಕ್ತ ಪ್ರಕಟಿತ ವಿಭವಾ ನಃ ಪ್ರಯಚ್ಛಂತು ಸೌಖ್ಯಂ ॥

'ಪಾತಾಳದಿಂದ ಆಕಾಶದವರೆಗಿದ್ದು ಭುವನ ಬ್ರಹ್ಮಾಂಡಗಳನ್ನು ಬೆಳಗುವ, ಜ್ಯೋತ್ಯಾತ್ಮಕವೂ ಸ್ಫಟಿಕ ಸದೃಶವೂ ಆದ ಲಿಂಗಧರಿಸಿ ಶೋಭಿಸುವ ಮಸ್ತಕವುಳ್ಳ, ಪೂರ್ಣಚಂದ್ರನ ಅಮೃತಮಯ ಕಿರಣಗಳಿಂದ ಅತ್ಯಧಿಕವಾಗಿ ವ್ಯಾಪ್ತನಾದ, ಸ್ಥಿರಸ್ಥಾನನಾದ ಶಿವರುದ್ರನನ್ನು ಭಕ್ತನು ಇಷ್ಟ ಸಿದ್ಧಿಗಾಗಿ ಧ್ಯಾನಿಸಿ ರುದ್ರಾನುವಾಕಗಳನ್ನು ನಿತ್ಯ ಒಮ್ಮೆಯಾದರೂ ಪಠನ ಮೂಲಕ ಜಪಿಸಬೇಕು.'

'ಬ್ರಹ್ಮಾಂಡ ವ್ಯಾಪ್ತಾಂಗರು, ಭಸಿತ ಹಿಮಗಳಂತೆ ಶೋಭಿಸುವವರು ಅಂದರೆ ಶುಭ್ರರು, ಭುಜಂಗ ಭೂಷಿತರು, ನೀಲಕಂಠರು, ಜಡೆಗಳಲ್ಲಿ ಶಶಿಕಲೆ

ಯುಳ್ಳವರು, ಹಸ್ತಗಳಲ್ಲಿ ಚಂಡಕೋದಂಡ (ಧನು)ವುಳ್ಳವರು, ತ್ರ್ಯಕ್ಷ-ರುದ್ರಾಕ್ಷ ಭೂಷಿತರು, ಲಲಿತವಿಭವರು, ಶಾಂಭವರು, ಅಂದರೆ ವೀರಶೈವರು, ಬೇರೆ ಬೇರೆ ದೇಹಧಾರಿಗಳು, ಶ್ರೀರುದ್ರ ಸೂಕ್ತಗಳಲ್ಲಿ ಪ್ರಕಾಶಿತ ವೈಭವವುಳ್ಳವರು ಆದ ಏಕಾದಶ ಮಹಾರುದ್ರರು ಮತ್ತು ಶತರುದ್ರೀಯರು ನಮಗೆ ಸೌಖ್ಯವನ್ನು ಕರುಣಿಸಲಿ.'

ಶ್ರೀರುದ್ರ ಸೂಕ್ತ ಪಠನ ಮಂತ್ರಜಪದ ಮೌಲ್ಯವುಳ್ಳುದು. ಶ್ರೀ ರುದ್ರರು ಲಿಂಗಧಾರಿಗಳಾಗಿದ್ದುದರಿಂದ ಶ್ರೀರುದ್ರ ಸೂಕ್ತ ಪಠನ ಜಪದ ಗುಣ ಧರ್ಮವುಳ್ಳುದಾಗಿದೆಯೆಂದು ಶಿವಾಚಾರ್ಯರು ನಿರೂಪಿಸಿದ್ದಾರೆ.

ಜಪಃ ಪಂಚಾಕ್ಷರಾಭ್ಯಾಸಃ ಪ್ರಣವಾಭ್ಯಾಸ ಏವ ವಾ ।
ರುದ್ರಾಧ್ಯಾಯಾದಿಕಾಭ್ಯಾಸೋ ನ ವೇದಾಧ್ಯಯನಾದಿಕಂ ॥

ಎಂದು 'ಸಿದ್ಧಾಂತ ಶಿಖಾಮಣಿ'ಯು ಪ್ರತಿಪಾದಿಸಿದೆ. ಪ್ರಣವ ಪಂಚಾಕ್ಷರಾಭ್ಯಾಸದಷ್ಟೇ ಅಂದರೆ ಜಪದಷ್ಟೆ ರುದ್ರಾಧ್ಯಾಯಾಭ್ಯಾಸಕ್ಕೆ ಅರ್ಹತೆಯಿದೆ; ಸಫಲತೆಯಿದೆ. ಆದರಿಂದ ಭಕ್ತರಾದವರು ತಮ್ಮ ಇಷ್ಟಸಿದ್ಧಿಗಾಗಿ ರುದ್ರಾನುವಾಕಗಳನ್ನು ನಿತ್ಯ ಜಪಿಸಬೇಕು; ಪಠಿಸಬೇಕು ಜೊತೆಗೆ ಶಿವಲಿಂಗಾಭಿಷೇಕವನ್ನಾಚರಿಸಬೇಕು. ರುದ್ರಶಿವರು ಶಿರಗಳಲ್ಲಿ ಧರಿಸಿದ ಲಿಂಗಲಕ್ಷಣ ಗಮನೀಯವಾದುದು. ಭುವನಬ್ರಹ್ಮಾಂಡಗಳನ್ನು ಗರ್ಭೀಕರಿಸಿಕೊಂಡ ಜ್ಯೋತಿರ್ಮಯವಾದುದು. ಸ್ಫಟಿಕಲಿಂಗವನ್ನು ಅವರು ಶಿರಸ್ಸುಗಳಲ್ಲಿ ಧರಿಸುತ್ತಿದ್ದರು. ರುದ್ರದೇವನಿಂದ ಉತ್ಪಾದಿತವಾದ ಲಿಂಗ ತತ್ತ್ವ ಸಂಸ್ಕೃತಿಯನ್ನು ಏಕಾದಶ ರುದ್ರರು ಶತರುದ್ರರು ರುದ್ರಗಣರು ಮರುದ್ಗಣರು ರುದ್ರಕನ್ನೆಯರು ಅನುಸರಿಸಿ ಪ್ರಚಾರಕ್ಕೆ ತಂದರು. ರುದ್ರಗಣರು ಬ್ರಹ್ಮಾಂಡ ವ್ಯಾಪ್ತಿಯುಳ್ಳವರು. ಅಂತರಿಕ್ಷದಲ್ಲಿ ರಥಗಳನ್ನು ನಡೆಸುವ ಅವರಿಗೆ ವಿಶ್ವವ್ಯಾಪ್ತಿ ವಿಸ್ಮಯಕಾರಿಯೇನಲ್ಲ.

ರುದ್ರ ಮತ್ತು ಏಕಾದಶ ರುದ್ರರ ಶತರುದ್ರೀಯರ ವಿಶ್ವವೈಭವವನ್ನು ಶ್ರೀರುದ್ರಸೂಕ್ತ ಉಲ್ಲೇಖಿಸಿದೆ. 'ಶ್ರೀರುದ್ರ ಸೂಕ್ತ ಪ್ರಕಟಿತವಿಭವಾಃ' । ಎಂದು ಎರಡನೆಯ ಧ್ಯಾನಮಂತ್ರ ನಿರೂಪಿಸಿದೆ. ಶ್ರೀರುದ್ರಸೂಕ್ತವು ತನ್ನ

ಏಕಾದಶಾನುವಾಕಗಳಿಂದ ಏಕಾದಶರುದ್ರರ ಶ್ರೀಮಂತಿಕೆಯನ್ನು ಶ್ರೇಷ್ಠತೆಯನ್ನು ಘನತೆಯನ್ನು ಗೌರವವನ್ನು ಗೀತಿಸಿದೆ. ಅವರು ಅತುಲೈಶ್ವರ್ಯವುಳ್ಳವರಾಗಿದ್ದರು. ವಿಸ್ತೃತ ಜೀವಿತರಾಗಿದ್ದರು. ಸಂಪೂರ್ಣವಾಗಿ ಸೇವಾತಪಸ್ವಿಗಳಾಗಿದ್ದರು. ತಾತ್ತ್ವಿಕ ತೇಜಸ್ವಿಗಳಾಗಿದ್ದರು. ಲೋಕಕಲ್ಯಾಣಕಾರ್ಯಕಲಾಪಗಳಲ್ಲಿ ಹಿರಿದಾಗಿ ಹುರಿಪು ಹುಮ್ಮಸ್ಸುಳ್ಳವರಾಗಿದ್ದರು. ಕಾರ್ಯಕರಣದಲ್ಲಿ ವಿಭಾವನೆಯುಳ್ಳವರಾಗಿದ್ದರು; ವಿಶ್ವಪ್ರಜ್ಞೆಯುಳ್ಳವರಾಗಿದ್ದರು. ಸರ್ವಕರ್ತೃತ್ವ ಶಕ್ತಿಸಂಪನ್ನರಾಗಿದ್ದರು. ವಿಶ್ವಸಂಚರಣ ಸಮರ್ಥರಾಗಿದ್ದರು. ವಿಭೂತಿತ್ವವನ್ನು ಸಂಪಾದಿಸಿದ್ದರು. ಅತೀಂದ್ರಿಯಶಕ್ತಿ, ಅತಿಮಾನುಷಶಕ್ತಿಯುಳ್ಳವರಾಗಿದ್ದರು. ಸುಖದುಃಖಗಳಲ್ಲಿ ಸಮಭಾವಿಗಳಾಗಿದ್ದರು. ವಿಶ್ವಹಿತ ಚಿಂತನಶೀಲರಾಗಿದ್ದರು. ರಚನಾತ್ಮಕ ಶಕ್ತಿ-ಆಸಕ್ತಿ-ಸ್ಫೂರ್ತಿ ಅಖಂಡವಾಗಿದ್ದವು. ಪ್ರಚಂಡವಾಗಿದ್ದವು. ತಮ್ಮ ಜೀವಿತದುದ್ದಕ್ಕೂ ಜನಜಾಗ್ರತಿಯ ದೀಕ್ಷೆಯನ್ನು ವಹಿಸಿದ್ದರು. ಅದಕ್ಕಾಗಿ ತಮ್ಮ ಬಾಳು ಬದುಕನ್ನು ಮುಡಿಪಿಟ್ಟಿದ್ದರು. ಮುಂದುವರಿಯುತ್ತಿದ್ದರು. ರುದ್ರದೇವನ ಪವಿತ್ರ ಪ್ರೇರಣೆಯಿಂದ ತಮ್ಮ ಸರ್ವಸ್ವವನ್ನು ಪರಹಿತಕ್ಕಾಗಿ ಧಾರೆಯೆರೆದಿದ್ದರು. ಆದರೂ ಅವರು ಪರಾವಲಂಬಿಗಳಾಗಿರಲಿಲ್ಲ. ಅತ್ಯಂತ ಸರಳ ಜೀವನ, ಸೇವಾ ನಿರತ ಚೇತನವುಳ್ಳವರಾಗಿದ್ದರು. ಅವರ ಜೀವನ ಅತ್ಯಂತ ತ್ಯಾಗಮಯ, ಯೋಗಮಯ. ಅವರು ಸಂತತ ಸೇವೆಯಲ್ಲಿ ಶಾಂತಿಯನ್ನು ಸಂತೃಪ್ತಿಯನ್ನು ತಾಳುತ್ತಿದ್ದರು. ಬಾಳುತ್ತಿದ್ದರು. ಅವರದು ಅಗಾಧವೂ ಅಪೂರ್ವವೂ ಆದ ಸಾರ್ವಜನಿಕ ಸೇವೆ; ಶ್ರೀರುದ್ರ ಪಶುಪತಿಯ ಸೇವೆ; ಪಾಶುಪತ ಶಿವಾಚಾರ ಧರ್ಮಾಚರಣೆ ! ಅವರಲ್ಲಿ ಧಾರ್ಮಿಕರು ಕಾರ್ಮಿಕರು ಬೌದ್ಧಿಕರು ಎಂಬ ಮೊದಲಾದ ಭೇದಗಳಿರಲಿಲ್ಲ. ಎಲ್ಲರನ್ನೂ ಎಲ್ಲ ಬಗೆಯಲ್ಲಿ ಸರಿಸಮವಾಗಿ ಕಾಣುತ್ತಿದ್ದರು. ಶ್ರೀರುದ್ರದೇವನ ಧ್ಯೇಯವೇ ಇದಾಗಿದ್ದಿತು. ಮಾನವತಾವಾದಕ್ಕೆ ಇದು ತಕ್ಕುದಾಗಿತ್ತು. ಇವೆಲ್ಲ ಕಾರಣಗಳಿಂದ ಶ್ರೀರುದ್ರನಂತೆ ಏಕಾದಶ ರುದ್ರರು ಸನ್ಮಾನ್ಯರಾಗಿರುವರು; ಅಮರ ಕೀರ್ತಿಯುಳ್ಳವರಾಗಿರುವರು.

"ತತ್ರ ರುದ್ರಪುರೇ ರಮ್ಯೇ ರುದ್ರರೂಪಧರಾಮರಾಃ ।
ಅಜೈಕಪಾದಹಿರ್ ಬುಧ್ನಮುಖ್ಯಾ ಏಕಾದಶಸ್ಥಿತಾಃ ॥

ಎಂಬೀ ಕಾಶಿಕಾಖಂಡೋಕ್ತಿಯನ್ನು "ಶಿವಾದಿಕ್ಯ ಶಿಖಾಮಣಿ" ಕೃತಿ ಕಥಿಸಿದೆ. ಇಲ್ಲಿ ಅಜೈಕಪಾತ್, ಅಹಿರ್ಬುಧ್ಯ ಮೊದಲಾದ ಏಕಾದಶ ರುದ್ರರು ನಿರ್ದೇಶಿತರಾಗಿದ್ದಾರೆ. ಆದಿ ಪದದಿಂದ ಪಿನಾಕಿ, ಅಪರಾಜಿತ, ಋತ, ಚಿತ್ರ ರೂಪ, ತ್ರ್ಯಂಬಕ, ವೃಷಾಕಪಿ, ಶಂಭು, ಹವನ, ಈಶ್ವರ ಈ ಒಂಬತ್ತು ರುದ್ರರನ್ನು ಗ್ರಹಿಸಬೇಕು. ಇವರು ರುದ್ರನಗರದಲ್ಲಿದ್ದು ರುದ್ರರೂಪಾಗಿದ್ದು ಅಮರತೆಯ ಅಖಂಡಸಿದ್ಧಿಯುಳ್ಳವರಾಗಿದ್ದರಂತೆ ! ಋಗ್ವೇದದಲ್ಲಿ ಅಷ್ಟ ವಸ್ತುಗಳ ತರುವಾಯ ಇವರೇ ಪರಿಗಣಿತರಾಗಿದ್ದಾರೆ. "ಅಷ್ಟೌವಸವಃ ಯೇ ಚೈಕಾದಶರುದ್ರಾಃ ।" ಎಂದು ನೃಸಿಂಹ ಪೂರ್ವತಾಪಿನ್ಯುಪನಿಷತ್ತಿನಲ್ಲಿಯೂ ಉಕ್ತವಾಗಿದೆ.

ಸಿಂಧು ತೀರದಲ್ಲಿ ರುದ್ರನಗರವಿದ್ದಿತು. ನೇಪಾಳ ರುದ್ರ ಹುಟ್ಟಿದ ನಗರ ! ಗಂಗಾ ಯಮುನಾ ನದಿಗಳ ಸಂಗಮ ಸ್ಥಳವೆ ರುದ್ರಪ್ರಯಾಗ. ಇಲ್ಲಿಯೆ ರುದ್ರ ರಚಿಸಿದ "ಮುಕ್ತಿ ಮಂಟಪ"ವಿತ್ತೆಂದು ತಿಳಿದುಬರುತ್ತದೆ. ಇದೂ ಒಂದು ಜನಕ್ಕೆ ಜೀವನ್ಮುಕ್ತಿಯನ್ನು ವಿದೇಹ ಮುಕ್ತಿಯನ್ನು ಕೊಡುವ ಕ್ರಾಂತಿಕೇಂದ್ರವಾಗಿದ್ದಿತು.

ರುದ್ರಭಕ್ತರು ವಿಶೇಷವಾಗಿ ಯಶೋವತಿಪುರದಲ್ಲಿರುತ್ತಿದ್ದರು. ರುದ್ರೋ ಪಾಸನೆಯಲ್ಲಿ ನಿರತರಾಗಿರುತ್ತಿದ್ದರು. ರುದ್ರಸಮಬಲವುಳ್ಳವರಾಗಿದ್ದರು. ಸದಾ ಯುವಕರಾಗಿರುತ್ತಿದ್ದರು. ರುದ್ರಮರುತ್‌ಗಣರ ಸಾಹಸ ಸಾಧನೆ ಅತ್ಯದ್ಭುತ !

"ಅಲಕಾಯಾಃ ಪುರೋಭಾಗೇ ಪುರ್ಯೈಶಾನೀ ಯಶೋವತೀ ।
ಅಸ್ಯಾಂ ವಸಂತಿ ಸತತಂ ರುದ್ರಭಕ್ತಾಸ್ತಪೋಧನಾಃ ॥
ರುದ್ರ ಸ್ಮರಣ ಸಂಯುಕ್ತಾ ರುದ್ರವ್ರತ ಪರಾಯಣಾಃ ।
ರುದ್ರ ಸತ್ಕೃತ ಕರ್ಮಾಣೋ ರುದ್ರಪೂಜಾ ಪರಾಯಣಾಃ ॥"

ಅದೇ ಕಾಶಿಖಂಡೋಕ್ತಿಯು ಹೀಗೆ ಹೇಳಿದೆ. ಅಲಕಾಪುರ ಕುಬೇರನ ಪಟ್ಟಣ. ಅದರ ಮುಂಭಾಗದಲ್ಲಿ "ಯಶೋವತಿ" ಪಟ್ಟಣವಿದ್ದಿತು. ಅದರಲ್ಲಿ ತಪೋಧನರಾದ ರುದ್ರಭಕ್ತರಿದ್ದರು. ಅವರು ರುದ್ರಸ್ಮರಣ, ರುದ್ರಾರ್ಚನ, ರುದ್ರವ್ರತ ನಿರತರಾಗಿದ್ದರು. ಮತ್ತು ರುದ್ರ ಮಾಡಿದ್ದನ್ನು ಮಾಡುವವ

ರಾಗಿದ್ದರು. ಅಂದರೆ ರುದ್ರ ಸಂಸ್ಕೃತಿಯನ್ನು ಅಂದರೆ ಅನಾದಿ ವೀರಶೈವ ಸಂಸ್ಕೃತಿ ಪ್ರಚಾರಕಾರ್ಯ ಪರಾಯಣರಾಗಿದ್ದರು.

ಈ ವಿವರಣೆಯಿಂದ ತಿಳಿದು ಬರುವುದೇನೆಂದರೆ ರುದ್ರ–ರುದ್ರಗಣ–ಮರುದ್ಗಣರೆಂಬ ಅನಾದಿ ಶಿವಾಚಾರ್ಯರಿಂದ ವೀರಶೈವ ಸಂಸ್ಕೃತಿಗೆ ಪ್ರಪ್ರಥಮ ಕೊಡಿಗೆ ಸಂದುದು ಸಂದೇಹವಿಲ್ಲದಂತಿದೆಯೆಂಬುದು. ಇದನ್ನು ನಾವು ಕೇವಲ ಪುರಾತನ ಸಾಹಿತ್ಯ ಮಾತ್ರದಿಂದ ಹೇಳುವ ಹೊತ್ತು ಹಳೆಯದಾಗಿದೆ. ಐತಿಹಾಸಿಕವಾಗಿಯೂ ಹೇಳುವ ಹೊಸ ಹೊತ್ತು ಇತ್ತೀಚೆಗೆ ಸಂಪ್ರಾಪ್ತ ವಾಗಿದೆ ಅದಿದು :

## ಹರಪ್ಪ ಮೊಹೆಂಜೊದರೊ ಸಂಸ್ಕೃತಿ–ಶ್ರೀರುದ್ರ ಸಂಸ್ಕೃತಿ !

ಭಾರತದ ಭೂ ಸಂಶೋಧನ ಇಲಾಖೆಯು ಸಿಂಧುನದಿ ತೀರದ ಬಯಲಿನಲ್ಲಿ ಉತ್ಖನನ ಮಾಡಿದ ಫಲವಾಗಿ ದೊರೆತ ಪುರಾತನ ಪಟ್ಟಣಗಳು ಹರಪ್ಪ, ಮೊಹೆಂಜೊದಾರೊಗಳು ಕ್ರಿ. ಪೂ. ೫೦೦೦ ವರುಷಗಳ ಹಿಂದಿನವು. ಪ್ರಪಂಚಕ್ಕೆಲ್ಲ ಪ್ರಖ್ಯಾತವಾದ ದ್ರಾವಿಡ ನಾಗರಿಕತೆಯಿಂದ ಕೂಡಿದವುಗಳೆಂದು ಇತಿಹಾಸ ಪರಿಶೋಧಕರಾದ ರುಮೇಯಾ ರಷ್ಯಾ ಮೊದಲಾದ ವಿದ್ವಾಂಸರ ಅಭಿಪ್ರಾಯಗಳು. ಆ ನಗರಗಳಲ್ಲಿರುವ ರುದ್ರಪಶುಪತಿಯ ಭಾವಚಿತ್ರಗಳನ್ನು ಪರಿಶೋಧಿಸಿ ಬೆಳಕಿಗೆ ತಂದಿದ್ದಾರೆ. ಮ್ಯಾಕ್ಸ್‌ಮುಲ್ಲರ್, ಮಾರ್ಟಿಯರ್, ಬ್ಯೂಲರ್, ವಿಲ್ಲರ್ ಮೊದಲಾದವರು ಪರಿಶೋಧಿಸಿದ್ದರೂ ಶ್ರೀರುದ್ರ ಪಶುಪತಿಯ ಬಹುಮುಖ ಜೀವನವನ್ನು ಸರಿಯಾಗಿ ಸಮೀಕ್ಷಿಸಿದಂತಿಲ್ಲ. ಅಲ್ಲಿ ಧಾರಣಕ್ಕೆ ಯೋಗ್ಯವಾದ ಚಿಕ್ಕ ಚಿಕ್ಕ ಲಿಂಗಗಳು (ಪೀಠಿಕೆಗಳು) ಸಿಕ್ಕಿವೆ. ಆರ್ಯರಿಂದ ಈಚೆ ಬಂದ ದೇವಮಂದಿರಗಳ ಸುಳಿವೇ ಇಲ್ಲವಾಗಿ ಶ್ರೀ ರುದ್ರ ದೇವನ ದ್ರಾವಿಡ ಸಂಸ್ಕೃತಿಯೆಂದು ದ್ರಾವಿಡ ನಾಗರಿಕತೆಯೆಂದು ಧಾರಾಳವಾಗಿ ದೃಢಪಟ್ಟಿದೆ. ಅಲ್ಲದೆ ಆ ನಗರಗಳಲ್ಲಿ ಹಿಂದಿದ್ದ ಜನ ಲಿಂಗಧಾರಿಗಳಾಗಿದ್ದು ಲಿಂಗಪೂಜಕರಾಗಿರಬೇಕೆಂದು ತಿಳಿದುಬರುತ್ತದೆ. ಲಿಂಗಗಳಿಗೆ 'ಶಿವಶಕ್ತಿ' ಯೆಂದು ಹೇಳುತ್ತಿರಬೇಕೆಂದು ಶ್ರೀ ಕೆ. ಎಸ್. ದೀಕ್ಷಿತರು ತಾವು ಬರೆದ "ಪ್ರೀ ಓಸ್ಟಾರಿಕ್ ಸಿವಿಲಿಜೇಷನ್" ಎಂಬ ಗ್ರಂಥದಲ್ಲಿ ಹೇಳಿರಲಾಗಿದೆಯಂತೆ ! ಅಲ್ಲಿ

ಶವಗಳನ್ನು ದ್ರಾವಿಡ ಮತ್ತು ವೀರಶೈವ ಪದ್ಧತಿಯಂತೆ ಭೂಮಿಯಲ್ಲಿ ಸಮಾಧಿ ಮಾಡುತ್ತಿದ್ದರಲ್ಲದೆ ಆರ್ಯರಂತೆ ಸುಡುತ್ತಿರಲಿಲ್ಲವೆಂದು ಮೂಳೆಗಳ ಅವಶೇಷ ಗಳಿಂದ ತಿಳಿದುಬಂದಿದೆ.

ಆ ನಗರಗಳ ನಾಗರಿಕತೆಯ ಅಂದಿನ ಕಾಲದಲ್ಲಿ ರುದ್ರ ಪಶುಪತಿಯೆ ಪ್ರಮುಖದೇವನೆಂದು ಪರಿಗಣಿತನಾಗಿದ್ದನು. ಆ ರುದ್ರನನ್ನೇ ಶಿವನೆಂದು ಭಾವಿಸಿರುವರು. ಶ್ರೀ ಡಿ. ಆರ್. ಭಂಡಾರಕರ್, ಪ್ರೊ. ಲ್ಯಾಂಗಡನ್, ಸಿ. ಇ. ಎ. ಜೋಡ್ ಮೊದಲಾದವರು. ಆದರೆ ಇದು ಸರಿಯಲ್ಲ. ಅಲ್ಲಿದ್ದ ಭಾವಚಿತ್ರ ಶ್ರೀ ರುದ್ರ ಪಶುಪತಿಯವೇ ಆಗಿದೆ. ಮತ್ತು ಆತನ ಪರಿವಾರದ ರುದ್ರಗಣರ ಭಾವಚಿತ್ರಗಳೂ ಲಭಿಸಿವೆ. ಶ್ರೀ ರುದ್ರಪಶುಪತಿಯು ಮಹಾ ಪಾಶುಪತ ಶಿವಾಚಾರ ಧರ್ಮೋತ್ಪಾದಕನಾಗಿದ್ದನು. ಲಿಂಗ ಸಂಸ್ಕೃತಿ ಆತ ನಿಂದಲೇ ಆರಂಭ ! ಆರ್ಯರು ಈ ದೇಶಕ್ಕೆ ಬಾರದ ಮೊದಲೆ ಲಿಂಗಧಾರಣ, ಲಿಂಗಾರ್ಚನ ಸಂಸ್ಕೃತಿಯಿತ್ತೆಂದು ಹೇಳಲು ಹರಪ್ಪಾ ಮೊಹೆಂಜೊದಾರೊ ಗಳಲ್ಲಿ ಲಭ್ಯವಾಗಿರುವ ಲಿಂಗಗಳೇ ಪ್ರಬಲ ಪ್ರಮಾಣವಾಗಿವೆ. ಅನಾದಿ ರುದ್ರ ದೇವನ ಬಗೆಬಗೆಯ ಭಾವಚಿತ್ರಗಳು ಭವ್ಯವಾಗಿವೆ. ಅನಾದಿ ವೀರಶೈವನಾದ ರುದ್ರದೇವನ ಬಗೆಗೆ ನಮಗೆ ಅರಿವು ಅಭಿಮಾನಗಳು ಅಭಿವ್ಯಕ್ತವಾಗುವುವಲ್ಲದೆ ಪ್ರಾಕ್ಕಾತಿಹಾಸದ ಅರಿವು ಆಳವಡುತ್ತದೆ. ಅಪೂರ್ವ ಉತ್ತೇಜನವನ್ನೀಯು ತ್ತದೆ. ಹಿರಿಯ ಹುಮ್ಮಸ್ಸಿನಿಂದ ಪರಿಶೋಧಿಸುವ ಸ್ಫೂರ್ತಿಯುಂಟಾಗುತ್ತದೆ. ಹೀಗೆ ಪ್ರೇರಣೆ ಪರಿಣಾಮಗಳನ್ನುಂಟು ಮಾಡುವ ಅನಾದಿ ರುದ್ರಭದ್ರರ ಉಜ್ವಲ ಪರಂಪರೆಯನ್ನು ಉಳಿಸಿಕೊಂಡು ಬೆಳೆಸಿಕೊಳ್ಳುವ ಕೆಲಸ ಇನ್ನೂ ಸಾಕಷ್ಟು ಕೈಕೊಳ್ಳಬೇಕಾಗಿದೆ. ಕುತೂಹಲ ಕೆರಳಬೇಕಾಗಿದೆ. ರುದ್ರ-ಭದ್ರರ ಪ್ರಾಗತಿಹಾಸ ಸಂಶೋಧನ ನಮ್ಮ ಕುತೂಹಲವನ್ನು ಮಿಗಿಲಾಗಿಸಿದೆ. ಅವರ ಅಗಾಧ ಚಾರಿತ್ರವನ್ನು ಇತಿಹಾಸದಿಂದ ಹೊರಗಿರಿಸಿ ಹಿಂದಿನ ಇತಿಹಾಸಜ್ಞರು ವೀರಶೈವ ಇತಿಹಾಸಕ್ಕೆ ಅನ್ಯಾಯವೆಸಗಿದ್ದಾರೆ. ಧಾರ್ಮಿಕರು ವೀರಶೈವ ಪುರಾತನ ಸಾಂಸ್ಕೃತಿಕ ಪರಂಪರೆಯನ್ನು ಪ್ರತಿಪಾದಿಸದೆ ಬಿಟ್ಟಿಲ್ಲ. ಇದು ನಿಜವಾಗಿಯೂ ಅದೃಷ್ಟವೆಂದೆ ಹೇಳಬೇಕು. ಚಂದ್ರಜ್ಞಾನಾದಿ ಆಗಮಗಳು ಶ್ರೀ ರುದ್ರದೇವನನ್ನು ಜಗದ್ಗುರುವೆಂದು ನಿರೂಪಿಸಿದರೆ ಶಿವಶರಣ ಶ್ರೇಷ್ಠರಾದ ಬಸವಣ್ಣ ಚನ್ನಬಸವಣ್ಣ ಪ್ರಭುದೇವ ಮೋಳಗಿ ಮಾರಯ್ಯ ಮೊದಲಾದವರು

ಶ್ರೀ ರುದ್ರದೇವನನ್ನು ಪರಿವಿಡಿದು ವಿಶ್ವಾಧಿಕನೆಂದು, ಶಿವಾಚಾರ ಉತ್ಪಾದಕನೆಂದು, ಇಷ್ಟಲಿಂಗ ಶಿರೋಧಾರಿಯೆಂದು, ಲಿಂಗತತ್ತ್ವವೆ ಶ್ರೀರುದ್ರನೆಂದು ಮುಂತಾಗಿ ತಂತಮ್ಮ ವಚನಗಳಲ್ಲಿ ವಿಪುಲವಾಗಿ ವಚಿಸಿದ್ದಾರೆ; ಉತ್ಸಾಹ ಉಕ್ಕಿಸಿ ರುದ್ರ ಪರಂಪರೆಯನ್ನು ಉಳಿಸಿದ್ದಾರೆ; ಬೆಳಗಿಸಿದ್ದಾರೆ–ಶ್ರೀ ರುದ್ರದೇವನ ಅನಾದಿ ವೀರಶೈವ ಕೊಡುಗೆಗಳನ್ನು ! ಚನ್ನಬಸವಣ್ಣನಂತೂ ಶ್ರೀ ರುದ್ರನು ಮುಮ್ಮೊದಲು ಶಿವಾಚಾರವನ್ನು ಉತ್ಪಾದಿಸಿದ ಸನಾತನ ಶಿವಾಚಾರ್ಯನೆಂದು "ರುದ್ರೇಣ ದೀಕ್ಷಿತೋಭೂತ್ವಾ...." ಎಂಬೀ ಆದಿತ್ಯ ಪುರಾಣೋಕ್ತಿಯನ್ನು ಅಂಗೀಕರಿಸುವ ಮೂಲಕ ಉದ್‌ಘೋಷಿಸಿದ್ದಾನೆ. ರುದ್ರ ಕಥಿತ ಲಿಂಗಾರ್ಚನ ಸೂಚಿತ ಸನಾತನ ಶಿವಧರ್ಮ (ವೀರಶೈವಧರ್ಮ)ಗಳು ಅಂದರೆ ಅಷ್ಟಾವರಣಗಳು ವೀರಶೈವಕ್ಕೆ ಬುನಾದಿಗಳಾಗಿದೆಯೆಂದು ಅದೇ ಆದಿತ್ಯ ಪುರಾಣ ಪ್ರತಿಪಾದಿಸಿದೆ. ಇದನ್ನೆ ಹರಪ್ಪ ಮೊಹೆಂಜೊದಾರೊದಲ್ಲಿ ದೊರೆತ ಚಿಕ್ಕ ಚಿಕ್ಕ ಪೀಠಿಕೆಗಳು ರಾಶಿರಾಶಿಯಾಗಿ ಸಿಕ್ಕು ಲಿಂಗ ಸಂಸ್ಕೃತಿಯನ್ನು ಎತ್ತಿ ಹಿಡಿದಿವೆ.

ರುದ್ರದೇವನು ಸ್ಕಂದಾದಿ ರುದ್ರಗಣ ಮರುದ್ಗಣ, ರುದ್ರಕನ್ನೆಯರಿಗೆಲ್ಲ ದೀಕ್ಷಾ ಸಂಸ್ಕಾರವನ್ನಿತ್ತು ಸುಸಂಸ್ಕೃತರನ್ನಾಗಿ ಮಾಡಿದ ಪ್ರಥಮ ಶಿವಾಚಾರ್ಯನು. ಬಳಿಕ ಆತನ ಪುತ್ರ ವೀರಭದ್ರನು ಶತರುದ್ರಾಧಿಪತಿಯಾಗಿ ವೀರಗಣ, ವೀರಮಾಹೇಶ್ವರಗಣ, ವೀರಮಹಿಳೆಯರಿಗೆ ಶಿವದೀಕ್ಷಾಸಂಸ್ಕಾರವನ್ನಿತ್ತು ಶಿವ ಸಂಸ್ಕೃತಿಯನ್ನು ಸಂಮೃದ್ಧಿಸಿದ ದ್ವಿತೀಯ ಶಿವಾಚಾರ್ಯನು.

"ವೀರಭದ್ರೋ ಯಥಾರುದ್ರಸ್ತ್ವನ್ಯೇ ಚ ಗುರವಃ ಸ್ಮೃತಾಃ ।
ಗುರೋರ್ಜ್ಞಾತಾಶ್ಚ ಗುರವೋ ವಿಖ್ಯಾತಾ ಭುವನತ್ರಯೇ ॥

—ಸ್ಕಂದ ಪುರಾಣ, ಕೇದಾರಖಂಡ,

ರುದ್ರದೇವನಂತೆ ವೀರಭದ್ರನು ವೀರಶೈವ ಗುರುವಾಗಿದ್ದನು. ಇವರಿಬ್ಬರಲ್ಲದೆ ಬೇರೆ ಗುರುಗಳು ಬೇಕಾದಷ್ಟು ಜನರಿದ್ದರು. ಅವರೆಲ್ಲರೂ ಮೂಲ ಗುರು ಸಂಬಂಧವುಳ್ಳವರಾಗಿದ್ದರು; ಗುರು ಕರಕಂಜ ಸಂಜಾತರಾಗಿದ್ದರು. ಅವರೆಲ್ಲ ಅಪ್ರಸಿದ್ಧರಲ್ಲ; ಮೂರು ಲೋಕಗಳಲ್ಲಿ ವಿಖ್ಯಾತರಾಗಿದ್ದರು. ವೀರ ಧ್ವಜವನ್ನು ವಿಶ್ವದಲ್ಲಿ ಎತ್ತಿಹಿಡಿದಿದ್ದರು. "ಸಹಸ್ರಾಣಿ ಸಹಸ್ರಶೋ ಯೇ ರುದ್ರಾ ಅಧಿಭೂಮ್ಯಾಂ...." ಎಂದು ಶ್ರೀರುದ್ರಸೂಕ್ತ ಸಾರಿದೆ. 'ಗಂಗಾ

ವಾಲುಕ ಸಮರುದ್ರ'ರನ್ನು ರೂಪಿಸಿದ ಅನುಪಮ ಹಿರಿಮೆ–ಮಹಿಮೆ ರುದ್ರ–ಭದ್ರರದು. ರುದ್ರಗಣ ವೀರಗಣರು ವೀರಾಚಾರ (ವೀರಶೈವಾಚಾರ) ನಿರತ ಆಚಾರ್ಯರು, ವೀರವ್ರತವಿದರು, ವಿಕ್ರಮರು, ವೀರಾವತಾರ ಸಮರು ಎಂಬುವದನ್ನು 'ಚೆನ್ನುಡಿ' ಸಂಪಾದಕರಾದ ಶ್ರೀ ಗೌ. ಮ. ಉಮಾಪತಿಶಾಸ್ತ್ರಿಗಳವರು ತಮ್ಮ 'ಚೆನ್ನುಡಿ' ವಾರಪತ್ರಿಕೆಯ (೧೫–೬–೮೭)ಲ್ಲಿ ತಾವು ಸಂಶೋಧಿಸಿ ಸಂಗ್ರಹಿಸಿದ ಪಂಚರತ್ನಗಳಂತಿರುವ ಈ ಪಂಚ ಕಂದಪದ್ಯಗಳನ್ನು ಪ್ರಕಟಿಸಿರುವರು. ಅವಿವು :

"ವೀರಾಚಾರಾಚಾರ್ಯರ್
ವೀರವ್ರತವಿದರವಾರ್ಯ ವಿಕ್ರಮರು ಮಹಾ
ವೀರಾವತಾರಸಮರು
ವೀರೇಶ್ವರ. ನಿನ್ನ ಗಣರು ವಿಷ್ಣು ವರೇಣ್ಯ !

ಸ್ವೇಚ್ಛಾಚಾರ ವಿನಿಷ್ಠಿತ-
ರಿಚ್ಛಾ ವ್ಯಾಪಾರ ಮುಕ್ತಹೃದಯರು ಭವಪಾ-
ಶಚ್ಛೇದನ ಕಾರಣರು ದ-
ಯಾಚ್ಛಾದಿತ ತನುಗಳಭವ ನಿನ್ನ ಗಣಂಗಳ್ !

ಸರ್ವಜ್ಞರ್ ಸರ್ವಗತರ್
ಸರ್ವ ಸುಖೋದಯರು ಸರ್ವಸಂಗತ್ಯಾಗರ್;
ಸರ್ವಪರಿಪೂರ್ಣರನಿಶಂ
ಸರ್ವೇಶ ಭವದ್ಗಣಾಧಿವತ್ ಶಾಶ್ವತರು.

ಗತ ವಿಧಿನಿಷೇದ ಲೌಕಿಕ-
ರತರರತಿಮತಿ ಯುತರು ಪರಮಕಾರುಣ್ಯರಹಂ–
ಕೃತ ಕರ್ಮರು ಸಕಲ ಗುಣಾ-
ನ್ವಿತರು ಶಿವಜ್ಞಾನರತರು ನಿಜಗುಣಾಧಿಪರೀಶಾ !

ಅನ್ಯೋನ್ಯ ಪ್ರಿಯಭಾಷಣ-
ರನ್ಯೋನ್ಯ ಸುಚರಿತರನ್ಯೋನ್ಯ ಮಹಾ-
ಮಾನ್ಯರು ನಿಜಗಣನಾಯಕ-
ರನ್ಯೋನ್ಯ ನಮಸ್ಕೃತರ್ಮಹಾತ್ಮರು ರುದ್ರಾ !"

ಕುತೂಹಲ (ತವಕ)ವನ್ನು ಕೆರಳಿಸುವ ಈ ಪರಿಶೀಲನಾತ್ಮಕ ಪಂಚ ಪದ್ಯಗಳು ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯಕೃತ 'ಶಿವತತ್ತ್ವಸಾರ' ಕೃತಿಯೊಳಗಿನವೆಂದು ಶಾಸ್ತ್ರಿಗಳು ತಿಳಿಸಿರುವರು. ರುದ್ರಗಣರು ವೀರಗಣರು ಶಿವಾಚಾರ್ಯರೆಂಬ ನಮ್ಮ ನಿರೂಪಣೆಯನ್ನು ಇವು ಸ್ಪಷ್ಟ ಸಮರ್ಥಿಸಿವೆ. ಗಣರು ವೀರಶೈವಾಚಾರ್ಯರಾಗಿ ವೀರವ್ರತವಿದರಾಗಿ ಶಿಷ್ಯರ ಭವಪಾಶಭೇದನ ಕಾರಣರಾಗಿದ್ದರು.ದಯಾಮಯ ಹೃದಯರು, ಸರ್ವಸಂಗತ್ಯಾಗರು, ವಿಧಿನಿಷೇಧ ವಿರಹಿತರು, ಅತಿಮತಿವಂತರು, ಪರಮಕಾರುಣ್ಯರು, ಪರಶಿವ ಜ್ಞಾನಿಗಳು, ಪರಿಪೂರ್ಣರು ಆಗಿದ್ದರು. ಪರಿಪೂರ್ಣರಾಗಿದ್ದರೂ ಅಹಂಕಾರ ಮದ ಮಾತ್ಸರ್ಯ ರಾಗ ದ್ವೇಷ ಸ್ವಾರ್ಥ ಸಂಕುಚಿತತೆಗಳಿರಲಿಲ್ಲ. ಅನ್ಯೋನ್ಯವಾಗಿ ಹಿತ ವಕ್ತೃಗಳಾಗಿದ್ದರು. ಸುಚರಿತರು ಮಹಾಮಾನ್ಯರು, ಅನ್ಯೋನ್ಯವಿನಯಾನ್ವಿತರು ಅಂತೆಯೇ ಪರಸ್ಪರ ನಮಸ್ಕರಿಸುವವರು, ನಿಜಗಣನಾಯಕರು ಆಗಿದ್ದರೆಂದರೆ ಅವರೆಷ್ಟು ಆದರ್ಶ ಜೀವಿಗಳಾಗಿದ್ದರು, ಮತ್ತು ಲೋಕಹಿತ ನಿರತರಾಗಿದ್ದರು-ಎಂಬುದು ಚನ್ನಾಗಿ ಚಿತ್ತಕ್ಕೆ ವೇದ್ಯವಾಗುತ್ತದೆ. ವೀರಶೈವ ಸಂಸ್ಕೃತಿಗೆ ಶಿವಾಚಾರ್ಯರ ಕೊಡುಗೆ ಇದಕ್ಕಿಂತ ಇನ್ನೇನಾಗಬೇಕು ? ಇನ್ನೆಂತಹದಿರಬೇಕು ?

ವೀರೇಶನ ಅರ್ಥವಿಲ್ಲದ ಯಜ್ಞಗಳ ನಿರೋಧಕ್ರಾಂತಿ ಪ್ರಾಚೀನ ಪ್ರಾಥಮಿಕ ಕ್ರಾಂತಿ, ಅದು ಈಚಿನ ಬುದ್ಧ-ಬಸವಣ್ಣಾದಿಗಳಿಗೂ ಆದರ್ಶವಾಗಿ ಅನುಕರಣನೀಯವಾಗಿದೆ. ಜೀವನೋಪಯೋಗಿಗಳಾದ ಪಡಿ ಪದಾರ್ಥ ಪ್ರತಿ ಪ್ರಾಣಿಗಳ ಅರ್ಥವಿಲ್ಲದ ಆಹುತಿಯಿಂದ ನಿಲ್ಲಿಸಿದ ಕ್ರಾಂತಿ ಮೂರು ಕಾಲಕ್ಕೂ ಮಾನ್ಯವಾದುದು. ಅಂತೆಯೇ ಆರ್ಯದ್ರಾವಿಡ ಸಮನ್ವಯ ಕ್ರಾಂತಿಯೂ ಸರ್ವಮಾನ್ಯವಾದುದು. ಭಾರತೀಯ ಸಮನ್ವಯ ಸಂಸ್ಕೃತಿಗೆ ಬುನಾದಿಯಾದುದು.

ಹರಪ್ಪಾ, ಮೊಹೆಂಜೊದಾರೊಗಳಲ್ಲಿ ಸಿಕ್ಕಿರುವ ಶ್ರೀ ರುದ್ರ ಪಶುಪತಿಯ ಶಿವಾಚಾರ ಸಂಸ್ಕೃತಿ ವೈದಿಕ ಯುಗಕ್ಕಿಂತಲೂ ತುಂಬಾ ಪ್ರಾಚೀನವಾದುದು. ಅನಾದಿ ಶಿವಾಚಾರ್ಯರ ಸಂಸ್ಕೃತಿಗೆ ಸೇರಿದುದು. ಶಿವಾಚಾರದ ಉತ್ಪಾದಕನೂ ಪ್ರವರ್ತಕನೂ ಆದ ರುದ್ರ ಪಶುಪತಿಯು ಪ್ರಥಮ ಶಿವಾಚಾರ್ಯನು. ಆತನಿಂದ ಅನಾದಿ ವೀರಶೈವ ಸಂಸ್ಕೃತಿಯ ಕೊಡುಗೆ ಮಾಡಲಾಗಿದೆ. ಆ ಕೊಡುಗೆ ಅವೇ ಅಷ್ಟಾವರಣಗಳು. ಅದರಿಂದಾಗಿ ಇಷ್ಟಲಿಂಗ ಧಾರಣ

ಧ್ಯಾನ ಅರ್ಚನಾದಿಗಳು ಅನಾದಿಯಾದವುಗಳು. ಯೋಗವಿದ್ಯೆಯ ಅನಾದಿ ಪ್ರವರ್ತಕನಾದ ಅದೇ ಆ ರುದ್ರ ಪಶುಪತಿಯು ಶಿವಯೋಗ (ಲಿಂಗಯೋಗ) ಪ್ರವರ್ತಕನೂ ಆಗಿದ್ದಾನೆ. ಆತನ ಆ ಶಿವಾಚಾರ ಸಂಸ್ಕೃತಿಯನ್ನು ಅನುಸರಿಸಿದ ಮಹಾಪಾಶುಪತರು ಅರ್ಥಾತ್ ಶಿವಾಚಾರ್ಯರು ಅಸಂಖ್ಯಾತರಾಗಿದ್ದರು ; ಶಿವ ರುದ್ರಾಗಮ ಸಂಹಿತೆಗಳ ಪ್ರವರ್ತಕರೂ ಆಗಿದ್ದರು.

"ತೇ ಚ ಪಾಶುಪತಾ ಜ್ಞೇಯಾ : ಸಂಹಿತಾನಾಂ ಪ್ರವರ್ತಕಾಃ ।
ತತ್ಸಂತತೀನಾಂ ಗುರುವಃ ಶತಶೋಽಥ ಸಹಸ್ರಶಃ ॥''

— ಶಿವಪುರಾಣ.

ಅನಾದಿ ಶಿವಾಚಾರ್ಯನಾದ ಶ್ರೀ ರುದ್ರದೇವನ ಅನುಯಾಯಿಗಳಾದ ಹನ್ನೊಂದು ಮಂದಿ (ಏಕಾದಶ) ರುದ್ರರಿಂದ ಮೊದಲಾದ ಶಿವಾಚಾರ್ಯ ಸಂತತಿ ಶತರುದ್ರೀಯರಾಗಿ ಗಂಗೆವಾಲುಕ ಸಮರುದ್ರರಾಗಿ ರೇಣುಕ-ದಾರುಕ-ಘಂಟಾಕರ್ಣ-ಗಜಕರ್ಣ-ವಿಶ್ವಕರ್ಣ ಶಿವಾಚಾರ್ಯರಾಗಿ ಅಸಂಖ್ಯಾತವಾಗಿ ಮುಂದು ವರಿಯುತ್ತದೆ ; ವರಿದಿದೆ. ಈ ಎಲ್ಲ ಶಿವಾಚಾರ್ಯರು ವೀರಶೈವ ಧರ್ಮಕ್ಕೆ ಅಷ್ಟೇ ಅಲ್ಲ ವಿಶ್ವ ಸಂಸ್ಕೃತಿಗೆ ಕೊಟ್ಟ ಕೊಡುಗೆ ಮೂಲಭೂತವಾದುದು ; ಮೌಲ್ಯ ವಾದುದು. ಜೀವನಕ್ಕೆ ಜೀವಂತತೆಯನ್ನು ಜ್ವಲಂತತೆಯನ್ನು ತರುವಂತಹದು. ಸತ್-ಚಿತ್-ಆನಂದಗಳನ್ನು ತರುವಂತಹದು. ಈ ಸತ್-ಚಿತ್-ಆನಂದಗಳು ಬಾಳಿನ ಬದುಕಿನ ಉಸಿರುಗಳು ; ಚೇತನಗಳು. ಸಂಸ್ಕೃತಿಯ ಮೂಲಗಳು ಜೀವನ ಸತ್ ಆಗಬೇಕು ; ಇದು ಮೊದಲ ಬದುಕು. ಸದಾಚಾರರ ಶಿವಾಚಾರ ಗಳಿಲ್ಲದೆ ಜೀವನ ಸತ್ ಆಗದು. ಕ್ರಿಯಾಚಾರ ಜ್ಞಾನಾಚಾರಗಳಿಲ್ಲದೆ ಚಿತ್ ಆಗದು ; ಭಾವಾಚಾರ ಅನುಭವಾಚಾರಗಳಿಲ್ಲದೆ ಆನಂದವೊದಗದು. ಇದು ವೀರಶೈವ ಸಂಸ್ಕೃತಿ । ಇದನ್ನು ಅನುಗ್ರಹಿಸಿದವರು ಶಿವಾಚಾರ್ಯರು.

ಶಿವಾಚಾರ್ಯರ ಸಂಸ್ಕೃತಿ ಶಿವಾಚಾರ ! ಅದು ಜೀವನದ ಮೂಲಭೂತ ವಾದ ಸತ್ ತತ್ವವನ್ನು ರೂಪಿಸುತ್ತದೆ. ಸತ್ತಿನಿಂದ ಸುಸಂಸ್ಕಾರ ಸಂಸ್ಕೃತಿ ಉದಯ. "ಅಸತೋ ಮಾ ಸದ್ಗಮಯ, ತಮಸೋ ಮಾ ಜ್ಯೋತಿರ್ಗಮಯ; ಮೃತ್ಯೋರ್ಮಾಮೃತಂ ಗಮಯ" ಎಂದು ಗೀತಿಸಿದೆ ಶ್ರುತಿ ! ಅಸತ್‌ನ್ನು ತೊಡೆಯದೆ ಸತ್ ಉದಿಸದು. ಅಂದರೆ ಒಳ್ನಡೆ ಒಳ್ನುಡಿ ಒಳ್ಪಗೆ ಒಳಿತರಿವು ಒಳಿತೊಲವುಗಳು ಬಾಳಿಗೆ ಒಡಮೂಡವು. ಅಸತ್ ಎಲ್ಲಿದೆಯೋ ಅಲ್ಲಿ ತಮಸ್

ಇರುತ್ತದೆ. ತಮಸ್ ಅಂದರೆ ಅಂಧಕಾರ, ಅಜ್ಞಾನ, ಪಾಪಕರ್ಮ, ತಾಪಜೀವನ ಇರುತ್ತವೆ. ಇವಿರುವಲ್ಲಿ ಅಮೃತವಿರದು. ಮೃತ್ಯು ಬಿಡದು. ಕಾರಣ ಅಸತ್ತನ್ನು ತಮಸ್ಸನ್ನು ಮೃತ್ಯುವನ್ನು ತೊಡೆದು ಹಾಕುವುದೇ ಸಾಂಸ್ಕೃತಿಕ ಜೀವನದ ಉತ್ತಮ ಉದ್ದೇಶ. ಇವನ್ನು ತೊಡೆದು ಹಾಕಲು ಸತ್ಕ್ರಿಯೆ,ಸಮ್ಯಗ್‌ಜ್ಞಾನ, ಸದಿಚ್ಛೆಗಳು ಅನಿವಾರ್ಯ ! ಪರಿವಿಡಿದು ಇವನ್ನು ಸಂಪಾದಿಸಲು ಶಿವಾಚಾರ್ಯರು ಇಷ್ಟ (ಕ್ರಿಯಾ) ಲಿಂಗ, ಪ್ರಾಣ (ಜ್ಞಾನ) ಲಿಂಗ, ಭಾವ (ತೃಪ್ತಿ) ಲಿಂಗಗಳನ್ನು ಮಾಧ್ಯಮಗಳನ್ನಾಗಿ ಸಾಧಕರಿಗೆ ಕರುಣಿಸಿದ್ದಾರೆ. ಇವುಗಳಿಂದ ಶಿವ-ಶಕ್ತಿ ಉದಯವಾಗುತ್ತದೆ. ಆ ಶಿವಶಕ್ತಿಯನ್ನೆ ಸತ್ ಚಿತ್ ಆನಂದವೆಂದು ಹೇಳ ಲಾಗುತ್ತದೆ. ಅವನ್ನು ಪಡೆವುದೇ ಮಾನವೀಯ ಧರ್ಮ. ಅಥವಾ ಮಾನವೀಯ ಸಂಸ್ಕೃತಿ. ಅದುವೇ ವೀರಶೈವ ಸಂಸ್ಕೃತಿ ; ಅದನ್ನು ಕರುಣಿಸಿದರು ಸನಾತನ ಶಿವಾಚಾರ್ಯರು "ಸಚ್ಚಿದಾನಂದ ರೂಪಾಯ ಶಿವಾಯ ಬ್ರಹ್ಮಣೇ ನಮಃ" ಎಂದು ಹಾಡ ಹೇಳಿದರು ; ಮಾಡ ಹೇಳಿದರು ; ಮೊರೆ ಹೋಗ ಹೇಳಿದರು. ಆ ಸಚ್ಚಿದಾನಂದ ಸ್ವರೂಪ ಪರಶಿವಬ್ರಹ್ಮವೇ ಈ ಸಮಷ್ಟಿ ಜಗದಾಧಾರ ; ಈ ವ್ಯಷ್ಟಿ ಜೀವನಾಧಾರ. ಸಾಂಸ್ಕೃತಿಕ ಜೀವನಾಧಾರ ಅಂತೆಯೇ ಶಿವ ಯೋಗಿ ಶಿವಾಚಾರ್ಯನು ಶಿವಾಗಮಗಳ ಸಾರವಾದ ತನ್ನ ಸಿದ್ಧಾಂತ ಶಿಖಾ ಮಣಿಯಲ್ಲಿ ಹೀಗೆ ನಿರೂಪಿಸಿದ್ದಾನೆ : "ತ್ರೈಲೋಕ್ಯ ಸಂಪದಾಲೇಖ್ಯ ಸಮು ಲ್ಲೇಖನ ಭಿತ್ತಯೇ । ಸಚ್ಚಿದಾನಂದ ರೂಪಾಯ ಶಿವಾಯ ಬ್ರಹ್ಮಣೇ ನಮಃ ॥" ಇಲ್ಲಿದೆ ವೀರಶೈವದ ಅಷ್ಟೇಕೆ–ವಿಶ್ವದ ಸಾಂಸ್ಕೃತಿಕ ಜೀವನಾಧಾರ! ಅದುವೆ ಸತ್ ಚಿತ್ ಆನಂದ ಸ್ವರೂಪ ಪರಶಿವ ಬ್ರಹ್ಮ ; ಅದುವೇ ಮೂರು ಲೋಕಗಳೆಂಬ ಸಂಪದ್ಭರಿತ ಸುಂದರ ಚಿತ್ರ ಭಿತ್ತಿ ! ಇದನ್ನೆ ಪ್ರಭುದೇವರು ಹೀಗೆ ಹೇಳಿದ್ದಾರೆ : "ಏನೂ ಏನೂ ಇಲ್ಲದ ಬಯಲೊಳಗೊಂದು ಬಗೆಗೊಳ ಗಾಗದ ಬಣ್ಣ ತಲೆದೋರಿತ್ತು. ಆ ಬಣ್ಣವನಾ ಬಯಲು ಶೃಂಗರಿಸಲು ಬಯಲು ಸ್ವರೂಪಗೊಂಡಿತ್ತು. ಅಂತಪ್ಪ ಸ್ವರೂಪಿನ ಬೆಡಗು ತಾನೆ ನಮ್ಮ ಗುಹೇಶ್ವರಲಿಂಗದ ಪ್ರಥಮ ಭಿತ್ತಿ !" ಶಿವಯೋಗಿ ಶಿವಾಚಾರ್ಯರ ಆಶಯವೇ ಕನ್ನಡದಲ್ಲಿ ವಚನರೂಪ ತಳೆದು ನಿಂತಿದೆ.

ನಿಷ್ಕಲ ಸಚ್ಚಿದಾನಂದ ಪರಶಿವಬ್ರಹ್ಮವಸ್ತುವೆ ನಿಷ್ಕಲ ಸಕಲ ಸ್ವರೂಪ ಸದಾಶಿವನಾಗಿ, ಸಕಲರೂಪ ಮಹೇಶ್ವರನಾಗಿ ವಿಶ್ವ ಮತ್ತು ವೀರಶೈವ

ಸಂಸ್ಕೃತಿಗೆ ಮೂಲ ಕಾರಣನಾಗಿದ್ದಾನೆ. ಆ ಮಹೇಶ್ವರ ತತ್ವವೇ ಶುದ್ಧ ವಿದ್ಯೆಯೊಡಗೂಡಿ ಮಹೇಶ್ವರನಾಗಿ ಅಂದರೆ ಶಿವಾಚಾರ್ಯನಾಗಿ ಶಿವಾಚಾರ ಸಂಸ್ಕೃತಿಗೆ ಕಾರಣ ಚೇತನನಾಗಿದ್ದಾನೆ. ಆನಂದಲಕ್ಷಣ ಶಿವಶಕ್ತಿ, ಚಿಲ್ಲಕ್ಷಣ ಸದಾಶಿವ, ಸಲ್ಲಕ್ಷಣ ಮಹೇಶ್ವರ ತತ್ತ್ವತ್ರಯಗಳು. ಸಲ್ಲಕ್ಷಣ ಮಹೇಶ್ವರನೆ ಪ್ರಕೃತಿ-ಸಂಸ್ಕೃತಿಗಳಿಗೆ ಸನ್ನಿಹಿತ ಕಾರಣ."ಮಾಯಾಂತು ಪ್ರಕೃತಿಂ ವಿಂದ್ಯಾತ್ ಮಾಯಿನಂ ತು ಮಹೇಶ್ವರಂ ।" ಮಹೇಶ್ವರನಿಷ್ಠ ಪ್ರಕೃತಿ ಸಂಸ್ಕೃತಿಗೆ ಮೂಲ. "ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನ ಬಲ ಕ್ರಿಯಾ ಚ ।" ಎಂದು ಶ್ವೇತಾಶ್ವತರ ಶ್ರುತಿ ಸಾರಿದೆ. ಜ್ಞಾನ ಬಲಕ್ರಿಯೆಗಳೇ ಸಂಸ್ಕೃತಿ ಮೂಲ. ಇವುಳ್ಳ ಮಹೇಶ್ವರ ತತ್ತ್ವನಿಷ್ಠನೇ ಮಾಹೇಶ್ವರ. ಅನಾದಿ ರುದ್ರನೆ ಅನಾದಿ ವೀರಶೈವ ಮಾಹೇಶ್ವರ. ಆತನ ಅನುಯಾಯಿಗಳೇ ಮಾಹೇಶ್ವರನಿಷ್ಠ ಶಿವಾಚಾರ್ಯರು. ಇವರು ವೀರಶೈವ ಸಂಸ್ಕೃತಿಗೆ ಕಾರಣರು. ಮತ್ತು ಶಿವಾಗಮ ಸಾಹಿತ್ಯ ಕಾರಣರು. ಆ ಶಿವಾಗಮಗಳ ಸಾರಸರ್ವಸ್ವವೇ ಶಿವಯೋಗಿ ಶಿವಾಚಾರ್ಯರ ಸಿದ್ಧಾಂತ ಶಿಖಾಮಣಿ ! ಇದು ವೀರಶೈವ ಮಹಾತಂತ್ರ ! ಇದರ ನಿರೂಪಣಕಾರಣ ಲೋಕಾನುಗ್ರಹ ! ಇದು 'ಶಿವಬೋಧಾದ್ವೈತ ಭಾವಪ್ರಸಾದ'ವಾಗಿ, ಜೀವನ ಸಕಲಾರ್ಥ ಸಾಧನವಾಗಿ ಮಿಗಿಲಾಗಿ ವೀರಶೈವ ಸಂಸ್ಕೃತಿಯ ಏಕೈಕ ಕೃತಿಯಾಗಿ ದ್ಯುತಗೊಂಡಿದೆ. "ಸರ್ವಸ್ವಂ ವೀರಶೈವಾನಾಂ ಸಕಲಾರ್ಥ ಪ್ರಕಾಶಕಂ । ಅಸ್ಪೃಷ್ಟಮಖಿಲೈರ್ದೋಷೈರಾದೃತಂ ಶುದ್ಧ ಮಾನಸೈಃ ॥" ಎಂದಿದೆ.

## ಶಿವಾಚಾರ್ಯರ ಶಿವಸಂಸ್ಕಾರವೆ ವೀರಶೈವ ಸಂಸ್ಕೃತಿ !

"ವಿಶ್ವಸ್ಮಾದಧಿಕೋ ರುದ್ರೋ ವಿಶ್ವಾನುಗ್ರಹಕಾರಕಃ ।
ಇತಿ ಯಸ್ಯ ಸ್ಥಿರಾ ಬುದ್ಧಿಃ ಸ ವೈ ಮಾಹೇಶ್ವರಃ ಸ್ಮೃತಃ ॥
ಅನಾದಿಮುಕ್ತೋ ಭಗವಾನೇಕ ಏವ ಮಹೇಶ್ವರಃ ।
ಮುಕ್ತಿದಶ್ಚೇತಿ ಯೋ ವೇದ ಸ ವೈ ಮಾಹೇಶ್ವರಃ ಸ್ಮೃತಃ ॥"

—ವೀರಾಗಮ.

ಶಿವಾಚಾರ್ಯ-ಮಾಹೇಶ್ವರ ಇವೆರಡೂ ಏಕಾರ್ಥವುಳ್ಳ ಪರ್ಯಾಯ ಪದಗಳು ; ಅಂದರೆ ಸಮಾನಾರ್ಥವುಳ್ಳವುಗಳು. ಶಿವಾಚಾರ ಪ್ರವರ್ತಕ ಶ್ರೀ ರುದ್ರದೇವ. ಶ್ರೀ ರುದ್ರದೇವನಿಂದ ಸ್ಕಂದನು ದೀಕ್ಷಿತನಾಗಿ ಶಿವಾಚಾರ ರಹಸ್ಯ

ವನ್ನು ಮುಮ್ಮೊದಲು ಮನವರಿಕೆ ಮಾಡಿಕೊಳ್ಳುವನು. ಮತ್ತು ಇಷ್ಟಲಿಂಗಾರ್ಚನ ಪರವಾದ ಶಿವಧರ್ಮಗಳು ಶ್ರೀ ರುದ್ರನಿಂದ ಉತ್ಪತ್ತಿಗೊಂಡವು. ಇದರಿಂದಾಗಿ ಅನಾದಿ ವೀರಶೈವ ಸಂಸ್ಕೃತಿ ಆತನಿಂದ ಆವಿಷ್ಕಾರಗೊಂಡಿತು. ವೀರಶೈವ ಸಂಸ್ಕೃತಿಯನ್ನು ವಿಶ್ವಾನುಗ್ರಹಕ್ಕಾಗಿ ಶ್ರೀ ರುದ್ರದೇವನು ಉತ್ಪಾದಿಸುವನು. ಆದರಿಂದಾಗಿ ಆತನು ಈ ವಿಶ್ವಕ್ಕೆ ಅಧಿಕನು. ಇದರಲ್ಲಿ ಅದೆಷ್ಟೂ ಸಂಶಯುವಿಲ್ಲ, ಎಂದು ಗಟ್ಟಿಯಾಗಿ ತಿಳಿದು ಶ್ರೀ ರುದ್ರಶಿವಾಚಾರ್ಯನಲ್ಲಿ ನಿಷ್ಠೆಯುಳ್ಳವನೇ ಮಾಹೇಶ್ವರನು. ಶ್ರೀರುದ್ರನೇ ಮಹೇಶ್ವರ ತತ್ತ್ವಸ್ವರೂಪನು. ಆತನೇ ಅನಾದಿ ಮುಕ್ತನು, ಭಗವಂತನು ಅಂದರೆ ಪರಮಪೂಜ್ಯನು, ಮುಕ್ತಿದಾಯಕನು ಎಂದರಿದು ಆಚರಿಸುವಾತನೆ ಮಾಹೇಶ್ವರನು. ಅಲ್ಲದೆ ಸತ್ ಸಂಸ್ಕೃತಿಗೆ ಹೊರಗಾದ ಅಶಿವಾಚಾರಗಳನ್ನು ತೊರೆದು ಶಿವಾಚಾರ ನಿರತನಾದವನು ವೀರಶೈವ ಮಾಹೇಶ್ವರನು ಅಂದರೆ ಶಿವಾಚಾರ್ಯನು ಎಂದೆನಿಸುವನು.

ಶಬ್ದಸ್ಪರ್ಶಾದಿ ಸಂಪನ್ನೇ ಸುಖಲೇಶೇತು ನಿಸ್ಪೃಹಃ
ಶಿವಾನಂದೇ ಸಮುತ್ಕಂಠೋ ವೀರಮಾಹೇಶ್ವರೋ ಭವೇತ್ ।
ಪರಸ್ತ್ರೀ ಸಂಗನಿರ್ಮುಕ್ತಃ ಪರದ್ರವ್ಯ ಪರಾಙ್ಮುಖಃ
ಶಿವಾರ್ಥಕಾರ್ಯ ಸಂಪನ್ನಃ ಶಿವಾಗಮ ಪರಾಯಣಃ ।
ಶಿವಸ್ತುತಿರಸಾಸ್ವಾದ ಮೋದಮಾನಮನಾಃ ಶುಚಿಃ
ಶಿವೋತ್ಕರ್ಷ ಪ್ರಮಾಣಾನಾಂ ಸಂಪಾದನ ಸಮುದ್ಯತಃ ।
ನಿರ್ಮಮೋ ನಿರಹಂಕಾರೋ ನಿರಸ್ತಕ್ಲೇಶ ಪಂಜರಃ
ಅಸ್ಪೃಷ್ಟಮದ ಸಂಬಂಧೋ ಮಾತ್ಸರ್ಯಾವೇಶವರ್ಜಿತಃ ।
ನಿರಸ್ತ ಮದನೋನ್ಮೇಷೋ ನಿರ್ಧೂತಕ್ರೋಧ ವಿಪ್ಲವಃ
ಸದಾ ಸಂತುಷ್ಟಹೃದಯಃ ಸರ್ವ ಪ್ರಾಣಿಹಿತೇ ರತಃ ।
ನಿವಾರಣ ಸಮುದ್ಯೋಗೀ ಶಿವಕಾರ್ಯ ವಿರೋಧಿನಾಂ
ಸಹಚಾರೀ ಸದಾಕಾಲಂ ಶಿವೋತ್ಕರ್ಷಾಭಿಧಾಯಿಭಿಃ ।
ಶಿವಾಪಕರ್ಷಸಂಪ್ರಾಪ್ತೌ ಪ್ರಾಣತ್ಯಾಗೇಽಪ್ಯಶಂಕಿತಃ
ಶಿವೈಕನಿಷ್ಠಃ ಸತ್ವಾತ್ಮಾ ವೀರಮಾಹೇಶ್ವರೋ ಭವೇತ್ ॥"

— ವೀರಾಗಮ.

ವಿಶ್ವಾನುಗ್ರಾಹಕನಾದ ಶ್ರೀ ರುದ್ರದೇವನ ಅನುಯಾಯಿಯಾದ ಅನಾದಿ ಮುಕ್ತನಾದ ಮಹೇಶ್ವರ ತತ್ತ್ವಜ್ಞನಾದ–ಮಾಹೇಶ್ವರನ ಪಾತ್ರ

ಅಸೀಮಿತ ; ಅಸಾಮಾನ್ಯ ಸಾಮಾಜಿಕವಾಗಿ ಸಾರ್ವಜನಿಕವಾಗಿ ಶಿವ ಸಂಸ್ಕಾರವನ್ನು ಆವಿಷ್ಕಾರ ಮಾಡಿ ಸರ್ವರನ್ನು ಸುಸಂಸ್ಕೃತರನ್ನಾಗಿಸುವ ಮಾಹೇಶ್ವರ (ಶಿವಾಚಾರ್ಯ)ನು ಶಬ್ದಸ್ಪರ್ಶಾದಿ ವಿಷಯಗಳಲ್ಲಿ ನಿಸ್ಪೃಹನಾಗಿ ಶಿವಾನಂದವನ್ನು ಪಡೆಯುವಲ್ಲಿ ಅತ್ಯಂತ ಉತ್ಸುಕನಾಗಿ ಇದ್ದು ವೀರ ಮಾಹೇಶ್ವರನೆನಿಸಿರಬೇಕು. ಅಲ್ಲದೆ ಪರಸ್ತ್ರೀಯರಲ್ಲಿ ನಿಸ್ಸಂಗನಾಗಿರಬೇಕು. ಪರಧನದಾಸೆಯನ್ನು ಪರಿಹರಿಸಬೇಕು. ಶಿವಾರ್ಥಕ್ಕಾಗಿ ಕಾರ್ಯತತ್ಪರನೂ ಶಿವಾಗಮ ಪರಾಯಣನೂ ಆಗಿರಬೇಕು. ಶಿವಸ್ತುತಿಯಲ್ಲಿ ಪ್ರೀತಿ, ಶಿವೋತ್ಕರ್ಷದ ಪ್ರಮಾಣ ಸಂಪಾದನಾಸಕ್ತಿಯುಳ್ಳವನಾಗಿರಬೇಕು. ಮತ್ತು ಮಮಕಾರ ಅಹಂಕಾರ ವಿರಹಿತನಾಗಿ ಕ್ಲೇಶ ಸಂಕೋಲೆಗೆ ಸಿಲುಕಿರಬಾರದು. ಮದ ಮಾತ್ಸರ್ಯ ದೂರನಾಗಿ ಕಾಮ ಕ್ರೋಧಗಳಿಗೆ ವಶನಾಗಿರಬಾರದು. ಸದಾ ಸಂತೋಷಚಿತ್ತನಾಗಿದ್ದು ಸರ್ವಪ್ರಾಣಿಗಳ ಕಲ್ಯಾಣಕಾರಿಯಾಗಿರಬೇಕು. ಶಿವಕಾರ್ಯಗಳನ್ನು ವಿರೋಧಿಸುವವರನ್ನು ನಿವಾರಿಸಿ, ಶಿವೋತ್ಕರ್ಷವನ್ನು ಪ್ರತಿಪಾದಿಸುವವರೊಡನೆ ಯಾವಾಗಲೂ ಸಹಕರಿಸುತ್ತಿರಬೇಕು. ಶಿವಾಪಕರ್ಷವನ್ನು ಸಹಿಸದೆ ಶಿವೈಕನಿಷ್ಠನೂ ಸರ್ವಾತ್ಮನೂ ಆಗಿರಬೇಕು. ಇದಿಷ್ಟು ಶಿವಾಚಾರ್ಯನಿಗಿರಬೇಕಾದ ಅರ್ಹತೆ ! ಶಿವಾಚಾರ ಸಂಹಿತೆ ! ! ಇವೆಲ್ಲ ಶಿವಾಚಾರಗಳುಳ್ಳವರು ಆದಿ ರೇಣುಕದಾರುಕಾದಿ ಜಗದ್ಗುರುಗಳು.

"ಪುರಾ ತ್ರೇತಾಯುಗೇ ಗೌರಿ ರೇಣುಕೋ ಮುನಿಪುಂಗವಃ
ಸರ್ವಾಗಮ ಸಮೋಪೇತಃ ಸರ್ವ ಶಾಸ್ತ್ರಸಮನ್ವಿತಃ ।
ಕಲಾಭಿಜ್ಞೋ ಮಂತ್ರವೇತ್ತಾ ಮಂತ್ರಲಕ್ಷಣ ಲಕ್ಷಿತಃ
ದೇಶಿಕೇಂದ್ರಃ ಸತ್ವನಿಧಿಃ ಷಟ್‌ಸ್ಥಲ ಬ್ರಹ್ಮಪೂಜಿತಃ ॥—ವೀರಾಗಮ.
ಶಿವಾದ್ವೈತ ಪರಿಜ್ಞಾನ ಪರಮಾನಂದ ಮೋದಿತಂ
ನಿರ್ಧೂತ ಸರ್ವಸಂಸಾರವಾಸನಾ ದೋಷ ಪಂಜರಂ ।
ಶಿವಾಗಮ ಸುಧಾಸಿಂಧು ಸಮುನ್ಮೇಷ ಸುಧಾಕರಂ
ವೀರ ಸಿದ್ಧಾಂತ ನಿರ್ವಾಹಕೃತಪಟ್ಟ ನಿಬಂಧನಂ ।
ಆಲೋಕಮಾತ್ರ ನಿರ್ಭಿನ್ನ ಸಮಸ್ತ ಪ್ರಾಣಿ ಪಾತಕಂ
ಮದದ್ವೈತಪರಂ ಶಾಸ್ತ್ರಂ ವೇದವೇದಾಂತ ಸಮ್ಮತಂ ।
ಸ್ಥಾಪಯಿಷ್ಯಸಿ ಭೂಲೋಕೇ ಸರ್ವೇಷಾಂ ಹಿತಕಾರಕಂ ॥"—ಸಿ. ಶಿ.

ತ್ರೇತಾಯುಗ ; ರೇಣುಕ ಶಿವಾಚಾರ್ಯರು ; ಮುನಿಪುಂಗವರಾಗಿ ಸರ್ವಾಗಮ-ಸರ್ವಶಾಸ್ತ್ರ ಸಮನ್ವಿತರಾಗಿದ್ದರು. ಕಲಾಭಿಜ್ಞರು, ಮಂತ್ರವೇತ್ತರು,

ಮಂತ್ರಲಕ್ಷಣ ಲಕ್ಷಿತರು, ಶಿವಸಂಸ್ಕಾರವನ್ನು ಬೋಧಿಸುವ ದೇಶಿಕೇಂದ್ರರು, ಸತ್ವನಿಧಿಗಳು, ಷಟ್‌ಸ್ಥಲ ಬ್ರಹ್ಮರಿಂದ ಪೂಜಿತರು, ಶಿವಾದ್ವೈತ ಪರಿಜ್ಞಾನ ದಿಂದ ಪರಮಾನಂದದಿಂದ ಪರಿಣಾಮಿತರು, ಸರ್ವಸಂಸಾರವಾಸನಾ ದೋಷ ದೂರರು, ಶಿವಾಗಮಗಳೆಂಬ ಸುಧಾಸಿಂಧುವನ್ನು ಉಕ್ಕಿಸುವ ಉಡುರಾಜರು, ವೀರಶೈವ ಸಿದ್ಧಾಂತವನ್ನು ನಿರ್ವಹಿಸುವುದರಲ್ಲಿ ಕಟಿಬದ್ಧರು, ಸಂದರ್ಶನವನ್ನೀ ಯುವುದರಿಂದ ಎಲ್ಲ ಪ್ರಾಣಿಗಳ ಪಾತಕಗಳನ್ನು ಪರಿಹರಿಸುವವರು, ವೇದ ವೇದಾಂತ ಸಮ್ಮತವಾದ ಶಿವಾದ್ವೈತಪರ ಶಾಸ್ತ್ರವನ್ನು ಸರ್ವರಿಗೆ ಕಲ್ಯಾಣಕಾರಕ ವಾಗುವಂತೆ ಭೂಲೋಕದಲ್ಲಿ ಸ್ಥಾಪಿಸಲು ಸರ್ವಸಮರ್ಥರು ಆಗಿದ್ದರು, ಅಲ್ಲದೆ,

"ರೇಣುಕೋಽಪಿ ಮಹಾತೇಜಾಃ ಸಂಚರನ್ ಕ್ಷಿತಿ ಮಂಡಲೇ
ಕಾಂಶ್ಚಿದ್ದೃಷ್ಟಿ ನಿಪಾತೇನ ಕರುಣಾ ರಸವರ್ಷಿಣಾ
ಅಪರಾನುಪದೇಶೇನ ಶಿವಾದ್ವೈತಾಭಿಮರ್ಶಿನಾ ।
ಅನ್ಯಾಂಶ್ಚ ಸಹವಾಸೇನ ಸಮಸ್ತ ಮಲಹಾರಿಣಾ
ಕೃತಾರ್ಥಯನ್ ಜನಾನ್ ಸರ್ವಾನ್ ಕೃತಿನಃ ಪಕ್ವಕರ್ಮಿಣಃ
ದರ್ಶಯಿತ್ವಾ ನಿಜಾಧಿಕ್ಯಂ ಶಿವದರ್ಶನಲಾಲಸಃ
ಖಂಡಯಿತ್ವಾ ದುರಾಚಾರಾನ್ ಪಾಷಂಡಾನ್ ಭಿನ್ನದರ್ಶನಾನ್
ಯಂತ್ರ ತಂತ್ರ ಕಲಾಸಿದ್ಧಾನ್ ವಿಮತಾನ್ ಸದ್ಧಮಂಡಲಾನ್
ವಿಜಿತ್ಯ ಸ್ವಪ್ರಭಾವೇನ ಸ್ಥಾಪಯಿತ್ವಾ ಶಿವಾಗಮಾನ್
ಅಜಗಾಮ ನಿಜಾವಾಸಂ................॥ —ಸಿ. ಶಿ.

ಮಹಾ ತೇಜಸ್ಸುಳ್ಳ ರೇಣುಕ ಶಿವಾಚಾರ್ಯರು ಒಂದೆಡೆಯಲ್ಲಿ ಕುಳಿತವ ರಲ್ಲ ; ದೇಶ ಕಾಲಗಳಿಗೆ ಸೀಮಿತರಲ್ಲ ; ಅವರ ಶಿವಾಚಾರ ಶಿವಸಂಸ್ಕಾರ ಕ್ರಾಂತಿ ವಿಶ್ವವ್ಯಾಪಕವಾದುದು. ಅವರು ಅವನಿಮಂಡಲದಲ್ಲಿಯೇ ಸಂಚರಿಸಿ ದವರು. ಸುಳಿದಾಡಿದ ಕ್ರಾಂತಿಕೇಂದ್ರರು. ಕರುಣಾರಸವರ್ಷಿಗಳು ; ಶಿವಾದ್ವೈತ ಸಿದ್ಧಾಂತೋಪದೇಶಕರು ; ಸರ್ವರ ಸರ್ವಮಲಗಳನ್ನು ಪರಿಹರಿಸಿ ಪಾವನರನ್ನಾಗಿ ಸುವವರು ; ಕೃತಾರ್ಥರನ್ನಾಗಿಸುವವರು ; ಎಲ್ಲರನ್ನು ಕ್ರಿಯಾಶೀಲರನ್ನಾಗಿಸಿ ಪರಿಪಕ್ವಕರ್ಮಿಗಳನ್ನಾಗಿಸಿ ಕೃತಕೃತ್ಯರನ್ನಾಗಿಸುತ್ತಿದ್ದರು. ಶಿವದರ್ಶನಾಭಿಲಾಷಿ ಗಳಿಗೆ ತಮ್ಮದೇ ಆದ ಆಧಿಕ್ಯವುಳ್ಳ ಶಿವಸ್ವರೂಪವನ್ನು ದರ್ಶಿಸುತ್ತಿದ್ದರು. ತಮ್ಮ ಪರಮ ಪ್ರತಿಭೆಯಿಂದ ದುರಾಚಾರವನ್ನು ಭಿನ್ನಮತದ ಪಾಷಂಡರನ್ನು ಯಂತ್ರ ಮಂತ್ರ ತಂತ್ರಗಳಿಂದ ಮಾಟಮಾಡುವವರನ್ನು ಖಂಡಿಸಿ, ಸ್ವಪ್ರಭಾವದಿಂದ

ಜಯಿಸಿ ಶಿವಾಗಮಗಳನ್ನು ಶಿವಾಚಾರ ವಿಚಾರಗಳನ್ನು ಸ್ಥಾಪಿಸುತ್ತಿದ್ದರು. "ಸಾಕ್ಷಾತ್‌ಶಿವ" ಎಂದು ಖ್ಯಾತರಾಗದ್ದರು.

"ತದಿದಂ ಸರ್ವ ಸಿದ್ಧಾಂತ ಸಾರಾಣಾಮುತ್ತಮೋತ್ತಮಂ
ವೇದವೇದಾಂತ ಸರ್ವಸ್ವಂ ವಿದ್ಯಾಚಾರಪ್ರಕಾಶಕಂ
ವೀರಮಾಹೇಶ್ವರಗ್ರಾಹ್ಯಂ ಶಿವಾದ್ವೈತ ಪ್ರಕಾಶಕಂ ।...."—ಸಿ.ಶಿ.

ಶಿವಾಚಾರ್ಯರು ನಿರ್ಣಯಿಸಿ ನಿರೂಪಿಸಿದ ವಿದ್ಯಾಚಾರ (ಜ್ಞಾನಾಚಾರ) ಪ್ರಕಾಶಕವಾದ ವೀರಮಾಹೇಶ್ವರಗ್ರಾಹ್ಯವಾದ ಶಿವಾದ್ವೈತ ಸಿದ್ಧಾಂತವು ಉಳಿದೆಲ್ಲ ಸಿದ್ಧಾಂತಗಳ ಸಾರಸರ್ವಸ್ವವಾಗಿ ಉತ್ತಮೋತ್ತಮವಾಗಿ ವಿರಾಜಮಾನವಾಗಿದೆ ; ವಿಖ್ಯಾತವಾಗಿದೆ.

ವೀರಶೈವ ಸಂಸ್ಕೃತಿಯನ್ನು ಸಾರುವ ಶಿವಧರ್ಮಗಳು ಸನಾತನಗಳು.

"ಕಥಿತಾಃ ಶ್ರೀ ರುದ್ರೇಣೈವ ಲಿಂಗಸ್ಯಾರ್ಚನ ಸೂಚಿತಾಃ ।"
"ಸಂತಿ ರುದ್ರೇಣಕಥಿತಾಃ ಶಿವಧರ್ಮಾಃ ಸನಾತನಾಃ ।"—ಸ್ಕಂದ.

ಶಿವಧರ್ಮಗಳು ಸ್ವೇಷ್ಟಲಿಂಗಾರ್ಚನ ಸೂಚಕಗಳು. ಶ್ರೀ ರುದ್ರದೇವನಿಂದಲೇ ಬಂದವುಗಳು. ಅನಾದಿಸಿದ್ಧಗಳು. ಅಲ್ಲಿಂದ ಉಗಮುಗೊಂಡು ಆದೇ ಸನಾತನ ಶಿವಾಚಾರ್ಯರಿಂದ ವೀರಶೈವ ಜನ ಮನೋಭೂಮಿಯಲ್ಲಿ ಪ್ರವಹಿಸಿದವುಗಳು. ಕಾಯಕ, ಧರ್ಮದಾಸೋಹ, ಚಿಚ್ಛಕ್ತಿಜ್ಞಾನನಿಲಯ, ಸ್ತ್ರೀ ಸ್ವಾತಂತ್ರ್ಯ, ಅಸ್ಪೃಶ್ಯೋದ್ಧಾರಾದಿ ವೀರಶೈವ ಸಂಸ್ಕೃತಿಯನ್ನು ಆದಿ ಕಾಲದಲ್ಲಿಯೇ ರೇಣುಕಾದಿಶಿವಾಚಾರ್ಯರು ವಿಪುಲವಾಗಿ ವಿಸ್ತರಿಸಿದ್ದಾರೆ.

ಎಸಳೆರಡು ;

## ಅನಾದಿ ಬೆಂಬಳಿಯ

# ಆದಿವೀರಶೈವ ಆದಿ ಶಿವಾಚಾರ್ಯರು

(ಸಂಶೋಧನಾತ್ಮಕ ಅಧ್ಯಯನ)

**ಕ್ರಿ.ಪೂ. ಮೂರುವರೆ ಸಾವಿರ ವರುಷಗಳು**

## ಸರ್ವಧರ್ಮ ಸಹಿಷ್ಣು ಮತ್ತು ಮಹಾಮಾಸವತಾವಾದಿ ಆದಿ ಶ್ರೀ ರೇಣುಕಾಚಾರ್ಯರು, ಆದಿ ವೀರಶೈವಕ್ಕೆ ಕರುಣಿಸಿದ ಕ್ರಿಯಾಶೀಲ ಕೊಡುಗೆ !

ವೀರಶೈವ ಕ್ರಿಯಾಚಾರಧರ್ಮ ಆದೊಂದು ಹೆಮ್ಮರ. ಅದನ್ನು ಬೆಳಸಿ ಉಳಿಸಿದವರು ಮತ್ತು ಬೆಳ್ಳಂ ಬೆಳಗಿಸಿದವರು ಆದಿ ರೇಣುಕ ಶಿವಾಚಾರ್ಯ ಭಗವತ್ಪಾದರು. ಅವರು ತಮ್ಮ ಕಾಲದಲ್ಲಿ 63 ಕ್ರಿಯಾತ್ಮಕಶೀಲಗಳಿಗೆ ಮತ್ತು 64 ಕಲೆಗಳಿಗೆ ಪ್ರಾಮುಖ್ಯತೆಯನ್ನಿತ್ತು ಪ್ರತಿಪಾದಿಸಿದರು, ಪರಿಪಾಲಿಸಿದರು. ಕ್ರಿಯಾಚಾರ ಬಿಟ್ಟು ಧರ್ಮ ಬೇರಿಲ್ಲೆಂದರು ; ಕ್ರಿಯಾಚಾರಧರ್ಮವೇ ಕಲ್ಪವೃಕ್ಷ ವೆಂದರು ಮಾನವೀಯ ಜೀವನಕ್ಕೆ ! ಕ್ರಿಯಾಚಾರದ ಮೌಲ್ಯ ಮಹತ್ತರದ್ದು. 'ವೀರಶೈವ ಕ್ರಿಯಾಚಾರಾ ಭೂರುದ್ರಾಃ' ಎಂದಿದೆ ವೀರಾಗಮದಲ್ಲಿ ಅವರ ಅಮರವಾಣಿ ! ಕ್ರಿಯಾಚಾರದಿಂದ ಭೂರುದ್ರತ್ವವುಂಟಾಗುತ್ತದೆಯೆಂದರೆ ಕ್ರಿಯಾಚಾರದ ಮೌಲ್ಯಕ್ಕೆ ಮತ್ತೊಂದು ಮಾತು ಬೇಕಿಲ್ಲ. ಕ್ರಿಯಾಚಾರದ ಫಲ ತ್ಯಾಗ ಭೋಗ ಯೋಗ ಸಮನ್ವಯ ! ಕ್ರಿಯೆಯೆಂದರೆ ಪ್ರಾಮಾಣಿಕತೆ, ನೀತಿಕ್ರಿಯೆ, ಸಾಂಸ್ಕೃತಿಕಕ್ರಿಯೆ, ಶೀಲಾನ್ವಿತತೆ, ಕಾಯಕ ನಿರತತೆ ಎಂದು ಮುಂತಾದ ಅರ್ಥಗಳಾಗುತ್ತವೆ. ಆರ್ಥಿಕ ಸಂಪಾದನೆಗೂ ಒಂದು ಕ್ರಿಯಾಚಾರ ಬೇಕು ; ಅಂದರೆ ಪ್ರಾಮಾಣಿಕತೆಬೇಕು. ದ್ರೋಹ ವಂಚನೆ ಮೋಸಗಳಿಂದ ಅರ್ಥಾರ್ಜನೆ ಮಾಡಬಾರದೆಂದು ಅಂದಿನ ಭಾರತೀಯರಿಗೆಲ್ಲ ಬೋಧಿಸಿದರು

ಜಗದ್ಗುರು ಆದಿರೇಣುಕ ಶಿವಾಚಾರ್ಯರು. ಅವರಿಗಿಂತಲೂ ಹಿಂದಿನಿಂದಿ ವೀರಭದ್ರದೇವನಿಂದ ಬಂದ ಕಾಯಕ ಶಬ್ದವನ್ನು ಬಾಹ್ಯಕ್ಕೆ ಮಾತ್ರ ಸೀಮಿತ ವೆಂದು ಶ್ರೀ ರೇಣುಕರು ಅದನ್ನು ಅಂಗೀಕರಿಸಲಿಲ್ಲವೆನಿಸುತ್ತದೆ. ಕ್ರಿಯಾಚಾರ ಉಭಯಾಂಗ ನಿಷ್ಠ. ಸಾಮಾನ್ಯವಾಗಿ ಸರ್ವಜನಾಂಗದ ಏಳ್ಗೆಗೆ ಅನಿವಾರ್ಯ ಸಾಧನ. ಆದರಲ್ಲಿಯೂ ಆಂತರಂಗಿಕ ಸೂಕ್ಷ್ಮಕ್ರಿಯಾಶೀಲತೆ ವೀರಶೈವ ಅಷ್ಟಾವರಣ ಪ್ರಕ್ರಿಯೆಯಲ್ಲಿ ತುಂಬಾ ಪ್ರಾಮುಖ್ಯತೆಯನ್ನು ಪ್ರಭಾವವನ್ನು ಕಂಡು ಹಿಡಿದು ಕರುಣಿಸಿದ್ದಾರೆ ಶಿವಾಚಾರ್ಯರು. ಚಿದಮೃತವನ್ನು ಚಿತ್ಕಳೆಯನ್ನು ಪಡೆಯಲು ಸತ್ಯಸಾಧನವನ್ನಾಗಿ ಕಂಡುಕೊಂಡರು ಶಿವಾಚಾರ್ಯರು. ಅಂತೆಯೇ "ಯೋಗಕ್ರಿಯಾ ಸಮನ್ವಿತಂ ಪ್ರಸಾದಂ". "ಕ್ರಿಯಾನ್ವಿತಂ ಪಾದೋದಕಂ" ಎಂಬೀ ಮಾತುಗಳು ತುಂಬಾ ಮನನೀಯವಾಗಿವೆ. ಕ್ರಿಯಾಶೀಲತೆಯಿಲ್ಲದೆ ಪಾದೋದಕ ಪ್ರಸಾದಗಳಾಗವು. ಮಂತ್ರಸಿದ್ಧಿಯಾಗದು. ಮಹಾನುಭಾವತೆ ಮೈಗೂಡದು.

ಇನ್ನು ಸಾಮಾನ್ಯವಾಗಿ ಉದ್ಯಮದಲ್ಲಿ ವ್ಯವಹಾರದಲ್ಲಿ ಕೃಷಿಯಲ್ಲಿ ನಡೆ ನುಡಿಯಲ್ಲಿ ಹೀಗೆ ಎಲ್ಲೆಲ್ಲಿಯೂ ಕ್ರಿಯಾಶೀಲತೆಯಿದ್ದಾಗ ಬೇಕು ಸ್ಥೂಲವಾಗಿ ಇದಕ್ಕೆಲ್ಲ ಕ್ರಿಯೆಯೆ ಮೂಲಭೂತ ಮಂಗಲ ಶಕ್ತಿ ! ಕ್ರಿಯೆಯ ದೀಕ್ಷೆಯನ್ನು ವಹಿಸದೆ ಜೀವನ ಮುನ್ನಡೆಯದು ; ಶಾಂತಿ ಸಾಧನವಾಗದು. ಸಂತೃಪ್ತಿ ಬಾರದು. ಕಾರಣ, ಯಾವ ಕಾರ್ಯಾಚರಣೆಯೇ ಆಗಲಿ, ಅದು ಪ್ರಾಮಾಣಿಕವೂ ನೈತಿಕವೂ ಸತ್ಯಶುದ್ಧವೂ ಆಗಿರಬೇಕೆಂದು ರೇಣುಕ ಭಗವತ್ಪಾದರು ಅಂದೇ ನಿರೂಪಿಸಿರುವರು. ತಮ್ಮ ನಡೆ-ನುಡಿಗಳಲ್ಲಿಯೂ ಸಾಧಿಸಿದರು. ಸಾರ್ವಜನಿಕರಲ್ಲಿ ಅದನ್ನೇ ಪ್ರಚಾರಕ್ಕೆ ಬಹುಮಟ್ಟಿಗೆ ತಂದರು. ಅಂದಿನ ಆ ಬಡ ಭಾರತವನ್ನು ಭಾಗ್ಯಶಾಲಿಯನ್ನಾಗಿಸಿದರು. ಅವರ ಆ ಕ್ರಿಯಾಶೀಲತೆಯ ದೀಕ್ಷೆಯನ್ನು ವಹಿಸಿ, ಅವರೊಡನಿದ್ದು ಸೇವೆ ಸಲ್ಲಿಸಿದವರು ಅಷ್ಟಿಷ್ಟಲ್ಲ, ನೂರಾರು ಜನರಲ್ಲ ; ಹತ್ತು ಸಾವಿರ ಜನರು. ಅವರೊಡನೆ ಕ್ರಿಯಾಕ್ರಾಂತಿಯನ್ನು ಬೃಹದಾಕಾರದಲ್ಲಿ ಮುನ್ನಡೆಸಿದರು. ಒಂದೆಡೆಯಲ್ಲಿ ಒಂದು ಊರಲ್ಲಿ ನಿಲ್ಲದೆ, ಯಾವ ರಾಜಕೀಯ ಅಧಿಕಾರ ಅರ್ಥಗಳ ಆಶೆಗೆ ಅಂಟಿಕೊಳ್ಳದೆ, ರಾಗ-ದ್ವೇಷ, ಮದ-ಮತ್ಸರಗಳಿಗೊಳಗಾಗದೆ, ಒಂದೇ ಜನಾಂಗದ ಮೇಲೆ ಕೈಮಾಡದೆ ಭಾರತಾದ್ಯಂತ ಬಿಡುವಿಲ್ಲದೆ ಸುತ್ತುತ್ತ ಬಡವ

ಬಲ್ಲಿದರಿಗೆ ದೀನ ದಲಿತರಿಗೆ ಭೇದವಿಲ್ಲದೆ ಮಾತದ ಚೌಕಟ್ಟಿನಲ್ಲಿಯೇ ನಿಲ್ಲದೆ ಎಲ್ಲರಿಗೂ ಉಪದೇಶವನ್ನೀಯುತ್ತ ಸನ್ಮಾರ್ಗಿಗಳನ್ನಾಗಿಸುತ್ತ ಕ್ರಿಯಾಶೀಲ ತ್ಯಾಗ–ಯೋಗಗಳಿಂದ ಬೆಳಗಿದರು. ವೀರಶೈವಕ್ಕೆ ಒಂದು ವೈಶಿಷ್ಟ್ಯ ವನ್ನುಂಟು ಮಾಡಿದರು. ಮಾನವನ ಜೀವನದ ಗುರಿ ರಾಗ ದ್ವೇಷವಲ್ಲ, ಮದ ಮಾತ್ಸರ್ಯವಲ್ಲ. ಸತ್ ಸಾಧನೆ. ತಂತಮ್ಮ ಕಾರ್ಯಕ್ಷೇತ್ರದಲ್ಲಿ ಸಫಲತೆ ಯನ್ನು ಸಂಪಾದಿಸುವುದು ಸಹಜ ಸಂಗತಿ. ಸ್ಥಾನಮಾನಗಳಿಗಾಗಿ ಪ್ರಯತ್ನಿ ಸುವುದೂ ಉಂಟು. ಸಾಧನೆಯಲ್ಲಿ ಯಶಸ್ಸನ್ನು ಗಳಿಸುವಿಕೆ ಸುಲಭವಾದ ಸೊಲ್ಲಲ್ಲ. ಅದಕ್ಕೆ ಅನುಕೂಲಕರ ಉತ್ತೇಜನ ಬೇಕು. ಗುರುಗಳ ಕರುಣೆ ಬೇಕು. ಮನಸ್ಸು ಬೇಕು. ಇವನ್ನೆಲ್ಲ ಆ ಆದಿ ರೇಣುಕ ಶಿವಾಚಾರ್ಯರು ತಮ್ಮ ಅಗಾಧ ಶಕ್ತಿ ಸಂಪತ್ತಿಗಳನ್ನು ಅನುಗ್ರಹಿಸಿದ್ದರು. ಆಚಾರ ವಿಚಾರ ಗಳನ್ನು ವಿಶಿಷ್ಟ ರೀತಿಯಲ್ಲಿ ದೃಢವಾಗಿ ಪ್ರತಿಪಾದಿಸಿದರು.

ಆದಿರೇಣುಕರದು

**ಭಾರತೀಯ ಮೂರನೆಯ ಮಹಾಕ್ರಾಂತಿ**
**ಮೂರು ಸಾವಿರ ವರುಷ ಪೂರ್ವದ**
**ಅಪ್ರತಿಮ ಉತ್ಕ್ರಾಂತಿ !**

ಅದು ರಾಮಾಯಣ ಚರಮಕಾಲ. ಕಾರಣಿಕ ರೇಣುಕ ಮಹಾ ಶಿವಾಚಾರ್ಯರ ಕಾಲ. ಔತ್ತರೇಯ ದಾಕ್ಷಿಣಾತ್ಯರ ಕೋಲಾಹಲ ಕಾಲ. ಭಾರತೀಯರ ಒಡಕು ಮನೋಭಾವದ ವಿರಾಟ ಹೋರಾಟಗಳ ಕಾಲ.

ದಕ್ಷಿಣ ಭಾರತೀಯರನ್ನು ಕಂಡರೆ ಔತ್ತರೇಯರ ಅಸಹನೆಯ ಕಾಲ. ದಕ್ಷಿಣದವರನ್ನು ಕಡೆಗಣ್ಣಿನಿಂದ ಕಂಡ ಕಾಲ. ಮಾನವೀಯತೆಗೆ ಮಸಿ ಬಳಿದು ಆರ್ಯರು ತಮ್ಮ ಮೇಲ್ಮೆಯನ್ನು ಕ್ಷತ್ರಿಯರ ಮುಖಾಂತರ ಸಾಧಿಸಿಕೊಂಡಕಾಲ. ಅಂತಹ ಆ ದುರ್ಧರ ಕಾಲದಲ್ಲಿ ಜಗದಾಚಾರ್ಯ ಜಗಜ್ಜ್ಯೋತಿ ರೇಣುಕರು ಅವತರಿಸುವರು. ಭಾರತದ ಭಾರತೀಯರ ಐಕ್ಯತೆಗೆ, ಮತ್ತು ವಿಶ್ವೈಕ್ಯತೆ ಯನ್ನು ಸಾಧಿಸುವ ಶಕ್ತಿಸಂಪನ್ನವಾದ ವೀರಶೈವದ ಏಳ್ಗೆಗೆ, ಶಿವಾದ್ವೈತ ಸಿದ್ಧಾಂತ ಸ್ಥಾಪನೆಗೆ ಅಸಾಧಾರಣ ಮಣಿಹಗಳನ್ನು ಮಾಡಿ ವಿಶ್ವವಿಖ್ಯಾತ ರಾಗಿರುವರು. ವೀರಾಗಮ ಸಂಹಿತದಲ್ಲಿ ವಿರಾಜಿತರಾಗಿರುವರು. 63 ಕ್ರಿಯಾಶೀಲ ಕಾಯಕ, 64 ಕಲಾವಿದ್ಯೆ, ಧರ್ಮದಾಸೋಹ ಮಂತ್ರ

ಸ್ವಾತಂತ್ರ್ಯ, ದೀನದಲಿತೋದ್ಧಾರ, ಚಿಚ್ಛಕ್ತಿಜ್ಞಾನ ನಿಲುಮು, ವೀರ ಮಾಹೇಶ್ವರ ಸಂಘ, ಭಕ್ತಭೂರಪ್ರ ಸಮನ್ವಯ ಸಂಘ, ಮಠ ನಿರ್ಮಾಣ, ಷಟಸ್ಥಲ ಸಿದ್ಧಾಂತದ ಸಮಗ್ರ ವಿವೇಚನೆ, ಯೋಗ-ಶಿವಯೋಗ, ಕ್ರಿಯಾಜ್ಞಾನ ಸಮಃ ಸಮನ್ವಯ ವಿಷಮ ಧರ್ಮಗುಣವುಳ್ಳ ಶಿವ-ಜೀವೈಕ್ಯ ಖಂಡನ, ಶಿವಾಚಾರ ಶ್ರೇಷ್ಠತೆಯ ಮಂಡನ ಮುಂತಾದ ಕೊಡುಗೆಗಳನ್ನು ತಂದುಕೊಟ್ಟರು. ಆ ಆದಿ ರೇಣುಕರು.

ಆ ಆದಿರೇಣುಕರ ಕಾಲ ಅದೊಂದು ಶಿವಾಚಾರ್ಯಯುಗವೇ ಆಗಿ ಪರಿಣಮಿಸಿತು. ಅವರ ಆ ಸಾಹಸ ಅಂತಹುದು; ಅತ್ಯದ್ಭುತವಾದುದು. ಶ್ವೇತಾಚಾರ್ಯ ಶ್ರೀ ಜಗದ್ಗುರು ಪಂಡಿತಾಚಾರ್ಯರು ಮೊದಲ್ಗೊಂಡು ಭಕ್ತಿ ಭಂಡಾರಿ ಬಸವಣ್ಣನವರೆವಿಗೂ ಆರೇಳು ಶತಮಾನಗಳಲ್ಲಿ ಮಾಡಿದ ಶಿವಾಚಾರ್ಯ ಮತ್ತು ಶಿವಶರಣರ ಆಧುನಿಕ ವೀರಶೈವ ಕ್ರಾಂತಿಗೆ ನಾಂದಿಯಾಗಿ ನೀಳಾಗಿ ಆಳವಾಗಿ ಮಾಡಿದ ಉತ್ಕ್ರಾಂತಿರೂಪ ಮಹಾ-ಮಣಿಹರೂಪ ಭೂಮ ಭೂಮಿಯೊಂದು ಲಭ್ಯವಾಯಿತು. ಅದನ್ನೆಲ್ಲ ಸಂಶೋಧಿಸಿ ಸಂಸ್ಕರಿಸಿ ಆವಿಷ್ಕರಿಸಿದ ಅಪೂರ್ವ ಆದರ್ಶ ಕೃತಿಯಿದು. ಇದರಿಂದ ವೀರಶೈವಕ್ಕೆ ವೀರ ಶೈವಾಚಾರ್ಯ ಚಾರಿತ್ರಕ್ಕೆ ಹೊಸಕಳೆ ಹೊಸ ಪರವು ಒದಗಿದಂತಾಗಿದೆ.

ಅಂದು ಆದಿರೇಣುಕರ ನೇತೃತ್ವದಲ್ಲಿ ಸಹಸ್ರ ಸಹಸ್ರ ಶಿವಾಚಾರ್ಯರು ವೀರಮಾಹೇಶ್ವರರು ಭೂರುದ್ರರು ಕ್ರಾಂತಿ ಪಥದಲ್ಲಿ ನಿಂತು ದುಡಿದಾಗ ವೀರಶೈವ ವ್ಯಾಪ್ತಿಗೆ ಮತ್ತೊಂದು ವಿಶಿಷ್ಟ ದೀಪ್ತಿಯೊದಗಿತು. ವ್ಯಾಪ್ತಿಯೊಡನೆ ಶಕ್ತಿ ಸಂಪನ್ನವಾಯಿತು. ವೀರಶೈವೀ ಜನತೆ ಅಸಂಖ್ಯಾತೆಗೇರಿತು. ಸರ್ವ ಸಮನ್ವಯ ಷಟ್‌ಸ್ಥಲ ಸಿದ್ಧಾಂತಗಳು ಶಿಖಾಮಣಿಯಾಗಿ ಶೋಭಿಸಿತು. 'ಸರ್ವ ಶಿವಮಯಂ ಜಗತ್' ಎಂದು ಶಿವಾಚಾರ್ಯರ ಶಿವಾಗಮವಾಣಿ ಘೋಷಿಸಿ ಉತ್ಕ್ರಾಂತಿಗೆ ನಿಂತಾಗ ವರ್ಣಾಶ್ರಮವಾದ, ಜಾತಿ ವಿಜಾತಿವಾದ ಕುಲ ಪಂಥ ಪಂಗಡವಾದ ಸಪ್ಪೆಯಾಗಬೇಕಾಯಿತು. ವರ್ಣವರ್ಗ ಕ್ರಾಂತಿ ಈಚೀನದಲ್ಲ. ಆಗಮ ಕಾಲದ್ದು. 'ವಜ್ರಸೂಚ್ಯುಪನಿಷತ್' ಇದನ್ನು ಮುಂದುವರಿಸಿಕೊಂಡು ಬಂದಿದೆ. ಇದುವೇ ಕಲ್ಯಾಣದಲ್ಲಿ ಮತ್ತೆ ಮುಖ್ಯವಾಗಿ ಸ್ಫೋಟಗೊಂಡಿತು. ಆದರೇನು ವಿಫಲವಾಯಿತು.

ಶಿವತತ್ತ್ವಾಭಿವ್ಯಕ್ತಿಯ ಮಾನವತಾವಾದ ವೀರಶೈವ ಶಿವಾಚಾರ್ಯರಿಂದ ಮೊದಲಾಯಿತು, ಮುಂದುವರಿಯಿತು. ಭೂರುದ್ರರ ಭಕ್ತರ ಸಂಘಗಳೇ ರ್ಪಟ್ಟವು. ಸಹಸ್ರಾರು ಸಂಖ್ಯೆಗಳಲ್ಲಿ ನಿಮ್ನ ವರ್ಗದವರನ್ನು ಸಂಸ್ಕರಿಸಿದರು; ವೀರಶೈವರನ್ನಾಗಿಸಿದರು. ವೀರಧರ್ಮವನ್ನು ವೀರಧ್ವಜವನ್ನು ಎತ್ತಿಹಿಡಿದರು. ವೀರಕ್ರಾಂತಿಯನ್ನು ಮೊಳಗಿಸಿದರು. ವೀರಮಾಹೇಶ್ವರರು ಸಾಮಾಜಿಕ ಕ್ರಾಂತಿಯಲ್ಲಿ ವಿಜೃಂಭಿಸಿದರು. ಶಿವಾಚಾರ್ಯ ಸಂಸ್ಕೃತಿ ವಿಶಾಲವಾಯಿತು. ವಿಶಿಷ್ಟ ಚೈತನ್ಯಪೂರ್ಣವಾಯಿತು. ಷಟ್‌ಸ್ಥಲಗಳೆಲ್ಲರನ್ನು ಒಗ್ಗೂಡಿಸಿಕೊಂಡು ಮಾಡಿದ್ದರಿಂದ ಮುಂದುವರಿಯಲು ಕಾರಣವಾಯಿತು. ಆದಿಕಾಲದ ಆ ವೀರಶೈವ ಕ್ರಾಂತಿ ಕೇವಲ ಕನ್ನಡ ನಾಡಿನ ಮಟ್ಟದ್ದಲ್ಲ; ಒಂದು ನಗರಕ್ಕೆ ಮಾತ್ರ ಸೀಮಿತವಲ್ಲ. ಇಡೀ ಭಾರತ ದೇಶ ಮಟ್ಟದ್ದೆಂಬುದು ಭಾವ ಬೃಹತ್ತತೆಗೆ ಬೆನ್ನಾಸರವಾದಂತಾಗಿದೆ. ಸುಪ್ತಗಾಮಿಯಾದ ಚಾರಿತ್ರಗಂಗೆ ವ್ಯಕ್ತಗಾಮಿಯಾಗುವಂತಾಗಿದೆ.

ಆದಿರೇಣುಕ ಶಿವಾಚಾರ್ಯರು ಒಬ್ಬ ಅರಸನ ಆಶ್ರಯ ಪಡೆದು ಒಂದು ನಗರಕ್ಕೆ ಮಾತ್ರ, ಒಂದು ವರ್ಗಕ್ಕೆ ಮಾತ್ರ ಸೀಮಿತವಾಗಿ ಕ್ರಾಂತಿಯನ್ನೆಸಗದವರಲ್ಲ. ಅವರ ಆ ದಾಸೋಹಾದಿ ಕ್ರಾಂತಿ ತ್ರೈಕಾಲಿಕ ಮೌಲ್ಯವುಳ್ಳ ವಾಗಿದೆ. ಅದರಿಂದ ಅವರ ಆ ಕ್ರಾಂತಿಗೆ ಇಂದಿಗೂ ಮೌಲ್ಯವಿದೆ.

ಆ ಆದಿ ರೇಣುಕದಾರುಕಾದಿ ಶಿವಾಚಾರ್ಯರ ನಿಲವು ಹಲವು ಮೊಗವುಳ್ಳದು; ಹಲವು ಮಣಿಹಗಳುಳ್ಳದು, ಲೋಕದ ಮಾನವರ ಕಲ್ಯಾಣಕ್ಕೆ ಕಾರಣವಾಗಿ ನಿಲ್ಲುವ ಎಲ್ಲ ಕಾರ್ಯಗಳನ್ನು ಕೈಗೊಂಡು ನಡೆಸಿದರು. ಮಾನವರ ಮಾನವೀಯತೆಯನ್ನು ಉಳಿಸಿದರು; ಭಾರತೀಯತೆಯನ್ನು ಬೆಳಸಿದರು. ಮಾನವೀಯ ವಿಕಾಸಕ್ಕೆ ಬೇಕಾದ ಏನೆಲ್ಲ ಪ್ರಣಾಳಿಕೆಗಳನ್ನು ಹಾಕಿದರು. ಅದರಿಂದ ಅವರ ಆ ಜಗದ್ಗುರುತ್ವ ಜಗದಾಚಾರ್ಯತ್ವ ಅನ್ವರ್ಥಕವಾಗಿತ್ತು. ಅವರು ಸರ್ವಸಮತೆಯನ್ನು ಸಾರಿದರು. ಮಠ, ದಾಸೋಹ, ಕ್ರಿಯಾಶೀಲತೆ, ಜ್ಞಾನಪ್ರಸಾರ ಸಂಘಸಂಸ್ಥೆಗಳನ್ನು ಮುಮ್ಮೊದಲು ನಿರ್ಮಿಸಿದ ಮಹಾಮಹಂತರು ಅವರ ಆ ಮಹಾ ಮಣಿಹಗಳು ಆಧುನಿಕರ ಕ್ರಾಂತಿಗಳಲ್ಲಿ ಅವತರಣಗೊಂಡು ನವೀಕರಣವನ್ನು ಪಡೆದವು.

## ಅನಾದಿ ವೀರಶೈವಾಚಾರ ಕ್ರಿಯಾನ್ವಿತರು

"ಯೇನ ಕೇನಾಪ್ಯುಪಾಯೇನ ತಾಂತ್ರಿಕಂ ಪಾಪವೇಷ್ಟಿತಂ ।
ನಿರಾಸಯಂತಿ ಸತತಂ ರೇಣುಕಾದ್ಯಾಃ ಪುರಾತನಾಃ ॥

ತಾಂತ್ರಿಕಂ ಪ್ರೇತಲಿಂಗಸ್ಯ ಪೂಜಾಂನ ಕಾರಯೇತ್ಸದಾ ।
ಅನಾದಿ ವೀರಶೈವಾನಾಮಾಚಾರ ಕ್ರಿಯಾವೇಷ್ಟಿತಾಃ ॥"

—ವೀರಾಗಮ.

ಪಾಪ ಪೂರಿತವೂ ಪ್ರೇತಲಿಂಗ ಪೂಜೆಯೂ ಮೊದಲಾದ ಶೈವತಾಂತ್ರಿಕ ವಿಧಿ ವಿಧಾನಗಳನ್ನು ರೇಣುಕಾದಿ ಪುರಾತನರು ಏನೆಲ್ಲ ಬಗೆಯ ಉಪಾಯ ಗಳಿಂದ ನಿರಸನಗೊಳಿಸಿದ್ದರು. ಅನಾದಿ ವೀರಶೈವರ ಆಚಾರ ಕ್ರಿಯೆಗಳಲ್ಲಿ ನಿರತರಾಗಿದ್ದರು. ಇದರಿಂದ ಆದಿಶೈವಕ್ಕಿಂತ ಪೂರ್ವದಲ್ಲಿ ಅನಾದಿ ವೀರಶೈವ ಧರ್ಮವಿದ್ದಿತೆಂಬುದು ಸುಸ್ಪಷ್ಟವಾಗುತ್ತದೆ. ಮತ್ತು ರೇಣುಕಾದಿ ಶಿವಾಚಾರ್ಯರು ಶೈವರು ಶೈವಕರ್ಮನಿರತರು ಎಂದು ಇಂದಿನವರು ಹೇಳುತ್ತಿರುವುದು ಅಪ್ರಾಮಾ ಣಿಕವೆಂಬುದೂ ಸುಸ್ಪಷ್ಟವಾಗುತ್ತದೆ.

ಪ್ರೇತಲಿಂಗಧಾರಣ ಅರ್ಚನಾದಿಗಳು ತಾಂತ್ರಿಕಗಳು, ಪಾಪಕಾರಣಗಳು ಎಂದು ಅಂದೇ ಅನಾದಿವೀರಶೈವಾಚಾರ ನಿರತರಾದ ರೇಣುಕಾದಿ ಶಿವಾಚಾರ್ಯರು ನಿರಸನಗೊಳಿಸುವ-ಗೊಳಿಸಿದ ಸಂಸ್ಕೃತಿಯನ್ನು ವೀರಶೈವಕ್ಕೆ ಕರುಣಿಸಿರುವರು.

## ಮಠ ನಿರ್ಮಾಣ, ವೀರಮಾಹೇಶ್ವರ ಜ್ಞಾನ ಪ್ರಸರಣ.

ಆದಿ ರೇಣುಕ ಶಿವಾಚಾರ್ಯರು ಮಠಗಳನ್ನು ರೂಪಿಸುವ ಕಾರ್ಯವನ್ನು ಆ ಆದಿಕಾಲದಲ್ಲಿಯೇ ಆರಂಭಿಸುವರು. ಮಠಗಳ ರೂಪಿಸುವುದಕ್ಕಾಗಿಯೆ ಮಠ ಶೈವವನ್ನು ಸ್ಥಾಪಿಸುವರು. ವೀರಶೈವ ಮಠ ನಿರ್ಮಾಣ ಚಾರಿತ್ರಕ್ಕೆ ನಾಂದಿ ಹಾಡುವರು. ಇದು ಅವರ ಆದರ್ಶ ಕ್ರಾಂತಿ, ಅನುಪಮ ಕ್ರಾಂತಿ. ವೀರ ಶೈವಕ್ಕೆ ಮಾತ್ರವಲ್ಲ ಭಾರತೀಯ ಅದ್ವೈತಾದಿ ಧರ್ಮಗಳಿಗೆಲ್ಲ ಆದರ್ಶಕ್ರಾಂತಿ. ಅಂದು ಆ ಆದಿರೇಣುಕ ಶಿವಾಚಾರ್ಯರಿಂದ ಸಂಪ್ರೇರಿತನಾದ ಶಿಂಶುಮಾರ ಶಿಷ್ಯನು ಮೊದಲು ಮಠಕಟ್ಟಿ ಶಿವಾಚಾರ್ಯರ ಅಪ್ಪಣೆಯಂತೆ ಧರ್ಮದಾಸೋಹ ವನ್ನಿಡುವನು :

"ಶಿಂಶುಮಾರ ಗಣಾಧೀಶಂ ಚಾರಿತ್ರೇಣ ಮನೋಹರ
ವೀರಮಾಹೇಶ್ವರಾಚಾರಂ ರೇಣುಕೇನ ಪ್ರಪ್ರೇರಿತಂ ।
ಪಾಂಥಾತಿಥ್ಯಂ ಚ ಗುರುಣಾ ಶ್ರಮಚ್ಛೇದ ಕರಂವರಂ
ಪುಣ್ಯವೃಕ್ಷೈಶ್ಚ ಸಂಮೃದ್ಧಂ ವೀರಮಾಹೇಶ್ವರಾನ್ವಿತಂ॥"

—ವೀರಾಗಮ.

ವೀರಮಾಹೇಶ್ವರಾಚಾರ ನಿರತನಾದ ಶಂಶುಮಾರನು ಗುಣಾಧೀಶನು; ಚಾರುಚರಿತನು ರೇಣುಕ ಶಿವಾಚಾರ್ಯರಿಂದ ಸಂಪ್ರೇರಿತನಾಗಿ ಮಠನಿರ್ಮಾಣ ಮಾಡಿ, ಅದರ ಸುತ್ತು ಮುತ್ತು ಪುಣ್ಯವೃಕ್ಷಗಳಾದ ಬಿಲ್ವ ಬನ್ನಿ ಸಂಪಿಗೆ ಕಣಗಿಲ ಮೊದಲಾದ ಪತ್ರಪುಷ್ಪ ವೃಕ್ಷಗಳನ್ನು ಬೆಳೆಯಿಸಿ, ಪಾಂಥಸ್ಥರಿಗೆ ಆತಿಥ್ಯ ದೊಡನೆ ಶ್ರಮಪರಿಹಾರವನ್ನುಂಟು ಮಾಡುತ್ತಿದ್ದನು. ವೀರಮಾಹೇಶ್ವರರನ್ನು ಮಠಗಳಲ್ಲಿ ಇರಿಸಿದ್ದನು.

ವೀರಮಾಹೇಶ್ವರಾಚಾರ ಏಕೋತ್ತರ ಶತಾನ್ವಿತಾಃ
ಪ್ರಾಣಲಿಂಗಾಂಗ ಸಂಭೂತ ಭಸ್ಮಲೇಪನ ತತ್ಪರಾಃ ।
ತ್ರಿಷಷ್ಠಿ ಶೀಲಸಂಪನ್ನಾಃ ಧರ್ಮಜ್ಞಾನೈಕ ಸಾಧನಾಃ
ಜಗತಾಂ ಗುರವಃ ಸರ್ವೇ ಭವಂತೀತಿ ನಸಂಶಯಃ ॥

—ವೀರಾಗಮ

ಆ ಮಠಗಳಲ್ಲಿದ್ದ ವೀರಮಾಹೇಶ್ವರರು ನೂರೊಂದು ಆಚಾರಗಳಲ್ಲಿ ೬೩ ಶೀಲಗಳಲ್ಲಿ ಧರ್ಮಜ್ಞಾನೈಕ ಸಾಧನಗಳಲ್ಲಿ ಪ್ರಾಣಲಿಂಗಾಂಗ ಜನ್ಯ ಭಸ್ಮ ಧಾರಣದಲ್ಲಿ ತತ್ಪರರಾಗಿರುತ್ತಿದ್ದರು. ಜ್ಞಾನಾನುಭಾವ ಪ್ರವಚನ ಪರರಾಗಿರುತ್ತಿದ್ದರು. ಶ್ರಾವಕರ ಚಿತ್ತಶುದ್ಧಿಗೆ ಶಾಂತಿಗೆ ಕಾರಣರಾಗಿದ್ದರು. ಈ ದಿಶೆಯಲ್ಲಿ 'ಧರ್ಮಜ್ಞಾನೈಕ ಸಾಧನಾಃ' ಎಂಬೀ ಪದಪ್ರಯೋಗ ಪರಿಗಮನೀಯ. ಅಂತೆಯೆ ಅವರು ಜಗದ್ಗುರುಗಳಾಗಿದ್ದರು. ಜಗದುದ್ಧಾರಕರಾಗಿದ್ದರು.

## "ದಾಸೋಹಧರ್ಮದಲ್ಲಿ ದಿವ್ಯದೃಷ್ಟಿ !"

ದಾಸೋಹಕ್ರಾಂತಿ ಇಂದಿನದಲ್ಲ, ನಿನ್ನೆಯದಲ್ಲ ; ಅಂದಿನದು. ಆ ಆದಿ ರೇಣುಕರಿಂದ ಬಂದುದು. ಈ ಬಗೆಗೆ,

"ದಾಸೋಹಂ ಪ್ರಮಥಾ ಮೋಕ್ಷಂ ವದಂತೀತಿ ನ ಸಂಶಯಃ ।
ಭೂರುದ್ರಾಣಾಂ ಜಂಗಮಾನಾಂ ಷಟ್‌ಸ್ಥಲ ಬ್ರಹ್ಮಿಣಾಂ ಪ್ರಿಯೇ ॥
ಭಕ್ತಾನ್ ಮಾಹೇಶ್ವರಾನ್ಸೈಕ್ಯಾನ್ ಪ್ರಸಾದಿ ಪ್ರಾಣಲಿಂಗಿನಃ ।
ಶರಣಾನಾಹೂಯಾಜ್ಞಾಪ್ಯ ಲಕ್ಷಯುಗ್ಮ ಪ್ರಮಾಣಕಾನ್ ॥
ಸಪತ್ಪಂತ್ಯೈಃ ಕ್ರಿಯಾಚಾರಪೂಜಾಂ ಕುರು ದೃಢವ್ರತ ।
ಏತಾನಿ ವೀರಶೈವಾನಾಮಾಚಾರಾಣಿ ದಿನೇ ದಿನೇ ॥"– ವೀರಾಗಮ.

ಜಗದ್ಗುರು ಆದಿರೇಣುಕ ಭಗವತ್ಪಾದರ ಆದೇಶವಿದು ಡಿಂಡಿಮಾರನಿಗೆ! ಷಟ್‌ಸ್ಥಲ ಬ್ರಹ್ಮಿಗಳಾದ ಗುರು-ಜಂಗಮರ ದಾಸೋಹ ಧರ್ಮ ಮೋಕ್ಷ ದಾಯಕವಾದುದು. ಭಕ್ತಮಾಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಎಂಬೀ ಷಟ್‌ಸ್ಥಲ ಬ್ರಹ್ಮಿಗಳನ್ನು ಎರಡು ಲಕ್ಷಕ್ಕೆ ಕಡಿಮೆಯಿಲ್ಲದಂತೆ ಕರೆದು, ಅವ ರೊಡನೆ ಪ್ರತಿನಿತ್ಯ ಕ್ರಿಯಾಚಾರಾರ್ಚನೆಯನ್ನು ಮಾಡುವುದು. ಇವೆ ವೀರಶೈವಾ ಚರಣೆಗಳು-ಎಂದು ಆದಿರೇಣುಕರು ಅಪ್ಪಣೆಯನ್ನಿತ್ತಿದ್ದರು. ಆದರಂತೆ ಡಿಂಡಿಮಾರ ಶಿಷ್ಯನು ಆ ಕಾಲದಲ್ಲಿಯೇ ನಡೆಸುತ್ತಿದ್ದನು.

ಇಷ್ಟೇ ಅಲ್ಲ, ಡಿಂಡಿಮಾರನ ಮಠದ ಮಹಾದಾಸೋಹಕ್ಕಿಂತ ಶತಾ ನಂದನ ಮಠದಾಸೋಹ ಇನ್ನು ಮತ್ತು ಅತ್ಯಧಿಕವಾಗಿತ್ತು. ಶತಾನಂದನ ಮಠದಲ್ಲಿ ನಿತ್ಯ ಅನಂತ ಲಕ್ಷ ಜನರು ಪ್ರಸಾದವನ್ನು ಯಾವ ಕೊರತೆಯಿಲ್ಲದಂತೆ ಸ್ವೀಕರಿಸುತ್ತಿದ್ದರು. ಅಲ್ಲಿಯೂ ತ್ರಿಷಷ್ಟಿ ಕ್ರಿಯಾಶೀಲರಿದ್ದರು. ಅಂದರೆ ಸತ್ಯ ಶುದ್ಧ ಉಭಯಾಂಗಕಾಯಕವಂತರಿದ್ದರು. ಶತಾನಂದನಕ್ಕಿಂತ ಸತ್ಯೇಂದ್ರ-ವಿಡಂಬಕರದು ನೂರ್ಮಡಿ ಮಿಗಿಲಾಗಿದ್ದಿತು-ಧರ್ಮದಾಸೋಹಸೇವೆ ! ಜ್ಞಾನಾನು ಭಾವ ದಾಸೋಹ ! ಇದಿಷ್ಟು ಅಸಾಮಾನ್ಯರ ದಾಸೋಹ ! ಇದಲ್ಲದೆ ಭಾರತದ ಸರ್ವಸಾಮಾನ್ಯರಿಗೂ ದಾಸೋಹಗಳೇರ್ಪಟ್ಟಿದ್ದವು.

"ಗಹನೇ ಗಹ್ವರೇ ಶೈಲೇ ಪಥಿ ಗ್ರಾಮೇ ಗೃಹೇಽಪಿ ಚ
ಅರಣ್ಯೇ ಚಾಗ್ನಿರಾತ್ರೌಚ ಜ್ವರಪೀಡಾಗತೇಷು ಚ ।
ಕಾರಾಗೃಹೇ ವಿಪ್ರಸಂಘೇ ಕ್ಷುದ್ರಜಂತು ಭಯಾನ್ವಿತೇ
ವ್ಯಾಘ್ರಗ್ರಸ್ತೇ ಜಲಭಯೇ ವೃಕ್ಷಪಾತೇ ಚ ಮಾರಣೇ ।
ವಿಶೇಷೇಷು ಜನಸ್ತೋಮ ವ್ರತಗೋಪ್ಯೇಷು ಹೇ ಪ್ರಿಯೇ

ಪ್ರಸಾದಮೇವ ಶೀಲಾನಾಂ ಶೀಲಂ ಮಹತ್ತರಂ ಸ್ಮೃತಂ ।
ಭುಕ್ತಿದಂ ಮುಕ್ತಿದಂ ತತ್ತು ಕುರು ತ್ವಂ ಸರ್ವದಾ ಶಿವೇ ॥"

— ವೀರಾಗಮ.

ಮಾನವ ಜೀವನಕ್ಕೆ ಮೊದಲು ಬೇಕಾದುದು ಆಹಾರ ಅದನ್ನು ಸರ್ವರಿಗೂ ಸರ್ವತ್ರ ಸಮಭಾಗದಲ್ಲಿ ಕೊರತೆಯಿಲ್ಲದಂತೆ ಭಾರತಾದ್ಯಂತ ಒದಗಿಸಿದ ದೂರದೃಷ್ಟಿ ದಯಾಮಯದೃಷ್ಟಿ ರೇಣುಕ ಭಗವತ್ಪಾದರದು. ಭಾರತದ ಅಂದಿನ ಪರಿಸ್ಥಿತಿಯೂ ಚಿಂತಾಜನಕವಾಗಿತ್ತು. ರಾಮಾಯಣದ ಕಾಳಗದಿಂದ ಜನರ ಆ ದುರ್ಧರ ದುಸ್ಥಿತಿಯನ್ನು ಕಂಡು ಮಮ್ಮಲ ಮರುಗಿದರು. ಹತ್ತು ಸಾವಿರ ಶಿವಾಚಾರ್ಯರೊಡಗೂಡಿ ನೂರಾರು ಕ್ರಿಯೆಗಳನ್ನು ಕೈಕೊಂಡು ಆರ್ಜಿಸಿ ಕಾಡು ಮೇಡುಗಳಲ್ಲಿ ನಾಡಿನ ಮೂಲೆಮೂಲೆಗಳಲ್ಲಿ ಗ್ರಾಮಗಳಲ್ಲಿ ಗೃಹಗಳಲ್ಲಿ ಹಾದಿಬೀದಿಗಳಲ್ಲಿ ಹಗಲಿರುಳುಗಳಲ್ಲಿ ಧರ್ಮದಾಸೋಹಗಳನ್ನು ಏರ್ಪಡಿಸುವರು. ಚೇನೆ ಬಿದ್ದು ಬಂದವರಿಗೆ, ಹುಲಿಗಳಿಂದ ಕಚ್ಚಿಸಿಕೊಂಡು ಬಂದವರಿಗೆ, ಜಲ ಭಯ ಜಂತು ಭಯವುಳ್ಳವರಿಗೆ ಕಾರಾಗೃಹಗಳಲ್ಲಿರುವವರಿಗೆ ಮರದಿಂದ ಕೆಳಕ್ಕೆ ಬಿದ್ದವರಿಗೆ ಸಾಯುವವರಿಗೆ ದಾಸೋಹಗಳನ್ನೇರ್ಪಡಿಸಿದ್ದರು. ಅಲ್ಲದೆ ವಿಪ್ರ ಸಂಘಗಳಲ್ಲಿ ವಿಶೇಷವಾಗಿ ಜನರ ಗುಂಪುಗಳಿರುವಲ್ಲಿ ವ್ರತಸ್ಥರಿರುವಲ್ಲಿ ಗೋಷ್ಠಿಗಳು ನಡೆವಲ್ಲಿ ದಾಸೋಹಗಳ ವ್ಯವಸ್ಥೆಯಾಗಿದ್ದಿತು. ಇಷ್ಟೊಂದು ವ್ಯಾಪಕವಾಗಿ ಧರ್ಮದಾಸೋಹಗಳನ್ನು ಏರ್ಪಡಿಸಿ ಅನುಪಮ ಕೀರ್ತಿ, ಅಪ್ರತಿಮ ಪ್ರಸಾದಕ್ರಾಂತಿ ಆದಿಜಗದ್ಗುರು ರೇಣುಕ ಭಗವತ್ಪಾದರದು. ಇದಕ್ಕಾಗಿ ಮೊತ್ತಮೊದಲು ಇದಕ್ಕೆಲ್ಲ ಅನುಕೂಲವಾಗುವ ಆರ್ಥಿಕ ಅರ್ಜನೆಗಾಗಿ ಕ್ರಿಯಾಶೀಲ ಕ್ರಾಂತಿಯನ್ನು ಏರ್ಪಡಿಸಿದ ವಿಶಿಷ್ಟ ವಿಚಕ್ಷಣತೆ ಅವರದಾಗಿತ್ತು. ಜನಾಂಗದ ಅಭಿವೃದ್ಧಿ ಸಂತೃಪ್ತಿಗೆ ಆರ್ಥಿಕ ನೀತಿ ಅತ್ಯಗತ್ಯ ; ಮುಖ್ಯಾಂಗವೂ ಸಹ ಇದರಿಂದಾಗಿ ನಾನಾ ಬಗೆಯ ಕ್ರಿಯಾಶೀಲತೆಗಳನ್ನು ತಾವೂ ಅನುಷ್ಠಾನಕ್ಕೆ ತರುವುದಲ್ಲದೆ ಎಲ್ಲ ದೇಶೀಯ ಜನಾಂಗದವರಿಗೂ ಮಾಡಹಚ್ಚುವರು. ಇದು ಮಾನವನ ಸಹಜ ಪ್ರವೃತ್ತಿಯಾದರೂ ಪ್ರವರ್ತಿಸುವುದು ಅಪರೂಪ ! ಆರ್ಥಿಕಾರ್ಜನೆಯ ಪ್ರವೃತ್ತಿಯನ್ನೆ ನಿವೃತ್ತಿಯನ್ನಾಗಿಸಿ ಪ್ರಬೋಧಿಸಿ ಜನತೆಯನ್ನು ಸಮ್ಯಕ್ ಆಗಿ ಆಕರ್ಷಿಸಿದರು. ಪ್ರಕ್ರಿಯಾ ಪ್ರವರ್ತಕರನ್ನಾಗಿ ಮಾಡಿದರು. ಇದನ್ನೆ ಕ್ರಿಯಾಶೀಲವೆಂದು ಕ್ರಿಯಾಚಾರವೆಂದು ನಿರೂಪಿಸಿದರು. ಇದರಿಂದ

ಕೆಳಮಟ್ಟದ ಜೀವನ ಮೇಲ್ಮಟ್ಟದ್ದಾಗಿ ರೂಪುಗೊಳ್ಳುವುದು, ರೂಪುಗೊಂಡಿತು. ಪ್ರಾಮಾಣಿಕತೆ ರಚನಾತ್ಮಕತೆ ಬಹುಮುಖವಾಗಿ ಮುನ್ನಡೆವಂತಾಗುವುದು. ಧಾರ್ಮಿಕ ಸಾಂಸ್ಕೃತಿಕತೆಗಳು ಆದರಿಂದ ತಮ್ಮಿಂದ ತಾವೇ ರೂಪುಗೊಳ್ಳುವಂತಾಗುವುದು. ಬಾಳಿನಲ್ಲಿ ಬದುಕಿನಲ್ಲಿ ಹೊಸ ಹೊಸ ಬದಲಾವಣೆ (ಮಾರ್ಪಾಟು)ಗಳು ಮೈದೋರುವುವು. ಬಾಳು-ಬದುಕು ಭಾರವಾಗದೆ ಬೇಸರಕ್ಕಿಂಬಿರದೆ ನಿತ್ಯ ಚೈತನ್ಯಮಯವಾಗಿ ಪರಿಣಮಿಸುವುದು. ಅಂತೆಯೇ "ವೃತ್ತಿಶ್ಚೈತನ್ಯರೂಪಿಣೀ" ಅಂದರೆ ಕಾಯಕವೇ ಕಳಾಚೈತನ್ಯ ಎಂದು ಯಥಾರ್ಥವಾದ ಸ್ವಾನುಭಾವಪೂರ್ಣ ವಾಣಿ ಶ್ರೀ ರೇಣುಕಶಿವಾಚಾರ್ಯರಿಂದ ಹೊರಹೊಮ್ಮುವುದು. ಆರ್ಥಿಕ ಅಭಿವೃದ್ಧಿಯೊಡನೆ ಆಸ್ತಿಕ ಭಾವದ ಅಭಿವೃದ್ಧಿಯೂ ಅಳವಡುವುದು. ಜನತೆಯ ಹೃದಯಗಳಲ್ಲಿ ಶ್ರದ್ಧೆ ನಿಷ್ಠೆಗಳು ಅರಿವು ಅವಧಾನಗಳು ಆವಿಷ್ಕಾರಗೊಳ್ಳುವವು. ಉತ್ಪಾದನೆಯ ಪಥಗಳಲ್ಲಿ ನವನವೀನ ವಿಧಾನಗಳು ವಿಶೇಷವಾಗಿ ಅಳವಡುವಂತೆ ಅನುವಾಗುವುದು. ಆಡಳಿತೆಗಾರರಿಂದ ಅರ್ಥಶಾಸ್ತ್ರಜ್ಞರಿಂದ ಆಗದಷ್ಟು ಮಟ್ಟಿನ ಪ್ರಗತಿಯನ್ನು ಅಂದು ಆ ಜಗದ್ಗುರು ರೇಣುಕರು ಜನರಲ್ಲಿ ಉಂಟು ಮಾಡಿದ ಕ್ರಿಯಾಶೀಲಕ್ರಾಂತಿ ಎಂಥವರಿಗೂ ಅಚ್ಚರಿಯನ್ನುಂಟು ಮಾಡುವಂತಹದು. ಸಂಪನ್ಮೂಲಗಳಾದ ಕೃಷಿ ಕೈಗಾರಿಕೆ ಕಲೆ ಮೊದಲಾದವುಗಳನ್ನು ಜನರಲ್ಲಿ ಅನುಷ್ಠಾನಕ್ಕೆ ತರುವಂತೆಸಗಿದರು. ಕೃಷಿಕ್ಷೇತ್ರದಲ್ಲಿ ಜಲ ಸೌಕರ್ಯವನ್ನುಂಟು ಮಾಡುವರು. ಆಹಾರಧಾನ್ಯವನ್ನು ಸಮೃದ್ಧಿಯಾಗಿ ಬೆಳೆಯಲು ಇದು ಮುಖ್ಯ ಸೌಕರ್ಯ.

ವೀರಮಾಹೇಶ್ವರಾಃ ಸರ್ವೇ ರೇಣುಕಾದ್ಯಾಃ ಪುರಾತನಾಃ
ತೇ ಪ್ರತ್ಯಹಂ ಕಾರಯಂತಿ ಸೂರ್ಯ ರಶ್ಮಿ ವಿವರ್ಜಿತಂ ।
ಯೇ ಕಾರಯಂತಿ ಭಕ್ತ್ಯೈವ ಪಲ್ವಲಾನಿ ವರಾನನೇ
ತ್ರಿಷಷ್ಠಿ ಶೀಲ ಯೋಗಿಭ್ಯಃ ಶಿವಕ್ಷೇತ್ರೇ ದಿನೇ ದಿನೇ ।
ತೇ ಯಾಂತಿ ಮಮ ಸಾಯುಜ್ಯಮಿತಿ ತ್ವಂ ವಿದ್ಧಿ ಪಾರ್ವತಿ
ಲಿಂಗಮುದ್ರಾಂಕಿತೇ ಕ್ಷೇತ್ರೇ ಮಠೇವಾ ಭಕ್ತಮಂದಿರೇ
ಯೇ ಕಾರಯಂತಿ ಸತತಂ ಕೂಪಾನಿ ಕುಶಲಾನ್ವಯೇ ।
ತೇ ಯಾಂತಿ ಮಮ ಸಾಯುಜ್ಯಂ ವಿದ್ಧಿ ತ್ವಂ ರುದ್ರವೇಷ್ಟಿತಂ
ತೇಷಾಂ ಪಾದಾಬ್ಜ ಸಂಭೂತರಜಾಂಸಿ ಸುರಪೂಜಿತಾಃ

ವೀರಮಾಹೇಶ್ವರಾಃ ಸರ್ವೇ ಸ್ತೋತ್ರಂ ಕುರ್ವಂತಿ ಸರ್ವದಾ ॥
ಚರಿತಂ ಮಾನವಂ ಲೋಕೇ ಮಾಮಪ್ಯೈ ಹಿ ವರಾನನೇ
ತಾನ್ಮೇ ಗುರೂನ್ ಗುಣಶ್ರೇಷ್ಠಾನ್ ವಿದ್ಧಿತ್ವಂ ಹಿಮವತ್ಸುತೇ ॥
—ವೀರಾಗಮ.

ಪುರಾತನರಾದ ರೇಣುಕಾದಿ ವೀರಮಾಹೇಶ್ವರರೆಲ್ಲರು ಪ್ರತಿನಿತ್ಯದಲ್ಲಿ ರವಿಕಿರಣ ಸೋಂಕದ ಚಿಲುಮೆಗಳನ್ನು ಮಾಡುತ್ತಿದ್ದರು ; ಮಾಡಿಸುತ್ತಿದ್ದರು. ಲಿಂಗಮುದ್ರೆಯಿಂದ ಶುದ್ಧವಾದ ಭೂಮಿಗಳಲ್ಲಿ ಶಿಷ್ಟ ಕಾಯಕವುಳ್ಳ ಯೋಗಿಗಳಿಂದ ಕೆರೆ ಭಾವಿ ಕೊಳಗಳನ್ನು ಶ್ರದ್ಧೆಯಿಂದ ಮಾಡಿಸುತ್ತಿದ್ದರು. ಮತ್ತು ಲಿಂಗಮುದ್ರೆಯುಳ್ಳ ಹೊಲ ಮನೆ ಮಠ ಭಕ್ತರ ಮಂದಿರ (ಮನೆ)ಗಳಲ್ಲಿ ಬಾವಿಗಳನ್ನು ಯಾವ ಪ್ರತಿಫಲಾಕಾಂಕ್ಷೆಯಿಲ್ಲದೆ ಯಾವಾಗಲೂ ಮಾಡಿ ಮಾಡಿಸುತ್ತಿದ್ದರು. ಅವುಗಳೇ ಪರಿಶುದ್ಧ ಜಲಾಶಯುಗಳು. ಅವರೇ ಪವಿತ್ರಾತ್ಮರು. ಅಂತವರ ಪಾದಧೂಳಿ ಸುರರಿಂದ ಪೂಜ್ಯಗೊಳ್ಳುತ್ತದೆ. ಅವರನ್ನು ಎಲ್ಲ ವೀರ ಮಾಹೇಶ್ವರರು ಬಿಡದೆ ಸ್ತುತಿಸುತ್ತಾರೆ. ಶುದ್ಧ ಕಾಯಕದ ಸಚ್ಚರಿತರು ಈ ಲೋಕದ ಸಾಕ್ಷಾತ್ ಶಿವರು. ಅಲ್ಲದೆ ಅವರು ಗುಣಗಣ್ಯರಾಗಿ ನನಗೂ (ಶಿವನಿಗೂ) ಗುರುಗಳು.

ಕಾಯಕದ ಬಗೆಗೆ ಇರುವ ವೈಶಾಲ್ಯ ಮನೋಭಾವವನ್ನೂ ಮೌಲ್ಯ ಭಾವದ ವೈಖರಿಗಳನ್ನೂ ಇಲ್ಲಿ ಮನಗಾಣಬೇಕು. ಜಲಾಶಯುಗಳ ನಿರ್ಮಾಣ ಕಾಯಕದಲ್ಲಿ ಕೃಷಿಕ್ಷೇತ್ರದಲ್ಲಿ ಮೂಲಭೂತವಾದುದು. ಎಲ್ಲ ಪ್ರಾಣಿಗಳೂ ನೀರ್ಗುಡಿದು ತಣಿಯುವವು. ಹೆಚ್ಚು ಜನ ಹೆಚ್ಚಾಗಿ ಬೆಳೆಯನ್ನು ಬೆಳೆಯಲು ಅನುವು. ಜಲಕ್ಕೆ ಜೀವನವೆಂದು ಮತ್ತೊಂದು ಹೆಸರು. ಜೀವನಕ್ಕೆ ಚೈತನ್ಯವನ್ನೊದಗಿಸುವ ಮೂಲಭೂತ ವೃತ್ತಿ ಇದಾಗಿದೆ. ಈ ಬಗೆಗೆ ಯೋಚಿಸಿದಷ್ಟೂ ವಿಚಾರಧಾರೆ ಹೊನಲಾಗಿ ಹರಿದು ಬರುತ್ತದೆ. ಬರೆದಷ್ಟೂ ಬರೆಹ ಬೆಳೆದು ಬರುತ್ತದೆ.

ಎರಡನೆಯದಾಗಿ, ಅಂದಿನ ಭಕ್ತರಂತೆ ಗುರು-ಚರರೂ ಕಾಯಕ ನಿರತರು. ತ್ರಿಷಷ್ಟಿ ಶೀಲ ಸಂಪನ್ನರು. ಅಲ್ಲಿ ಇಲ್ಲಿ, ಅವರು ಇವರು ಎಂಬ

ಭೇದವಿರಲಿಲ್ಲ. ಎಲ್ಲಿ ಅಂದರೆ ಅಲ್ಲಿ ಪ್ರಸಾದ ಪ್ರಧಾನ ಧರ್ಮ ದಾಸೋಹ ಗಳು ಒಂದು ಭಾಗವಾದರೆ, ಇನ್ನೊಂದು ಭಾಗದಲ್ಲಿ ಎಲ್ಲಿ ಅಂದರೆ ಅಲ್ಲಿ ಚಿಲುಮೆ ಬಾವಿ ಕೆರೆ ಕುಂಟೆ ಕೊಳ ಮೊದಲಾದ ಜಲಾಶಯುಗಳು. ನೆಲ ನೆಲವೂ ಶಿವಕ್ಷೇತ್ರವಾಗಬೇಕು. ನೆಲೆ ನೆಲೆಯೂ ಶಿವಮಂದಿರವಾಗಬೇಕು. ನಿಲಯುಗಳಲ್ಲಿರುವವರೆಲ್ಲರ ನಿಲವುಗಳು ಶಿವವಾಗಬೇಕು. ಶಿವಕಾರ್ಯ ತತ್ಪರ ವಾಗಬೇಕು.

ಪಾದತೋಯಂ ವಿನಾ ಪಾಕಮಭಕ್ಷಯತಿ ಮೇ ಪ್ರಿಯಾಃ
ವೀರಮಾಹೇಶ್ವರಾಃ ಸರ್ವೇವದಂತಿ ವಸುಧಾತತೀ ।

ಅಂದಿನ ವೀರಶೈವರು ಪಾದೋದಕವಿಲ್ಲದೆ ಪಾಕ ಮಾಡುತ್ತಿರಲಿಲ್ಲ. ಮಾಡಿದಲ್ಲಿ ಅದನ್ನು ಆರೋಗಿಸುತ್ತಿರಲಿಲ್ಲ. ಇದು ಅನಾದಿ ವೀರಶೈವದಿಂದ ಬಂದ ಆಚರಣೆ! ಇದನ್ನು ಎಲ್ಲರೂ ಅನುಸರಿಸಬೇಕೆಂದು ವೀರ ಮಾಹೇಶ್ವರರು ಎಲ್ಲೆಲ್ಲಿಯೂ ಎಲ್ಲರಲ್ಲಿಯೂ ನಡೆಯಲ್ಲಿ ತರುವಂತೆ ಸಯು ವಾಗಿ ನುಡಿಯುತ್ತಿದ್ದರು. ಅವರು ಕೋಮಲೀಕೃತ ಸೂಕ್ತರಾಗಿದ್ದರೆಂದು ವೀರಾಗಮ ನಿರೂಪಿಸಿದೆ. ಅಲ್ಲದೆ ಅವರು ಸ್ವಯಂಭುಜ್ಞಾನಗರ್ಭಿತರು, ಅಂದರೆ ಸ್ವಯಾನುಭಾವಿಗಳು. ಸ್ವಯಾನುಭವಕ್ಕೆ ಚಿಚ್ಛಕ್ತಿಜ್ಞಾನವೆಂದು ಹೇಳುತ್ತಿದ್ದರು. ಅಂತಹ ಚಿಚ್ಛಕ್ತಿಜ್ಞಾನಿಗಳಿಂದ ಅಂದರೆ ಸ್ವಯಾನುಭಾವಿ ಗಳಿಂದ ಬಂದ ಪಾದೋದಕವೇ ಪರಮ ಪಾವನ. ಆದರಿಂದ ಸಾತ್ವಿಕ ಜೀವನ; ಅಜಡ ಜೀವನ.

"ಸ್ವರ ಸಂಸ್ಕಾರ ರ(ಸ)ಹಿತಂ ಸ್ವಯಂಭುಜ್ಞಾನಗರ್ಭಿತಂ
ಮಂತ್ರತೋಯಂ ಮಮಪ್ರೀತ್ಯಾಯೇ ಪಿಬಂತಿ ಜಿತೇಂದ್ರಿಯಾಃ ।
ವಿಶ್ವಾಧಾರಂ ಮಂತ್ರಪೂತಂ ಪಾದತೋಯಂ ವರಾನನೇ
ಅನಾದಿ ವೀರಶೈವಾನಾಂ ಗಲರುದ್ರಾಕ್ಷಧಾರಿಣಾಂ ।
ಷಡಾಧಾರ ಚಕ್ರಪದ್ಮಯೋಗಿನಾಂ ಧ್ಯಾಯಮುತ್ತಮಂ
ಇದಂ ಪವಿತ್ರಂ ಪಾಪಘ್ನಂ ತೋಯಂ ಮಾಹಿವಪಾರ್ವತಿ ।

—ವೀರಾಗಮ

ಆದಿ ರೇಣುಕರ ಅನುಭಾವಿಕ ಧರ್ಮ ದಾಸೋಹ ದಿವ್ಯ ದೃಷ್ಟಿಯಲ್ಲವೆ; ಕ್ರಾಂತಿ ಇದರಲ್ಲಿದೆ. ಸ್ವಾನುಭಾವಿಯ ಮಂತ್ರಮಯ ಚರಣೋದಕದಿಂದ

ಅನ್ನದ ಭೌತಿಕ ಜಡತೆ, ರಜೋಗುಣ ತಮೋಗುಣಗಳ ವೈಕಾರಿಕತೆಗಳು ಅಳಿಯುತ್ತವೆ. ಪಾದೋದಕ ಮಿಶ್ರ ಪ್ರಸಾದಾರೋಗಣೆಯಿಂದ ಮಾನಸಿಕ ಐಂದ್ರಿಕ ಶಾರೀರಿಕ ವೈಕಾರಿಕ ಗುಣಕರ್ಮಗಳು ಇಲ್ಲದಾಗಿ ಧಾರ್ಮಿಕ ಧ್ಯೇಯ ಗಳನ್ನು ತ್ವರಿತವಾಗಿ ಕೊರತೆಯಿಲ್ಲದಂತೆ ಸಾಧಿಸಲು ಸುವರ್ಣ ಮಾಧ್ಯಮವಾಗಿ ಪರಿಣಮಿಸುತ್ತದೆ. ಆರ್ಥಿಕ ಪ್ರಾಸಾದಿಕ ಪವಿತ್ರ ಪ್ರಗತಿ ಅಭಿವೃದ್ಧಿಗಳು ಅಳವಡುತ್ತವೆ. ಕ್ರಾಂತಿಯು ಮತ್ತು ಧಾರ್ಮಿಕ ಸಾಮಾಜಿಕ ಸಮಗ್ರ ಅಭಿವೃದ್ಧಿಯು ನಿರೀಕ್ಷಣೆಯಂತೆ ದೊರೆಯಬೇಕಾದರೆ ಪ್ರಾಮಾಣಿಕ ಆರ್ಥಿಕ ನೀತಿಯಂತೆ ಪಾವನ ಪಾದೋದಕ ಪ್ರಸಾದಗಳಾಚರಣೆ ಅನಿವಾರ್ಯ. ಇದರಿಂದೊದಗುವ ಸರ್ವಾಂಗೀಣ ಸಂಯಮನವೂ ಅನಿವಾರ್ಯ. ಸ್ವಯಂ ಭುಜ್ಞಾನಿಯ ಮಂತ್ರೋದಕ ಚರಣೋದಕಗಳಲ್ಲಿ ಜಿತೇಂದ್ರಿಯತ್ವ ಒದಗುವ ಪ್ರಭಾವವಿದೆಯೆಂಬುದು ಅಂದು ಶಿವಾಚಾರ್ಯರು ಕಂಡು ಕಾಣಿಸಿದ ಸತ್ಯಾ ಚರಣೆಯ ಪರಮಫಲ. ಇಷ್ಟೇ ಅದು ವಿಶ್ವಾಧಾರವೂ ಆಗಿದೆಯಂತೆ ! ರುದ್ರಾಕ್ಷಧಾರಿಗಳಾದ ಷಡಾಧಾರ ಚಕ್ರಪದ್ಮ ನಿಷ್ಠಲಿಂಗಯೋಗಿಗಳಾದ ಅನಾದಿ ವೀರಶೈವರಿಂದ ಬಂದ ಉತ್ತಮ ಧ್ಯೇಯವಿದು. ಇದನ್ನು ಆದಿ ವೀರಶೈವ ಶಿವಾಚಾರ್ಯರು ಅಂಗೀಕರಿಸಿ ಅಳವಡಿಸಿಕೊಂಡು ಸತ್ವಪೂರ್ಣ ಕ್ರಾಂತಿಯನ್ನೆಸಗಿ ದರು. ಅದು ಪರಿಪೂರ್ಣ ಸಫಲವಾಯಿತು. ರಾಜಕೀಯ ನೆರವಿನಿಂದ ರಾಜ ಸ ಕ್ರಾಂತಿಯ ಮಾಡಿದರೆ ಎಂದಿಗೂ ಸಫಲವಾಗದು.

ಸಾಮಾನ್ಯವಾಗಿ ಅರ್ಥ ಆಹಾರಗಳ ಸಮೃದ್ಧಿಯನ್ನು ಸಾಧಿಸುವುದೇ ಸಾಹಸದ ಮಾತು ; ದೀರ್ಘಾವಧಿಯ ಕಾರ್ಯ. ಸಂತತ ಪ್ರಯತ್ನ ಸಾಧ್ಯ. ಆದರೆ ಆದಿ ಜಗದ್ಗುರು ರೇಣುಕ ಶಿವಾಚಾರ್ಯರು ಅಸಾಮಾನ್ಯವಾಗಿ ಕ್ರಿಯಾ ಶೀಲತೆಯಿಂದ ಧರ್ಮ ಪ್ರಧಾನವಾದ ಅರ್ಥ ಪ್ರಸಾದಗಳ ಸಮೃದ್ಧಿಯನ್ನು ಅನತಿ ಕಾಲದಲ್ಲಿ ಲೀಲಾಜಾಲವಾಗಿ ಸಾಧಿಸಿದುದು ಅವರದೇ ಆದ ಅತ್ಯದ್ಭುತ ಕ್ರಿಯಾಶಕ್ತಿ ಕಾರಣ ; ಮತ್ತು ಅದೊಂದು ಲೋಕೋತ್ತರ ಪ್ರಭಾವ ಪೂರ್ಣ ಪವಾಡ. ಅದರಲ್ಲಿಯೂ ತಾತ್ತ್ವಿಕವಾದ ಪರಾಕಾಶ ಸ್ವರೂಪ ಪರಮ ಪರಿಣಾಮ ಪ್ರಸಾದ ಸಮೃದ್ಧಿಯನ್ನು ಸಾರ್ವತ್ರಿಕವಾಗಿ ಸಾಧಿಸಿದುದನ್ನು ಬಣ್ಣಿಸಲು ಭಾಷೆ ಬಡವ.

"ಆಜ್ಞಾಚಕ್ರಮಯಂ ತತ್ತ್ವ ಪ್ರಸಾದಂ ಸರ್ವಕಾಂಕ್ಷಿತಂ
ವೀರಮಾಹೇಶ್ವರಾಣಾಂ ಚ ನಿತ್ಯತೃಪ್ತಿ ಪ್ರದಾಯಕಂ ।
ವಿಶ್ವಮಧ್ಯೇ ಮುಕ್ತಿಬೀಜಂ ರಾಜತೇ ಸರ್ವದಾಪ್ರಿಯೇ
ಪವಿತ್ರೇಣ ಪ್ರಸಾದೇನ ಭೂರುದ್ರಾಣಾಂ ವರಾನನೇ....॥

—ವೀರಾಗಮ

ಪ್ರಸಾದ ಆರು ತೆರನುಂಟು : ಸುಗಂಧ ಪ್ರಸಾದ, ಸುರಸಪ್ರಸಾದ, ಸುರೂಪಪ್ರಸಾದ, ಸುಸ್ಪರ್ಶ ಪ್ರಸಾದ, ಸುಶಬ್ದ ಪ್ರಸಾದ, ಸುಪರಿಣಾಮ (ಸುತೃಪ್ತಿ) ಪ್ರಸಾದ–ಎಂಬುದಾಗಿ ! ಈ ಆರನ್ನೂ ಅಂದಿನ ವೀರ ಮಾಹೇಶ್ವರರು ಸಂಪಾದಿಸಿ ಸಮೃದ್ಧಿಗೊಳಿಸಿದ್ದರು. ಅವುಗಳಲ್ಲಿ ವಿಶೇಷ ವಾಗಿ ಆಜ್ಞಾಚಕ್ರಮಯವಾದ ಪರಿಣಾಮ ಪ್ರಸಾದ ಸರ್ವ ಕಾಂಕ್ಷಿತ ; ಅದು ನಿತ್ಯ ತೃಪ್ತಿ ಪ್ರದಾಯಕ. ಜೀವನ್ಮುಕ್ತಿಗೆ ಕಾರಣ. ಅದು ಅಚ್ಚಳಿಯದ ಪರಮ ಪ್ರಸಾದ. ಅಂತಹ ಆ ಪರಮ ಪ್ರಸಾದದಿಂದ ಅಂದಿನ ಶಿವಾಚಾರ್ಯ ರೆಲ್ಲರೂ ನಿತ್ಯತೃಪ್ತಿಯನ್ನು ಪಡೆದಿದ್ದರು. ಇದೂ ಇನ್ನು ಅತ್ಯದ್ಭುತವಾದ ಕ್ರಿಯಾಸಿದ್ಧಿ, ಪ್ರಾಸಾದಿಕ ಸಿದ್ಧಿ.

## ಭೂರುದ್ರ–ಭಕ್ತಸಂಘಗಳು

"ಭೂರುದ್ರ-ಭಕ್ತ ಸಂಘಾತ್ತೈಃ ರಚಿತಂ ಮಂತ್ರವೇಷ್ಟಿತಂ
ತತ್ತು ಪಾಕಂ ಪ್ರಾಕೃತಾನ್ನಮಿತಿಯೆ. ಭಾಪಿತಾ ನರಾಃ
ತೇ ಯಾಂತಿ ರೌರವಂ ಘೋರಂ ಯಾವಚ್ಚಂದ್ರ ದಿವಾಕರಂ ।

ಶೀಲವ್ರತಾನ್ವಿತಂ ಧೀರಂ ಭೂರುದ್ರಾಚಾರಚಾರಿಣಂ
ಷಟ್‌ಸ್ಥಲ ಬ್ರಹ್ಮಚಕ್ರಾಂಗ ಶೋಧನಾಚಾರ ಚಕ್ರಿಣಂ ।
ತ್ರಿಷಷ್ಟಿ ಶೀಲನಿರತಂ ಶಿಷ್ಯಂ ಭೂರುದ್ರಯೋಗಿನಾಂ
ಗೃಹಿಣಂ ಭಕ್ತಭಕ್ತಿಸ್ಥಂ ತೀರ್ಥಪ್ರಸಾದ ಸೇವಿತಂ
ಪರಪಾಕ ಪರಿತ್ಯಾಗಂ ಸ್ವಯಂ ಪಾಕ ಪ್ರವರ್ತಕಂ
ಮಮಾಧಿಕ ಮಿತಿ ತ್ವಂ ಹೇ ವಿದ್ಧಿ ಗೌರಿ ಜಗತ್ತ್ರಯೇ ॥

ಸರ್ವಶೀಲಾನ್ವಿತಂ ಶ್ರೇಷ್ಠಂ ಪರಪಾಕವಿವರ್ಜಿತಂ
ಯದ್ವ್ರತಂ ಗುರವಃ ಶಾಂತಾಃ ಶಿಷ್ಯೇಭ್ಯೋಜಿತಮನ್ಮಥಾಃ ।
ಉಪದೇಶ ಮಾಗಮೋಕ್ತಂ ಕುರ್ವಂತಿ ವಸುಧಾತಳೇ
ತ ಏತೇ ಗುರವಃ ಸರ್ವೇ ಕೈಲಾಸಸ್ಯ ಗಣೇಶ್ವರಾಃ ॥"

— ವೀರಾಗಮ.

ಸಾಮಾಜಿಕ ಸಂಘಟನೆಗಾಗಿಯೂ ಆಚಾರ–ವಿಚಾರಗಳ ಸಮನ್ವಯದ ಅನುಷ್ಠಾನಕ್ಕೂ ಶ್ರೀ ರೇಣುಕ ಶಿವಾಚಾರ್ಯ 'ಭೂರುದ್ರ–ಭಕ್ತಸಂಘ'ಗಳನ್ನು ಅಲ್ಲಲ್ಲಿ ಸ್ಥಾಪಿಸಿದ್ದರು. 63 ಶೀಲಗಳನ್ನು 64 ಕಲೆ (ವಿದ್ಯೆ)ಗಳನ್ನು ಕ್ರಿಯಾಚರಣೆಗೆ ಸಹಕಾರದಿಂದ ತರುವುದೇ ಆ ಸಂಘಗಳ ಧ್ಯೇಯವಾಗಿದ್ದಿತು.

ಭೂರುದ್ರ ಭಕ್ತ ಸಂಘಗಳಲ್ಲಿರುವವರು ನಡೆದುಕೊಳ್ಳತಕ್ಕ ವ್ರತಗಳಿವು. ಪ್ರತಿಯೊಬ್ಬರು ಸಚ್ಚಾರಿತ್ರರು ಧೀರರು ಭೂರುದ್ರಾಚಾರನಿರತರೂ ಷಟ್‌ಸ್ಥಲ ಬ್ರಹ್ಮ ಚಕ್ರಾಂಗ ಶೋಧನಾಚಾರ ವಿಚಕ್ಷಣರೂ ಮತ್ತು ಸಂಘಗಳಲ್ಲಿ ಭಕ್ತಿ ಆಸಕ್ತಿಯುಳ್ಳವರೂ ವೀರಶೈವ ಕಟ್ಟಾಚಾರ ನಿರತರೂ ಆಗಿರಬೇಕೆಂದು ಕಟ್ಟಪ್ಪಣೆಯಾಗಿದ್ದಿತು. ಗುರುಗಳೇ ಆಗಲಿ, ಶಿಷ್ಯರೇ ಆಗಲಿ ಎಲ್ಲರೂ ನಡೆ ನುಡಿ ಶುದ್ಧರಾಗಿರಬೇಕು. ಭೇದಭಾವವಿಲ್ಲದವರಾಗಿರಬೇಕು. ಪರಾನ್ನ ಪ್ರಾಕೃತಾನ್ನಗಳಿಗೆ ಆಶೆ ಪಡಬಾರದು. ಸರ್ವರಲ್ಲಿ ಮಾನವೀಯ ಭಾವವುಳ್ಳವರಾಗಿರಬೇಕೆಂದು ಶ್ರೀ ಜಗದ್ಗುರು ರೇಣುಕಾದಿ ಪುರಾತನರು ರೂಪಿಸಿದ್ದರು.

## ಸ್ತ್ರೀಸ್ವಾತಂತ್ರ್ಯ

ಅಂದಿನ ಆ ಭೂರುದ್ರ ಭಕ್ತಸಂಘಗಳಲ್ಲಿ ಸ್ತ್ರೀ ಪುರುಷರೆಂಬ ಭೇದವಿರಲಿಲ್ಲ. ಪುರುಷರಂತೆ ಸ್ತ್ರೀಯರಿಗೂ ಎಲ್ಲದರಲ್ಲಿ ಹಕ್ಕಿದ್ದಿತು ನೈತಿಕವಾಗಿ !

''ಭೂರುದ್ರ-ಭಕ್ತ ಸಂಘಾನಾಮಾಲಯೇಷು ದಿನೇ ದಿನೇ
ಪಾಕಾಲಯೇ ಸ್ತ್ರಿಯಂ ವಾಽಪಿ ಪುರುಷಂ ವಾ ಪುರಾತನಾಃ ।
ಸ್ತುವಂತಿ ಮಮ ಸಾನ್ನಿಧ್ಯೇ ರೇಣುಕಾದ್ಯಾಃ ಸನಾತನಾಃ
ಸ್ತ್ರೀ ಪುಮಾಂಸೌ ಸದಾ ಪಾಕಕಾರಿಣೌ ರುದ್ರಲಾಂಛಿತೌ ।
ಶೀಲ ವ್ರತಾನ್ವಿತೌ ಪೂಜ್ಯಾ ಭೂರುದ್ರಾಚಾರ ಚಾರಿಣೌ
ಮತ್ಪ್ರಿಯೇ ವಿದ್ಧಿ ಸತತಮಿತಿ ತೇ ಹೃದಿ ಪಾರ್ವತಿ ॥''

— ವೀರಾಗಮ.

ಭೂರುದ್ರ–ಭಕ್ತ ಸಂಘಾಲಯಗಳಲ್ಲಿ ಮತ್ತು ಪಾಕಾಲಯಗಳಲ್ಲಿ ಪ್ರತಿ ದಿನವೂ ಸ್ತ್ರೀ ಪುರುಷರಿಗೆ ಸಮಾನವಾದ ಹಕ್ಕಿದ್ದಿತು. ರೇಣುಕ ದಾರುಕ ಘಂಟಾಕರ್ಣ ಗಜಕರ್ಣ ಶಿವಾಚಾರ್ಯರು ಸ್ತ್ರೀ ಪುರುಷರ ಸೌಜನ್ಯ ಸ್ವಾತಂತ್ರ್ಯವನ್ನು ಮೆಚ್ಚಿಕೊಂಡು ಅಪರ ಶಿವನ ಬಳಿಯಲ್ಲಿ ಬಣ್ಣಿಸುತ್ತಿದ್ದರು. ಸ್ತ್ರೀ ಪುರುಷರು ರುದ್ರಲಾಂಛನ (ಕಾವಿಬಟ್ಟೆ)ಗಳನ್ನು ಧರಿಸಿ ಯಾವಾಗಲೂ ಧರ್ಮ ದಾಸೋಹಗಳಲ್ಲಿ ಪಾಕಾದಿಕ್ರಿಯೆಗಳನ್ನು ಮಾಡುತ್ತ ಸೇವೆ ಸಲ್ಲಿಸುತ್ತಿದ್ದರು. ಶೀಲವ್ರತ ನಿರತರು; ಭೂರುದ್ರಾಚಾರ ಸಹಿತರು. ಇದರಿಂದಾಗಿ ಪೂಜ್ಯರಾಗಿದ್ದರು.

## ರುದ್ರಕನ್ನೆಯರು

ಬ್ರಾಹ್ಮೀ ಮಾಹೇಶ್ವರೀ ಮುಖ್ಯಾ ರುದ್ರಕನ್ಯಾಃ ಕಳಾಮುಖಾಃ
ತವದೂತಾಃ ಕುಲಶೀಲೇ ದಧತಿ ತ್ವಯಿ ಪಾರ್ವತಿ ।

ವ್ರಜಂತಿ ರುದ್ರಕನ್ಯಾಡ್ಯಂ ಗುರುತ್ವಂ ಯೋಗಿನಾಮಪಿ
ಅಶೇಷ ಪ್ರಮಥಾನಾಂ ಚ ಸತ್ಯಂ ವದಾಮ್ಯಹಂ ।
ಆರುಹ್ಯ ಪುಷ್ಪಕಂ ದಿವ್ಯಂ ರುದ್ರಕನ್ಯಾ ಸಮನ್ವಿತಂ
ಬ್ರಹ್ಮಾಂಡ ಕಟಹಾದೂರ್ಧ್ವಂ ರೇಣುಕ್ಯೈಃ ಪ್ರಮಥೈಃ ಸಹ ।

—ವೀರಾಗಮ

ಶಿವಾಚಾರಿಣಿಯರಂತೆ ರುದ್ರಕನ್ನೆಯರೂ ಅಲ್ಲಿದ್ದು ಸೇವೆ ಸಲ್ಲಿಸುತ್ತಿದ್ದರು. ಬ್ರಾಹ್ಮೀ ಮಾಹೇಶ್ವರೀ ಕೌಮಾರೀ ವೈಷ್ಣವೀ ವಾರಾಹೀ ಇಂದ್ರಾಣಿ ಚಾಮುಂಡಾ ಇವರೇ ಮುಖ್ಯವಾಗಿರುವ ರುದ್ರಕನ್ಯೆಯರಿದ್ದರು. ಸುಂದರಿಯರಾಗಿದ್ದರು. ಕುಲಶೀಲಗಳಲ್ಲಿ ನಿರತರು. ಶಿವೆಯು ಸೇವಾನಿರತರು ಆಗಿರುತ್ತಿದ್ದರು. ಶೀಲ ಸೌಜನ್ಯಸಹಿತರಾದ ರುದ್ರಕನ್ನೆಯರು ಆಢ್ಯರಾಗಿದ್ದರು. ಯೋಗಿಗಳಿಗೂ ಗುರುಗಳಾಗಿದ್ದರು. ಅಷ್ಟೇ ಅಲ್ಲ ಪ್ರಮಥರಿಗೂ ಪೂಜ್ಯರಾಗಿದ್ದರು. ಅವರು ದಿವ್ಯವಾದ ಪುಷ್ಪಕ ವಿಮಾನದಲ್ಲಿ ಸಂಚರಿಸುತ್ತಿದ್ದರು. ರೇಣುಕಾದಿ ಆಚಾರ್ಯರೊಡನೆ ಪ್ರಮಥರೊಡನೆ ಈ ಬ್ರಹ್ಮಾಂಡ ಕಟಹದ ಮೇಲೆ ವಿಮಾನದಲ್ಲಿ ಪ್ರಯಾಣಿಸುತ್ತಿದ್ದರು. ರುದ್ರಕನ್ನೆಯರಿಲ್ಲದೆ ರುದ್ರಲೋಕಕ್ಕೆ ಹೋಗಲು ಯಾರಿಗೂ ಎಂತವರಿಗೂ ಪ್ರವೇಶಾವಕಾಶವಿರುತ್ತಿರಲಿಲ್ಲ

ಅವರಿಗೆ ಅತ್ಯಂತ ಪ್ರಾಧಾನ್ಯತೆಯಿದ್ದಿತು. ಅದು ಅನಾದಿ ರುದ್ರದೇವನ ಕಾಲದಿಂದ ಬಂದಿತ್ತು; ಬಂದಿದೆ. ಆದಿಕಾಲದ ರೇಣುಕ ಶಿವಾಚಾರ್ಯರಿಂದ ಮುಂದುವರಿದು ೧೨ನೆಯ ಶತಮಾನದ ಮಹಾದೇವಿಯಕ್ಕನವರೆವಿಗೂ ರುದ್ರ ಕನ್ನೆತನ ಪರಂಪರೆಯಾಗಿ ಬಂದ ಲೋಕೋತ್ತರ ಕೊಡುಗೆ !

ಅಂದು ಹೆಣ್ಣಿಗೆ ಭಾರತೀಯ ಆರ್ಯರಲ್ಲಿ ಯಾವ ಸ್ವಾತಂತ್ರ್ಯವಿರಲಿಲ್ಲ; ಈಗಲೂ ಇಲ್ಲ. ರುದ್ರಭದ್ರಾದಿ ದ್ರಾವಿಡರ ಕಾಲದಿಂದಲೂ ದ್ರಾವಿಡ ಜನಾಂಗದಲ್ಲಿ ಸ್ತ್ರೀ ಸ್ವಾತಂತ್ರ್ಯಕ್ಕೆ ಯಾವ ಕೊರತೆಯಿಲ್ಲ. ಧಾರ್ಮಿಕಾಚಾರದಲ್ಲಿ ದೇವಪೂಜೆಯಲ್ಲಿ ಕೃಷಿ ಮೊದಲಾದ ವ್ಯವಹಾರದಲ್ಲಿ ಗಂಡಸರಂತೆ ಹೆಂಗಸರಿಗೂ ಸ್ವಾತಂತ್ರ್ಯವನ್ನು ಕೊಟ್ಟ ಕೊಡುಗೆ ಶಿವಾಚಾರ್ಯರಿಗೆ ಸೇರಿದುದು. ಶಿವದೀಕ್ಷೆಯನ್ನು ಕರುಣಿಸುವ ಜೊತೆಗೆ ಅರ್ಚನಾದಿಗಳ ಸ್ವಾತಂತ್ರವನ್ನು ಅನುಗ್ರಹಿಸುವರು.

### ಮಾಹೇಶ್ವರ ಸಂಘ ಮಹಾಕ್ರಾಂತಿಃ

### ವೈದಿಕ–ಪೌರಾಣಿಕಾದಿ ಕರ್ಮನಿರಾಕರಣಃ

"ವೀರ ಮಾಹೇಶ್ವರಾಃ ಸರ್ವೇ ಧ್ವಂಸೀ ಕುರ್ವಂತಿ ಸರ್ವದಾ ।
ಪೌರಾಣಿಕಾನಿ ಸ್ಮಾರ್ತಾನಿ ವೈದಿಕಾನಿ ಕ್ರಿಯಾಣ್ಯಪಿ ॥"

—ವೀರಾಗಮ

ಯಾಗ ಕ್ರಿಯಾಚಾರ ಮಹಾವ್ರತಾನಿ ಕಪಾಲಸೃಗ್ ಬರ್ಹಿ ಸಮನ್ವಿತಾನಿ ।
ಮೇಷಾ ಮಿಷಾ ಪೇಯ ಪರಾಯಣಾನಿ ದಹಂತಿ ಮಾಹೇಶ್ವರ ಭಕ್ತ ಸಂಘಾಃ॥

ಪ್ರಾಣಾಗ್ನಿ ಹೋತ್ರಾಕ್ರಿಯ ಸಾಧಕಾನ್ ದ್ವಿಜಾನ್ ದಿನೇ ದಿನೇ
ಶಾಂಭವ ಭಕ್ತಸಂಘಾಃ ಪಿತೃಕ್ರಿಯಾ ತರ್ಪಣ ಸರ್ವವೇಷ್ಟಿತಾನ್
ಪಾದೋದಕೇನೈವ ದಹಂತಿ ಸರ್ವದಾ । ಪ್ರಯೋಗ ಪಟ್ಟಾನಿ
ಸಮಂತ್ರಿತಾನಿ ಪ್ರಭೇದ ವರ್ಣಾವಳಿ ವೇಷ್ಟಿತಾನಿ ತ್ಯಜಂತಿ
ಪಾದೋದಕ ಸೇವನೇನ ಅನಾದಿ ಮಾಹೇಶ್ವರ ಭಕ್ತ ಸಂಘಾಃ ॥

ಯಜ್ಞೋಪವೀತಂ ಭೂರುದ್ರ ಪದಸೇವಾ ಪ್ರವರ್ತಕಾಃ
ನಿರಾಸಯಂತಿ ಸತತಂ ಭಕ್ತಸಂಘಾಃ ಪರಾತ್ಪರಾಃ ॥"

— ವೀರಾಗಮ.

ಜಡಕರ್ಮವಾದದಲ್ಲಿ ಅಂದೇ ಆದಿಕಾಲದಲ್ಲಿಯೇ ಮಾಹೇಶ್ವರರಿಂದ ಮಹಾ ಕ್ರಾಂತಿ ಮೊದಲಾಗಿದೆ. ಪೌರಾಣಿಕ, ವೈದಿಕ, ಸ್ಮಾರ್ತ ಕರ್ಮಗಳನ್ನು ನಿರಾಕರಿಸಿದ್ದಾರೆ. ಪದಾರ್ಥ ನಷ್ಟಾತ್ಮಕ, ಪ್ರಾಣಿ ಹಿಂಸಾತ್ಮಕ ಯಾಗ ಕರ್ಮಗಳು ವೀರ ಮಾಹೇಶ್ವರರಿಗೆ ನಿಷಿದ್ಧಗಳು. ಅಪೇಯ ಪಾನ, ಅಭಕ್ಷ ಬಕ್ಷಣ, ಅನೀತಿ ವರ್ತನಾದಿಗಳನ್ನು ನಿಷೇಧಿಸಿದ್ದರು. ಪ್ರಾಕೃತಿಕ ಪ್ರಾಣಾರಾಧನ, ಪಿತೃಕರ್ಮ ತರ್ಪಣ, ಘರ್ಷಣ, ಶೋಷಣ, ಮಾರಣಾದಿ ಷಟ್ಪ್ರಯೋಗ, ಮಾಂತ್ರಿಕ ತಾಂತ್ರಿಕ ಕರ್ಮ, ವರ್ಣವಿಭೇದ, ಯಜ್ಞೋಪವೀತ ಧಾರಣಾದಿಗಳ ಬಗೆಗೆ ಶಾಂಭವ ಭಕ್ತ ಸಂಘಗಳು ನಿರಾಕರಿಸುತ್ತಿದ್ದರು.

ಜಡಕರ್ಮಕಾಂಡ ಕ್ರಾಂತಿ ವೀರಮಾಹೇಶ್ವರ ಕ್ರಾಂತಿ. ಭೂರುದ್ರ ಭಕ್ತ ಸಂಘಗಳ ಕ್ರಾಂತಿ. ಆದಿ ಜಗದ್ಗುರು ರೇಣುಕ ಶಿವಾಚಾರ್ಯರಿಂದ ಸ್ಫೂರ್ತಿಗೊಂಡ ಕ್ರಾಂತಿ. ಅದುವೇ ಈಚೆಗೆ ಪ್ರವಾಹಿ ರೂಪದಲ್ಲಿ ಪ್ರವಹಿಸಿ ಬಂದಿದೆ. ಕಲ್ಯಾಣದ ಸೃಜನಾತ್ಮಕ ಕ್ರಾಂತಿಯೇನಲ್ಲ.

''ಸೋಮಪಾನ ಪರಿತ್ಯಾಗಂ ಯಾಗಶೀಲ ಪರಾಙ್ಮುಖಂ ।
ಪಾದತೋಯಾರ್ಚ್ಚನ ಕತಂ ಪ್ರಸಾದ ಬ್ರಹ್ಮ ಪೂಜಿತಂ ॥
ಕಾಂಕ್ಷಂತಿ ಯೋಗ ಭಾವೇನ ಪೂಜಯಂತಿ ಪುನಃ ಪುನಃ
ಇತಿ ಯತ್ಕೃತಂ ಜ್ಞಾನಂ ಇಚ್ಛಾಮೋಹ ವಿವರ್ಜಿತಾಃ ॥''

—ವೀರಾಗಮ.

ಕರ್ಮಯಜ್ಞ ಮಾಡದೆ ಸೋಮಪಾನ ಚಟಕ್ಕೆ ಬೀಳದೆ, ಪಾದೋದಕ್ಕಾಗಿ ಪಾದಾರ್ಚನ ನಿರತನಾಗಿ ಪ್ರಸಾದ ಬ್ರಹ್ಮ ಪೂಜಕನಾಗಿ ಇರುವ ಭೂರುದ್ರನನ್ನು ಆರೋಗಭಾವದಿಂದ ಬಯಸಿ ಮೇಲಿಂದ ಮೇಲೆ ಪೂಜಿಸುವರು ಇಚ್ಛೆ ಮತ್ತು ಮೋಹವಿಲ್ಲದವರು.

## ಭೂರುದ್ರ–ರುದ್ರಸೂಕ್ತ ಭವ್ಯವೌಲ್ಯ !

''ಭೂರುದ್ರಂ ಮಾನವಂ ಭೂಮೌ ಮುನಯಃ ಸರ್ವದಾ ಪ್ರಿಯೇ ।
ಪ್ರಪೂಜಯಂತಿ ರುದ್ರಾರ್ಥೈ ರುದ್ರಸೂಕ್ತೈರಹರ್ನಿಶಂ ॥

ಈ ಭೂಮಿಯಲ್ಲಿ ಮಾನವರು ಮತ್ತು ಮುನಿಗಳು ಯಾವಾಗಲೂ ಭೂರುದ್ರನನ್ನು ಅಂದರೆ ಶ್ರೀಗುರುದೇವನನ್ನು ರುದ್ರಾರ್ಥವಾಗಿ ರುದ್ರಸೂಕ್ತ ಗಳಿಂದ ಹಗಲಿರುಳು ಪ್ರಪೂಜಿಸುತ್ತಾರೆ. ಇದರಿಂದ ಶ್ರೀರುದ್ರದೇವನ–ಶ್ರೀ ರುದ್ರಸೂಕ್ತದ ಪ್ರಾಶಸ್ತ್ಯ ತಿಳಿದುಬರುತ್ತದೆ. ಶ್ರೀರುದ್ರಸೂಕ್ತ ಪ್ರಾಚೀನದ್ದು. ವೇದಕಾಲದ್ದು ಅಘೋರ ಶಿವಾಚಾರ್ಯ ಪ್ರಣೀತವಾದದ್ದು. ಶ್ರೀರುದ್ರ ಸೂಕ್ತದಲ್ಲಿ ಮಂತ್ರಶಕ್ತಿಯಿದೆ. ಪ್ರಾಣನಾದವಿದೆ.

ಜಪಃಪಂಚಾಕ್ಷರಾಭ್ಯಾಸಃ ಪ್ರಣವಾಭ್ಯಾಸ ಏವ ವಾ ।
ರುದ್ರಧ್ಯಾಯಾದಿಕಾಭ್ಯಾಸೋ, ನವೇದಾಧ್ಯಯನಾದಿಕಂ ॥
=ಸಿದ್ಧಾಂತಶಿಖಾಮಣಿ

ಪಂಚಾಕ್ಷರಜಪ, ಪ್ರಣವಜಪಗಳಿಗೆ ಸಮಾನವಾದುದು ರುದ್ರಾಧ್ಯಾಯ ಪಠನವು ; ವೇದಾಧ್ಯಯನ ರುದ್ರಾಧ್ಯಯನಕ್ಕೆ ಸರಿಬರಿಯಿಲ್ಲ. ಅಘೋರ ಶಿವಾಚಾರ್ಯರ ಈ ಕೊಡುಗೆ ವೀರಶೈವರಿಗೆ ಮಾತ್ರವಲ್ಲ ಮಾನವರಿಗೆಲ್ಲರಿಗೂ ಮಹತ್ತರವಾದ ಕೊಡುಗೆ ! ರುದ್ರಾಧ್ಯಯನ ಮಾಡಲು ಎಲ್ಲರಿಗೂ ಹಕ್ಕಿದೆ.

ಭೂರುದ್ರರು ಭೂಸುರರಿಗಿಂತಲೂ ಮಿಗಿಲಾದವರು. ಭೂಸುರರು ಭೂಲೋಕದ ದೇವತೆಗಳೆಂದು ಹೇಳಿಕೊಂಡರೆ ಭೂರುದ್ರರು ಭೂಲೋಕದ ರುದ್ರಸಮಾನರು. ಸುರರಿಗಿಂತ ಶ್ರೀರುದ್ರಶ್ರೇಷ್ಠ ವಿಶ್ವಾದಿಪ; ವಿಶ್ವಾಧಿಕ. ಆತನು ಗಂಗೆವಾಲುಕಸಮ ರುದ್ರಗಣಾಧಿಪ. ಭಾರತೀಯ ಪ್ರಪ್ರಥಮ ವೈದ್ಯ, ಯೋಗಿ, ಕವಿ, ವೃಷಭ, ಸಂಕರ್ಷಣ ಮೂರ್ತಿಸ್ವರೂಪ ; ಕಾರಣಿಕ. ಆತನ ಅನುಯಾಯಿಗಳಾದ ಭೂರುದ್ರರು ಭುವನ ವಂದ್ಯರು.

"ಅಕ್ಷಮಾಲಾಧೃತಂ ಧೀರಂ ಯೋಗಿನಂ ಪರಮಾನ್ವಿತಂ
ಭೂರುದ್ರಂ ಮಾನವಂ ಭೂಮೌ ಯೇ ನಿಂದಂತಿ ನರಾಧಮಾಃ ।
ತಪ್ತಲಾಕ್ಷಜಲಂ ಮಧ್ಯೇ ಪ್ರವಿಶಂತಿ ಯಮಾಜ್ಞಯಾ
ತಸ್ಮಾತ್ಸರ್ವ ಪ್ರಯತ್ನೇನ ಭೂರುದ್ರಂ ಪುರುಷರ್ಷಭಂ ।
ಸ್ತುಹಿ ತ್ವಂ ಪರಮಪ್ರೀತ್ಯಾ ತವಾಸ್ತಿ ಸುಕೃತಮತಿಃ
ಮೋಹಹೀನಂ ಗುರು ಶ್ರೇಷ್ಠಂ ಭೂರುದ್ರಂ ಪುರುಷೋತ್ತಮಂ ॥
ಪಾದತೋಯಾರ್ಚನರಡಂ ಪರಬ್ರಹ್ಮ ಪರಾತ್ಪರಂ ।
ಅವೈಹಿ ಸಾಧಕೋಪಾಯಂ ಸರ್ವತತ್ತ್ವಾರ್ಥ ಪಾರಗಂ ॥"
,–ವೀರಾಗಮ

ಈ ನಾಲ್ಕು ವೀರಾಗಮ ವಾಣಿಗಳಲ್ಲಿ ಭೂರುದ್ರ ಅಂದರೆ ಶ್ರೀಗುರು ಮೌಲ್ಯವನ್ನು ಮನಗಾಣಬೇಕು. ಆತನನ್ನು ನಿಂದಿಸುವವರು ನರಾಧಮರು, ಯಮನು ಅವರನ್ನು ಸುಡುವ ಲಾಕ್ಷಾಜಲದಲ್ಲಿ ಕೆಡಹುತ್ತಾನೆ. ಕಾರಣ ಪುರುಷರ್ಷಭನೂ ರುದ್ರಾಕ್ಷಧರನೂ ಧೀರನೂ ಯೋಗಿಯೂ ಪರಮನೂ ಆದ ಭೂರುದ್ರನನ್ನು ಪರಮಪ್ರೇಮದಿಂದ ಸ್ತುತಿಸಿದಲ್ಲಿ ಸುಕೃತಮತಿಯಾಗುವ ಮೋಹರಹಿತನಾಗುವ ಭಾಗ್ಯವೊದಗುತ್ತದೆ. ಗುರುಶ್ರೇಷ್ಠನೂ ಪುರುಷೋತ್ತಮನೂ ಪಾದೋದಕಾರ್ಚನರತನೂ ಪರಬ್ರಹ್ಮಸ್ವರೂಪನೂ ಸರ್ವತತ್ತ್ವಾರ್ಥಪ್ರವೀಣನೂ ಆದ ಆತನ ಉಪಾಸನೆಯೇ ಉತ್ತಮೋಪಾಯವು. ಎಂಬುದಾಗಿ ಭೂರುದ್ರ ಮೌಲ್ಯವನ್ನು ನಿರೂಪಿಸಲಾಗಿದೆ.

## ಅಸ್ಪೃಶ್ಯೋದ್ಧಾರಕಾರ್ಯ

ಜಗದಾಚಾರ್ಯರಾದ ಆದಿರೇಣುಕ ಶಿವಾಚಾರ್ಯರು ಆದಿಕಾಲದಲ್ಲಿಯೇ ಅಸ್ಪೃಶ್ಯೋಧ್ಧಾರ ಕಾರ್ಯವನ್ನು ಅಸದೃಶವಾಗಿ ಆಚರಣೆಗೆ ತಂದಿದ್ದಾರೆ. ಮಾನವತಾವಾದವನ್ನು ಅನಾದಿಕಾಲದ ರುದ್ರಭದ್ರರಂತೆ ಮುಂದುವರಿಸಿದ್ದಾರೆ. ಚಂಡಾಲ ಮಾತಂಗನು ದಿನವೂ ತನ್ನ ಕುಲಸಂಸ್ಕಾರಕ್ಕೆ ತಕ್ಕಂತೆ ಋಷಿಮುನಿಗಳನ್ನು ತ್ಯಾಗಿಯೋಗಿಗಳನ್ನು ಸಂಹರಿಸುತಿದ್ದನಲ್ಲದೆ ಸಾವಿರಾರು ಮನುಷ್ಯರನ್ನು ಸಾಯಿಸುತ್ತಿದ್ದನು. ಅವರಿಂದ ಒಡವೆ ಬಟ್ಟೆಬರಿಗಳನ್ನು ಕಿತ್ತುಕೊಳ್ಳುತ್ತಿದ್ದನು. ಕಿರಾತನಾಗಿದ್ದನು. ಅಭಿನವ ನರಸಿಂಹನಂತಿದ್ದನು. ಅಂತವನನ್ನು ಆತನ ಅನುಯಾಯಿಗಳನ್ನು ಪರಿವರ್ತಿಸಿ ಅನುಗ್ರಹಿಸಿ ಪತಿತರನ್ನು ಪಾವನಗೊಳಿಸುವರು. ಮುನಿ ಸದೃಶವನ್ನಾಗಿಸುವರು ತಮ್ಮ ಮಹಿಮೆಯಿಂದ ! ಇದಲ್ಲದೆ ಶೂದ್ರರನ್ನು ಶ್ವಪಚರನ್ನು ಪುಲ್ಕಸರನ್ನು ತಮ್ಮ ಅಪಾರ ಪ್ರಭಾವದಿಂದ ಸಂಸ್ಕರಿಸಿ ಸ್ಪೃಶ್ಯರನ್ನಾಗಿಸಿದರು. ಮಾದಿಗ ಮತಂಗನನ್ನು ಉದ್ಧಾರ ಮಾಡಿದ ಮಣಿಹ ಮಹತ್ವ-ಪೂರ್ಣವಾದುದು. ಆತನು ಅವರ ಅನುಗ್ರಹಕ್ಕೆ ಆಕರ್ಷಿತನಾಗಿ ಅರಿವನ್ನು ಅಳವಡಿಸಿಕೊಂಡು ಜ್ಞಾನಯೋಗಿಯೆಂದೆನಿಸಿದನು. ಕಿರಾತಕನಾದವನು ಪುರಾತನ ಗಣ್ಯಪುಣ್ಯಪುರುಷನಾದನು.

ದಾರಿದ್ರ್ಯಕ್ಕೆ ಕಾರಣವಾದ ದುರಾಚಾರಗಳನ್ನೆಲ್ಲ ಬಿಡಿಸುವರು. ಸರ್ವರನ್ನು ಸದಾಚಾರಿಗಳನ್ನಾಗಿಸಿದರು ; ಶುಚಿಶೀಲರನ್ನಾಗಿಸಿದರು. ಅನೃತ ಆಡು

ವುದನ್ನು: ಅನ್ಯಾಯ ಮಾಡುವುದನ್ನು, ಅನಾಚಾರದಿಂದ ನಡೆವುದನ್ನು ಬಿಡಿಸುವರು. ಬಿಡುವಂತೆ ಬೋಧಿಸುವರು. ಶಿವದೀಕ್ಷಾ ಸಂಸ್ಕಾರವನ್ನೀಯುವರು. ವಿದ್ಯಾವಂತರನ್ನೂ ಶೀಲವಂತರನ್ನು ವಿನಯವಂತರನ್ನೂ ವಿಶುದ್ಧರನ್ನೂ ಮಾಡುವರು. ಎಲ್ಲ ಬಗೆಯ ದೀನದಲಿತರಿಗೆ ಆಶ್ರಯದಾತರಾಗಿದ್ದರು. ಎಲ್ಲರಿಗೆ ಪ್ರಸಾದ ಒದಗುವಂತೆ ಮಾಡಿದ್ದರು. ಇದೊಂದು ಜಗದ್ಗುರು ಭಗವತ್ಪಾದರ ಅತ್ಯದ್ಭುತ ನಿಮ್ನೋದ್ಧಾರ ಮಹಾಕಾರ್ಯ. ಮಾನವತಾ ಉದ್ಧಾರದ ಮಹಾಮಣಿಹ.

## ವೀರಮಾಹೇಶ್ವರ ಪ್ರಶಂಸೆ

ಮಾಹೇಶ್ವರರು ಬೇರೆ ; ವೀರಮಾಹೇಶ್ವರರು ಬೇರೆ. ಇವರು ವೀರವ್ರತ ಪರಾಯಣರು. ವೀರೇಶನ ವಿಶೇಷ ಅನುಯಾಯಿಗಳು. "ವೀರಮಾಹೇಶ್ವರಾಃ ಸಾರ್ವೇ ವೀರವ್ರತ ಪರಾಯಣಾಃ।" ಎಂಬೀ ವೀರಾಗಮವಾಣಿ ಇದಕ್ಕೆ ನಿಚ್ಚಳ ನಿದರ್ಶನವಾಗಿದೆ. ವೀರಮಾಹೇಶ್ವರರು. ಸರ್ವಶಕ್ತರಾಗಿರುತ್ತಿದ್ದರು. ವಿದ್ವಾಂಸರಾಗಿರುತ್ತಿದ್ದರು.

''ವೀರ ಮಾಹೇಶ್ವರಾ ಗೌರಿ ವಿದ್ವಾಂಸೋ ಯೋಗಸತ್ತಮಾಃ
ಪರಕಾಯ ಪ್ರವೇಶಾತ್ಮಜ್ಞಾನಂ ವಿಂದಂತಿ ಭೂತಳೇ ।''

ವಿದ್ವಾಂಸರು ಮಾತ್ರವಲ್ಲ, ಯೋಗಸತ್ತೆಯನ್ನು ಪಡೆದವರಲಿ ಸರ್ವೋತ್ತಮರಾಗಿದ್ದರು. ಪರಕಾಯ ಪ್ರವೇಶ, ಸ್ವಾತ್ಮಜ್ಞಾನಗಳಿಂದ ಕೂಡಿರುತ್ತಿದ್ದರು. ಜಡಮಾಯಾವಾದ ವಿರಹಿತರಾಗಿ ವಿಶ್ವದಲ್ಲಿ ವಿಖ್ಯಾತರಾಗಿರುತ್ತಿದ್ದರು.

"ವೀ-ಕಾರಾಜ್ಜಾಯತೇ ಪುಣ್ಯಂ, ರೇಫಾತ್ ಧರ್ಮಃ ಪ್ರತಿಷ್ಠಿತಃ ।
ಮಾ-ಕಾರಾಜ್ಜಾಯತೇ ಮಂತ್ರೋ, ಹ-ಕಾರಾದಾತ್ಮಸಂನಿಭಂ
ಮಹಾತತ್ತ್ವಮೀಶ್ವರಾದ್ಧಿ ಜಾಯತೇ ವಸುಧಾತಲೇ ॥''

—ವೀರಾಗಮ

ವಿದ್ಯಾಯಾಂ ಕಮತೇ ಯಸ್ಮಾಯಾಂ ಶ್ವವದ್ರಹೇತ್
ಅನೇನೈವ ನಿರುಕ್ತೇನ ವೀರ ಮಾಹೇಶ್ವರಾಃ ಸ್ಮೃತಾಃ ॥''

—ಸಿ. ಶಿಖಾಮಣಿ

'ವೀರಮಾಹೇಶ್ವರ' ಇದೊಂದು ಷಡಕ್ಷರ ಶ್ರೇಷ್ಠ ಶಕ್ತಿ. ಈ ಅಕ್ಷರಗಳ ಉಚ್ಚಾರದಿಂದ ಪರಿವಿಡಿದು ಪುಣ್ಯ, ಧರ್ಮ, ಮಂತ್ರ, ಆತ್ಮ, ಮಾಹಾತತ್ತ್ವ ಪ್ರತಿಷ್ಠಿತವಾಗುತ್ತವೆ-ಎಂದು ವೀರಾಗಮ ನಿರೂಪಿಸಿದರೆ, ವಿದ್ಯಾವಂತನಾಗಿ ವಿಶ್ವಜಡಮಾಯೆಯನ್ನು ಮಾಣಿಸಿ ಈಶ್ವರ ಸ್ವರೂಪರಾಗುತ್ತಾರೆಂದು ರೇಣುಕಾಗಮ (ಸಿದ್ಧಾಂತ ಶಿಖಾಮಣಿ) ನಿರೂಪಿಸುತ್ತದೆ. ವೀರಮಾಹೇಶ್ವರರಿಂದ ಸಾಮಾಜಿಕ ಪ್ರಗತಿಗೆ ಬೇಕಾದ ಏನೆಲ್ಲ ಮೌಲ್ಯಗಳನ್ನು ಪಡೆಯಬಹುದಾಗಿದೆ. ಅವರು ಗಳಿಸಿದ ನಿಲುವಿಗೆ ಏರಬಹುದಾಗಿದೆ. ಅಲ್ಪಾತ್ಮರು ಮಹಾತ್ಮರಾಗುತ್ತಾರೆ. ಹೊಲಬುತಪ್ಪಿದ ಒಪ್ಪಲ್ಲದ ಹೋರಾಟ ವೀರಮಾಹೇಶ್ವರರದಲ್ಲ. ಸಾತ್ವಿಕ ತಾತ್ವಿಕ ಸಾಧನಶೀಲರು.

''ಸೇನಾನಿ ಗಜವಕ್ತ್ರಾದ್ಯಾಃ ಶಿಂಶುಮಾರ ಪುರಸ್ಕೃತಾಃ
ಪ್ರತಿಮಾ ಸ್ವಲ್ಪ ಚಿತ್ತಾಸು ನ ದಧತೇ ಕೃತಂ ಮನಃ ॥''
—ವೀರಾಗಮ

ಷಣ್ಮುಖ, ಗಜಮುಖ, ಶಿಂಶುಮಾರ, ಡಿಂಡಿಮಾರ ಮೊದಲಾದವರು ವೀರಮಾಹೇಶ್ವರರ ಅನುಯಾಯಿಗಳು. ಪ್ರತಿಮಾ ಪೂಜಾದಿ ಸಣ್ಣಪುಟ್ಟ ಪಾದಿಗಳಲ್ಲಿ ಹೋಗುವವರಲ್ಲ. ವೀರಮಾಹೇಶ್ವರರ ಸೇವೆಯಲ್ಲಿ ನಿರತರಾಗಿ ಧನ್ಯರಾದರು. ಈ ಭಾಗ್ಯ ಎಲ್ಲರಿಗೂ ಲಭ್ಯವಾಗುವುದಿಲ್ಲ. ಅದಕ್ಕೂ ಪೂರ್ವದ ಪುಣ್ಯಬೇಕು. ಇಲ್ಲವೇ ಬಲ್ಲಿದರ ಬಲವಾದ ಸಂಸ್ಕಾರಗಳಿರಬೇಕು.

ವೀರಮಾಹೇಶ್ವರರು ರುದ್ರ-ಭದ್ರ-ರೇಣುಕ-ದಾರುಕಾದಿ ಮಹಾಮಹಿಮರ ಪರಂಪರೆಯವರು. ಅವರ ಆಚಾರ ವಿಚಾರಗಳನ್ನೆಲ್ಲ ಅಳವಡಿಸಿಕೊಂಡರು. ಶೈವ ಮತದವರನ್ನೆಲ್ಲ ವೀರಶೈವಧರ್ಮೀಯರನ್ನಾಗಿ ಪರಿವರ್ತಿಸುತ್ತಿದ್ದರು.

"ರುದ್ರವರ್ಗೈಶ್ಚ ರುದ್ರೈಶ್ಚ ರುದ್ರಧ್ಯಾನ ಪರಾಯಣೈಃ
ರುದ್ರಾಕ್ಷ ಭಸ್ಮ ವಿದ್ಧತೈರ್ಘೋರುದ್ರಾಚಾರ ಚಾರಿಭಿಃ ।
ವೀರಮಾಹೇಶ್ವರೈರ್ಯೋಗಿ ಯೋಗಧ್ಯಾನ ಪರಾಯಣೈಃ
ರೂಪಿತಂ ಯತ್ಕೃತಂ ಕರ್ಮ ತಚ್ಛೃವಂ ಬಿಂಬ ನಾಮಕಂ ॥''
—ವೀರಾಗಮ

ರುದ್ರರು, ರುದ್ರವರ್ಗದವರು, ರುದ್ರಧ್ಯಾನ ಪರಾಯಣರು, ರುದ್ರಾಕ್ಷ ಬಸ್ಮಧಾರಕರು, ಭೂರುದ್ರಾಚಾರನಿರತರು ಆದ ವೀರಮಾಹೇಶ್ವರರು, ಯೋಗಿಗಳನ್ನು ; ಯೋಗಧ್ಯಾನಾಸಕ್ತರನ್ನು ಬಿಂಬಶೈವ-ಭಕ್ತಶೈವ-ಮತ ಶೈವಾದಿಗಳನ್ನು ಒಪ್ಪಿಕೊಂಡು ಅವರಿಗೆಲ್ಲ ವೀರಶೈವಧರ್ಮವನ್ನು ಪ್ರಬೋಧಿಸುತ್ತಿದ್ದರು.

"ಯದ್ಭಕ್ತಿಶೈವಂ ದಧತೇ ಶರಣ್ಯೈಕ್ಯಾದಿ ಲಿಂಗಿನಃ
ಅನಾದಿ ವೀರಶೈವಾತ್ಮಧ್ಯಾನ ದೀಪನ ಹೇತವಃ ।
ಅಪಾರಧ್ಯಾನ ವಾರಾಶಿಃ ಸೇತವಃ ಕರ್ಮಯೋಗಿನಃ
ಏಕೋತ್ತರ ಶತಸ್ಥಾನವಾರ್ಧಿ ಮಧ್ಯೇ ಪ್ರತಿಷ್ಠಿತಾಃ ॥''

ಭಕ್ತಿಶೈವರನ್ನು ಅನಾದಿವೀರಶೈವಧರ್ಮದ ನೂರೊಂದು ಸ್ಥಲ ಸಂಪನ್ನರನ್ನಾಗಿಸುತ್ತಿದ್ದರು. ವೀರಶೈವಾತ್ಮಧ್ಯಾನದೀಪನಗೊಳಿಸಿ ದೀಪ್ತರನ್ನಾಗಿಸುತ್ತಿದ್ದರು.

ಅನಾದಿರುದ್ರಾಚಾರಿಗಳಾದ ರುದ್ರಗಣರು ತ್ರಿಕರಣಗಳಲ್ಲಿ ತೇಜಸ್ವಿಗಳಾಗಿರುತ್ತಿದ್ದರು, ಅವರಿಗೆ ವೃದ್ಧಾಪ್ಯವೇ ಇರುತ್ತಿರಲಿಲ್ಲ, ನೂರಾರು ವಯಸ್ಸಾಗಿದ್ದರೂ ತರುಣರಂತೆ ತೋಳಗುತ್ತಿದ್ದರು. ಕಣ್ಣು ಕಿವಿ ಮೊದಲಾದ ಜ್ಞಾನೇಂದ್ರಿಯಗಳು ಪಟುವಾಗಿಯೇ ಇರುತ್ತಿದ್ದವು. ಅವರ ವಾಕ್ಕಿನಲ್ಲಿ. ಮಂತ್ರಶಕ್ತಿಯಿದ್ದಿತು. ಆಧ್ಯಾತ್ಮ ಚಿಂತನದಿಂದ ಚಿತ್ತಚೈತನ್ಯಶಾಲಿಯಾಗಿರುತ್ತಿದ್ದಿತು, ಪರರ ಇಂಗಿತವೇನೆಂಬುದನ್ನು ತಿಳಿದು ತಿಳಿಸುತ್ತಿದ್ದರು. ಪರಾಶಕ್ತಿ ಸಂಪನ್ನರಾಗಿದ್ದರು. ಜೀವನ್ಮುಕ್ತಸ್ಥಿತಿಯಲ್ಲಿರುತ್ತಿದ್ದರು. ರುದ್ರದೇವನು ಸ್ಥಾಪಿಸಿದ ಮುಕ್ತಮಂಟಪವನ್ನು ಇಂದಿಗೂ ಯಾರಿಂದಲೂ ಸ್ಥಾಪಿಸಲು ಸಾಧ್ಯವಾಗಿಲ್ಲ. ರುದ್ರದೇವನದಾ ವಿಶ್ವವಿಲಕ್ಷಣಶಕ್ತಿ! ಅಂತೆಯೇ ರುದ್ರಗಣರದು ವೀರಮಾಹೇಶ್ವರರದು ವಿಶಿಷ್ಟ ಸಾಮರ್ಥ್ಯ ; ರುದ್ರಭದ್ರಯೋಗಸಾಧನೆ ಪ್ರಬುದ್ಧವಾಗಿದ್ದಿತು. ರುದ್ರಗಣರು (ವೀರಮಾಹೇಶ್ವರರು) ಇಂದಿಗೂ ಶಿಖಾಚಕ್ರದ ಮೇಲಿನ ಬಯಲಲ್ಲಿ ವಿದ್ಯುದ್ದೇಹಿಗಳಾಗಿ ಸಂಚರಿಸುತ್ತಿರುವರೆಂದು ಅಲ್ಲಮಾಪ್ರಭುದೇವನು ತನ್ನ ವಚನದಲ್ಲಿ ಉಲ್ಲೇಖಿಸಿರುವನು.

ರುದ್ರಗಣರು, ವೀರಮಾಹೇಶ್ವರರು, ಶಿವಾಚಾರ್ಯರು ಸಾಮಾಜಿಕ ಸಾಂಸ್ಕಾರಿಕ ಮೌಲ್ಯಗಳನ್ನು ತಾವಾಚರಿಸಿ ಬಿತ್ತರಿಸುವುದೇ ಅವರ ಮಹಾ

ಮಣಿಹವಾಗಿದ್ದಿತು. ಜನತೆಯ ಉದ್ಧಾರವೇ ಅವರ ಉಸಿರಾಗಿದ್ದಿತು. ಸಂವಹನ ಮಾಧ್ಯಮಗಳೇ ಅವರು ಅನುಗ್ರಹಿಸುತ್ತಿರುವ ಅನುಪಮ ಸಂಸ್ಕಾರಗಳು. ಇವಕ್ಕೆಲ್ಲ ಅವರು ಅಸಾಧಾರಣ ಕಾರಣರು. ಅವುಗಳಲ್ಲಿ ಅನೇಕಗಳು ಇಂದಿಗೂ ಪ್ರವಾಹಿಯಾಗಿ ಬಂದಿವೆ. ಅವೇ ಇಂದಿಗೂ ಪ್ರಮುಖವಾಗಿವೆ. ಅಂತೆಯೇ ಅಲ್ಲಲ್ಲಿ ವೀರಮಾಹೇಶ್ವರರ ಜಾತ್ರೆಗಳು ಜರಗುತ್ತವೆ, ಜನರನ್ನು ಜಾಗ್ರತೆ ಮಾಡಲು ಇವು ಉತ್ತಮ ಉಪಾಯಗಳಾಗಿ ಪರಿಣಮಿಸಿವೆ. ಆದರೆ ಇತ್ತೀಚಿಗೆ ಅಪರೂಪವಾಗಿದೆ. ವೀರಮಾಹೇಶ್ವರರ ಪಾತ್ರಗಳು ಸಮಾಜದ ಅವಿಭಾಜ್ಯ ಅಂಗವಾಗಿದೆ. ಶಿವಭಕ್ತರಲ್ಲಿ ಶಿಷ್ಯರಲ್ಲಿ, ದೈವೀಶ್ರದ್ಧೆಯನ್ನು ನಿಷ್ಠೆಯನ್ನು ನಿರ್ವಹಿಸುತ್ತವೆ. ಜೀವನದಲ್ಲಿ ನವಜ್ಯೋತಿಯನ್ನು ನವಚೈತನ್ಯವನ್ನು ಬೆಳಗಿಸಿ ಬೆಳಸುತ್ತದೆ. ಪ್ರಾಸಾದಿಕತೆಯನ್ನುಂಟು ಮಾಡುತ್ತವೆ. ನಿರ್ದೇಹ–ನಿರ್ಭಾವಾತ್ಮಕ ಶರಣತ್ವಕ್ಕೆ ಮೂಲಕಾರಣಗಳಾಗಿ ಪರಿಣಮಿಸುತ್ತವೆ. ಪ್ರಾಕೃತಿಕ ಪ್ರಾಣಧರ್ಮಗಳನ್ನು ದೂರಮಾಡಿ ಅಪ್ರಾಕೃತ ಅಸಾಧಾರಣ ಧರ್ಮಸ್ಫೂರ್ತಿಯನ್ನುಂಟುಮಾಡುತ್ತವೆ. ಮಹತ್ತಮ ಚೈತನ್ಯವನ್ನು ಬರಿಸುತ್ತವೆ, ಬೆರಸುತ್ತವೆ. ಹಸನಾದ ಹೊಸ ಹೊಸ ಪ್ರಯೋಗಗಳಲ್ಲಿ ಪ್ರಕ್ರಿಯಗಳಲ್ಲಿ ತೊಡಗಿಸುತ್ತವೆ. ವೀರಮಾಹೇಶ್ವರರು ಕರುಣಿಸುವ ವಿವಿಧ ವಿನ್ಯಾಸಗಳು ಚಿತ್ತಸ್ಥೈರ್ಯವನ್ನು ಧೈರ್ಯವನ್ನು ಕುದುರಿಸುತ್ತವೆ, ಆತ್ಮವಿಕಾಸವನ್ನು ಅಳವಡಿಸುತ್ತವೆ. ಪ್ರಾತಿಭಪರಿಣಾಮವನ್ನು ಬೀರುತ್ತವೆ. ವಿಜಿತೇಂದ್ರಿಯ ಜನ್ಯ ವೀರತ್ವವುಂಟಾಗುತ್ತದೆ. ಮನಮಾಯಾದಿಗಳ ಮೇಲೆ ಒಡೆತನವೊದಗುತ್ತದೆ. ಮಹಾಮಾನವೀಯತೆ ಮೈಗೂಡುತ್ತದೆ. ವಿಶುದ್ಧವೂ ವಿಶಿಷ್ಟ ಆದ ವ್ಯಕ್ತಿತ್ವ ವಿಕಾಸವಾಗುತ್ತದೆ. ಮಲ ಮರವೆ ಮಾಯಾ ಮೋಹಗಳೆಂಬ ಕಾಳಿರುಳಿನಲ್ಲಿರುವವರಿಗೆ ಹುಣ್ಣಿಮೆಯ ಚಂದಿರನ ತಂಬೆಳಗನೀಯುತ್ತಾನೆ, ಆತ್ಮವೀರರನ್ನಾಗಿಸಿ ವಿಜಯಶಾಲಿಗಳನ್ನಾಗಿಸುತ್ತಾನೆ. ಭವದ ಬವಣೆಯಲ್ಲಿ ಬಳಲುವವರಿಗೆ ಬಲವನ್ನು ಗೆಲವನ್ನು ಒದಗಿಸಿ ಸುಖಿಗಳನ್ನಾಗಿಸುತ್ತಾನೆ.

ವೀರಮಾಹೇಶ್ವರನಿಗೆ ಪಂಚಭೂತಗಳ ಮೇಲೆ ಹಿಡಿತವುಂಟಾಗಿ ಇವುಗಳಿಂದೊದಗುವ ವಿಕಾರಗಳನ್ನು ವಿಘ್ನಗಳನ್ನು ನಿವಾರಿಸುವ ವೀರತನವುಂಟಾಗಿರುತ್ತದೆ. ಷಟ್‌ಸ್ಥಲ ಸಾಧನೆಯಲ್ಲಿ ಉತ್ತರೋತ್ತರ ಉನ್ನತತ್ವದಲ್ಲಿ ಮುಂದುವರಿದು ಮಹಾಚೈತನ್ಯಶಾಲಿಗಳನ್ನಾಗಿಸುವ ಪರಮಪ್ರಭಾವಶಾಲಿ

ಯಾಗಿರುತ್ತಾನೆ. ಬಾಳಿನಲ್ಲಿ ಯಾವ ಬಗೆಯ ಸೋಲನ್ನಪ್ಪದಂತಹ ಶಕ್ತಿ ಗಮನಿಸುತ್ತದೆ. ಇದೆಲ್ಲ ಕಾರಣಗಳಿಂದ ವೀರಾಗಮವು ವೀರಮಾಹೇಶ್ವರ ವೈಶಿಷ್ಟ್ಯವನ್ನು ಹೀಗೆ ಬಣ್ಣಿಸಿದೆ :

"ಧರ್ಮಶಾಸ್ತ್ರ ಪುರಾಣಾನಿ ಕಾಂತೇ ತ್ಯಕ್ತ್ವಾ ದಿನೇ ದಿನೇ ।
ವೀರ ಮಾಹೇಶ್ವರಾಣಾಂಚ ಅಖಂಡಾರಾಧನಂ ಕುರು ॥
ಆಗಮಾರ್ಥ ಪ್ರಯುಕ್ತಾನಾಂ ಯೋಗಿರಾಜ್ಞಾಂ ದಿನೇ ದಿನೇ
ವೀರಮಾಹೇಶ್ವರಾಣಾಂ ಚ ವಿಶುದ್ಧಾರಾಧನಂ ಕುರು ॥
ವೀರ ಮಾಹೇಶ್ವರಾದನ್ಯತ್ ಪವಿತ್ರಂ ನಾಸ್ತಿ ಪಾರ್ವತಿ ।
ಇತ್ಯಾಹುಃ ಪ್ರಮಥಾಃ ಸರ್ವೇ ರೇಣುಕಾದ್ಯಾಃ ಪುರಾತನಾಃ ॥"

—ವೀರಾಗಮ.

ವೀರ ಮಾಹೇಶ್ವರಾದನ್ಯನ್ನಾಸ್ತಿ ತತ್ತ್ವಂ ಜಗತ್ರಯೇ ।
ವೀರ ಮಾಹೇಶ್ವರಾಣಾಂಚ ವಿಮಲಾಂಗೇಷು ಭೂಪತೇ ॥
ಆವಾಸಯಂತಿ ಋಷಯಃ ಕಾಮಕ್ರೋಧಾಃ ಸಮನ್ವಿತಾಃ ।
ತಸ್ಮಾತ್ ಸರ್ವ ಪ್ರಯತ್ನೇನ ಪೂಜಾಂಕುರು ಮಹೀಪತೇ ॥

ಓ ನಲ್ಲೆ–ನಗಾತ್ಮಜೆ, ಧರ್ಮಶಾಸ್ತ್ರ ಪುರಾಣಗಳನ್ನುಳಿದು ನೀನು ವೀರ ಮಾಹೇಶ್ವರರ ಅಖಂಡ ಆರಾಧನೆಯನ್ನು ಅನುದಿನವೂ ಆಚರಿಸು. ಆ ವೀರ ಮಾಹೇಶ್ವರರು ಆಗಮಾರ್ಥಯುಕ್ತರು ಅಂದರೆ ಆಗಮಾರ್ಥ ವಿಧಿ ವಿಧಾನಗಳನ್ನೇ ಅನುಸರಿಸುವವರು ಮತ್ತು ತಂತಮ್ಮ ಶಿಷ್ಯರನ್ನು ಅನುಸರಿಸುವಂತೆ, ಆಚರಿಸು ವಂತೆ ಮಾಡುವವರು. ಆಗಮಾನುಭವುಳ್ಳವರೇ ವೀರಮಾಹೇಶ್ವರರು. ಅವರೇ ಯೋಗಿರಾಜರು. ಅವರ ವಿಶುದ್ಧವಾದ ಆರಾಧನೆಯನ್ನು ನೀನು ನಿತ್ಯ ನಡೆಯಿಸು. ವೀರಮಹೇಶ್ವರರಿಗಿಂತ ವಿಶಿಷ್ಟವಾದುದ್ದು ಇನ್ನೊಂದಿಲ್ಲ ವಿಶ್ವದಲ್ಲಿ ಎಂದು ಪ್ರಮಥರೂ ಪುರಾತನರೂ ಆದ ರೇಣುಕಾದಿಗಳು ನಿರೂಪಿಸಿದ್ದಾರೆ. ಅಲ್ಲದೆ ಮತ್ತೊಂದೆಡೆಯಲ್ಲಿ ಮಣಿಭದ್ರಮಹೀಪತಿಗೆ ಹೀಗೆ ಹೇಳಿದ್ದಾರೆ ; ಈ ಮೂರು ಜಗತ್ತುಗಳಲ್ಲಿ ವೀರಮಾಹೇಶ್ವರನಿಗಿಂತ ಮಿಗಿಲಾದ ತತ್ವ ಮತ್ತೊಂದಿಲ್ಲ. ವೀರಮಹೇಶ್ವರರ ವಿಶುದ್ಧವಾದ ಅಂಗಾಂಗಗಳಲ್ಲಿ ಅರಿಷಡ್ವರ್ಗ ವಿಲ್ಲದ ಋಷಿಗಳು ವಾಸಿಸುವರು. ಆದರಿಂದ ಸರ್ವಪ್ರಯತ್ನದಿಂದ ವೀರ ಮಾಹೇಶ್ವರರ ಪೂಜೆಯನ್ನಾಚರಿಸು ಮಣಿಭದ್ರಮಹಾಪತಿಯೇ.

ವೀರಮಾಹೇಶ್ವರರ ಕಾರುಣ್ಯರಸವು ಸಾಮಾಜಿಕರ ಜೀವನದಲ್ಲಿ ಪ್ರವಹಿಸುವ ಪ್ರವಿಮಳ ಅಂತರ್ಜಲ, ಬೆಳ್ಳಂಬೆಳಗುವ ಅಂತಃಕಳೆ : ಮಂಜುಳ ವಾಗಿ ನಿನದಿಸುವ ಓಂಕಾರದ ಅಂತರ್ನಾದ ಅವು ಅಂತಿಂತವಲ್ಲ; ಚಿನ್ನಾದ ಚಿದ್ಬಿಂದು ಚಿತ್ಕಳೆಗಳು. ಇವುಗಳಿಂದ ಶಿಷ್ಯರ ಮೃಸ್ಮಯಾಂಗ ಚಿನ್ಮಯಾಂ ಗವಾಗಿ ಪರಿಣಮಿಸುತ್ತದೆ. ನಿತ್ಯ ಪೂರ್ಣಾನಂದಮಯವಾಗುತ್ತದೆ. ಸತ್ಯಶಿವ ಸೌಂದರ್ಯದ ಆವಿಷ್ಕಾರವಾಗುತ್ತವೆ ಅಂತರಾತ್ಮನಲ್ಲಿ !

ವೀರೇಶನ ಪರಂಪರೆಯವರಾದ ವೀರಮಾಹೇಶ್ವರರು ಆತ್ಮದ್ರಷ್ಟಾರರಾದ ಶಿವಕವಿಗಳು ತಮ್ಮ ಅಂತೇವಾಸಿಗಳಿಗೆ ತತ್ವದರ್ಶನವನ್ನು ಮಾಡಿಸಿ ತತ್ವಾನು ಭೂತಿಯನ್ನುಂಟುಮಾಡಿ ಚಿದಾನಂದವನ್ನೂಡಿಸುತ್ತಾರೆ. ಅವರ ಆ ವಾಣಿ ಯಲ್ಲಿ ಅಂತಹ ಅಪೂರ್ವ ಶಕ್ತಿಯಿರುತ್ತದೆ. ಅವರು ಆಗಮಾರ್ಥ ಪ್ರಯುಕ್ತರು ; ಪರಮಾರ್ಥಪ್ರದಾತರು. ಅಪ್ರಾಪ್ತವನ್ನು ಪ್ರಾಪ್ತಿಸುವ ಯೋಗಿರಾಜರು. ಕವಿಸಾರ್ವಭೌಮರು, ಷಟ್‌ಸ್ಥಲ ಚಕ್ರವರ್ತಿಗಳು, ಪರಬ್ರಹ್ಮರು ಅಂಗ-ಲಿಂಗಗಳ ಇಂಗಿತಜ್ಞರು ಪರಮಪ್ರಾಸಾದಿಕ ಪರಿಣಾಮಿಗಳು. ಬಜ್ಜೈತನ್ಯಸಂಧಾನಿಗಳು ವಿಶುದ್ಧರು ಪ್ರಬುದ್ಧರು ಪ್ರಸಿದ್ಧರೂ ಆಗಿರುವುದರಿಂದ ಋತಶಕ್ತಿವಂತರಾಗಿ ವೀರಮಾಹೇಶ್ವರರೆಂದೆನಿಸಿಕೊಂಡಿರುತ್ತಾರೆ. ವೀರಮಾಹೇಶ್ವರ ತತ್ತ್ವ ಸತ್ವ ಶಾಲಿಯಾದುದು-ಸಂಪೂರ್ಣವಾಗಿ ! ಮಲಮಯಾ ತೊಡಕುಗಳನ್ನು ತೊಡೆದು, ಭವಬಂಧನವನ್ನು ಬಿಡಿಸಿ, ನರಜನ್ಮವನ್ನು ತವಿಸಿ ಅಮೃತಾತ್ಮರನ್ನಾಗಿಸುವ ಕ್ರತುಶಕ್ತಿಸಂಪನ್ನರು. ಅಂತೆಯೆ ಬಾಳಿನಲ್ಲಿ ಹರಿವ ಬಗೆ ಬಗೆಯ ಕೀಳಾಸೆಗಳ ಅಣೆಕಟ್ಟನ್ನು ಕಟ್ಟಿ ಲೋಕೋತ್ತರ ಪ್ರಕ್ರಿಯೆಗಳ ಹುಲುಸಾದ ಬೆಳೆಗಳನ್ನು ಬೆಳೆಯಬಲ್ಲರು. ಶಾಂತಿ ಸಂತೃಪ್ತಿಗಳನ್ನು ತರಬಲ್ಲರು.

ವೀರಮಾಹೇಶ್ವರರ ವಿಚಾರದಲ್ಲಿ ಇನ್ನು ವಿಶೇಷವಾಗಿ ಮನವರಿಕೆ ಮಾಡಿಕೊಳ್ಳಬಯಸುವವರು ನಾವೇ ಬರೆದ "ಮಾಹೇಶ್ವರ ವೀರ ಮಾಹೇಶ್ವರ" ಎಂಬ ಗ್ರಂಥವನ್ನು ಗಮನಿಸಬೇಕು.

"ತದಿದಂ ಸರ್ವ ಸಿದ್ಧಾಂತ ಸಾರಾಣಾಮುತ್ತಮಂ ।
ವೇದ ವೇದಾಂತ ಸರ್ವಸ್ವಂ ವಿದ್ಯಾಚಾರ ಪ್ರಕಾಶಕಂ ।
ವೀರ ಮಾಹೇಶ್ವರ ಗ್ರಾಹ್ಯ ಶಿವಾದ್ವೈತ ಪ್ರಕಾಶಕಂ ॥"

....ಸಿ. ಶಿಖಾಮಣಿ

ಶಿವಾದ್ವೈತ ಪ್ರಕಾಶಕವಾದುದು ಚಿಚ್ಛಕ್ತಿ ಜ್ಞಾನ. ಇದು ಭಾರತೀಯ ಸರ್ವ ಸಿದ್ಧಾಂತ ಸಾರಗಳಿಗೆ ಸಾರವಾಗಿ ಸರ್ವೋತ್ತಮವಾಗಿದೆ. ವೇದ ವೇದಾಂತ ಸರ್ವಸ್ವವಾಗಿದೆ. ತಾತ್ತ್ವಿಕ ಜ್ಞಾನ ಕ್ರಿಯಾ ಪ್ರಕಾಶಕವಾಗಿದೆ. ಶಿವಾದ್ವೈತ ಸಿದ್ಧಾಂತವನ್ನು ಪ್ರಕಾಶಪಡಿಸುವುದಾಗಿದೆ. ಅದು ವೀರ ಮಾಹೇಶ್ವರರಿಗೆ ಗ್ರಾಹ್ಯ.

## ಅಂತರ್ಜ್ಞಾನೋದಯ-ಚಿಚ್ಛಕ್ತಿಜ್ಞಾನ ನಿಲಯ

ಆದಿ ಜಗದ್ಗುರು ರೇಣುಕ ಶಿವಾಚಾರ್ಯ ಭಗವತ್ಪಾದರು ತಮ್ಮ ಜೀವಿತ ಕಾಲದಲ್ಲಿ ವೀರಶೈವಕ್ಕೆ ವಿವಿಧವಾದ ಕೊಡುಗೆಗಳನ್ನು ಕರುಣಿಸಿದ್ದಾರೆ. ಅವು ಗಳಲ್ಲಿ ಅತಿ ಮುಖ್ಯವಾದ ಕಲಾತ್ಮಕವಾದ ಕೊಡುಗೆಯೆಂದರೆ, ಅದು "ಚಿಚ್ಛಕ್ತಿ ಜ್ಞಾನ ನಿಲಯ" ! ಇವು ಅನನ್ಯ ಸಾಧಾರಣವಾದುವು. ಅಂತರ್ಜ್ಞಾನೋ ದಯಕ್ಕೆ ಅನುಪಮ ಅನುಭೂತಿ ಅಳವಡುವುದಕ್ಕೆ ಮೂಲಕಾರಣ ; ಮುಖ್ಯ ಸಾಧನ. ಅನುಭವಗಳಲ್ಲಿ ಚಿದನುಭವವೇ ಚರಮ–ಪರಮ! ಅದು ಜೀವನದ ದಿವ್ಯ ದೀಪ್ತಿ ; ದಿವ್ಯಶಕ್ತಿ. ಮತ್ತು ದಿವ್ಯನಾದ ಅಂತಹ ಆ ಚಿಚ್ಛಕ್ತಿಯ ಅಭಿವ್ಯಕ್ತಿಯಾಗುವದೇ ಮಾನವೀಯ ಮಹೋತ್ತಮ ಧ್ಯೇಯ.

ಚಿಜ್ಜ್ಯೋತಿಯಿಲ್ಲದ ಜೀವಕೋಟಿಯಿಲ್ಲ. ಅದು ಎಲ್ಲ ಜೀವಿಗಳಲ್ಲಿಯೂ ಅಂತರ್ಜ್ಯೋತಿಯಾಗಿರುತ್ತದೆ. ಅದು ವಿಶೇಷವಾಗಿ ಪಶ್ಚಿಮ ಚಕ್ರದಲ್ಲಿ ನೆಲ ಸಿರುತ್ತದೆ. ಅದನ್ನು ಅಂಗಾಂಗಗಳಲ್ಲಿ ಅವತರಣಗೊಳಿಸಿಕೊಳ್ಳುವುದೇ ಉತ್ತಮ ಜೀವಿತ–ಲಕ್ಷ್ಯ ; ಅದು ತಾನೇ ತನ್ನಿಂದಲೇ ಅವರತರಣಗೊಳ್ಳು ವುದಿಲ್ಲ. ಅದನ್ನು ಅವತರಣಗೊಳಿಸುವ ಅಗ್ಗಳಿಕೆಯುಳ್ಳವರು ಬೇಕು. ಅವರೇ ಗುರುಗಳು ಅಥವಾ ಶಿವಾಚಾರ್ಯರು. ಇವರು ಶಿಷ್ಯನಿಗೆ ಶಿವದೀಕ್ಷೆ ಯನ್ನು ಕರುಣಿಸುವಾಗ ಮಾತ್ರ ವೈಯಕ್ತಿಕವಾಗಿ ಮಾಡಬಲ್ಲರು. ಆದರೆ ಸಮಷ್ಟಿಯಾಗಿ ಮಾಡಿದ–ಮಾಡಲು ಬೇಕಾದ ಮಾಧ್ಯಮವನ್ನು ಕಂಡು ಹಿಡಿದ ಗುರು ಸಾರ್ವಭೌಮನೆಂದರೆ ಆದಿ ರೇಣುಕ ಶಿವಾಚಾರ್ಯರೊಬ್ಬರೆ ! ಅದುವೆ ಚಿಚ್ಛಕ್ತಿಜ್ಞಾನ ನಿಲಯ ! ಇದನ್ನು ಮೂರು ಸಾವಿರ ವರುಷಗಳಷ್ಟು ಹಿಂದಿನ ಕಾಲದಲ್ಲಿಯೇ ಆದಿರೇಣುಕರು ಪ್ರತಿಷ್ಠಿಸಿದ್ದರು. ಅದು ಪ್ರಥಮ

ದಲ್ಲಿ ಅಂದಿನ ಭಾರತದ ಪ್ರಧಾನ ನಗರವಾಗಿದ್ದ 'ಪುಣ್ಯವತಿ' ಪಟ್ಟಣಕ್ಕೆ ಪ್ರಾಪ್ತವಾಗಿತ್ತು. ಅಂತೆಯೆ ಏನೋ ಅದನ್ನು 'ಪುಣ್ಯವತಿ'ಯೆಂದೇ ಕರೆದಿರಬೇಕೆಂದೆನಿಸುತ್ತದೆ. ಅದನ್ನು ಅಂದು ವಿಡಂಬಕನೆಂಬ ಹೆಸರಿನ ಅರಸನು ಆಳುತ್ತಿದ್ದನು. ರಾಜಧಾನಿಯಾಗಿದ್ದಿತು. ಆ ಬಳಿಕ ಆತನ ರಾಜ್ಯದಲ್ಲಿ ಅಲ್ಲಲ್ಲಿ ಅನೇಕ ಚಿಚ್ಛಕ್ತಿ ಜ್ಞಾನ ನಿಲಯುಗಳು ಸಂಸ್ಥಾಪಿತವಾಗಿದ್ದವು. ಅವು ಅನುಭವ ಮಂಟಪಕ್ಕಿಂತ ಅತ್ಯಂತ ಎತ್ತರ ನಿಲುವುಳ್ಳವು. ಅವುಗಳಿಂದ ಅಂದಿನವರಿಗೆ ಲಭಿಸುತ್ತಿತ್ತು ಚಿದ್ವಿಭೂತಿಯೋಗ !

## ಚಿದ್ವಿಭೂತಿಯ ಮಹತಿ

"ದಿಕ್ಕಾಲಾದ್ಯ ನವಚ್ಛಿನ್ನಂ ಚಿದಾನಂದಮಯಂ ಮಹತ್ ।
ಯಸ್ಯ ರೂಪಮಿದಂ ಖ್ಯಾತಂ........

—ಸಿ. ಶಿಖಾಮಣಿ

ದೇಶಕಾಲ ವಸ್ತುಗಳಿಂದ ಅವಚ್ಛಿನ್ನವಾಗದಿರುವ ಮಹತ್ತಾದ ಚಿದಾನಂದಾತ್ಮಕವಾದುದೆ ಅದರ ಸ್ವರೂಪು ಎಂಬುದಾಗಿ ವಿಖ್ಯಾತವಾಗಿದೆಯೆಂದು ಚಿದಾನಂದ ಪರಾಕಾಶ ಶಿವಾನುಭವಯೋಗವುಳ್ಳ ಶಿವಯೋಗಿ ಶಿವಾಚಾರ್ಯನು ನಿರೂಪಿಸಿದ್ದಾನೆ. ಅಲ್ಲದೆ ಅದುವೆ ವಿಶ್ವಾಧಾರ ; ಮರಾಸಂದಿತ್ಪ್ರಕಾಶ. ವಿಶ್ವವಸ್ತು ಪ್ರಕಾಶಕ. ಪರಮಾತ್ಮನ ವಿಮರ್ಶಾಶಕ್ತಿ.

"ಚಿದ್ರೂಪಂ ಹಿ ಪರಂ ತತ್ತ್ವಂ ಶಿವಾಖ್ಯಂ ವಿಶ್ವಕಾರಣಂ
ನಿರಸ್ತ ವಿಶ್ವ ಕಾಲುಷ್ಯಂ ನಿಷ್ಕಲಂ ನಿರ್ವಿಕಲ್ಪಕಂ ।
ಸತ್ತಾನಂದ ಪರಿಸ್ಫೂರ್ತಿ ಸಮುಲ್ಲಾಸ ಕಳಾಮಯಂ
ಅಪ್ರಮೇಯಮನಿರ್ದೇಶ್ಯಂ ಮುಮುಕ್ಷುಭಿರುಪಾಸಿತಂ ॥
ಪರಂ ಬ್ರಹ್ಮ ಮಹಾಲಿಂಗಂ ಪ್ರಪಂಚಾತೀತಮವ್ಯಯಂ
ತದೇವ ಸರ್ವಭೂತಾಮಂತ ಸ್ತ್ರಿಸ್ಥಾನ ಗೋಚರಂ ।....
ಸರ್ವೇ ಸುಜ್ಞಾನಯೋಗೇನ ಸರ್ವಕಾರಣಕಾರಣಂ
ಪಶ್ಯಂತಿ ಹೃದಯೇ ಲಿಂಗಂ ಪರಮಾನಂದ ಲಕ್ಷಣಂ ॥''

—ಸಿ. ಶಿಖಾಮಣಿ

ಚಿದ್ವಿಭೂತಿಯನ್ನು ಅದರ ಮಹತ್ತನ್ನು ಮುಮ್ಮೊದಲು ಕಂಡುಹಿಡಿದವರು ಆದಿ ರೇಣುಕಾದಿ ಶಿವಾಚಾರ್ಯರು. ಚಿತ್ ಬೇರೆಯಲ್ಲ, ಪರಶಿವ

ತತ್ತ್ವ ಬೇರೆಯಲ್ಲ. ಅದು ವಿಶ್ವಕಾರಣ ; ಅದಕಿಲ್ಲ ಈ ವಿಶ್ವ ಕಾಲುಷ್ಯ. ಅದು ನಿಷ್ಕಲ, ನಿರ್ವಿಕಲ್ಪ ; ಮತ್ತು ಅದು ಸತ್ತಾನಂದ ಪರಿಸ್ಫೂರ್ತಿ, ಸಮುಲ್ಲಾಸ ಕಳಾಮಯ ; ಅಪ್ರಮೇಯ ; ಅನಿರ್ದೇಶ್ಯ. ಆದರೂ ಮುಮುಕ್ಷುಗಳಿಂದ ಉಪಾಶ್ಯ; ಅದು ಪರಬ್ರಹ್ಮ, ಅದುವೆ ಶಿವಾಚಾರ್ಯರ ಪರಿಭಾಷೆಯಲ್ಲಿ ಮಹಾಲಿಂಗ. ಅದು ಈ ಪ್ರಪಂಚಕ್ಕೆ ಮಾತ್ರ ಸೀಮಿತವಲ್ಲ. ಅದು ಅವಿನಾಶಿ. ಅದುವೇ ಸರ್ವ ಪ್ರಾಣಿಗಳ ಅಂತರಂಗದಲ್ಲಿ ಮೂರು ನೆಲೆಗಳಲ್ಲಿ ನೆಲಸಿರುತ್ತದೆ ; ತೋರುತ್ತದೆ. ಅವು ಮೂಲಾಧಾರ, ಹೃದಯ, ಭ್ರೂಮಧ್ಯಸ್ಥಾನಗಳು. ಪರಮಾನಂದ ಲಕ್ಷಣವುಳ್ಳ ಚಿಲ್ಲಿಂಗವನ್ನು ಹೃದಯದಲ್ಲಿ ಸುಜ್ಞಾನಯೋಗದಿಂದ ಸರ್ವರೂ ಸಂದರ್ಶಿಸಬಲ್ಲರು. ಅದು ಎಲ್ಲ ಕಾರಣಗಳಿಗೆ ಕಾರಣ ; ಮಹಾಕಾರಣ. ಅಪರಚ್ಛಿನ್ನವೂ ಅವ್ಯಕ್ತವೂ ಆದ ಆ ಸನಾತನ ಚಿಲ್ಲಿಂಗವು ಉಪಾಸನೆಗಾಗಿ ಅಂತರಿಕ ಪರಿಚ್ಛಿನ್ನವಾಗಿದೆ ಸ್ವಶಕ್ತಿಯಿಂದ ! ಅದರ ಧಾರಣವು ಆಂತರಿಕ ಜ್ಯೋತಿರ್ಲಿಂಗಾನುಸಂಧಾನ ಕಾರಣವು.

"ಯೇ ಧಾರಯಂತಿ ಹೃದಯೇ ಲಿಂಗ ಚಿದ್ರೂಪಮೈಶ್ವರಂ ।
ನ ತೇಷಾಂ ಪುನರಾವೃತ್ತಿಃ ಘೋರ ಸಂಸಾರ ಮಂಡಲೇ ॥
—ಸಿ. ಶಿಖಾಮಣಿ

ಸ್ಥಿರ ಚಿತ್ತರಾಗಿ ಶ್ರೀ ಗುರುವಿನ ಉಪಾಸನೆಯನ್ನೆಸಗಿ ಶ್ರೀ ಗುರು ಕಾರಣ್ಯವನ್ನು ಪಡೆದು ಯಾರು ಆ ಚಿಲ್ಲಿಂಗ (ಪ್ರಾಣಲಿಂಗ)ವನ್ನು ಹೃದಯದಲ್ಲಿ ಧರಿಸುವರೋ ಅವರಿಗೆ ಈ ಘೋರ ಸಂಸಾರದಲ್ಲಿ ಪುನರಾವೃತ್ತಿಯುಂಟಾಗದು. ವಿರಾಗಯೋಗಗಳಿಂದ ಕೂಡಿದವರಿಗೆ ಆ ಅಂತರ್ಲಿಂಗಾನುಸಂಧಾನ ಸಂಧಿಸುತ್ತದೆ ; ಸಿದ್ಧಿಸುತ್ತದೆ.

"ಚಿದಾತ್ಮನಿ ಶಿವೇನ್ಯಸ್ತಂ ಜಗದೇತಚ್ಚರಾಚರಂ ।
ದೃಶ್ಯತೇ ತನ್ಮಯಂ ಸರ್ವಮಗ್ನೌ ಕಾಷ್ಠಾದಿಕಂ ಯಥಾ
ನ ಭಾತಿ ಪೃಥ್ವೀ, ನ ಜಲಂ, ನ ತೇಜೋ, ನೈವ ಮಾರುತಃ ।
ನಾಕಾಶೋ ನಾಪರಂ ತತ್ತ್ವಂ ಶಿವೇದೃಷ್ಟೇ ಚಿದಾತ್ಮನಿ ॥
ಜ್ಯೋತಿರ್ಲಿಂಗೇ ಚಿದಾಕಾರೇ ಜ್ವಲತ್ಯಂತರ್ನಿರಂತರಂ ।
ವಿಲೀನಂ ನಿಖಿಲಂ ತತ್ತ್ವಂ ಪಶ್ಯನ್ ಯೋಗೀನ ಲಿಪ್ಯತೇ ॥

ಅಂತರ್ಮುಖೇನ ಮನಸಾ ಸ್ವಾತ್ಮ ಜ್ಯೋತಿಷಿ ಚಿನ್ಮಯೇ ।
ಸರ್ವಾನಪ್ಯರ್ಥ ವಿಷಯಾನ್ ಜುಹ್ವದ್ಯೋಗೀ ಪ್ರಯೋದತೇ ॥
....ಸಿದ್ಧಾಂತ ಶಿಖಾಮಣಿ

ಚಿದ್ವಸ್ತು ಮಹಾಸಂಹಿತ್ಪ್ರಕಾಶ ; ಪರಾಕಾಶ. ಅಂತಹ ಆ ಚಿದಾತ್ಮ ಪರ ಶಿವಸ್ವರೂಪದಲ್ಲಿ ವಿನ್ಯಸ್ತವಾದ ಈ ಚರಾಚರ ಜಗತ್ತು ತನ್ಮಯವಾಗಿಯೆ ತೋರುತ್ತದೆ. ಅಂದರೆ ಚಿನ್ಮಯವಾಗಿಯೆ ಇರುತ್ತದೆ. ಮಹಾಸಂವಿತ್ಪ್ರಕಾಶ ವಾಗಿಯೇ ಇರುತ್ತದೆ. ಅಗ್ನಿಯಲ್ಲಿ ಹಾಕಿದ ಕಾಷ್ಠಾದಿಗಳು ಅಗ್ನಿಯೇ ಆಗಿ ತೋರುವಂತೆ ! ಚಿದಾತ್ಮ ಶಿವನು ಸಾಕ್ಷಾತ್ಕಾರವಾಗಲು ಇದು ನೆಲ, ಇದು ನೀರು, ಇದು ಬೆಂಕಿ, ಇದು ಗಾಳಿ, ಇದು ಮುಗಿಲು, ಎಂದು ಬೇರೆ ಬೇರೆಯಾಗಿ ತೋರುವುದಿಲ್ಲ. ಬೇರೆ ಇನ್ನಾವ ತತ್ತ್ವವೂ ತೋರು ವುದಿಲ್ಲ. ಚಿಜ್ಜ್ಯೋತಿರ್ಲಿಂಗವು ಅಂತರಂಗದಲ್ಲಿ ನಿರಂತರ ಪ್ರಜ್ವಲಿಸುತ್ತಿರು ತ್ತದೆ. ಏನೆಲ್ಲ ತತ್ತ್ವಗಳನ್ನು ಅದರಲ್ಲಿ ವಿಲೀನಗೊಳಿಸಿದ ಶಿವಯೋಗಿಯು ಅಥವ ಚಿದ್ವಿಭೂತಿಯೋಗಿಯು ನಿರ್ಲಿಪ್ತನಾಗಿರುತ್ತಾನೆ. ಚಿನ್ಮಯ ಸ್ವಾತ್ಮಜ್ಯೋತಿಯಲ್ಲಿ ಅಂತರ್ಮುಖವಾಗಿ ಮನಸ್ಸಿನಿಂದ ಏನೆಲ್ಲ ಅರ್ಥ ವಿಷಯ ಗಳನ್ನು ಹವನ ಮಾಡಿದ ಯೋಗಿಯು ಪ್ರಮೋದಿಸುತ್ತಾನೆ. ಮತ್ತು ಏನೆಲ್ಲ ವಿಷಯಗಳನ್ನು ಸ್ವಾತ್ಮಸ್ವರೂಪ ಸಚ್ಚಿದಾನಂದ ಪರಶಿವನಿಗರ್ಪಿಸಿ, ತತ್ಪ್ರಸಾದ ವನ್ನಾಗಿಸಿ ಸಕಲವನ್ನು ಆರೋಗಿಸುತ್ತಾನೆ. ಆತನೇ ಜೀವನ್ಮುಕ್ತನು; ಅಖಂಡ ಸಚ್ಚಿದಾನಂದ ಪರಶಿವ ಬ್ರಹ್ಮ ಸ್ವರೂಪಿಯು. ಆ ಧೀರೋದಾತ್ತನ ಮುಂದೆ ಮಾಯೆಯು ಕೈಂಕರ್ಯವಾದಿಯಾಗಿರುತ್ತದೆ. ವಿಶ್ವಸಂಮೋಹನಶಕ್ತಿಯುಳ್ಳ ದಾದರೂ ಪರಶಿವ ಸಾಮರಸ್ಯದೊಡನೆ ಜೀವನ್ಮುಕ್ತನಾದವನ ಮುಂದೆ ನಿಲ್ಲಲು ಮಾಯೆಗೆ ಶಕ್ತಿಯಿರದು ; ಅರ್ಹತೆಯಿರದು.

"ಚಿದ್ವಿಲಾಸ ಪರಿಸ್ಫೂರ್ತಿ ಪರಿಪೂರ್ಣ ಸುಖಾದ್ವಯೇ
ಶಿವೇ ವಿಲೀನ ಸರ್ವಾತ್ಮಾ ಯೋಗೀ ಚಲತಿ ನ ಕ್ವಚಿತ್ ।
ಚಿತ್ಪ್ರಕಾಶಯತೇ ವಿಶ್ವಂ ತದ್ವಿನಾ ವಸ್ತು ನಾಸ್ತಿ ಹಿ
ಚಿದೇಕನಿಷ್ಠ ಚಿತ್ತಾನಾಂ ಕಿಂ ಮಾಯಾ ಪರಿಕಲ್ಪಿತೈಃ ॥
ಚಿದೇಕ ಭಾಜನಂ ಯಸ್ಯ ಚಿತ್ತವೃತ್ತಿಃ ಶಿವಾತ್ಮಕಾ
ನಾನ್ಯತ್ತಸ್ಯ ಕಿಯೇತೇನ ಮಾಯಾ ಮೂಲೇನ ವಸ್ತುನಾ ॥

ಏಕೆಂದರೆ ಜೀವನ್ಮುಕ್ತನು ಚಿದ್ವಿಲಾಸ ಪರಿಸ್ಫೂರ್ತಿ ಪರಿಪೂರ್ಣಾನಂದದಲ್ಲಿ ತಾನೇ ತಾನಾಗಿರುತ್ತಾನೆ. ಆತನಿಗೆ ಬೇರೆ ಯಾವ ಚಾಪಲ್ಯಗಳಿರುವುದಿಲ್ಲ. ಆತನಿಗೆ ಈ ವಿಶ್ವವೇ ಚಿನ್ಮಯವಾಗಿಯೇ ಪ್ರಕಾಶಿಸುತ್ತದೆ. ಆ ಚಿದ್ವಸ್ತುವಿಗೆ ಭಿನ್ನವಾದುದು ಏನೊಂದೂ ತೋರುವುದಿಲ್ಲ. ಚಿನ್ನಿಷ್ಠಚಿತ್ತನು. ಈ ಅಶುದ್ಧ ಮಾಯಾ ಪರಿಕಲ್ಪನೆಗಳೊಂದೂ ಆತನಿಗಿರುವುದಿಲ್ಲ. ಆತನ ಚಿತ್ತವೃತ್ತಿ ಚಿದೇಕ ಭಾಜನವಾಗಿರುತ್ತದೆ. ಮಾಯಾ ಮೂಲವಾದ ಈ ಭೋಗ ಭಾಗ್ಯಗಳು ಆತನಿಗೊಂದು ತೃಣ.

"ಅಜ್ಞಾನಮಲಿನಂ ಚಿತ್ತದರ್ಪಣಂ ಯೋ ವಿಶೋಧಯೇತ್
ಪ್ರಜ್ಞಾ ವಿಭೂತಿಯೋಗೇನ ತಮಾಹುರ್ಗುರುಸತ್ತಮಂ ।"

....ಸಿ. ಶಿಖಾಮಣಿ

ಸತ್‌ಸಾಧಕನ ಚಿತ್ತ ಅದೊಂದು ದರ್ಪಣ. ಅದು ಅಜ್ಞಾನದಿಂದ ಮಲಿನವಾಗಿರುತ್ತದೆ. ಅದನ್ನು ಗುರುಸಾರ್ವಭೌಮನು ತನ್ನ ಚಿದ್ವಿಭೂತಿ ಯೋಗದಿಂದ ಆ ಮಲಿನ ದರ್ಪಣವನ್ನು ಶೋಧಿಸುತ್ತಾನೆ. ಅಂದರೆ ನಿರ್ಮಲವಾಗಿರಿಸುತ್ತಾನೆ. ಇಂತಹ ಚಿದ್ವಿಭೂತಿಯೋಗವನ್ನುಂಟು ಮಾಡುವ ಚಿಚ್ಛಕ್ತಿಜ್ಞಾನ ನಿಲಯಗಳನ್ನು ಆದಿರೇಣುಕರು ವೀರಶೈವ ಸಮಾಜಕ್ಕೆ ಕರುಣಿಸಿದ ಹಿರಿದಾದ ಕೊಡುಗೆಯಾಗಿದೆ.

ಅಶುದ್ಧ ಮಾಯೆ ಜಡ ಪ್ರಕೃತಿ. ಚರ ಚೇತನಕ್ಕೂ ಜಡತೆಯನ್ನು ತರುವುದು ಮಾಯೆಯ ಅಂದರೆ ಪ್ರಕೃತಿಯ ಗುಣ. ತ್ರಿಗುಣಾತ್ಮಕ. ಜನನ ಮರಣಗಳಿಗೆ ಕಾರಣ. ಮಾಂಸ ಪಿಂಡಕ್ಕೆ ಕಾರಣ. ಅಜ್ಞಾನ ಆಶೆ ಅಹಂಕಾರಾದಿಗಳನ್ನು ಹುಟ್ಟಿಸುತ್ತದೆ. ಇವನ್ನೆಲ್ಲ ತಮ್ಮ ಶಿವ ಸಂಸ್ಕಾರದಿಂದ ಶಿವಾಚಾರದಿಂದ ಶಿವ ವಿಚಾರಗಳಿಂದ ತೊಡೆದು ಹಾಕುವುದೆ ಶಿವಾಚಾರ್ಯರ ಸಾಮಾಜಿಕ ಸಾಧನ ; ಸಾರ್ವಜನಿಕಕಲ್ಯಾಣ. ತಮ್ಮ ಕಾರುಣ್ಯದಿಂದ ಮಾಂಸ ಪಿಂಡವನ್ನಳಿಸಿ ಮಂತ್ರಮಯ ಪಿಂಡವನ್ನಾಗಿಸಿ, ಮಲತ್ರಯಗಳನ್ನು ಮಾಣಿಸಿ, ಕಳಾತ್ರಯಗಳನ್ನು ಕರುಣಿಸುವುದೇ ಶಿವಾಚಾರ್ಯರ ಮಣಿಹ. ಜ್ಞಾನದ ಕಣ್ಣನ್ನು ತೆರೆಯಿಸಿ ಅಜ್ಞಾನಾಂಧಕಾರವನ್ನು ತೊಲಗಿಸುತ್ತಾರೆ. ಕ್ರಿಯೆಯನ್ನು ರೂಹುಗೊಳಿಸಿ ಕರಸ್ಥಲಕ್ಕೆ ಕರುಣಿಸಿ ಜಡ ಕರ್ಮಗಳನ್ನು ಮಂತ್ರಬೋಧದಿಂದ ಮಾಂಸ ಪಿಂಡವನ್ನು ಪರಿ

ಹರಿಸಿ ವೇಧಾದೀಕ್ಷೆಯಿಂದ ಭಾವಭ್ರಾಂತಿಯನ್ನು ಬಿಡಿಸುತ್ತಾರೆ. ಇದೆಲ್ಲವೂ ಸಣ್ಣ ಕೊಡುಗೆಯಲ್ಲ. ಶಿವಾಚಾರ್ಯರದೇ ಆದ ವ್ಯಷ್ಟಿ- ಸಮಷ್ಟಿ ಉದ್ಧಾರದ ಉದಾತ್ತ ಕೊಡುಗೆ ! ಮಾನವೀಯತೆಯನ್ನು ಮೂಡಿಸಿ ಮುಂಬೆಳಗಿಸುವ ಮಹಾಮಣಿಹ. ಲೋಕೋತ್ತರ ಲೀಲೆ !

## ಮಾನವೀಯ ಮಹಾಗುರು–ಶ್ರೀ ರೇಣುಕ ಶಿವಾಚಾರ್ಯರು

ಪುರಾತನ ವೀರಶೈವ ಸಂಸ್ಕೃತಿಗೆ ಶಿವಾಚಾರರ್ಯ ಕೊಡುಗೆಯಲ್ಲಿ ಅನಾದಿ ವೀರಶೈವರಾದ ರುದ್ರ-ಭದ್ರಾದಿಗಳ ಮತ್ತು ರುದ್ರಗಣ ವೀರಗಣ ಶಿವಗಣ ರಂತೆ ಆದಿ ವೀರಶೈವ ಸಂಸ್ಕೃತಿಗೆ ಶ್ರೀ ಜಗದ್ಗುರು ರೇಣುಕ ದಾರುಕಾದಿ ಶಿವಾಚಾರ್ಯರ ಹಾಗು ವೀರ ಮಾಹೇಶ್ವರರ ಶಿವಾಚಾರಿಣಿಯರ (ರುದ್ರ ಕನ್ನಿಕೆ ಯರ) ಕೊಡುಗೆ ವಿಶಿಷ್ಟ ಪೂರ್ಣವಾದುದು. ಅದರಲ್ಲಿ ಶ್ರೀ ಜಗದ್ಗುರು ಆದಿ ರೇಣುಕರೇ ಅಗ್ರಗಣ್ಯರು. ಆದಿ ಯುಗಪುರುಷರು. ಅಪ್ರತಿಮ ಮಹಿಮರು. ಇವರ ಬಗೆಗೆ ಈ ಒಳಕ್ಕೆ ವೀರಾಗಮದ ಆಧಾರದ ಮೇಲೆ ಬರೆದ "ಶ್ರೀ ಜ. ಆದಿರೇಣುಕರು" ಎಂಬೀ ಸಂಶೋಧನಾತ್ಮಕ ಮೇರು ಕೃತಿಯ ಪುಟ ೪೭ ರಲ್ಲಿ ಹೀಗೆ ನಿರೂಪಿಸಲಾಗಿದೆ :

"ಭಾರತದಲ್ಲಿ ಮುಮ್ಮೊದಲು ಮಾನವೋದ್ಧಾರ ಮಣಿಹವನ್ನು ಕೈಕೊಂಡ ಕೀರ್ತಿ ಕಳಾಗುರು ರೇಣುಕರದು. ಇದಕ್ಕಾಗಿ ಬಾಳಿನಲ್ಲಿ ಅವರು ಬಿಡುವಿಲ್ಲದೆ ದುಡಿದರು ; ಭಾರತೀಯರನ್ನು ದುಡಿಸಿದರು. ಜೊತೆಗೆ ಶಿವಾ ಚಾರ್ಯರನ್ನೂ ದುಡಿಸಿದರು. ಪ್ರಾದೇಶಿಕ ಭೇದ ಭಾವವಿಲ್ಲದಂತೆ ಭಾರತಾದ್ಯಂತ ಸುಳಿದು ಪ್ರಭಾವ ಬೀರಿದರು. ಜಾತಿ ಕುಲ ಪಂಥ ಕೋಮುಗಳನ್ನು ಎಣಿಸದೆ-ಗಣಿಸದೆ, ಮಾನವರೆಲ್ಲರ ಉದ್ಧಾರಕ್ಕಾಗಿ ಉತ್ಕ್ರಾಂತಿಗೈದರು. ಹಾದಿ ಬೀದಿ ಗಳಲ್ಲಿ ಮಠಗಳನ್ನು ದಾಸೋಹಗಳನ್ನು ನಿರ್ಮಿಸಿ ಅನಾಥರಿಗೆ ಅತಿಥಿಗಳಿಗೆ ಅನ್ನ ಪ್ರಸಾದ ವಸತಿಗಳನ್ನು ಏರ್ಪಡಿಸಿದರು. ಜ್ಞಾನ ದಾಸೋಹಗಳಾದ 'ಚಿಚ್ಛಕ್ತಿ ಜ್ಞಾನನಿಲಯ'ಗಳನ್ನು ನಡೆಸಿದರು. ಕ್ರಿಯಾಹೀನರಿಗೆ ಕ್ರಿಯೆಗಳನ್ನು ಬೋಧಿಸಿ ದರು. ಜ್ಞಾನ ಹೀನರಿಗೆ ಜ್ಞಾನಾಮೃತವನ್ನು ಪಾನ ಮಾಡಿಸಿದರು. ಅನುಭವಿ ಗಳಿಗೆ ಅನುಭವ ಸಂಪತ್ತನ್ನಿತ್ತು ಅನುಭಾವಿಕ ಶ್ರೀಮಂತರನ್ನಾಗಿಸಿದರು. ಮಾನವ ಮಾನವರಲ್ಲಿ ಬಿರುಕನ್ನು ಬೆಳಸುವ ದ್ವಿಜರಿಗೆ ದೀಕ್ಷೆಯನ್ನಿತ್ತು ಭೂ

ಸುರತ್ವ ಕಲ್ಪನೆಯಿಂದ ಭೂ ಮಾನವತ್ವಕ್ಕೆ ತಂದರು. ಈ ದಿಸೆಯಲ್ಲಿ ಅಪೂರ್ವ ಸಾಧನೆ ಅವರದಾಗಿತ್ತು, ಸಾಕಷ್ಟು ಸಫಲವೂ ಆಗಿತ್ತು. ಅವರದು ಶಾಂತಿ ಯುಕ್ತ ಕ್ರಾಂತಿ. ಕೇತುಪಾಲ ನಗರದಲ್ಲಿ ಮಣಿಪಾಲ ದಮಯಂತಿಯರ ಮಾ ಮನೆಯಲ್ಲಿ ಕೋಟಿಗಟ್ಟಲೆ ಜನರಿಗೆ ಕ್ರಿಯಾಶೀಲ ಜ್ಞಾನಶೀಲ ದೀಕ್ಷೆಗಳನ್ನಿತ್ತು ಶಿವಾಚಾರ ಸಂಪನ್ನರನ್ನಾಗಿಸಿದ ಚಿತ್ಕಳಾನ್ವಿತರನ್ನಾಗಿಸಿದ ಮಹಾಮಣಿಹ ಮರೆಯದಂತಹದು. ಇಷ್ಟೇ ಅಲ್ಲ ಇದೇ ಅಂಕಿ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳಿಗೂ ಸಮದರ್ಶಿತ್ವದಿಂದ ಶಿವದೀಕ್ಷಾ ಸಂಸ್ಕಾರವನ್ನಿತ್ತು ಶಿವಾಚಾರಿಣಿಯರನ್ನಾಗಿಸಿದರು. ಅವರ ಈ ಮಹಿಳಾಕ್ರಾಂತಿ ಮಹೀತಳದಲ್ಲಿ ಮೊದಲನೆ ಮಹತ್ತರ ಕ್ರಾಂತಿ ! ಆ ಬಳಿಕ ಇಲ್ಲಿನವರೆವಿಗೂ ಈ ಮಹಾಕ್ರಾಂತಿ ಜರಗಿಲ್ಲ. ಚಂಡಾಲರನ್ನು ಕಿರಾತರನ್ನು ಕಬ್ಬಿಲರನ್ನು ಕ್ಷತ್ರಿಯಾದಿಗಳನ್ನು ಸಂಸ್ಕರಿಸಿ ಭಿನ್ನ ಭೇದಗಳನ್ನಳಿಸಿದ ವಿಶಾಲ ಮನೋಭಾವದ ಇತಿಹಾಸವನ್ನು ಸೃಷ್ಟಿಸಿಕೊಂಡ ನೀಳ ನಿಲವು ಆದಿ ರೇಣುಕಶಿವಾಚಾರ್ಯರದು. ಇದರಿಂದಾಗಿ ಅವರನ್ನು 'ಜಗತಾಂಗುರು' (ಜಗದ್ಗುರು) ಎಂದು ಅಂದಿನ ಜನತೆ ಅನ್ವರ್ಥಕವಾಗಿ ಕರೆದರು. ಪಿಂಡಾಂಡ ಜಗದ್ಗುರುತ್ವದಂತೆ ವಿಶ್ವಜಗದ್ಗುರುತ್ವದ ವ್ಯಕ್ತಿತ್ವ ಅವರದಾಯಿತು. ವಿಶ್ವಮಾನವ ಧರ್ಮವನ್ನು ದರ್ಶನವನ್ನು ಸಂಸ್ಥಾಪಿಸಿದ ಶ್ರೇಷ್ಠ ಶ್ರೇಯಸ್ಸು ಅವರದಾಯಿತು. ಯಾರೂ ಎಲ್ಲಿಯೂ ದೀನರಾಗಿ ದಲಿತರಾಗಿ ದುರ್ಬಲರಾಗಿ ದುರಾಚಾರಿಗಳಾಗಿ ಬಾಳಬಾರದೆಂಬುದೇ ಅವರ ಅಪಾರ ಆಕಾಂಕ್ಷೆಯಾಗಿತ್ತು. ಹಾಗೆ ಮಾಡುವ ಅಂತಹ ಅಸೀಮ ಶಕ್ತಿ ಸಾಮರ್ಥ್ಯ ಅವರಲ್ಲಿದ್ದಿತು. ಮಾನವತಾವಾದಿಗಳಾದ ಅವರು ಎಲ್ಲರಲ್ಲಿರುವ ಮಾನವತ್ವವನ್ನು ಕಂಡು ಮನ್ನಿಸುತ್ತಿದ್ದರು. ಮಾನವರೆಲ್ಲರ ಜೀವನ ಮಣ್ಣು ಮಸಿಯಾಗಬಾರದೆಂದು ಭಾವಿಸಿ ಆ ಬಗೆಯ ಮಹಾಕ್ರಿಯಾ ಶೀಲರಾಗಿದ್ದರು. ಅವರ ಆಕರ್ಷಣೆಗೆ ಒಳಗಾದವರೆಲ್ಲರನ್ನು ಸಮಾನತೆಗೆ ತಂದರು ; ಸಮಾನ ಸಂಸ್ಕಾರವನ್ನು ಅನುಗ್ರಹಿಸಿದರು, ಮಾನವರನ್ನಾಗಿಸಿದರು. ತಾವು ಬರೀ ಉಪ್ಪು ನೀರಿನ ಹನಿಯೊಂದನ್ನು ಪ್ರಸಾದವನ್ನಾಗಿ ಆರೋಗಿಸಿ, ಉಳಿದವರಿಗೆಲ್ಲ ಆಹಾರ ಸಮೃದ್ಧಿಯನ್ನೊದಗಿಸಿದ ಮಹಾತ್ಯಾಗ ಮೂರ್ತಿಗಳು ಮಹಾಯೋಗ ಮೂರ್ತಿಗಳು. ಮತ್ತು ಮಹಾ ಪ್ರಸಾದಿಕರು, ಅನ್ನ ವಸತಿಗಳನ್ನು ಅನಾಥರಿಗೆ ಒದಗಿಸುವುದರಲ್ಲಿ ಅವರೇ ಅಗ್ರಗಣ್ಯರು ; ಅಸೀಮರು. ಮಾನವೀಯ ಪ್ರಗತಿಪರ ಎಲ್ಲ

ಪ್ರಣಾಳಿಕೆಗಳನ್ನೂ ಅವರು ತಮ್ಮ ಜೀವನದಲ್ಲಿ ಜನಜೀವನದಲ್ಲಿ, ಅಳವಡಿಸಿ ಕೊಂಡಿದ್ದರು. ನೂರಾರು ಜನ ರಾಜರು ಶಿಷ್ಯರಾಗಿದ್ದರೂ ಅವರಿಂದ ಯಾವ ಪ್ರತಿಫಲಗಳನ್ನು ಅಂದರೆ ಧನ ಕನಕಾದಿಗಳನ್ನು ಅರ್ಥ ಅಧಿಕಾರಗಳನ್ನು ಅಪೇಕ್ಷಿ ಸಿದವರಲ್ಲ. ತಮ್ಮೊಡನೆ ಹತ್ತಾರು ಸಾವಿರ ಶಿವಾಚಾರ್ಯರಿದ್ದರೂ ಅವರಿಗಾಗಿ ರಾಜರ ಭಂಡಾರಗಳಿಂದ ಹಣವನ್ನಾಗಲಿ, ಉಡಿಗೆತೊಡಿಗೆಗಳನ್ನಾಗಲಿ ಇನ್ನೇ ನನ್ನಾಗಲಿ ಅದೆಷ್ಟೂ ಅಪೇಕ್ಷಿಸಿದವರಲ್ಲ. ಅವರಂತೆ ಅವರೊಡನಿರುವ ಸರ್ವ ಶಿವಾಚಾರ್ಯರೂ ಸತ್ಕ್ರಿಯಾಶೀಲ (ಕಾಯಕಶೀಲ)ರಾಗಿದ್ದರು. ಸರಳ ಜೀವಿ ಗಳಾಗಿದ್ದರು. ವಿಷಯ ಭೋಗಗಳಿಗೆ ಎಳಸುತ್ತಿರಲಿಲ್ಲ. ಅಂತೆಯೆ ಅವರು ಅನ್ವರ್ಥಕವಾಗಿ ಜಗದ್ಗುರುವಾಗಿದ್ದರು, ಅಸಾಧಾರಣ ಆಚಾರ್ಯರಾಗಿದ್ದರು. ಅವರ ಪ್ರತಿಯೊಂದು ದೃಕ್ಕ್ರಿಯಾರೂಪಕ್ರಾಂತಿ ವಿಶ್ವಶಾಂತಿಗೆ ವಿಶಿಷ್ಟ ಸಾಧನ ವಾಗಿದ್ದಿತು. ಅವರಲ್ಲಿ ಬೃಹತ್ತಾದ ಚಿತ್ಕಾಂತಿ ಶಾಂತಿ ದಾಂತಿಗಳು ಸಮನಿಸಿ ದ್ದವು. ಸಚ್ಚಿದಾನಂದ ಸ್ವರೂಪರು ಅವರಾಗಿದ್ದರು. ಆದರಿಂದ ಅವರನ್ನು "ಸಾಕ್ಷಾತ್ ಶಿವ" ಎಂದು ಕರೆಯುತ್ತಿದ್ದರು. ಅವರು ಕಾರುಣ್ಯಮಯ ಹೃದಯ ರಾಗಿದ್ದರು. ಸತ್ಯ ಶಿವ ಸೌಂದರ್ಯ ಸ್ವರೂಪರಾಗಿದ್ದರು. ಜಾಗತಿಕ ಜನತೆಯ ತಾಪತ್ರಯ ಭವಭಯುಗಳನ್ನು ಪರಿಹರಿಸುತ್ತಿದ್ದರು.

''ಸಮಸ್ತ ಲೋಕ ಸಂದಾಹತಾಪತ್ರಯ ಮಹಾನಲಃ
ತ್ವತ್ಪದಾಂಬುಕಣಾಸ್ವಾದಾದುಪಶಾಮ್ಯತಿ ದೇಹಿನಾಂ !
ಸಂಸಾರ ಸರ್ಪದಷ್ಟಾನಾಂ ಮೂರ್ಛಿತಾನಾಂ ಶರೀರಿಣಾಂ
ಕಟಾಕ್ಷಸ್ತವ ಕಲ್ಯಾಣಂ ಸಮುಜ್ಜೀವನ ಭೇಷಜಂ ॥''

—ಸಿ. ಶಿಖಾಮಣಿ

ಎಂದು ಅಗಸ್ತ್ಯಮಹಾಮುನಿಯು ತನ್ನ ಅಂತರಂಗವನ್ನು ತೆರೆದು ಅರ್ಥ ಪೂರ್ಣವಾಗಿ ಆದಿ ಜಗದ್ಗುರು ರೇಣುಕರ ಅಖಂಡ ಲೋಕ ಕಲ್ಯಾಣ ನಿಲವನ್ನು ನಿರೂಪಿಸಿದ್ದಾನೆ. ಸಮಸ್ತ ಲೋಕಮಾನವರ ಕಲ್ಯಾಣಕ್ಕಾಗಿ ಅವರ ಅವತಾರ ಅವರ ಕಾರುಣ್ಯ ಕಟಾಕ್ಷ ಶರೀರಗಳೆಲ್ಲರ ಸಮುಜ್ಜೀವನ ಭೇಷಜ ಅವರ ಕಾರುಣ್ಯರಸ ! ಎಲ್ಲರ ತಾಪತ್ರಯಾಗ್ನಿಯನ್ನು ಆರಿಸುವುದೇ, ಆರಿಸಿ ಆತ್ಮ ಶಾಂತಿಯನ್ನು ತರುವುದೇ ಅವರ ಆ ಪಾದಾಂಬು ಪ್ರಾಭಾವಿಕ ಶಕ್ತಿ ! ಇದರಲ್ಲಿ ಅತಿಶಯೋಕ್ತಿಯೇನಿಲ್ಲ. ಅವರ ಈ ಜಾಗತಿಕ ಮಹಿಮೆಯೇ ಅಂತಹದಾಗಿತ್ತು ಅದು ಲೋಕೋತ್ತರ ಮಹಿಮೆ.

"ರೇಣುಕೋಪಿ ಮಹಾತೇಜಾಃ ಸಂಚರನ್ ಕ್ಷಿತಿಮಂಡಲೇ
ಪ್ರಚ್ಛನ್ನಶ್ಚ ಪ್ರಕಾಶಶ್ಚ ಪರಮಾದ್ವೈತ ಭಾವತಃ ।
ಕಾಂಶ್ಚಿದ್ದೃಷ್ಟಿನಿಪಾತೇನ ಸಮಸ್ತ ಮಲಹಾರಿಣಾ
ಕೃತಾರ್ಥಯನ್ ಜನಾನ್ ಸರ್ವಾನ್ ಕೃತಿನಃ ವಿಕರ್ಮಿಣಃ ।
ದರ್ಶಯಿತ್ವಾ ನಿಜಾಧಿಕ್ಯಂ ಶಿವ ದರ್ಶನ ಲಾಲಸಃ
ಖಂಡಯಿತ್ವಾ ದುರಾಚಾರನ್ ಪಾಷಂಡಾನ್ ಭಿನ್ನದರ್ಶನಾನ್ ।
ಯಂತ್ರ ತಂತ್ರ ಕಲಾಸಿದ್ಧಾನ್ ವಿಮಲಾನ್ ಸಿದ್ಧಮಂಡಲಾನ್
ವಿಜಿತ್ಯ ಸ್ವಪ್ರಭಾವೇನ ಸ್ಥಾಪಯಿತ್ವಾ ಶಿವಾಗಮಾನ್
ಆಜಗಾಮ ನಿಜಾವಾಸಂ ಕುಲ್ಯ ಪಾಕಾಭಿಧಂ ಸ್ಥಲಂ ॥"

....ಸಿ. ಶಿಖಾಮಣಿ

ಆ ಆದಿರೇಣುಕಶಿವಾಚಾರ್ಯರ ವ್ಯಕ್ತಿತ್ವ ವೈವಿಧ್ಯಮಯ. ಒಬ್ಬೊಬ್ಬರ ಮೇಲೆ ಒಂದೊಂದು ಬಗೆಯ ಪರಿಣಾಮವುಂಟಾಗುತ್ತಿತ್ತು. ಇಲ್ಲಿ ಈ ಉಕ್ತಿಗಳಲ್ಲಿ ಉತ್ತಮವಾಗಿ ನಿರ್ದಿಷ್ಟವಾಗಿದೆ. ಜಗದ್ಗುರು ಆದಿ ರೇಣುಕಶಿವಾಚಾರ್ಯರ ವಿಶ್ವಮಾನವ ವ್ಯಕ್ತಿತ್ವದೊಡನೆ ಶಿವಾದ್ವೈತ ಸಿದ್ಧಾಂತ ಸ್ಥಾಪಕತ್ವವೂ ಶಿವಾಗಮ ಪ್ರಸಾರವೂ ಉಕ್ತವಾಗಿವೆ. ಅವರು ಸದಾ ಸಂಚರಣ ಶೀಲರು. ಸರ್ವೋದ್ಧರಣಶೀಲರು. ಸ್ಥಿರವಾಗಿ ಸುಖವಾಗಿ ಒಂದು ಕಡೆಗೆ ನೆಲಸಿದವರಲ್ಲ. ಮಾನವೋದ್ಧಾರ ಮಣಿಹ ಅವರದಾಗಿತ್ತು. ಅವರಿಗಿರಲಿಲ್ಲ ಒಂದೆಡೆಯಲ್ಲಿ ಇರುವ ಮನ. ವೇಳೆ ವ್ಯರ್ಥ ಮಾಡುವ ಮನ ; ಇದುವೇ ಅವರ ಘನ ; ಅವರ ದಿವ್ಯ ಧೋರಣ ಅವರಿಗಿತ್ತು. ಅಂತಹ ಮಹಾತೇಜ, ಮಹಾಸತ್ವ, ಆ ತೇಜೋರಾಶಿಯಿಂದ ಅವರ ಆ ಘನತೆ ಘನವಾಗಿತ್ತು, ಪ್ರಭಾವ ಪ್ರಭೂತವಾಗಿತ್ತು. ಗಾಂಭೀರ್ಯ ಗೌರವಗಳಿಗೆ ಕೊರತೆಯಿರಲಿಲ್ಲ.

ಅವರು ತಮ್ಮ ಜೀವನದಲ್ಲಿ ಸುತ್ತಿದ್ದು ಅಷ್ಟಿಷ್ಟಲ್ಲ, ಇಡೀ ಕ್ಷಿತಿಮಂಡಲವನ್ನೇ ಸುತ್ತಿದರು, ಕ್ಷಿತಿಜದಲ್ಲಿಯೂ ಸುತ್ತಿದರು. ಆದರೆ ಅವರಲ್ಲಿ ಬಳಲಿಕೆ ತೊಳಲಿಕೆಗಳಾಗಲಿ ಭೇದಭಾವವಾಗಲಿ ಇರಲಿಲ್ಲ. ಸರ್ವ ಸಮತ್ವ ಭಾವವಿದ್ದಿತು. ಸಮವರ್ತನವೂ ಇದ್ದಿತು. ಎಲ್ಲರನ್ನೂ ಪರಮನಂತೆ ಕಾಣುವ ದಿವ್ಯದೃಷ್ಟಿ ! ಪರಮಾದ್ವೈತಭಾವ ! ! ಯಾರು ಯಾರು ಹೇಗೆ ಹೇಗೆ ಇದ್ದರೋ ಅವರನ್ನು ಹಾಗೆ ಹಾಗೆ ಉದ್ಧರಿಸಿದರು. ನೋಟಮಾತ್ರದಿಂದ ಕೆಲವರನ್ನು, ಶಿವಾದ್ವೈತ

ಸಿದ್ಧಾಂತ ಮಂಡನದಿಂದ ಕೆಲವರನ್ನು, ಅಭಿಮರ್ಶನದಿಂದ ಅನೇಕರನ್ನು, ಸಹ ವಾಸದಿಂದ ಕೆಲವರನ್ನು, ದೀಕ್ಷಾಸಂಸ್ಕಾರ ಕರುಣಿಸಿ ಕೆಲವರನ್ನು ಕೃತಾರ್ಥನ್ನಾಗಿ ಸಿದರು. ಕರ್ಮಿಗಳನ್ನು ಕ್ರಿಯಾಶೀಲರನ್ನಾಗಿಸಿದರು. ಅಜ್ಞಾನಿಗಳನ್ನು ಜ್ಞಾನಿ ಗಳನ್ನಾಗಿಸಿದರು. ದೀನ ದರಿದ್ರರನ್ನು ಕುಲವಿಲ್ಲದವರನ್ನು ದುರಾಚಾರಿಗಳನ್ನು ಪಾಷಂಡಿಗಳನ್ನು ಭಿನ್ನಭಾವಿಗಳನ್ನು ಅಂದರೆ ಮಾನವ ಮಾನವರಲ್ಲಿ ಮೇಲು ಕೀಳುಗಳ ಕಲ್ಪಿಸುವವರನ್ನು, ಯಂತ್ರ-ತಂತ್ರ-ಮಂತ್ರ ಮಾಟಗಳನ್ನು ಮಾಡುವವರನ್ನು ತಮ್ಮ ಪ್ರಭಾವದಿಂದ ಗೆದ್ದು ಉದ್ಧರಿಸಿದರು. ಶಿವಾಚಾರ ಗಳನ್ನು ಪ್ರತಿಪಾದಿಸುವ ಶಿವಾಗಮಗಳನ್ನು ಸ್ಥಾಪಿಸಿದರು. ಹೀಗಾಗಿ ಗುರು ತತ್ವದ ಘನತೆಯನ್ನು ಅವರು ಉಳಿಸಿ ಬೆಳಸಿದರು. ಸರ್ವರಲ್ಲಿ ಸಮತೆಯನ್ನು ಸಾರಿದರು. ಅವರು ಮಾನವರಲ್ಲಿದ್ದ ಅಜ್ಞಾನವನ್ನು ತೊಲಗಿಸಿ ಮಾನವ ಗುರು ವಾದರು. ಅನಾಚಾರಗಳನ್ನು ತೊಲಗಿಸಿ ಜಗದಾಚಾರ್ಯರಾದರು.

### ಭಾರತೀಯ ಕ್ರಾಂತಿಯ ಭಗವಂತರು ಆದಿರೇಣುಕರು.

ರಾಮ ರಾವಣರ ಕರಾಳ ಕಾಳಗದಿಂದ ಅಂದು ಭಾರತೀಯರ ಬಾಳು- ಬದುಕು ಬರಡಾಗಿತ್ತು. ಹೊಟ್ಟೆಗಿಲ್ಲದೆ ಬಟ್ಟೆಗಿಲ್ಲದೆ ಭಾರತದ ಜನತೆ ಬೆಂದು ಹೋಗಿತ್ತು. ಆಹಾರವೇ ಪ್ರಾಣ ಅದಿಲ್ಲದ ಬಳಿಕ ಅಂದಿನ ಜನತೆ ಜೀವಂತ ಶವದಂತಿತ್ತು. ಅಂದಿನ ಆ ಯುದ್ಧ ಇನ್ನಾವ ಸದುದ್ದೇಶಕ್ಕಲ್ಲ. ಹೆಣ್ಣಿಗಾಗಿ ಯೆಂದು ಹೇಳೋಣವೆ ? ಹೆಣ್ಣಿನ ನೆಪದಲ್ಲಿ ದಾಕ್ಷಿಣಾತ್ಯರಾದ ದ್ರಾವಿಡರ ಮೇಲಿನದಾಗಿತ್ತು. ಇಲ್ಲವಾದರೆ ಕನ್ನಡಿಗರು ಕೋತಿಗಳೇಕಾಗಬೇಕು ? ತಮಿ ಳರು ರಕ್ಕಸರೇಗಾಕಬೇಕು ? ರಾವಣ (ಲಂಕೇಶ) ಮಾಡಿದ ತಪ್ಪೇನು ? ರಾಮ ಮಾಡಿದ ಒಪ್ಪೇನು ? ಇವೆಲ್ಲದರ ವಿಮರ್ಶೆ ಈಗ ಅನವಸರ. ಆದರೆ ಅದ ರಿಂದಾದ ಅನರ್ಥ ಅಸತ್ಯವೇನಲ್ಲ. ಜನತೆ ಜೀವನದ ಹಲವು ಹತ್ತು ಸಮಸ್ಯೆ ಗಳಲ್ಲಿ ದಿಕ್ಕುಗಾಣದಂತಿತ್ತು. ಭವಿಷ್ಯ ಜೀವನವನ್ನು ನಿತ್ತರಿಸದಂತ್ತಿತ್ತು ನಿಲುಕ ದಂತಿತ್ತು.

ಆಗ ರೇಣುಕ ಭಗವತ್ಪಾದರು ಭಾರತೀಯರ ಬಾಳಿನ ಸಮಸ್ಯೆಗಳನ್ನೆಲ್ಲ ಪರಿಹರಿಸಲು ಒಂದು ಬಹುಮುಖದ ಆಂದೋಲನವನ್ನೇ ಆರಂಭಿಸುವರು ದೇಶದಾದ್ಯಂತ ಧರ್ಮದಾಸೋಹಗಳನ್ನೇರ್ಪಡಿಸಿದರು. ಸರ್ವರು ಕ್ರಿಯಾಶೀಲತ

ಯನ್ನು ಕೈಗೊಳ್ಳುವಂತೆಸಗಿದರು. ಬಳಿಕ ಅಂದರೆ ಆಹಾರದ ಕೊರತೆ. ಎಲ್ಲೆಲ್ಲಿಯೂ ತೀರಿ, ಆರ್ಥಿಕ ಸ್ವಾವಲಂಬಿಗಳಾದ ಮೇಲೆ ಚಿಚ್ಛಕ್ತಿ ಜ್ಞಾನನಿಲಯಗಳ ಸಂಸ್ಥಾಪನೆಯನ್ನು ಮಾಡಿ ಮಾನವೀಯತೆಯ ಮೌಲ್ಯದ ಅರಿವನ್ನುಂಟು ಮಾಡಿದರು. ಸರ್ವರಲ್ಲಿ ಶಾಂತಿ ಸಮಾಧಾನಗಳನ್ನುಂಟುಮಾಡಿದರು. ಹೊನ್ನು ಹೆಣ್ಣು ಮಣ್ಣು ಇವುಗಳ ಭ್ರಾಂತಿಯನ್ನು ಬಿಡಿಸಿದರು. ಸತ್ ಚಿತ್ ಆನಂದಗಳ ಸಾಧನೆಯಲ್ಲಿ ಸಂಪ್ರೀತಿಯನ್ನು ಹುಟ್ಟಿಸಿ ಬೆಳಸಿದರು. ಭಾಗ್ಯ ಬೇಕು ; ಆದರೆ ಬರೀ ಭೋಗಕ್ಕಾಗಿಯಲ್ಲ; ತ್ಯಾಗ ಯೋಗಗಳಿಗಾಗಿ ಬೇಕು; ಸಂಸ್ಕೃತಿ ಸಾಹಿತ್ಯಗಳಿಗಾಗಿ ಬೇಕು ಸದಾಚಾರ ಸದ್ವಿಚಾರಗಳಿಂದ, ಶಾಂತಿ ಸಮಾಧಾನಗಳಿಂದ, ಸಮತೆ ಸೌಹಾರ್ದ್ರತೆಗಳಿಂದ, ಸಮನ್ವಯ ಸದುವಿನಯಗಳಿಂದ ಬಾಳಿ ಬದುಕಲು ಬೇಕು–ಎಂದು ಬೋಧಿಸಿದರು. ಹೊನ್ನು ಹೆಣ್ಣು ಮಣ್ಣುಗಳಿಗಾಗಿ ಮಾನವೀಯತೆಯನ್ನು ಮಣ್ಣು ಪಾಲು ಮಾಡಬಾರದೆಂಬ ಮನದರಿಮೆಯೊಡನೆ ಜನರಲ್ಲಿ ಜಾಗ್ರತಿಯನ್ನು ಜ್ವಲಿಸಿದರು. ಧರ್ಮ ಕರ್ಮಗಳ ನೆಪದಲ್ಲಿ ಮುಗ್ಧ ಜನರ ಶೋಷಣ ನಡೆಯಬಾರದು. ಘರ್ಷಣಕ್ಕೊಳಗಾಗಬಾರದು ಮಾರಣಕ್ಕೊಳಗಾಗಬೇಕೆಂಬ ಮಾತು ಇಂಬಿಲ್ಲದೆ ದೂರದಲ್ಲಿಯೇ ಉಳಿಯಿತು. ಮೇಲು ಕೀಳು, ಬಡವ–ಬಲ್ಲಿದ, ಸ್ಪೃಶ್ಯಾಸ್ಪೃಶ್ಯಗಳಿಗೆ ಯಾರಲ್ಲಿಯೂ ಇಂಬಿರಬಾರದೆಂಬುದನ್ನು ಮೊದಲು ತಾವು ಮಾಡಿ ತೋರಿಸಿದರು. ಅಕ್ರಿಯೆ ಅಜ್ಞಾನ ಅಭಾವಗಳಿಗೆ ಕಾರಣಗಳು. ಕಾರಣ ಅವೆರಡನ್ನೂ ಶ್ರೀ ರೇಣುಕಶಿವಾಚಾರ್ಯರು ಜನಜೀವನದಿಂದ ತೊಡೆದು ಹಾಕುವ ಸಫಲ ಕ್ರಾಂತಿಯನ್ನೆಸಗಿದರು. ರಾಗ ದ್ವೇಷಗಳಿರಬಾರದು. ಇದ್ದರೆ ಮದ ಮತ್ಸರಗಳಿಗಿಂಬಾಗುತ್ತದೆಯೆಂದು ಬೋಧಿಸಿದರು.

ಜಗದ್ಗುರು ಆದಿರೇಣುಕಶಿವಾಚಾರ್ಯರದು ಅನುಪಮ ಪ್ರಭಾವ, ಅಪ್ರತಿಮ ಪ್ರತಿಭೆ, ಸ್ವರೂಪಾನುಭವ. ಹೆರೆಹಿಂಗದ ಹಿರಿಮೆ, ಹೆಣಗಾಡದ ಸಹಜ ಶಕ್ತಿ. ಅಚ್ಚಳಿಯದ ದೀಪ್ತಿ. ಮಸಣಿಸದ ವರ್ಚಸ್ಸು, ಶ್ರೇಯಸ್ಸು. ವಿಫಲವಾಗದ ಯಶಸ್ಸು. ಅವರ ಆ ಸಮಕಾಲೀನದಲ್ಲಿಯೆ ಅಲ್ಲದೆ, ಅವರಿಂದೀಚೆಗೆ ಅವರ ಆ ಪ್ರಭೂತ ಪ್ರಭಾವ ತಗ್ಗಲಿಲ್ಲ, ಕುಗ್ಗಲಿಲ್ಲ. ಪಡಿಯಾಗಿ ಬಿತ್ತರಗೊಂಡಿತು, ಎತ್ತರಕ್ಕೇರಿತು. ಭಾರತದಾಚೆ ಲಂಕೆಯವರೆವಿಗೂ ಹಬ್ಬಿತು.

'ಸಾಕ್ಷಾನ್ಮಹೇಶ್ವರ' ಸಾಕ್ಷಾಚ್ಛಿವ' ಎಂದೆನ್ನುವಷ್ಟು ಎತ್ತರಕ್ಕೇರಿತು. ಆ ಘನ ಗೌರವವನ್ನು ಪಡೆದವರು ಅಂದಿನಿಂದ ಇಂದಿನವರೆಗೂ ಬೇರೊಬ್ಬರಿಲ್ಲ. 'ಸಮಸ್ತ ವೇದ ಶಾಸ್ತ್ರಾದಿ ವ್ಯವಹಾರ ಧುರಂಧರ'ರಾಗಿ ಬಾಳಿದರು, ಬೆಳಗಿದರು. 'ಶಿವಜ್ಞಾನ ಮಹೋದಧಿ' ಶಿವಯೋಗ ವಿಶೇಷಜ್ಞ' ಎಂದೆನಿಸಿಕೊಂಡರು. 'ವಿದ್ಯಾಚಾರ ಪ್ರಕಾಶಕ'ರಾಗಿ ಪ್ರಖ್ಯಾತರಾದರು. 'ಸರ್ವಾನುಗ್ರಾಹಕ'ರಾಗಿ ವಿಶ್ವಗುರುವಾದರು. ಎಲ್ಲಕ್ಕೂ ಮಿಗಿಲಾಗಿ 'ಶಿವಾದ್ವೈತ ಪರಸಿದ್ಧಾಂತ ಸ್ಥಾಪಕತ್ವ'ಕ್ಕೆ ಸಲ್ಲುವವರಾದರು. ಅವರ ಆ ಸಯ್ಪಿನ ನಲ್ವೆಸರನ್ನು ಸ್ತ್ರೀ–ಪುರುಷರೆಲ್ಲರಿಗೂ ಇಡುವ ಸತ್ ಸಂಪ್ರದಾಯ–ಸಮಭಾವಗಳು ಸನಾತನ ಕಾಲದಿಂದಲೂ ಸಾಗಿ ಬಂದಿದೆ. ಅವರ ಆ ಸಂಘ ಕ್ರಾಂತಿಯ ಪ್ರಭಾವ ಬೌದ್ಧ ಸಮಾಜದ ಮೇಲೆ ಬಿದ್ದಿದೆ.

ಶಿವಾದ್ವೈತ-ಸಿದ್ಧಾಂತದ ತುಂಗೋತ್ರಿ ಅವರು. ಅಧರಿಂದ ಆರಂಭವಾಯಿತು ಶಿವಾದ್ವೈತ ಸಿದ್ಧಾಂತ ! ಷಟಸ್ಥಲ ಸಿದ್ಧಾಂತ !! ದಾರ್ಶನಿಕವಾಗಿ ಸಾಂಖ್ಯ ಯೋಗಾದಿ ಷಡ್ ದರ್ಶನಗಳನ್ನು ನಿರಸನಗೊಳಿಸಿ ಶಿವಾದ್ವೈತ ದರ್ಶನವನ್ನು ಮೊದಲು ಮಂಡಿಸುವರು. ಮಠ, ದಾಸೋಹ, ಕ್ರಿಯಾಶೀಲತೆ, ಸ್ತ್ರೀಯರ ಮತ್ತು ಅಸ್ಪೃಶ್ಯರ ಉದ್ಧಾರ, ಮೊದಲಾದ ವೀರಶೈವ ಸಂಸ್ಕೃತಿಗೆ ಕ್ರಾಂತಿಗೆ ನಾಂದಿ ಹಾಡಿ ನಂದಾದೀಪವಾದರು, ನಿರಾತಂಕವಾಗಿ ಮುನ್ನಡೆಸಿದರು. ಅವರ ಆ ಸೈದ್ಧಾಂತಿಕ ಕ್ರಾಂತಿ ಸಾರ್ವಜನಕರಿಗೆ ಆಕಷಕವಾಗಿ, ಪರಮ ಪರಿಣಾಮವನ್ನುಂಟು ಮಾಡಿತು. ಅವರ ಆ ತತ್ತ್ವಾನುಭವವು ಜಾಗತಿಕ ಜೀವನಕ್ಕೆ ಹೊರತಾಗಿರಲಿಲ್ಲ. ಬ್ರಹ್ಮಾಂಡ-ಪಿಂಡಾಂಡಗಳೆರಡನ್ನು ಸಮನ್ವಯೀಕರಿಸಿದೆ. ಸಮಷ್ಟಿಯಲ್ಲಿ ವ್ಯಷ್ಟಿ, ವ್ಯಷ್ಟಿಯಲ್ಲಿ ಸಮಷ್ಟಿ ಹಾಸುಹೊಕ್ಕಾಗಿವೆ ಎಂಬುದನ್ನು ಪ್ರಥಮದಲ್ಲಿ ಪ್ರತಿ–ಪಾದಿಸಿದರು. 36 ತತ್ತ್ವಗಳನ್ನುಳಿದು ಯಾವುದು ಈ ಜಗದಲ್ಲಿಲ್ಲವೆಂಬ ಸ್ವರೂಪಾನುಭವ ಆದಿರೇಣುಕ ಶಿವಾಚಾರ್ಯರದಾಗಿದೆ. ರೂಪವನ್ನು ಸ್ವರೂಪದಲ್ಲಿ ಸಮರಸಗೊಳಿಸುವ ಸಿದ್ಧಾಂತ ಅವರದಾಗಿದೆ. ಪ್ರಪಂಚವನ್ನು ಪ್ರಸಾದವನ್ನಾಗಿಸುವ ಪ್ರತಿಪಾದನೆ ಅವರದು. ಅದರಿಂದಾಗಿ ಅದನ್ನು ಅಂದೇ ಭೂಚರರು–ಖೇಚರರು ಎಲ್ಲರೂ ಒಪ್ಪಿಕೊಂಡರು :

"ತಸ್ಮಾತ್ ಸರ್ವ ಪ್ರಯತ್ನೇನ ಆಚಾರಂ ರೇಣುಕಾನ್ವಿತಂ ।
ಗಾಯಂತೇ ಕಿನ್ನರಾಃ ಸರ್ವೇ ತಂತ್ರಿಗಾನ ಸಮನ್ವಿತಾಃ ॥"

— ವೀರಾಗಮ

ಅವರ ಆ ಸೈದ್ಧಾಂತಕ ಪ್ರಭಾವ, ಆಚಾರ ವಿಚಾರ ಪ್ರಭಾವ ಖೇಚರರ ಮೇಲೆ ಖಚಿತವಾಗಿ ಉಂಟಾಗಿ ಕಿನ್ನರರು ಅವರ ಆ ಆಚಾರಾದಿಗಳನ್ನು ಚೆನ್ನಾಗಿ ಹಾಡಿ ಹೊಗಳಿದರು. ತಂತ್ರೀವಾದ್ಯದೊಡನೆ ತುತಿಸಿದರು. ತುಳಿಲ್ಗೈದರು.

"ಭೂರುದ್ರ ಯೋಗಿನಾಂ ಸ್ಥಾನಷಟ್ಕಂ ಷಟ್ಕರ್ಮ ವರ್ಜಿತಂ ।
ಪ್ರಪೂಜಯಂತಿ ಸತತಂ ತ ಏತೇ ಮಮ ಪೂಜಿತಾಃ ॥"

— ವೀರಾಗಮ.

ಕರ್ಮ ರಹಿತವೂ ಕ್ರಿಯಾಭರಿತವೂ ಆದ ಷಟಸ್ಥಲ ನಿಷ್ಠರು ನನಗೂ (ಶಿವನಿಗೂ) ಪೂಜ್ಯರು-ಎಂದು ಶಿವನ ನಿರೂಪಣೆ! ಷಟ್‌ಸ್ಥಲವು ಭೂರುದ್ರಯೋಗಿಗಳಿಗೆ ಸಂಬಂಧಿಸಿದುದು. ಷಟ್‌ಸ್ಥಲಿಗಳು ಸಂತತ ಸಂಪೂಜ್ಯರು. ಷಟ್‌ಸ್ಥಲ ನಿರತ ಭೂರುದ್ರ ಯೋಗಿಗಳು ವಿಶ್ವಕ್ಕೆಲ್ಲ ಬೇಕಾದವರು. ಅವರು ಆ ವ್ಯಕ್ತಿತ್ವ ಸೀಮಿತವಾಗಿರಲಿಲ್ಲ. ಅವರಿಗೆ ಪೂರ್ವಾಶ್ರಮ ನಿರಸನವಾಗಿತ್ತು. ಸಂಕುಚಿತವಾದ ಸಂಬಂಧವಿರಲಿಲ್ಲ. ಮಮಕಾರ ಅಹಂಕಾರಗಳಿರಲಿಲ್ಲ. ವಿಶ್ವ ಮಾನವರೆಲ್ಲರೂ ಶಿವಸ್ವರೂಪರು. ವಿಶ್ವವೇ ಅವರಿಗೆ ಕೈವಲ್ಯಧಾಮ. ಅದರಿಂದಾಗಿ ವೀರಶೈವಧರ್ಮವನ್ನು ವಿಶ್ವಮಾನವಧರ್ಮವನ್ನಾಗಿ ರೂಪಿಸಿದರು. ಇಹದ ಭೋಗವನ್ನು ಪರದ ಮೋಕ್ಷವನ್ನು ಪ್ರತಿ ಪಾದಿಸುವುದೇ ಶಿವಾಚಾರ್ಯರ ವಿಶಾಲ ಧ್ಯೇಯವಾಗಿತ್ತು. ಭೋಗ ವಿಷಯೇಂದ್ರಿಯ ಭೋಗವಲ್ಲ; ಲಿಂಗಪ್ರಸಾದ ಭೋಗ. ಮುಕ್ತಿ ವಿದೇಹ ಮುಕ್ತಿಯಿಲ್ಲ; ಸದೇಹ (ಪರಕಾಯ) ಜೀವನ್ಮುಕ್ತಿ. ಇದು ಶಿವಾಚಾರ್ಯರ ಅಂದಿನ ನಿಸ್ಸೀಮ ನಿರುಪಮ ನಿಲುವು. ಅವರು ಆ ನಿಲವಿನ ವ್ಯಕ್ತಿತ್ವವನ್ನು ಗಳಿಸಿ, ಪರಶಿವಾನುಭವವನ್ನು ತಮ್ಮೊಳಗೆ ಬೆಳಸಿ ಅದರ ಪರಿಣಾಮವಾಗಿ ಶಿವ–ಶಕ್ತಿ ಭೇದವಿಲ್ಲದ ಶಿವಶಕ್ತಿ ಸಮುತ್ಪನ್ನ ಪ್ರಪಂಚ ಭೇದವಿಲ್ಲದ ಪ್ರಪಂಚದಲ್ಲಿರುವ ಮಾನವರಲ್ಲಿ ಯಾವ ಭೇದವಿಲ್ಲದ ಶಿವಾದ್ವೈತ ಸಿದ್ಧಾಂತವನ್ನು ಸ್ವಾನುಭೂತಿಯಿಂದ ಸ್ಥಾಪಿಸಿ

ವಿಶ್ವವಿಭೂತಿ ಪುರುಷರಾದರು. ಶಿವಾಚಾರ್ಯರಸಿದ್ಧಾಂತ ಸರ್ವಸಮನ್ವಯವೂ ಸಾಪೇಕ್ಷವೂ ಆದ ಸಿದ್ಧಾಂತ. ಸ್ತ್ರೀಪುರುಷ ಭೇದವಿಲ್ಲದೆ ಕುಲಪಂಥ ಪಂಗಡಗಳ ಭೇದವಿಲ್ಲದೆ ಮಾನವರೆಲ್ಲರಲ್ಲಿಯೂ ಅದೇಕೆ ಪ್ರಾಣಿಗಳಲ್ಲಿಯೂ ಶಿವತತ್ವಾಭಿ ವ್ಯಕ್ತಿಯನ್ನುಂಟುಮಾಡುವ ಮತ್ತು ಶ್ರದ್ಧೆ ಶಾಂತಿ ಸಮರಸಗಳನ್ನುಂಟು ಮಾಡುವ ಮರ್ತ್ಯದ ಮಾನವರಿಗೆಲ್ಲರಿಗೂ ಬೇಕಾಗುವ ಸರ್ವಸಾರಾಯ ಸಿದ್ಧಾಂತ! ಶಕ್ತಿವಿಶಿಷ್ಟ ಶಿವತತ್ತ್ವವೇ ಅವರ ಮುಖ, ಅವರ ಹೃದಯ; ಅವರ ಚೇತನ. ಈ ಒಂದು ವಿಶಾಲವೂ ವಿಶುದ್ಧವೂ ಆದ ತಾತ್ತ್ವಿಕಾರ್ಥದಲ್ಲಿ ಅವರು ಜೀವನವನ್ನು ಕಂಡುಕೊಂಡರು. ಅದನ್ನು ಭಾರತೀಯರಿಗೆಲ್ಲರಿಗೂ ಹಂಚಲು "ಚಿಚ್ಛಕ್ತಿಜ್ಞಾನನಿಲಯ"ಗಳನ್ನು ಭಾರತಾದ್ಯಂತ ಸಂಸ್ಥಾಪಿಸಿದರು. ಆದರಿಂದ ಅವರು ಜಾಗತಿಕ ಆಚಾರ್ಯರು; ಅವರದು ಜಾಗತಿಕ ಸಿದ್ಧಾಂತ! ಭಾರತೀಯ ಭಾವಪೂರ್ಣ ಸಂಸ್ಕೃತಿಯನ್ನು ಸಂಹರಿಸಲು ಆರ್ಯರು ಸಾಹಸ ಮಾಡಿದರಾದರೂ ಅದು ಫಲಿಸಲಿಲ್ಲ. ಪುರಾತನ ದ್ರಾವಿಡ ಸಂಸ್ಕೃತಿಗೆ ನಾಂದಿಯನ್ನು ಹಾಡಿದ ರುದ್ರ-ಭದ್ರರ ಮಹಾಪಾಶುಪತ ಶಿವಾಚಾರ ವೀರಶೈವವಾಗಿ ಇಂದಿಗೂ ಮುಂದುವರಿದಿದೆ.

## ಶಿವಾಚಾರ್ಯರ ಐತಿಹಾಸಿಕ ಹೊಸಯುಗ ; ಕ್ರಾಂತಿಕಾರಿ ಚಾರಿತ್ರಿಕ ಹೊಸ ಆಯಾಮ ।

ವಿಶ್ವವಿಶಾಲ ಮನೋಭಾವವುಳ್ಳ ವಿನೂತನಕ್ರಿಯಾಶೀಲ ಕ್ರಾಂತಿಯುಳ್ಳ ಅನಾದಿ-ಆದಿ-ಆಧುನಿಕ ವೀರಶೈವ ಧರ್ಮದಲ್ಲಿ ಯುಗಪ್ರವರ್ತಕರು ಕ್ರಾಂತದರ್ಶಿ ಗಳು ಹಲವು ಹತ್ತು ಜನರು. ಅವರಲ್ಲಿ ರುದ್ರಭದ್ರರು, ರೇಣುಕದಾರುಕರು, ಘಂಟಾಕರ್ಣ-ಗಜಕರ್ಣರು ವಿಶ್ವಕರ್ಣರು ಮುಂತಾದ ಪ್ರಮುಖರು. ಲೋಕೋತ್ತರ ಮಹಾಮಣಿಹಗಳನ್ನು ಮಾಡಿ ಜನತೆಯನ್ನು ಉದ್ಧಾರ ಮಾಡಿದ ಮಹಾವಿಭೂತಿ ಪುರುಷರು.

ಅವರಲ್ಲಿ ಅನಾದಿಕಾಲದ ರುದ್ರ-ಭದ್ರರನ್ನುಳಿದರೆ, ಎರಡನೆಯದಾಗಿ ಆದಿಕಾಲದ ರೇಣುಕ-ದಾರುಕರು, ಘಂಟಾಕರ್ಣ-ಗಜಕರ್ಣರು ನಮಗೆ ಲಭ್ಯರು ಶ್ರೇಯೋಭ್ಯುದಯ ಪ್ರದಾತರು. ಅವರ ಕಾಲದಲ್ಲಿ ಶಿವಾಚಾರ್ಯ ತಿಂಥಿಣಿ ಹೆಚ್ಚಿತು. ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಬೆಳೆಯಿತು.

"ಚತುರ್ದಶ ಸಹಸ್ರಂ ಹಿ ಕೈಲಾಸಾವರಣಾಧಿಪಾಃ ।
ಮತಪ್ರವರ್ತಕಾಃ ಸರ್ವೇ ಗುರುಪೀಠಾಧಿರೋಹಿಣಃ ॥"-ಕ್ರಿಯಾಸಾರ

ಎಂಬೀ ಮಾತು ಸತ್ಯಸಾಕ್ಷಿಯಾಗಿ ನಿಂತಿದೆ. ಅವರಲ್ಲಿ ಹಲವಾರು ಜನರ ನಾಮನಿರ್ದೇಶಗಳಿವೆಯಾದರೂ ಅವರೆಲ್ಲರ ಚಾರಿತ್ರ ಮಾತ್ರ ಸಿಕ್ಕದಂತಿದೆ. ಸಂಶೋಧನ ಸಾಗಿದರೆ ಆಶಾಕಿರಣ ಮೂಡಿಬಾರದಿರದು.

ಶಿವಾಚಾರ್ಯರ ಸನಾತನ ಸಾಹಿತ್ಯ ಶಿವಾಗಮ ಶಿವಾಚಾರ್ಯರು ತಂತಮ್ಮ ನಾಮ ನಿರ್ದೇಶವಿಲ್ಲದೆ ಶಿವಾಗಮಗಳನ್ನು ವಿಪುಲಾಗಿ ಸೃಜಿಸಿದರು. ವೈವಿಧ್ಯ ಮಯವಾಗಿ ರೂಪಿಸಿದರು. ಅವರೆಲ್ಲರ ಚಾರಿತ್ರಗಂಗೆ ಗುಪ್ತಗಾಮಿನಿಯಾಗಿದೆ.

ಸಹಸ್ರ ಸಹಸ್ರಶಿವಾಚಾರ್ಯರ ಸಂದೋಹಕ್ಕೆಲ್ಲ ಪ್ರಮುಖರು ಜಗದ್ಗುರು ಆದಿರೇಣುಕರು, ಅಂತೆಯೇ ವೀರಾಗಮ ಹೀಗೆ ಹೇಳಿದೆ.

''ರೇಣುಕಂ ದೇವಮಾರಾಧ್ಯಂ ತತ್ವಪಾರಗಂ ।
ಆರಾಧ್ಯಂ ಜಂಗಮಾನಾಂ ಚ ಕೀರ್ತನಾದ್ವಸುಧಾತಲೇ ॥
ಶ್ರಿಯಂ ಲಭಂತೇ ಯೇ ಚಾನ್ಯೇ ಮಾನವಾಃ ಪೂರ್ವವಾಸನಾತ್ ॥
ವಿಶ್ವಾನಂದಂ ವಿರೂಪಾಕ್ಷಂ ರೇಣುಕಂ ಗುರುಸೇವಿಕಂ ॥
ಆರಾಧ್ಯಸ್ಥಾನ ಸಂಯುಕ್ತಂ ದೀಕ್ಷಾಕರ್ಮ ವಿಶಾರದಂ ।
ಊರ್ಧ್ವರೇತಂ ವಿಶಾಲಾಕ್ಷಂ ಗುರುಂ ಶಾಂತಂ ತಪೋನಿಧಿಂ॥"

ರೇಣುಕ ಶಿವಾಚಾರ್ಯರು ದೇವ-ಮಾನವ ವಂದಿತರು; ಸರ್ವಶಿವಾಚಾರ್ಯ ಸೇವಿತರು. ಜಂಗಮರಿಗೆ ವಂದ್ಯರು. ವಿಶ್ವವಂದ್ಯರು ಅವರನ್ನು ಆರಾಧಿಸಿ ಶ್ರೀ-ಶ್ರೇಯಗಳೆರಡನ್ನು ಮಾನವರು ಮೈಗೂಡಿಸಿಕೊಳ್ಳುತ್ತಿದ್ದರು. ವಿಶ್ವಾನಂದ ತುಂದಿಲನು 'ವಿಶ್ವಾನಂದ' ಪದ ವಿಶಿಷ್ಟ ವಿಶಾಲ ಧ್ವನಿಯುಳ್ಳ ದಾಗಿದೆ. ದೀಕ್ಷಾಕ್ರಿಯೆಯಲ್ಲಿ ವಿಶೇಷ ವಿಶಾರದರು. ಊರ್ಧ್ವರೇತಸ್ಕರು ಅಂದರೆ ವಿಜಿತೇಂದ್ರಿಯರು ; ಉನ್ಮನಿಗಳು ವಿಶಾಲದೃಷ್ಟಿಯುಳ್ಳವರು. ಶಾಂತರು. ತಪಸ್ವಿಗಳು. ಗುರುತೇಜಸ್ವಿಗಳು. ಇಂತವರ ಚಾರಿತ್ರ ಗ್ರಂಥಗಳ ಅಭಾವ ಈಚೆಗೆ ನಮಗೆ ಇವರ ಚಾರಿತ್ರಕ ಘಟನೆಗಳುಳ್ಳ ವೀರಾಗಮದ ಉತ್ತರಭಾಗ ಸಿಕ್ಕಿದೆ. ಹನ್ನೆರಡು ಸಾವಿರ ಶ್ಲೋಕಗಳುಳ್ಳ ಉತ್ತರಭಾಗದಲ್ಲಿ ೩೧೭೬ ಶ್ಲೋಕಗಳುಳ್ಳ ಹಸ್ತಪ್ರತಿ ದೊರೆತಿದೆ, ಇದರಲ್ಲಿ ಆದಿರೇಣುಕ ಶಿವಾಚಾರ್ಯರ

ಹಲವಾರು ಐತಿಹಾಸಿಕ ಘಟನೆಗಳು ಚಿತ್ರಿತವಾಗಿವೆ. ಆಧುನಿಕ ಶ್ವೇತಾಚಾರ್ಯ ಪಂಡಿತಾರಾಧ್ಯ (೬ ಅಥವಾ ೭ನೇ ಶತಮಾನ), ವೀರಶೈವಶಿಖಾರತ್ನ ಸಿದ್ಧನಾಥ ಶಿವಾಚಾರ್ಯ, ಮಹಾವೀರಶೈವಧರ್ಮಮಾರ್ಗ ಪ್ರವರ್ತಕ ಮತ್ತು ಚಿದಾನಂದ ಪರಾಕಾಶ ಶಿವಾನುಭವಯೋಗಿ–ಶಿವಯೋಗಿ ಶಿವಾಚಾರ್ಯ. ಸೊಳ್ಳುಡಿಕಾರ ಸಿದ್ಧಮಲ್ಲಶಿವಚಾರ್ಯ, ಕಾಶ್ಮೀರದವರೆವಿಗೂ ವೀರಶೈವವನ್ನು ಹಬ್ಬಿಸಿದ ವಿರೂಪಾಕ್ಷ ದೇಶಿಕೇಂದ್ರ, ಶ್ರೀಶೈಲದಲ್ಲಿ ಮುಮ್ಮೊದಲು ಶಿವಾನುಭವ ಮಂಟಪ ಸ್ಥಾಪಿಸಿ, ಹದಿನೆಂಟು ಕುಲಗಳಿಗೆ ಸಂಸ್ಕಾರಗೊಳಿಸಿ ವೀರಶೈವರನ್ನಾಗಿಸಿದ ಶ್ರೀ ಚಂದ್ರಗುಂಡಶಿವಾಚಾರ್ಯ, ಸೊಳ್ಳುಡಿಗಾರ ಜೈನರನ್ನು ಜಯಿಸುವ ಅದ್ಭುತ ಕ್ರಾಂತಿಯನ್ನೆಸಗಿ ತವನಿಧಿ ಪಡೆದ ದಾಸಮಯ್ಯ, ಹನ್ನೆರಡುನೂರುಕನ್ನೆಯರ ವಧೆಯನ್ನು ನಿಲ್ಲಿಸಿ, ಜಂಗಣಾಗಿಲ ಮಂಟಪಸ್ಥಾಪಿಸಿದ ರೇವಣಸಿದ್ಧಶಿವಾಚಾರ್ಯ, ನಿವ್ನೋದ್ಧಾರಿ ಉರಿಲಿಂಗ ಶಿವಾಚಾರ್ಯ, ವರ್ಣಕ್ರಾಂತಿಯನೆಸಗಿದ ಬಸವಣ್ಣ ಇವರೆಲ್ಲರ ಕ್ರಾಂತಿಗಳಿಗೆ ಆಧಾರವಾಗಿ ನಿಲ್ಲುವನೀಳ ನಿಲವುಳ್ಳ ಕ್ರಾಂತಿಗಳು ಆದಿರೇಣುಕಶಿವಾಚಾರ್ಯರಿಂದ ನಡೆದು ಹೋಗಿವೆ. ಇದೊಂದು ಅತ್ಯದ್ಭುತವಾದ ಅಭಿಮಾನದ ಸಂಗತಿ ಯಾಗಿದೆ. ಶಿವಾಚಾರ್ಯರ ಚಾರಿತ್ರ ಕ್ಷೇತ್ರದಲ್ಲಿ ಐತಿಹಾಸಿಕಯುಗ ಹೊಮ್ಮೊಡಿ ಹೊಂಬೆಳಗು ಬಂದಂತಾಗಿದೆ. ಪುರಾತನತೆಯು ಹೊಸ ಆಯಾಮ ಆಲೋಕನೀಯವಾಗಿದೆ. ಅಂದಿನ ವೀರಶೈವ ಸಮಾಜವಾದ ವಿಶ್ವಕ್ಕೆ ಆದರ್ಶ ನೀಯವಾಗಿತ್ತು; ಆಗಿದೆ. ಎಲ್ಲರಲ್ಲಿನ ದಾರಿದ್ರ್ಯವಳಿದು, ಉತ್ತಮ ಉದ್ಯಮ ಶೀಲರಾಗಿ ಶಿವಜ್ಞಾನಿಗಳಾಗಿ ಸಹಜೀವಿಗಳಾಗುವಂತೆ ಮಾಡಿದ ಶ್ರೀರೇಣುಕ ಶಿವಾಚಾರ್ಯರ ಮಣಿಹ ಮಹತ್ವಪೂರ್ಣವಾದುದು. ಸಂವಿಧಾನ ಸಂಯೋಜನ ಶೀಲವಾದುದು,

ಶ್ರೀ ಆದಿರೇಣುಕಶಿವಾಚಾರ್ಯರು ಸರ್ವಸಮರ್ಥರು; ಸಂಪೂರ್ಣ ಪ್ರತಿಭಾ ಶಾಲಿಗಳು. ಪರಮಸಂವೇದನ ಶೀಲರು. ಪರಿಭಾವನಾಪರರು. ಧಾರ್ಮಿಕ ದಾರ್ಶನಿಕ ಸಾಮಾಜಿಕ ಆರ್ಥಿಕ ನೈತಿಕ ಆಚಾರ ವೈಚಾರಿಕ ಸಾಂಸ್ಕೃತಿಕ ಕ್ರಾಂತಿಗಳನ್ನು ಮಾಡಿದಂತೆ, ರಾಜಕೀಯರಂಗದಲ್ಲಿಯೂ ಅವರ ಉತ್ಕ್ರಾಂತಿ ಉಜ್ಜಲಗೊಂಡಿದೆ. ಒಂದು ಪ್ರಾಂತವಲ್ಲ, ಎರಡು ಪ್ರಾಂತವಲ್ಲ; ಭಾರತಾದ್ಯಂತ ಅವರು ಕ್ರಾಂತಿಕೇಂದ್ರಗಳನ್ನು ರೂಪಿಸಿದರು; ಮುಖ್ಯವಾಗಿ

ಮಾಣಿಪ್ಮತಿ, ಪುಣ್ಯವತಿ, ಶಿಖಾವತೀ ಸಂಜಿ, ಕೇತುಮಾಲ ಇವು ಅವರ ಮುಖ್ಯ ಕ್ರಾಂತಿಕೇಂದ್ರಗಳು. ಶತಾನಂದ, ವಿಡಂಬಕ, ಸತ್ಯೇಂದ್ರ, ಮಣಿಭದ್ರ, ಮೇಘನಾದ, ಸಿಂಹನಾದ ಮೊದಲಾದ ಮಹಾ ಮಹಾ ರಾಜರ ಮೇಲೆ ಆದಿ ರೇಣುಕರ ಪರಿಭಾವನ ಪ್ರಭಾವ ಚಿರಮುದ್ರಿತವಾಗಿತ್ತು. ಅವರಿಗೆಲ್ಲ ಅವರವರ ಪ್ರಜರ ಮೇಲೆ ಪ್ರೇಮ ಪರಿವರ್ಧಿಸುವಂತೆ ಮಾಡಿ, ಒಂದು ಬಗೆಯ ಪ್ರಜಾ ಪ್ರಭುತ್ವವೇರ್ಪಡುವಂತೆ ಮಾಡಿದರು. ಜನರ ಹಿತವೇ ತಮ್ಮ ಹಿತವೆಂದು ತಿಳಿಯುವಂತೆ ಮಾಡಿದರು. ರಾಜರೂ ಸಹ ಕ್ರಿಯಾಶೀಲರಾಗಿ ಆಹಾರ ಆರ್ಥಿಕಗಳ ಅಭಿವೃದ್ಧಿಯನ್ನೆಸಗುವಂತೆ, ಧರ್ಮದಾಸೋಹಗಳನ್ನು ನಡೆಸುವಂತೆ ಏರ್ಪಡಿಸಿದರು. ದಾನಧರ್ಮಶೀಲರಾಗಿ ಕ್ರಿಯಾಶೀಲರಾಗಿ ಸಾಮಾನ್ಯರಲ್ಲಿ ಸಾಮಾನ್ಯರಾಗಿ ಸಹಜೀವನ ನಡೆಸುವಂತೆಸಗಿದರು. ರಾಜರನ್ನೆಲ್ಲ ಕ್ರಿಯಾ ಶೀಲರನ್ನಾಗಿಸಿದಂತೆ ಚಿಚ್ಛಕ್ತಿಜ್ಞಾನನಿಲಯಗಳಲ್ಲಿ ನಿರಾಳವಾಗಿ ಭಾಗವಹಿಸು ವಂತೆ ಭಾವೋದ್ದೀಪನಗೊಳ್ಳುವಂತೆ ಮಾಡಿದ್ದರು. ಶಿವತತ್ತ್ವವೇ ಸಂಪೂರ್ಣ ಸತ್ವಶಾಲಿ ಮೂರ್ತಿಮತ್ತಾಗಿ ಅವತರಿಸಿದಂತಿದ್ದ ಶಿವಾಚಾರ್ಯ ಶ್ರೀ ರೇಣುಕ ಭಗವತ್ಪಾದರು ತಮಗಾಗಿ ಏನನ್ನೂ ಬಯಸಬೇಕಾಗಿರಲಿಲ್ಲ. ಸಾಧಿಸ ಬೇಕಾಗಿರಲಿಲ್ಲ. ಇದರಿಂದಾಗಿ ಅವರು ಯಾವ ಮಂತ್ರಿ ಪದವಿ ರಾಜ ಪದವಿ ಗಳಿಗಾಗಿ ಕಣ್ಣಿಡಬೇಕಾಗಿರಲಿಲ್ಲ, ಕೈಯೊಡ್ಡಬೇಕಾಗಿರಲಿಲ್ಲ. ಜನಕಲ್ಯಾಣ ವೊಂದೇ ಅವರ ಆದ್ಯ ಉದ್ದೇಶವಾಗಿದ್ದಿತು. ಆದರಿಂದಾಗಿ ಅವರ ಆ ಪರಮ ಅರ್ಥದ ಪ್ರಭಾವಕ್ಕೆ ಭಾರತೀಯ ಹಲವಾರು ಮಹಾರಾಜರು ಒಳಗಾಗಿ ಶಿಷ್ಯರಾದರು; ಸತ್ಪಥದಲ್ಲಿ ಶಿವಾಚಾರದಲ್ಲಿ ನಡೆದರು. ಬಡಬಗ್ಗರಿಗೆಲ್ಲ ಶಿವಾಚಾರ್ಯರ ಶಿವಾಚಾರದೊಡನೆ ಪ್ರಸಾದವಿನಿಯೋಗ ಮಾಡುವ ಧರ್ಮ ದಾಸೋಹಿಗಳಾದರು. ಕ್ರಿಯಾಶೀಲರಾಗಿ ಕ್ರಿಯಾವಂತರಾದರು.

ಅಪರಶಿವ ಅಪರಶಿವೆ ರುದ್ರಕರಕಂಜಾತಸ್ಕಂದರ ಗೌರವಯುತ ಶಿಷ್ಯತ್ವಕ್ಕೆ ಪರಮಪಾತ್ರರಾದ 'ಸಾಕ್ಷಾತ್ ಶಿವ' ಎಂಬ ಪ್ರಶಸ್ತಿಗೆ ಪಾತ್ರರಾದ ಶ್ರೀ ರೇಣುಕಜಗದ್ಗುರುಗಳು ಈ ಸಾಮಾನ್ಯ ಭೌತ ಭಾಗ್ಯವಂತರಾದ ರಾಜ ರಿಂದ ಏನನ್ನೂ ಆಶಿಸಬೇಕಾಗಿರಲಿಲ್ಲ. ರಾಜಬಲವನ್ನು ಪಡೆದು ಜನಗಳ ಮೇಲೆ ಪ್ರಯೋಗಿಸಿ ಸಾಧಿಸಬೇಕಾದ್ದು ಏನೂ ಇರಲಿಲ್ಲ. ಸ್ವಯಂ ಸಂಪೂರ್ಣ ಸಮರ್ಥರಾದ ಅವರು ರಾಜಾಧಿರಾಜರಿಗೂ ರಕ್ಷಕರಾಗಿದ್ದರು. ಎಲ್ಲರಂತೆ

ರಾಜರಿಗೂ ಭವಸಾಗರದಾಂಟಿಸುವ ನೌಕೆಯಾಗಿದ್ದರು. ಸಂಸಾರಕೂಪದಲ್ಲಿ ಬಿದ್ದು ಒದ್ದಾಡುವವರನ್ನು ಎತ್ತಿ ಉದ್ಧರಿಸಿದರು. ಅಹಂಕಾರದ ಅರಣ್ಯ ದಲ್ಲಿದ್ದವರನ್ನು ವಿನಯುಪಥದಲ್ಲಿ ನಡೆಯಿಸಿದರು. ಮದಮತ್ಸರಿಗರನ್ನೂ ಸಹ ಅದೇ ವಿನಯುಪಥದಲ್ಲಿ ಶತೃಗಳನ್ನು ಮಿತ್ರರಂತೆ ಕಾಣುವ ಕಣ್ಣನ್ನು ಅನುಗ್ರಹಿಸಿ ಮುನ್ನಡೆಯಿಸಿದರು. ಸಮವರ್ತಿಗಳನ್ನಾಗಿಸಿದರು. ತಮ್ಮ ಅತ್ಯಗಾಧವಾದ ಕ್ರಿಯಾಶಕ್ತಿಯಿಂದ ಸರ್ವರಿಗೂ ಆಹಾರ ಅರ್ಥಗಳನ್ನು ಒದಗಿಸಿದ ಅವರು ಯಾವ ರಾಜಕೀಯ ಬೆಂಬಲವನ್ನು ಬಯಸಬೇಕಾಗಿರಲಿಲ್ಲ. ಶಿವಾದ್ವೈತ ಸಿದ್ಧಾಂತವೆಂಬ ಕಲ್ಪತರುವನ್ನು ಚಿಂತಾಮಣಿಯನ್ನು ಪೂರ್ಣವಾಗಿ ಪಡೆದ ಅವರು ಸಾಮಾನ್ಯ ತರುಗಳಂತೆ ಅರಣ್ಯಕಲ್ಲುಗಳಂತೆ ಇರುವ ಯಾರನ್ನು ಯಾವ ರಾಜರನ್ನು ಆಶ್ರಯಿಸಬೇಕಾಗಿರಲಿಲ್ಲ. ವಿಶ್ವಾಧಿಕರಾದ ರುದ್ರ ವೀರಭದ್ರರ ಅನುಯಾಯಿಗಳಾದ ಅದೇಕೆ ಅವತಾರಿಗಳಾದ ಅವರು ಯಾರ ಬಳಿವಿಡಿದು ಬಾಳಬೇಕಾಗಿರಲಿಲ್ಲ; ಬದುಕಬೇಕಾಗಿರಲಿಲ್ಲ. ಆಕ್ಷೇಪಣೆ ಅಪವಾದಗಳಿಗೆ ಗುರಿಯಾಗಬೇಕಾಗಿರಲಿಲ್ಲ. ರಾಜಾದಿರಾಜರನ್ನೇ ಧರ್ಮದಾಸೋಹಗಳನ್ನು ನಡೆಸಲು ಹಚ್ಚಿದ ಅವರು ಅವರ ಬೊಕ್ಕಸಗಳಿಗಾಗಿ ಬಾಯ್ನೀರು ಬಿಡಬೇಕಾ ಗಿರಲಿಲ್ಲ. ಯಾವುದೇ ಒಂದು ವೈಯುಕ್ತಿಕ ಸಾಧನೆಗಾಗಿ ಯಾವೊಂದು ವರ್ಗದ ಮೇಲೆ ಬಾಯ್ ಬಿಟ್ಟು ಕೈಮಾಡುವಂತಹ ದ್ರೋಹಕಾರ್ಯವೂ ಅವರಿಗೆ ಅದೆಷ್ಟೂ ಬೇಕಾಗಿರಲಿಲ್ಲ. ಮೇಲೆ ಮಾನವೀಯ ಹಿತವನ್ನು ತೋರುವಂತೆ ನಟಿಸಿ ಒಳಗೆ ತನ್ನ ದ್ವೇಷ ಮತ್ಸರಗಳನ್ನು ಉಚ್ಚವರ್ಣದವರೆಂಬುವವರ ಮೇಲೆ ಹರಿಹಾಯಬೇಕಾಗಿರಲಿಲ್ಲ. ದಿಟ್ಟಕ್ಕೂ ಯಾವ ಆಸೆ ಆಕಾಂಕ್ಷೆಗಳನ್ನಿರಿಸಿ ಕೊಳ್ಳದೆ ಯಾರ ಮೇಲೆ ಮತ್ಸರವನ್ನು ಮುಗುಚದೆ ಸಹಜವಾದ ಸರ್ವಕಲ್ಯಾಣ ಕಾರಕ ಸಮಾಜವಾದ ಮಾನವೀಯ ಸಾಧನೆಗಳನ್ನು ಮಾಡಿ ಹೋದ ಶ್ರೀರೇಣುಕಶಿವಾಚಾರ್ಯರು ತಮ್ಮದೇ ಆದ ನಿಷ್ಕಲಂಕ ನಿಸ್ಪೃಹಗಳಿಂದ ಕೂಡಿದ ಕ್ರಾಂತಿಕಾರಿ ಸಚ್ಚಾರಿತ್ರವನ್ನು ನಿರಾಯಾಸವಾಗಿ ರೂಪಿಸಿಕೊಂಡು ತಮ್ಮದೇ ಆದ ಒಂದು ಹೊಚ್ಚ ಹೊಸ ಯುಗವನ್ನೇ ನಿರ್ಮಿಸಿಕೊಂಡು ಹರವಾದ ಹಳೆಯದಾಗದ ಹೆಸರನ್ನು ಉಳಿಸಿ ಬೆಳಗಿಸಿರುವರು. ಶಿವಾಚಾರ ವೊಂದೇ ಮಾನವೀಯತೆಯನ್ನು ತರುವ ಸರ್ವೋತ್ತಮ ಸಂಪತ್ತು. ಸರ್ವೋತ್ತಮ ಸಾಮರ್ಥ್ಯ ಎಂಬುದು ಶ್ರೀ ರೇಣುಕಶಿವಾಚಾರ್ಯರ ದೃಢ

ನಿರ್ಧಾರ ! ಅದನ್ನೇ ಅವರು ಸರ್ವರಲ್ಲಿ ಬಿತ್ತಿಬೆಳೆದು ಬೆಳಗಿದವರು. ಷಟ್‌ಸ್ಥಲ ಚಕ್ರವರ್ತಿಯಾಗುವುದೊಂದೇ ಅವರಿಗೆ ಬೇಕಾದದ್ದು; ಅನನ್ಯ ಸದೃಶ್ಯವಾಗಿ ಅಂದರೆ ಅಸಾಮಾನ್ಯವಾಗಿ ಆದರು. ಅವರಿಗೆ ಅದನುಳಿದು ಬೇರೆ ಯಾವ ಭೌತಿಕ ರಾಷ್ಟ್ರ ಚಕ್ರವರ್ತಿತನ ಬೇಕಿರಲಿಲ್ಲ. ಭಾರತ ರಾಷ್ಟ್ರ ಸಮಗ್ರತೆಗೆ, ಭಾರತೀಯರ ಆತ್ಮಶಾಂತಿ ತೃಪ್ತಿಗಳಿಗೆ ಕಾರಣಗಳಾದ ಕ್ರಿಯಾಶೀಲತೆ, ಧರ್ಮದಾಸೋಹ, ಚಿಚ್ಛಕ್ತಿಜ್ಞಾನನಿಲಯ, ಸರ್ವಸಮವರ್ತನ ಮೊದಲಾದ ಕ್ರಾಂತಿಗಳನ್ನೆಸಗದ ಕೀರ್ತಿ ಧವಳಿತ. ಇದೇ ಶ್ರೀರೇಣುಕಶಿವಾಚಾರ್ಯರ ಮಹಾ ಮಣಿಹ. ಅವರ ಆ ಆದರ್ಶ ಶಾಂತಿಕ್ರಾಂತಿ ನಡೆದು ಇಂದಿಗೆ ಸುಮಾರು ಮೂರು–ಮೂರವರೆ ಸಾವಿರ ವರುಷಗಳಾಗಿವೆ. ಆದರೂ ಅವರ ಹೆಸರು ಇಂದಿಗೂ ಹೊಚ್ಚಹೊಸ ಹಸಿರು.

## ಕಾಲಮಾನ–ಆಗಮ ಪ್ರಮಾಣ

ಧಾರ್ಮಿಕಪ್ರಧಾನ ಇತಿಹಾಸಕ್ಕೆ ನಿಗಮಾಗಮಗಳೇ ನಮಗೆ ಅಂದರೆ ಭಾರತೀಯರಿಗೆ ಹೆಚ್ಚು ಹಳೆಯ ಆಧಾರಗಳು. ಇವು ಹಳೆಮಾತುಗಳೆಂದು ಹೆಸರಾಂತಿವೆ. ಇವೆಲ್ಲ ಸಂಸ್ಕೃತ ಶಬ್ದ ಶರೀರಿಗಳು. ಸಂಸ್ಕೃತಭಾಷೆ ಪ್ರಾಚೀನವಾಗಿದ್ದಂತೆ ಪ್ರಪಂಚಕ್ಕೆಲ್ಲ ಮಾನ್ಯವೂ ಆಗಿದೆ; ಭಾರತದ್ದೆಂದು ಖ್ಯಾತವಾಗಿದೆ.

ಭಾರತೀಯ ಹದಿನಯ್ದು ರಾಷ್ಟ್ರಭಾಷೆಗಳಲ್ಲಿ ಸಂಸ್ಕೃತವೂ ಒಂದಾಗಿದೆ ಯಲ್ಲದೆ ಅಗ್ರಗಣ್ಯವೂ ಆಗಿದೆ; ಅತ್ಯಂತ ವ್ಯಾಪಕವೂ ಆಗಿದೆ. ಸಂಸ್ಕೃತಕ್ಕಿರುವ ವೈಶಾಲ್ಯ ಬಹುಶಃ ಇಂಗ್ಲೀಷೊಂದನ್ನು ಬಿಟ್ಟರೆ ಇನ್ನಾವುದಕ್ಕೂ ಇದ್ದಂತಿಲ್ಲ. ವೇದಗಳ ಕಾಲ ೬ ಸಾವಿರ ವರುಷವೆಂದು ೫ ಸಾವಿರವೆಂದು ; ೪ ಸಾವಿರ ಎಂದು ಬಗೆಬಗೆಯಾಗಿ ಅಭಿಪ್ರಾಯಗಳಿವೆ. ಇನ್ನೂ ನಿರ್ದಿಷ್ಟವಿಲ್ಲವಾದರೂ ಆರುಸಾವಿರ ವರುಷಗಳಿರಬೇಕೆಂದು ನಮ್ಮ ಆಶಯ. ರುದ್ರಭಪ್ರರಕಾಲ ಎಂಟುಸಾವಿರ ವರುಷಗಳಿರಬೇಕೆಂದು ಭಾವಿಸಲಾಗಿದೆ. ಇವರು ಸಿಂಧುತೀರದ ಸಂಸ್ಕೃತಿಗೆ ಸೇರಿದವರು. ಹರಪ್ಪಾ ಮೊಹೆಂಜೊದಾರೊ ನಾಗರಿಕತೆ ಇವರ ದಾಗಿದೆ. ಇವರಲ್ಲಿ ವೀರಭದ್ರನ ವೀರಸಿಂಹಾಸನದ ಮೇಲೆ ಬಂದ ಆದಿ ರೇಣುಕರ ಕಾಲ ಸುಮಾರು ಮೂರವರೆ ಸಾವಿರ ವರುಷಗಳಿರಬೇಕೆಂದೆನಿಸುತ್ತದೆ.

ವಿಭೀಷಣ-ಅಗಸ್ತ್ಯರಿಗೆ ಗುರುವಾಗಿ ಸಂಬಂಧವಿರುವದೆ ನಮ್ಮ ಈ ಊಹೆಗೆ ಕಾರಣವಾಗಿದೆ. ಶ್ರೀ ಟಿ. ಬಿ. ಬಸವರಾಜಯ್ಯನವರು ತಮ್ಮ "ಎಸೆನ್‌ಷಿಯಲ್ಸ್ ಆಫ್ ಸ್ಪಿರಿಚುಯಾಲಿಜಂ"(ಆಧ್ಯಾತ್ಮ ವಿಷಯದ ಸಾರಸಂಗ್ರಹ) ಎಂಬ ಗ್ರಂಥದಲ್ಲಿ ಆದಿ ರೇಣುಕ ಶಿವಾಚಾರ್ಯರ ಕಾಲವನ್ನು ೩೮೫೭ ಎಂದು ಪ್ರಮಾಣಗಳನ್ನಿತ್ತು ಪ್ರತಿಪಾದಿಸಿದ್ದಾರೆ.

ಆದಿ ರೇಣುಕರ ಬಳಿಕ ಹುಟ್ಟಿದ ಆಗಮುಗಳಲ್ಲಿ ವೀರಾಗಮುವೂ ಒಂದು. ಒಂದೇನು ವಿಶಿಷ್ಟವಾದುದು. ಇದರ ಕಾಲ ಮೂರು ಸಾವಿರಕ್ಕೆ ಈಚೆ. ಎರಡು ಸಾವಿರಕ್ಕೆ ಆಚೆ ! ಆರ್ಯದ್ರಾವಿಡ ಸಮನ್ವಯಾಚಾರ್ಯನಾದ ವೀರಭದ್ರ ದೇವನಿಗೂ ಆದಿ ವೀರ ರೇಣುಕ ಶಿವಾಚಾರ್ಯರಿಗೂ ಕಾಲ ಎಷ್ಟು ಅಂತರ ಎಂಬುದುಸ್ಪಷ್ಟ ಅರಿಕೆಯಾಗುವುದಿಲ್ಲ. ವೀರಾಗಮದಲ್ಲಿ ವೀರರೇಣುಕಾದಿಗಳನ್ನು ಪುರಾತನರು-ಸನಾತನರು-ಪ್ರಮಥರು ಎಂದು ಪದೇ ಪದೇ ಉಲ್ಲೇಖಿಸಲಾಗಿದೆ. ಇದರಿಂದ ವೀರಾಗಮಕ್ಕೆ ಹೆಚ್ಚು ಹಿಂದಿನವರು ರೇಣುಕರೆಂದು ಹೇಳಬೇಕಾಗುತ್ತದೆ. ವೀರಾಗಮದಲ್ಲಿ ಶಿಂಶುಮಾರ, ಡಿಂಡಿಮಾರ, ಶತಾನಂದ, ಸತ್ಯೇಂದ್ರ, ಮಣಿಭದ್ರ, ಸಿಂಹನಾದ, ಮೇಘನಾದ, ಓಹಿಲ, ಮಾತಂಗ ಮೊದಲಾದ ಹೆಸರುಗಳು-ಕಥನಗಳು ಬರುತ್ತವೆ. ಇವರೆಲ್ಲರ ಕಾಲಮಾನ ಖಚಿತವಾಗಿ ತಿಳಿದುಬರುತ್ತಿಲ್ಲ. ಆದರೆ ಇವರೆಲ್ಲರೂ ಆ ಆದಿರೇಣುಕ ಶಿವಾಚಾರ್ಯ ಶಿಷ್ಯರು, ಸಮಕಾಲೀನರು.

ಅದ್ಭುತ ಕ್ರಾಂತಿಯನ್ನೆಸಗಿದ ಆದಿರೇಣುಕ ಶಿವಾಚಾರ್ಯರು, ಕಣ್ಣಡಿಕನೆಂದು ಹೆಸರಾದ ವೀರಭದ್ರೇಶ್ವರರ ಪರಂಪರೆಯವರೆನ್ನುವಲ್ಲಿ ಎರಡುಮಾತಿಲ್ಲ. ವೀರೇಶ್ವರನ ಪ್ರತಿನಿಧಿಗಳೆಂದರೂ ತೆಗೆದು ಹಾಕುವ ಮಾತೇನಲ್ಲ. ರೇಣುಕರು ರುದ್ರಕನ್ನೆಯರನ್ನು ಗೌರವಿಸುತ್ತಿದ್ದರೆಂಬುದು ವೀರಾಗಮದಿಂದ ತಿಳಿದು ಬರುತ್ತದೆ. ಇದರಿಂದ ರುದ್ರಕನ್ನೆಯರ-ಪ್ರಾಶಸ್ತ್ಯ ಅಭಿವ್ಯಕ್ತವಾಗುತ್ತದೆಯಲ್ಲದೆ ರುದ್ರ ಪ್ರಾಶಸ್ತ್ಯವೂ ಅಭಿವ್ಯಕ್ತಿಯಾಗುತ್ತದೆ. ರುದ್ರ ಭದ್ರರ ಸಂಸ್ಕೃತಿಗೆ ಸನ್ನಿಹಿತರು ರೇಣುಕರು ಎಂದೂ ಭಾಸವಾಗುತ್ತದೆ. ಅಲ್ಲದೆ ರೇಣುಕ ಶಿವಾಚಾರ್ಯರ ಪರಂಪರೆಯಲ್ಲಿ ರುದ್ರಮುನಿ ವೀರಪದಗಳು ಆಚಾರ್ಯರ ನಾಮಗಳಲ್ಲಿ ಇಂದಿಗೂ ಬಳಕೆಯಲ್ಲಿ ಉಳಿದಿವೆ.

ಜಗದಾಚಾರ್ಯ ರೇಣುಕರ ಕ್ರಾಂತಿಕಾರಿ ಮಣಹಗಳು ವೀರಾಗಮದಲ್ಲಿ

ವಿಶಿಷ್ಟ ರೀತಿಯಲ್ಲಿ ವಿಪುಲವಾಗಿ ನಿರೂಪಿತವಾಗಿವೆ. ಇವು ಆದಿರೇಣುಕರ ಅಸಾಧಾರಣ ಸಾಮರ್ಥ್ಯಕ್ಕೆ, ವ್ಯಕ್ತಿತ್ವದ ಔನ್ನತ್ಯಕ್ಕೆ ನಿದರ್ಶನಗಳಾಗಿವೆ. ಆದಿ ರೇಣುಕರು ಸೃಜನಶೀಲ ಕ್ರಾಂತದರ್ಶಿಗಳು. ಅವರ ಆ ಸೃಜನಶೀಲ ಕ್ರಾಂತಿಗಳು ಅವರನ್ನು ಇಷ್ಟೊಂದು ದೀರ್ಘಕಾಲ ಜೀವಂತವಾಗಿ ಉಳಿಸಿವೆ. ಅವರು ವಾಸ್ತವವಾಗಿ ವ್ಯಕ್ತಿವಾದಿಗಳಲ್ಲ; ಸಮಾಜವಾದಿಗಳಲ್ಲ; ಸಾರ್ವಜನಿಕರಿಗಾಗಿ ಹಲವು ಹತ್ತು ಬಗೆಯಲ್ಲಿ ಹವಣಿಸಿದರು. ಹೆಚ್ಚು ಜನರನ್ನು ಹೊಸ ಹೊಲಬಿಗೆ ತಂದರು. ಸಾಂಸ್ಕಾರಿಕವಾಗಿ ತಿದ್ದಿ ತೀಡಿದರು. ಧರ್ಮದಾರ್ಶನಿಕತೆಗೆ ಒಗ್ಗಿಸಿದರು. ಧರ್ಮದಾಸೋಹ-ಕ್ರಿಯಾಶೀಲತೆಗಳಿಗೆ ಹಚ್ಚಿದರು. ಅವರ ಆ ಉಜ್ವಲ ಬಾಳಿನಲ್ಲಿ ಮಾಣಿಪ್ಯತಿ, ಕೇತುಮಾಲಾ, ಕ್ರಾಂತಿಗಳು ತುಂಬಾ ಅದ್ಭುತವಾದವುಗಳು; ಅತ್ಯಂತ ವಿಸ್ತಾರವಾದವುಗಳು. ಒಂದು ಪ್ರಾಸಾದಿಕ ಕ್ರಾಂತಿ; ಇನ್ನೊಂದು ಸಾಂಸ್ಕಾರಿಕ ಕ್ರಾಂತಿ. ಅವರು ಆರೋಗಿಸಿದುದು ಉಪ್ಪುನೀರಹನಿ; ಉಳಿದವ ರಿಗೆ ಅನುಗ್ರಹಿಸಿದುದು ಹಾಲು-ಜೇನು-ಪಂಚಪಕ್ವಾನ್ನಗಳನ್ನು ! ಅವರು ತಮ್ಮ ಅಪಾರ ಸಂಸ್ಕಾರ ಪ್ರಭಾವದಿಂದ ಕೋಟಿ ಕೋಟಿ ಜನರನ್ನು ಸುಸಂಸ್ಕೃತ ರನ್ನಾಗಿಸಿದರು. ದ್ವಿಜರಾದಿಯಾಗಿ ಎಲ್ಲ ದಲಿತರಲ್ಲಿ ದಯೆದೋರಿದರು ಹೆಂಗಸರನ್ನು ಧರ್ಮಿಗಳನ್ನಾಗಿಸಿದರು. ಕ್ರಾಂತಿಕಾರಿಗಳಾದರು. ನವಯುಗ ನಿರ್ಮಾಣ ಮಾಡಿದರು. ಅಂದಿಗೂ-ಇಂದಿಗೂ ಅವರನ್ನು ಸರಿಗಟ್ಟುವವರು ಯಾರೂ ಇಲ್ಲ. ಅವರ ನೆರವಿಗೆ ದಾರುತರು, ಘಂಟಾಕರ್ಣರು, ಗಜಕರ್ಣರು ಹೆಗಲೆಣೆಯಾಗಿ ನಿಂತು ನಿತ್ತರಿಸುವರು. ವಿಶುದ್ಧ ವಿಶಾಲ ಚಾರಿತ್ರವನ್ನು ನಿರ್ಮಾಣ ಮಾಡಿದರು. ಮಾಡಿನ ವೀರಶೈವ ಸದೃಶಂ ಮತಮಸ್ತಿ ಜಗತ್ತ್ರಯೇ, ಎಂದೆನಿಸಿದರು. ಇದರಿಂದಾಗಿ ಅವರು ಬಹುಜನಪ್ರಿಯರಾಗಿದ್ದರು. ಅವರು ಅತ್ಯಂತ ಸೂಕ್ಷ್ಮಗ್ರಾಹಿಗಳು; ಸ್ಫೂರ್ತಿ ಹೃದಯರು, ಮಠ ಮಾನ್ಯಗಳಿಗಾಗಿ ಮನಸೋತವರಲ್ಲ; ಅಧಿಕಾರ ಅರ್ಥಗಳಿಗಾಗಿ ಆಶಿಸಿದವರಲ್ಲ. ವೈಭವಗಳಿಗಾಗಿ ಆಶಿಸಿದವರಲ್ಲ. ಆಶಿಸಿದ್ದರೆ ಸಾಕಷ್ಟು ಜನ ಅರಸರು ಕೊಡುವವರಿದ್ದರು. ಅನೇಕ ಅರಸರು ಅವರಿಗೆ ಶಿಷ್ಯರಾಗಿದ್ದರು. ಶುಶ್ರೂಷುಗಳಾಗಿದ್ದರು. ಅವರು ತಮ್ಮ ಜೀವನದುದ್ದಕ್ಕೂ ಜನಕಲ್ಯಾಣಕ್ಕಾಗಿ ಜೀವಿಸಿದರು; ಉಜ್ಜೀವನ ಸಾಗಿಸಿದರು. ಉಳಿದವರನ್ನು ಉದ್ದೀಪನಗೊಳಿಸಿದರು. ಭಾರತಾದ್ಯಂತ ಬಿಡುವಿಲ್ಲದೆ ವಾಹನವಿಲ್ಲದೆ ಸಂಚರಿಸಿ ಭಾರತೀಯ ಸಂಸ್ಕೃತಿಯನ್ನು ಚಿಚ್ಛಕ್ತಿ

ಜ್ಞಾನ ನಿಲಯುಗಳ, ಸಂಘ ಸಂಸ್ಥೆಗಳ ಮುಖಾಂತರ ಜೀವಂತಗೊಳಿಸಿದರು. ಇದೆಲ್ಲವೂ ಇಂದು ನಮ್ಮ ಪುಣ್ಯ ವಿಶೇಷದಿಂದ ಪ್ರಾಪ್ತವಾಗಿದೆ. ಇದರ ಪ್ರಸಾದ ತೀವ್ರಗತಿಯಲ್ಲಿ ಸಾಗಬೇಕಾಗಿದೆ; ಎತ್ತಿದ ಸ್ವರದಲ್ಲಿ ಸಾಗಬೇಕಾಗಿದೆ. ಕಲ್ಯಾಣ ಕ್ರಾಂತಿಗೆ ಮೂಲವಾದ ಮೌಲಿಕವಾದ ಘನಗಂಭೀರ ಮತ್ತು ಮತ್ತು ಶಾಂತಿ ದಾಂತಿ ಕ್ರಾಂತಿ ತುಂಗೋತ್ರಿಯನ್ನು ಇನ್ನು ಬತ್ತಿಸಬಾರದು. ಗುಪ್ತಗಾಮಿನಿಯನ್ನಾಗಿಸಬಾರದು.

## ಸೈದ್ಧಾಂತಿಕ ಕ್ರಾಂತಿ, ಸಿದ್ಧ ಪ್ರಬುದ್ಧ ಕಾಂತಿ !

ಜಗದಾಚಾರ್ಯರಾದ ಶ್ರೀ ಆದಿ ರೇಣುಕ ಭಗವತ್ಪಾದರು ಭಾವಪೂರ್ಣ ವಾಗಿ ನಿರೂಪಿಸಿದ ಶಿವಾದ್ವೈತ ಸಿದ್ಧಾಂತ ಸರ್ವ ಸಮನ್ವಯ ಸಿದ್ಧಾಂತ; ಸರ್ವಾಂಗ ಸುಂದರ ಸಿದ್ಧಾಂತ. ವೀರಶೈವಾಗಮನಿಷ್ಠ ಆಚಾರ-ವಿಚಾರಗಳಿಂದ ಸರ್ವ ಮಲಗಳನ್ನು ತೊಲಗಿಸಿ, ಕ್ರಿಯೆ-ಜ್ಞಾನಾನುಭವಗಳಿಂದ ಪರಮ ಪ್ರತಿಭೆ ಯುಳ್ಳವರಾಗಿದ್ದರು ಶ್ರೀ ರೇಣುಕ ಶಿವಾಚಾರ್ಯರು. ಶಿವಾದ್ವೈತ ತತ್ತ್ವವನ್ನು ಸಂಪೂರ್ಣ ಸಮರ್ಥ ಶಾಲಿಯಾಗಿ ಸಂಪಾದಿಸಿಕೊಂಡು ವೀರಶೈವಕ್ಕೆ ದಯಪಾಲಿಸಿದ ವಿಶಿಷ್ಟ ವ್ಯಕ್ತಿತ್ವ ಅವರದಾಗಿತ್ತು. ಬಿಡಿಬಿಡಿಯಾಗಿದ್ದ ದ್ವೈತ ಅದ್ವೈತಾದಿ ಗಳನ್ನು, ಸಾಂಖ್ಯ ಯೋಗಾದಿಗಳನ್ನು ಸಮೀಕರಿಸಿ ಸಂಶೋಧಿಸಿ ಶಿವಾದ್ವೈತ ಸ್ವರೂಪದಲ್ಲಿ ಸಂಪೂರ್ಣವಾಗಿ ಮತ್ತು ಬೃಹತ್ತಾಗಿ ಪ್ರವಹಿಸುವಂತೆ ಮಾಡಿ ದವರು ಅವರೊಬ್ಬರೆ ! ಸೈದ್ಧಾಂತಿಕ ಕ್ರಾಂತಿಯಲ್ಲಿ ಸಿದ್ಧರು ಪ್ರಬುದ್ಧರು ಆಗಿ ಪೂರ್ಣಯಶಸ್ವಿಯಾದವರು ರೇಣುಕ ಭಗವತ್ಪಾದರು.

ಜೀವಭಾವವೂ ಅದೊಂದು ಮಲ. ಅದನ್ನು ಕಳೆದುಕೊಳ್ಳದೆ ಶಿವ ತ್ವಾಭಿವ್ಯಕ್ತಿಯಾಗಲು ಅದೆಂದಿಗೂ ಸಾಧ್ಯವಿಲ್ಲೆಂದು ಪ್ರತಿಪಾದಿಸಿದರು. ಔಪಾ ಧಿಕ ದೇಹಭಾವ-ಜೀವಭಾವ ತೊಲಗಬೇಕಾದರೆ ತ್ರಿವಿಧ ಮಲಾಪಹಾರಕ ಶಿವ ದೀಕ್ಷಾ ಸಂಸ್ಕಾರ ಶಿವಾಚಾರ ಶಿವವಿಚಾರಗಳು ಅನಿವಾರ್ಯವೆಂದರು. ಸಚ್ಚಾರಿತ್ರವನ್ನು ಸಂಪಾದಿಸಿ ರೂಪಿಸಿಕೊಳ್ಳಲು ಇವು ಬೇಕೇಬೇಕು. ಈ ಬಗೆಗೆ ಅವರು ಇಂತು ಅಪ್ಪಣೆ ಕೊಡಿಸಿರುವರು :

''ಜೀವಃ ಶಿವಃ ಶಿವೋ ಜೀವಃ ಇತಿ ಚಾದ್ವೈತವಾದಿನಃ
ತದ್‌ಜ್ಞಾನಂ ಮಲಮಿತ್ಯಾಹುಃ ರೇಣುಕಾದ್ಯಾಃ ಸನಾತನಾಃ ।
ಅಶೇಷ ಪ್ರಮಥಾಃ ಸರ್ವೇ ಹ್ಯಾಗಮಾಚಾರ ಸಂಯುತಾಃ
ಜೀವೋ ಜಡ ಇತಿ ಜ್ಞಾತ್ವಾ ರೇಣುಕೋ ಮುನಿ ಪುಂಗವಃ ।
ಮಮ ಭಕ್ತ್ಯಾ ಮನಃ ಪ್ರೀತಂ ಸಲ್ಲಿಂಗಂ ಧಾರಯೇತ್ಸುಧೀಃ ॥

— ವೀರಾಗಮ.

ಜೀವನೆ ಶಿವನು, ಶಿವನೇ ಜೀವನು–ಎಂದು ಬ್ರಹ್ಮಾದ್ವೈತಿಗಳು ಹೇಳುವರು. ಅವರ ಈ ಜ್ಞಾನವು ನಿರ್ದುಷ್ಟವಲ್ಲ ಮಲಮಿಶ್ರವಾದುದು. ಅಂದರೆ ದೋಷ ದೂಷಿತವಾದುದು. ವಿಷಮವಾದುದು. ಹೇಗೆಂದರೆ. ಜೀವ ಜಡ, ಶಿವ ಅಜಡ ಅಂತಿದ್ದು ಒಂದೆಂದು ಹೇಳುವುದು ಸರಿಯಲ್ಲ. ಸಮರಸಕ್ಕೆ ಸಲ್ಲುವ ವಿಚಾರವಲ್ಲ. ಕ್ರಿಯಾದೀಕ್ಷೆಯಿಲ್ಲದೆ ಜೀವಗತ ಜಡಭಾವ ಅಸದ್ದೋಷಗಳು ನಿವಾರಣವಾಗವು. ಆಗದ ಬಳಿಕ ಜೀವ ಬ್ರಹ್ಮನಾಗಲು ಸಾಧ್ಯವಿಲ್ಲ. ಇದರಿಂದಾಗಿ ವಾಗದ್ವೈತದ "ಅಹಂ ಬ್ರಹ್ಮಾಽಸ್ಮಿ" ಎಂಬ ವಾದ ವಿಚಾರ ರಮಣೀಯವಲ್ಲ—ಎಂದು ಆದಿರೇಣುಕ ಶಿವಾಚಾರ್ಯರು ಕೇವಲಾದ್ವೈತ ಕೊರತೆಯ ಜ್ಞಾನವನ್ನು ಖಂಡಿಸಿ, ಕ್ರಿಯಾಜ್ಞಾನ ವಿಶಿಷ್ಟವಾದ ಲಿಂಗಧಾರಣ ಸ್ವರೂಪ ಶಿವಾದ್ವೈತ ಸಿದ್ಧಾಂತವನ್ನು ಮಂಡಿಸುವರು. ಅಂಗ–ಲಿಂಗ ಸಾಮರಸ್ಯವೇ ಸರಿಯೆಂದು ನಿರೂಪಿಸುವರು.

ಕಾರ್ಮಿಕಾದಿ ತ್ರಿಮಲ ವಿಶಿಷ್ಟನು ಜೀವನು ; ಕಾರ್ಮಿಕಾದಿ ಮಲರಹಿತನು ಅಂಗನು. ಅಸತ್ ಅಚಿತ್ ದುಃಖಿಯು ಜೀವನು ; ಸತ್ ಚಿತ್ ಆನಂದ ಸಹಿತನು ಅಂಗನು. ಸಂಸ್ಕಾರ ರಹಿತನು ಜೀವನು ; ದೀಕ್ಷಾ ಸಂಸ್ಕಾರ ಸಹಿತನು ಅಂಗನು. ಔಪಾಧಿಕನು ಜೀವನು ; ಉಪಾಧಿ ರಹಿತನು ಅಂಗನು. ಅದ್ವೈತದ ಜಡ ಜೀವನು ಕೇವಲ ವಿಚಾರವಾದಿ ; ಶಿವಾದ್ವೈತದ ಅಂಗರು ಆಚಾರ–ವಿಚಾರ ನಿರತ ; ದಾಸೋಽಹಂ ನಿರತ, ಈ ಜೀವಾಂಗದ ತರತಮ ಭಾವವನ್ನು ಆದಿರೇಣುಕರು ಅಂದೇ ಸಂಸ್ಥಾಪಿಸಿದರು. ಆಚಾರ ಪ್ರತಿಪಾದಕರಾಗಿ ಆಚಾರ್ಯರಾದರು. ಶಿವಶಕ್ತಿ ವಿಶಿಷ್ಟ ದೀಕ್ಷಾ ಸಂಸ್ಕಾರವನ್ನು ನಿರೂಪಿಸಿ ಶಿವಾದ್ವೈತಿಗಳಾದರು.

''ಆತ್ಮನ್ಯನಾತ್ಮನಾ ಬುದ್ಧಿರನಾತ್ಮನ್ಯಾತ್ಮತಾ ಮತಿಃ
ತೇ ಬುದ್ಧಿ ಜ್ಞಾನ ಯೋಗಾನಾಂ ಭವತೋ ನಾತ್ರ ನಿಶ್ಚಲಾತ್ ।

—ವೀರಾಗಮ.

'ಆತ್ಮನ ಸಾರವಾಗಿ ಉತ್ಪತ್ತಿಗೊಂಡ ಅವಿದ್ಯೆಯು ಪೂರ್ವ ಕಲ್ಪಿತವು. ಅಂದರೆ ಸಂಚಿತಕರ್ಮಜನ್ಯ ಜನ್ಮವು. ಆ ಅವಿದ್ಯೆಯು ಜಡವಾದ ಆತ್ಮ (ಜೀವ) ಯೋಗವುಳ್ಳವರಿಗೆ ಮಲತ್ರಯದಿಂದ ಕೂಡಿರುತ್ತದೆ.' ಎಂದು ಜೀವಬ್ರಹ್ಮ ಅಥವಾ ಜೀವಶಿವ ವಾದಿಗಳು ವಿದ್ಯೆಯ ಲಕ್ಷಣವನ್ನು ಹೇಳುವರು. ಬ್ರಹ್ಮಾದ್ವೈತ ಕರ್ಮವಾದಿ, ಶಿವಾದ್ವೈತಿ ಶಿವದೀಕ್ಷಾ ಸಂಸ್ಕಾರದಿಂದ ಕರ್ಮ, ಅವಿದ್ಯೆ, ಭ್ರಾಂತಿಗಳು ನಿರಸನವಾಗಿರುವುದರಿಂದ ಕರ್ಮವಾದಿಯಲ್ಲ, ಅವಿದ್ಯಾವಾದಿಯಲ್ಲ ಕರ್ಮ ಅವಿದ್ಯೆ ಭ್ರಾಂತಿಗಳು ಕಾರ್ಮಿಕಮಲ, ಮಾಯಾಮಲ, ಆಣವಮಲಗಳಿಗೆ ಕಾರಣವಾಗಿರುತ್ತವೆ. ಇವು ಪರಿವಿಡಿದು ಕ್ರಿಯಾ-ಮಂತ್ರ-ವೇಧಾ ಸಂಸ್ಕಾರಗಳಿಂದ ನಿವಾರಣವಾಗಿರುವ ಕಾರಣ ವೀರಶೈವರಿಗಿರವು ; ಇರುವುದಿಲ್ಲ. ಅಸಲು ಆತ್ಮಭಾವ-ಜೀವಭಾವಗಳೇ ಇರವು. ಆತ್ಮ ಲಿಂಗವಾಗಿ ಪೂರ್ವಕಲ್ಪಿತ ಅವಿದ್ಯೆಯಿರದು ; ಮಲತ್ರಯಗಳಿರವು, ದೀಕ್ಷಾತ್ರಯದಿಂದ ಮಲತ್ರಯ ನಿವಾರಣ !' ಇದು ಶಿವಾದ್ವೈತ ಸಿದ್ಧಾಂತ ; ಜಗದ್ಗುರು ಆದಿ ರೇಣುಕ ಶಿವಾಚಾರ್ಯರಿಂದ ಸಂಪೋಷಿತ; ಸಂವೃದ್ಧಿತ.

''ಅಧ್ಯಾತ್ಮಂ ತತ್ತ್ವ (ಸಾಂಖ್ಯ) ಯೋಗಾನಾಮಾಧಿ ಭೌತಿಕಮೇವ ಚ ।
ಉಭಾವಪಿ ಮಲಂ ಪ್ರಾಹುಃ ಪ್ರಮಥಾಸ್ತತ್ತ್ವ ಪಾರಗಾಃ।
ಆಧ್ಯಾತ್ಮಿಕಂ ಸದಾ ನೃಣಾಂ ಪ್ರಾಣಾಪಾನಾದಿಷು ಸ್ಥಿತಂ ।
ಯತ್ತತ್ತ್ವಂ ತತ್ತ್ವ ವಿದುಷಾಂ ತ್ಯಜಂತಿ ಬುಧ ಸೇವಿತಾಃ ॥''

— ವೀರಾಗಮ.

ಮೂವತ್ತಾರು ತತ್ತ್ವಸ್ವರೂಪಾನುಭಾವಿಗಳಾದ ವೀರಾದಿ ಪ್ರಮಥರು. ರೇಣುಕಾದಿ ಶಿವಾಚಾರ್ಯರು – ಸಾಂಖ್ಯರ ಮತ್ತು ಯೋಗಾಚಾರ್ಯರ ಆಧ್ಯಾತ್ಮಿಕ ಹಾಗು ಆದಿಭೌತಿಕ ಜೀವನ ಗುಣಗಳೆರಡನ್ನು ಮಲವೆಂದು ಮಂಡಿಸುವರು.

ವಿದ್ವಾಂಸರಿಂದ ವಿಶೇಷವಾಗಿ ಸನ್ಮಾನ್ಯರಾದ ರೇಣುಕಾದಿ ಗುರುವರ್ಯರು ತತ್ತ್ವಜ್ಞರಾದ ನರರ ಅಂದರೆ ಲೌಕಿಕರ ಪ್ರಾಣಾಪಾನಾದಿ ವಾಯುನಿಷ್ಠ ಆಧ್ಯಾತ್ಮಿಕ ತತ್ತ್ವವನ್ನು ಒಪ್ಪಿಕೊಂಡಿರುವುದಿಲ್ಲ. ಕಾರಣ ಶಿವಾದ್ವೈತ ಸಿದ್ಧಾಂತ ಪ್ರಕಾರ ಶಿವದೀಕ್ಷಾನ್ವಿತರಲ್ಲಿ ವಾಯುವಿಕಾರಗಳೇ ಇರುವುದಿಲ್ಲ. ಪ್ರಾಣವು ಪ್ರಾಣಲಿಂಗವಾಗಿರುತ್ತದೆ. ಅಪಾನವು ಆಚಾರಾಂಗವಾಗಿರುತ್ತದೆ.

"ಜಾಗ್ರೇ ಪ್ರಾಣಂ ಪ್ರತಿಷ್ಠಾಪ್ಯ, ಸ್ವಪ್ನೇ ನಾಗಂ ಪ್ರಬೋಧಯೇತ್ ।
ತದ್‌ಜ್ಞಾನಂ ಮಲಮಿತ್ಯಾಹುರಾಗಮಾರ್ಥವಿಶಾರದಾಃ॥"

ವೀರಶಿವಾಗಮ ಸಿದ್ಧಾಂತದ ತಿರುಳನ್ನು ತಿಳಿದ ಶಿವಾನುಭಾವಿಗಳು, ನನಸಿನಲ್ಲಿ ಪ್ರಾಣಪಂಚಕವನ್ನು ಕನಸಿನಲ್ಲಿ ನಾಗಪಂಚಕವನ್ನು, ನೆಲೆಗೊಳಿಸಿ ಎಚ್ಚರಿಸಬೇಕೆಂಬ ಅವರ ಆ ಜ್ಞಾನವನ್ನು ಮಲವೆಂದು ಹೇಳುವರು. ಏಕೆಂದರೆ ಅವರ ವಾಯುಗಳು ವಾಯುಗಳಾಗಿ ಭೌತತತ್ವದಿಂದ ಕೂಡಿರುತ್ತವೆ. ಅವನ್ನು ಬ್ರಹ್ಮವನ್ನಾಗಿ ಭಾವಿಸುವ ತಾತ್ತ್ವಿಕಸಂಸ್ಕಾರ ಅವರಲ್ಲಿರುವುದಿಲ್ಲ. ವೀರಶೈವರಿಗೆ ಗುರುಕಾರುಣ್ಯದಿಂದಾಗಿ ಮಲ ಸಂಸಾರವೆ ಇರುವುದಿಲ್ಲ.

"ವೀರಮಾಹೇಶ್ವರಾಃ ಸರ್ವೇ ಮಲಸಂಸಾರವರ್ಜಿತಾಃ ।
ಜಾಗ್ರೇ ಸ್ವಪ್ನಂ ಸಮಾಗತ್ಯ ಸ್ವಪ್ನೇಜಾಗ್ರಂ ಬಲಾನ್ವಿತಂ॥
ಧಾರಯಂತಿ ಸದಾ ಪ್ರೀತ್ಯಾ ತ ಏತೇ ತತ್ತ್ವಪಾರಣಾಃ ।
ಮಂತ್ರಾಣಾಂ ಮೂರ್ತಯಃ ಸಾಕ್ಷಾತ್ ಭೂರುದ್ರಾಕಾರ ಜಂಗಮಾಃ॥
ಸುಷುಪ್ತೌ ಸ್ವಪ್ನೇ ಜಾಗ್ರೇ ಚ ಪ್ರತಿಷ್ಠಂತಿ ಪ್ರಭಾವತಃ ।
ತ ಏತೇ ಶಾಂಭವಂ ಲಿಂಗಂ ಯೋಗಸಾರಂ ಪ್ರವಿತ್ರಜಂ ॥"

—ವೀರಾಗಮ

ಗುರುಕಾರುಣ್ಯಬಲದಿಂದ ತ್ರಿಮಲಗಳ ಕಲುಷಿತ ಸಂಸಾರವನು ತೊಡೆದು ಹಾಕಿದ ವೀರಶೈವನಾದ ವೀರಮಾಹೇಶ್ವರರೆಲ್ಲರು ಜಾಗ್ರತ್ತಿನಲ್ಲಿ ಕರಣೇಂದ್ರಿಯ ಸಂಯಮನ ಶಾಂತಿಯನ್ನು, ನಿದ್ದೆಯಲ್ಲಿ ಎಚ್ಚರಿಕೆಯನ್ನು ಧಾರಣ ಮಾಡಿ, ಶಿವಭಕ್ತಿಸಂಪನ್ನರಾಗಿ ತತ್ತ್ವಸ್ವರೂಪರಾಗಿರುವರು. ಮಂತ್ರಮೂರ್ತಿಗಳಾದ ತತ್ತ್ವಸ್ವರೂಪರಾಗಿರುವರು. ಮಂತ್ರಮೂರ್ತಿಗಳಾದ ಸಚ್ಚಿದಾನಂದ ಸ್ವರೂಪವಾದ ಇಷ್ಟ-ಪ್ರಾಣಭಾವಲಿಂಗಗಳನ್ನು ಸಾಕ್ಷಾತ್ಕರಿಸಿಕೊಂಡು ಧಾರಣ ಮಾಡಿ

ಗುರು – ಚರರಾಗಿರುವರು. ತಮ್ಮ ಶಿವಯೋಗ ಪ್ರಭಾವದಿಂದ ಸುಷುಪ್ತಿ ಯಲ್ಲಿ ಭಾವಲಿಂಗವನ್ನು, ಸ್ವಪ್ನದಲ್ಲಿ ಪ್ರಾಣಲಿಂಗವನ್ನು, ಜಾಗ್ರತ್ತಿನಲ್ಲಿ ಇಷ್ಟ ಲಿಂಗವನ್ನು ಪ್ರತಿಷ್ಠಿಸಿಕೊಂಡಿರುವರು.

"ಜಾಗ್ರೇ ಜ್ಚೈತನ್ಯಕಂ ಜ್ಞಾನಂ ಬಾಲೋನ್ಮತ್ತ ಪಿಶಾಚವತ್ ।
ತಿರಸ್ಕೃತ್ಯ ಸದಾನಂದ ಚೇತನಂ ಬ್ರಹ್ಮಸಾಧನಂ॥
ಶಿವಸೂತ್ರಮಯಂ ಲಿಂಗಂ ಧಾರಯಂತಿ ದೃಢವ್ರತಾಃ ।
ವೀರಮಾಹೇಶ್ವರಾಃ ಸರ್ವೇಪ್ರಣುಗೌರಿ ಸುಭಕ್ತಿತಃ ॥"

—ವೀರಾಗಮ

ಜಾಗ್ರದವಸ್ಥೆಯಲ್ಲಿ ಮಾತ್ರ ವ್ಯವಹರಿಸುವ ಬ್ರಹ್ಮಾದ್ವೈತಿಯ ಜ್ಞಾನ ವನ್ನು ಮಗುವಿನಂತೆ, ಮರುಳನಂತೆ, ದೆವ್ವದಂತೆ ಕಡೆಗಣ್ಣಿನಿಂದ ಕಂಡು ಶಿವಾ ದ್ವೈತವ ಬಿಡದೆ ಆನಂದವನ್ನುಂಟು ಮಾಡುವ ಅಥವಾ ಚಿತ್ – ಸತ್ – ಆನಂದಮಯವಾದ ಪರಶಿವ ಬ್ರಹ್ಮಸಾಧಕವಾದ ಚೇತನಾತ್ಮಕವಾದ ಶಿವ ಸೂತ್ರ ಸಂಬಂಧವುಳ್ಳ ಇಷ್ಟಲಿಂಗವನ್ನು ದೃಢವ್ರತರಾದ ವೀರಮಾಹೇಶ್ವರರು ಸದ್ಭಕ್ತಿಯಿಂದ ಧರಿಸುವರು.

ಜಗದ್ಗುರು ಆದಿರೇಣುಕಶಿವಾಚಾರ್ಯರು ದಾರ್ಶನಿಕವಾಗಿ ನಿರ್ಣಯಿಸಿದ ಶಿವಾದ್ವೈತ ಸಿದ್ಧಾಂತದ ಬಗೆಗೆ ಇಲ್ಲಿಯವರೆವಿಗೂ ಅನ್ಯದರ್ಶನಗಳ ನಿರಾಕರಣ ಪೂರ್ವಕ ಸ್ವದರ್ಶನ ಸಂಸ್ಥಾಪವನ್ನು ಯಾವ ಕೊರತೆಯಿಲ್ಲದಂತೆ ಮಾಡಿದರು. ಮುಖ್ಯವಾಗಿ ಲಿಂಗಾಂಗ ಸಾಮರಸ್ಯಾತ್ಮಕವೂ ಶಿವಸೂತ್ರಸಮನ್ವಿತವೂ ಖಿ ತತ್ತ್ವವೇದ್ಯವೂ ಆದುದೆ ಶಿವಾದ್ವೈತ ಸಿದ್ಧಾಂತವೆಂದು ಜಗದ್ಗುರುಗಳು ಪ್ರತಿಪಾದಿಸಿದರು. ಶಿವದೀಕ್ಷಾ ಸಂಸ್ಕಾರಗಳಿಂದ ದೇಹಾತ್ಮಗಳು ಅಂಗ – ಲಿಂಗಗಳಾಗಿ ಜಡತ್ವವನ್ನೂ ಜೀವತ್ವವನ್ನೂ ಕಳೆದುಕೊಳ್ಳುವವು. ಬಳಿಕ ನೂರೊಂದು ಉಪಸ್ಥಲಗಳಿಂದೊಡಗೂಡಿದ ಷಟ್‌ಸ್ಥಲಾಚರಣೆಯಿಂದ ಅಂಗ ಲಿಂಗಗಳ ವಿಕಾಸವನ್ನು ಜಗದ್ಗುರುಗಳು ಮುಮ್ಮೊದಲು ಸಕ್ರಮವಾಗಿ ನಿರೂಪಿಸಿ ಶಿವಾದ್ವೈತ ಸಿದ್ಧಾಂತ ಸ್ಥಾಪಕರೆನಿಸುವರು.

ಏಕೋತ್ತರ ಶತಸ್ಥಾನಾಗಮಾಚರಣ ಶೋಧಕಃ ।
ಸ ಏಷಃ ಶ್ರೋತ್ರಿಯೋ ಧೀರೋಭವತೀತಿ ನ ಸಂಶಯ ॥"

—ವೀರಾಗಮ

ಏಕೋತ್ತರ ಶತಸ್ಥಲಗಳ ಆಗಮಾಚರಣದಿಂದ ಅಂಗ-ಲಿಂಗಗಳನ್ನು ಪರಿಶೋಧಿಸಿಕೊಂಡ ಶಿವಾದ್ವೈತಿಯೆ ನಿಜವಾದ ಶ್ರೋತ್ರಿಯನು, ಧೀರನು (ವೀರನು) ಆಗುವನು. ಇದರಲ್ಲಿ ಯಾವ ಸಂದೇಹವಿಲ್ಲ. ಶೃತಿಗಳನ್ನು ಬರೀ ಅಭ್ಯಾಸ ಮಾಡಿದವನೆ ಶ್ರೋತ್ರಿಯ ಎಂಬುದು ಸರಿಯಲ್ಲ, ಏಕೆಂದರೆ ಆಚರಣೆ ಆತನಿಗಿರುವುದಿಲ್ಲ, ಚೈತನ್ಯವಿರುವುದಿಲ್ಲ. 'ಷಟ್‌ಸ್ಥಲಾನುಭಾವಿಯೇ ಶ್ರೋತ್ರಿಯ ಎಂಬುದೇ ಸರಿಯೆಂದು ಜಗದ್ಗುರು ಆದಿರೇಣುಕರು ಪ್ರತಿಪಾದಿಸಿದ್ದಾರೆ. ಇದು ಇವರದೇ ಆದಕ್ರಾಂತದರ್ಶಿತ್ವ.

## ಶಿವಾದ್ವೈತ ಸಿದ್ಧಾಂತ ಸ್ಥಾಪನೆ-ಪ್ರಕಾಶನ !

ಶ್ರೀ ಜಗದ್ಗುರು ಆದಿರೇಣುಕಶಿವಾಚಾರ್ಯರ ಅವತರಣ ಶಿವಾದ್ವೈತ ಸಿದ್ಧಾಂತ ಸ್ಥಾಪನೆಗಾಗಿ ! ಅಮಾನುಷ ಶಕ್ತಿವಂತರಾಗಿ ಅವರು ಈ ಅವನಿಗೆ ಅವತರಿಸುವರು. ಸರ್ವಜ್ಞರಾಗಿ ಸರ್ವಕರ್ತವಾಗಿ ಸರ್ವಸಮರ್ಥರಾಗಿ ಅವತರಿಸುವರು. ಮಹಾ ಯೋಗಸಿದ್ಧರೂ ಮಹಾಸಿದ್ಧಪುರುಷರೂ ಆಗಿರುವರು.

"ಮದದ್ವೈತಪರಂ ಶಾಸ್ತ್ರಂ ವೇದವೇದಾಂತ ಸಮ್ಮತಂ
ಸ್ಥಾಪಯಿಷ್ಯಸಿ ಭೂಲೋಕೇ ಸರ್ವೇಷಾಂ ಹಿತಕಾರಕಂ ।
ಮಮ ಪ್ರತಾಪಮತುಲಂ ಮದ್ಭಕ್ತಾನಾಂ ವಿಶೇಷತಃ
ಪ್ರಕಾಶಯ ಮಹೀಭಾಗೇ ವೇದಮಾರ್ಗಾನುಸಾರತಃ ॥"

—ಸಿದ್ಧಾಂತ ಶಿಖಾಮಣಿ

ಹೀಗೆಂದು ಶಿವನಿಂದ ಆಜ್ಞಪ್ತರಾಗಿ ಅವತರಿಸುವರು ಈ ಲೋಕಕ್ಕೆ, ವೇದ ವೇದಾಂತ ಸಮ್ಮತವಾದ ಶಿವಾದ್ವೈತ ಶಾಸ್ತ್ರವನ್ನೂ ಭೂಲೋಕದಲ್ಲಿ ಸರ್ವರ ಹಿತಕ್ಕಾಗಿ ಸ್ಥಾಪಿಸುವುದೇ ರೇಣುಕ ಭಗವತ್ಪಾದರ ಅವತಾರದ ಮುಖ್ಯ ಮಹಿಮವಾಗಿದ್ದಿತು. ಮತ್ತು ಅತುಲವಾದ ಅಂದರೆ ಅನನ್ಯ ಸಾಧಾರಣವಾದ ಪರಶಿವ ಪ್ರಭಾವವನ್ನು ಪರಶಿವಭಕ್ತರ ಹೆಚ್ಚಳಿಕೆಯನ್ನು ಮಹಿಯಲ್ಲಿ ಬೆಳಕಿಗೆ ತರುವುದೇ ಆಗಿದ್ದಿತು. ಅದರಿಂದ ಅವರು, "ಶಿವಾದ್ವೈತ ಪರಿಜ್ಞಾನ ಪರಮಾನಂದ ಮೋದಿತಂ। ನಿರ್ಧೂತಸ್ವರ ಸಂಸಾರ ವಾಸನಾದೋಷ ಪಂಜರಂ॥ ಶಿವಾಗಮ ಸುಧಾಸಿಂಧು ಸಮುನ್ಮೇಷ ಸುಧಾಕರಂ। ಯಮಾದಿ

ಯೋಗತಂತ್ರಜ್ಞಂ ಸ್ವತಂತ್ರಂ ಸರ್ವಕರ್ಮಸು। ಸಮಸ್ತಸಿದ್ಧ ಸಂತಾನ ಸಮುದಾಯ ಶಿಖಾಮಣಿಂ||" ಸಿ.ಶಿ.

ಶಿವಾದ್ವೈತ ಸಿದ್ಧಾಂತ ಪರಿಜ್ಞಾನಿಗಳೂ ಪರಮಾನಂದ ಭರಿತರೂ ಆಗಿದ್ದರು. ಸರ್ವಸಂಸಾರವಾಸನಾ ವಿರಹಿತರೂ ಶಿವಾಗಮ ಸುಧಾಸಾಗರ ವನ್ನು ವಿಜೃಂಭಿಸುವ ಸುಧಾಕರರೂ ಯಮಾದಿಯೋಗ ತಂತ್ರಜ್ಞರೂ ಸರ್ವ ಕ್ರಿಯೆಗಳಲ್ಲಿ ಸ್ವತಂತ್ರರೂ ಮತ್ತು ಸಮಸ್ತ ಸಿದ್ಧಸಂತಾನಕ್ಕೆ ಶಿಖಾರತ್ನರೂ ಆಗಿದ್ದರು.

## ಅವತಾರ ಎಲ್ಲಿ ?

ಈ ಬಗೆಗೆ ವೀರಾಗಮ ಏನನ್ನೂ ಹೇಳುವುದಿಲ್ಲ. ಇದು ಅದರ ಧ್ಯೇಯಕ್ಕೆ ಹೊರತಾದ ವಿಷಯ. ಈ ಬಗೆಗೆ ಇಂದಿಗೆ ೧೨ನೂರು ವರುಷಗಳ ಹಿಂದಿದ್ದ ಮಹಾವೀರಶೈವಧರ್ಮಮಾರ್ಗಪ್ರವರ್ತಕನಾದ ಶಿವಯೋಗಿ ಶಿವಾಚಾರ್ಯನು ತಾನು ರೂಪಿಸಿದ ರೇಣುಕಗೀತೆಯಲ್ಲಿ ತೆಲುಗು ದೇಶದಲ್ಲಿರುವ ಕುಲ್ಯಪಾಕ ಎಂಬ ಪುಣ್ಯಕ್ಷೇತ್ರದಲ್ಲಿ ಅವತರಿಸಿದರೆಂದು ನಿರೂಪಿಸಿದ್ದಾನೆ. ಇದುವೆ ದಿಟವೆಂದು ತೋರುತ್ತದೆ.

ಕನ್ನಡ ಹರಿಹರ ಕವಿಯು ಹನ್ನೊಂದನೆಯ ಶತಮಾನದಲ್ಲಿ ಅವತರಿಸಿದ ರೇವಣಸಿದ್ಧ ಶಿವಾಚಾರ್ಯರು ಕೊಲ್ಲಿ ಪಾಕಿಯಲ್ಲಿ ಅವತರಿಸಿದರೆಂದ ಹೇಳಿರುವುದು ಸರಿಯಲ್ಲ. ಏಕೆಂದರೆ ಶಿರಿವಾಳಶಾಸನದಲ್ಲಿ ರೇವಣಸಿದ್ಧ ಶಿವಾಚಾರ್ಯರು ಶಿವಯೋಗಿ ಶಾಂತಮಯ್ಯನ ಪುತ್ರನೆಂದು ಹೇಳಲಾಗಿದೆ. ಇದರಿಂದಾಗಿ ಶ್ರೀರೇವಣಸಿದ್ಧರು ಕುಲ್ಯಪಾಕ ಕ್ಷೇತ್ರದಲ್ಲಿ ಅವತರಿಸಿದರೆಂಬ ಹರಿಹರ ಕವಿಯ ಹೇಳಿಕೆ ಸತ್ಯದ ಒರೆಗಲ್ಲಿಗೆ ನಿಲ್ಲುವುದಲ್ಲ.

> ''ಅಥ ತ್ರಿಲಿಂಗ ವಿಷಯೇ ಕುಲ್ಯಪಾಕಾಭಿದೇ ಸ್ಥಲೇ।
> ಸೋಮೇಶ್ವರ ಮಹಾಲಿಂಗಾತ್ ಪ್ರಾದುರಾಸೀತ್ಸ ರೇಣುಕಃ॥"

ಎಂದು ಎಂಟನೆಯ ಶತಮಾನದ ಸಿದ್ಧಾಂತ ಶಿಖಾಮಣಿಯ ಉಕ್ತಿಯಿದು. ಇಲ್ಲಿ ರೇಣುಕ ನಾಮ ಸ್ಪಷ್ಟವಾಗಿದೆ. ರೇಣುಕರೇ ಬೇರೆ, ರೇವಣಸಿದ್ಧರೆ ಬೇರೆ ಎಂಬುದನ್ನು ನಾವು ಈಗಾಗಲೇ ವೀರಾಗಮ ಪ್ರಯಾಣ

ಗಳಿಂದ ಸಂಶಯಕ್ಕಾಸ್ಪದವಿಲ್ಲದಂತೆ ಸಿದ್ಧಪಡಿಸಿದ್ದೇವೆ. ಇಂತಿದ್ದರೂ ಈಗಲೂ ಕೆಲವರು ರೇವಣಸಿದ್ಧರೇ ರೇಣುಕರೆಂದು ಬರೆಯುತ್ತಾರೆ. ಭಾಷಿಸುತ್ತಾರೆ. ಇದು ಎಷ್ಟು ಮಾತ್ರಕ್ಕೂ ಸರಿಯಲ್ಲ, ತಿಳಿದೂ ಹೇಳುವಲ್ಲಿ ದುರುದ್ದೇಶವಿದೆಯೆಂಬುದು ಸ್ಪಷ್ಟವಾಗುತ್ತದೆ. ಪಂಡಿತತ್ರಯರಲ್ಲಿ ಒಬ್ಬರಾದ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಶ್ರೀಶೈಲ ಸೂರ್ಯಸಿಂಹಾಸನದ ಮೂಲ ಪುರುಷರೆಂದು ಹೇಳುವಷ್ಟೇ ಆಭಾಸವಾದುದಾಗಿದೆ. ಮೂಲಪಂಡಿತಾರಾಧ್ಯರೇ ಬೇರೆ! ಅವರಿಗೆ ಹೆಸರಿನ ಹಿಂದೆ ಯಾವ ವಿಶೇಷಣವಿಲ್ಲ. ಜಗದ್ಗುರು ಪಂಡಿತಾರಾಧ್ಯರ ಬಗೆಗೆ ಕರ್ನೂಲು ಜಿಲ್ಲೆಯ ಪಾಣಂಗ್ರಾಮದಲ್ಲಿ ೬ನೆಯ ಶತಮಾನದ ಶಿಲಾ ಶಾಸನವಿದೆ. ಇದರಿಂದಾಗಿ ಶ್ರೀಶೈಲ ಮೂಲ ಜಗದ್ಗುರು ಪಂಡಿತಾರಾಧ್ಯರ 'ಕಾಲ ಆರನೆಯ ಶತಮಾನಕ್ಕೆ ಹೋಗುತ್ತದೆ. ಶ್ವೇತಾಚಾರ್ಯ ಎಂಬ ಬಿರುದು ಅವರಿಗಿದೆ. ಇದಿರಲಿ.

## ಹೆಸರೇನು ? ಹೆಂಪೇನು ?

ನಾಮ್ನಾ ರೇಣುಕಸಿದ್ಧೋಽಹಂ ಸಿದ್ಧಸಂತಾನ ನಾಯಕಃ ।
ಸ್ವಚ್ಛಂದಚಾರೀ ಲೋಕೇಽಸ್ಮಿನ್ ಶಿವಸಿದ್ಧಾಂತ ಪಾಲಕಃ ॥"
''ವೀರಸಿದ್ಧಾಂತ ನಿರ್ವಾಹಕೃತ ಪಟ್ಟ ನಿಬಂಧನಂ ।
ಆಲೋಕ ಮಾತ್ರ ನಿರ್ಭಿನ್ನ ಸಮಸ್ತ ಪ್ರಾಣಿಪಾತಕಂ ॥

— ಸಿ. ಶಿ.

**ಅವರ** ಪುಣ್ಯನಾಮ ರೇಣುಕಸಿದ್ಧರು. ಸಿದ್ಧಸಂತಾನನಾಯಕರು. ಸ್ವತಂತ್ರರು. ಈ ಲೋಕದಲ್ಲಿ ಶಿವಸಿದ್ಧಾಂತ ಪಾಲಕರು. ಅಂತೆಯೇ ಅವರು ವೀರಶೈವಸಿದ್ಧಾಂತವನ್ನು ನಿರ್ವಹಿಸಲು ಪಟ್ಟ ಬದ್ಧರಾಗಿದ್ದರು. ಅವರ ಆ ನೋಟ ಮಾತ್ರದಿಂದ ಎಲ್ಲ ಪ್ರಾಣಿಗಳ ಪಾತಕ ಪರಿಹಾರವಾಗುತ್ತಿತ್ತು. ಇದು ಅವರ ಹೆಂಪು. ಅವರು ಯಾವಾಗಲೂ 'ಶಿವಾದ್ವೈತ ಮಹಾನಂದ ಪರಾಯಣ'ರಾಗಿದ್ದರು ಅವರ ಪ್ರಬೋಧದಲ್ಲಿ ಅವರದೆ ಆದ ಪ್ರತಿಭೆ ಯಿದ್ದಿತು. ಅವರಿಂದ ಅನುಗ್ರಹೀತನಾದ ಅಗಸ್ತ್ಯಮುನಿ ಅನುಭವ ವಾಣಿಯನ್ನಿಲ್ಲಿ ಆಲಿಸಿರಿ :

"ಶಾಸ್ತ್ರಂ ತವ ಮುಖೋದ್ಗೀರ್ಣಂ ಶಿವಾದ್ವೈತ ಪರಂ ವರಂ ।
ಮಾಂ ವಿನಾ ಕಸ್ಯ ಲೋಕೇಷು ಶ್ರೋತುಮಸ್ತಿ ತಪಃ ಶುಭಂ ॥
ವೀರಮಾಹೇಶ್ವರಗ್ರಾಹ್ಯಂ ಶಿವಾದ್ವೈತ ಪ್ರಕಾಶಕಂ ।
ಯ ಇದಂ ಶಿವಸಿದ್ಧಾಂತಂ ವೀರಶೈವಮತಾತ್ಮಕಂ ।
ಶೃಣೋತಿ ಶುದ್ಧ ಮನಸಾ ಸಯಾತಿ ಪರಮಾಂ ಗತಿಂ॥"

—ಸಿ.ಶಿ.

ಶಿವಾದ್ವೈತ ಪರಶಾಸ್ತ್ರವೆಂದು, ಸರ್ವಶ್ರೇಷ್ಟವೆಂದು, ವೀರಮಾಹೇಶ್ವರ ಗ್ರಾಹ್ಯವೆಂದು, ಶಿವಾದ್ವೈತಸಿದ್ಧಾಂತ ಪ್ರಕಾಶಕವೆಂದು ಪ್ರತಿಪಾದಿಸಿದ್ದಲ್ಲದೆ, ಈ ಶಿವಾದ್ವೈತಸಿದ್ಧಾಂತವು ವೀರಶೈವಮತಾತ್ಮಕವಾದುದೆಂದು ಸುಸ್ಪಷ್ಟವಾಗಿ ಹೇಳಲಾಗಿದೆ. ಇದು ಗಮನೀಯ; ಮತ್ತು ಮನನೀಯ.

ಶ್ರೀ ಆದಿರೇಣುಕ ಶಿವಾಚಾರ್ಯರು ಅಸಾಮಾನ್ಯರು ; ಆದರ್ಶ ವ್ಯಕ್ತಿತ್ವವುಳ್ಳವರು, ಅಲ್ಲದೆ ಷಡ್ವಿಧ ಶಕ್ತಿಸಂಪನ್ನರು. ಅವರಲ್ಲಿ ಕ್ರಿಯಾಶಕ್ತಿ ಜ್ಞಾನ ಶಕ್ತಿ ಸತ್‌ಸಂಕಲ್ಪಶಕ್ತಿಗಳು ಆದಿ-ಪರಾ-ಚಚ್ಛಕ್ತಿಗಳು ಅಖಂಡವಾಗಿ ಅವತರಣಗೊಂಡಿದ್ದವು. ನಿತ್ಯಪರಿಪೂರ್ಣವಾಗಿದ್ದವು. ಒಂದು ಕಡೆ ಪರಿಪೂರ್ಣವಾಗಿ ಕ್ರಿಯಾಶಕ್ತಿಯು ವಿಜೃಂಭಿಸಿದರೆ, ಇನ್ನೊಂದು ಕಡೆ ಸರ್ವಸಮನ್ವಯ ಪರಿಪೂರ್ಣ ಪ್ರಜ್ಞಾಶಕ್ತಿ ವೈಭವಿಸಿದೆ. ಮತ್ತೊಂದು ಕಡೆ ಪರಮ ಪ್ರಸಾದಿಕ ಸಂಕಲ್ಪಶಕ್ತಿ ವಿಶೇಷವಾಗಿ ವಿಡಾಯಗೊಂಡಿದೆ, ಹೀಗೆ ತ್ರಿವಿಧಶಕ್ತಿಗಳು ಒಬ್ಬರಲ್ಲಿ ಸಂಪೂರ್ಣವಾಗಿ ಒಟ್ಟಾಗಿ ಅಭಿವ್ಯಕ್ತಿಗೊಂಡ ಅನನ್ಯ ವ್ಯಕ್ತಿತ್ವವನ್ನು ಆದಿರೇಣುಕ ಭಗವತ್ಪಾದರಲ್ಲಿ ಅಲ್ಲದೆ ಬೇರೆ ನಾವೆಲ್ಲಿಯೂ ನೋಡುವಂತಿಲ್ಲ. ಬಿಂದುವನ್ನು ಸಿಂಧುವಾಗಿಸುವ ಅವರ ಕ್ರಿಯಾಶಕ್ತಿ ಸಣ್ಣದಲ್ಲ; ಯೋಗಶಕ್ತಿ ಸಾಮಾನ್ಯವಲ್ಲ. ಲಕ್ಷಲಕ್ಷವಲ್ಲ, ಕೋಟಿ ಕೋಟಿ ಜನರಿಗೆ ದೀಕ್ಷೆಯನ್ನಿತ್ತು ಸಂಸ್ಕರಿಸುವ, ಸಂಸ್ಕರಿಸಿ ಅವರಿಗೆಲ್ಲ ಪ್ರಸಾದವನ್ನು ದಯಾಪಾಲಿಸುವ ಯೌಗಿಕಶಕ್ತಿ ಸೀಮಿತವಾದುದಲ್ಲ, ಷಡ್ ದಾರ್ಶನಿಕರನ್ನು ಜಯಿಸಿ ಶಿವಾದ್ವೈತ ಸಿದ್ಧಾಂತವನ್ನು ಸಂಸ್ಥಾಪಿಸುವ ಪ್ರಜ್ಞಾಶಕ್ತಿ ಪರಿಮಿತವಾದುದೇನಲ್ಲ. ಅದು ಪರಿಪೂರ್ಣಾಖಂಡ ಶಕ್ತಿ. ಇಂತಹ ಒಂದು ಜಾಜ್ವಲ್ಯಮಯವಾದ ಜೀವನದರ್ಶನವನ್ನು ಪೂರ್ಣವಲ್ಲದಿದ್ದರೂ ಬಹುಭಾಗವಾಗಿ ಮಾಡಿಸಿದೆ ವೀರಾಗಮಉದ್ಗ್ರಂಥ ! ಉತ್ತರ ಭಾಗ ಸಂಪೂರ್ಣಸಿಕ್ಕಿದ್ದರೆ ಇನ್ನೂ ಅದೆಷ್ಟು ಊರ್ಜಿತ ಸತ್ವಶಾಲಿ ಜೀವನ

ದರ್ಶನವಾಗುತ್ತಿತ್ತೋ ಎನಿಸುತ್ತಿದೆ. ಆದರೆ ಆ ಭಾಗ್ಯ ನಮಗಿರಬೇಕಲ್ಲಾ ! ಪ್ರಯತ್ನಿಸಿದರೆ ಆ ಸೌಭಾಗ್ಯವೂ ಬಾರದಿರಲಿಕ್ಕಿಲ್ಲ ಎಂದೆನಿಸುತ್ತದೆ. ಚಾತಕ ಪಕ್ಕಿಯಂತೆ ಕಾಯಬೇಕಾಗಿದೆ ; ಕಾಯುತ್ತಿರೋಣವಾಗಿದೆ.

ಜಗದ್ಗುರು ಶ್ರೀ ಆದಿರೇಣುಕರ ಅಂದಿನ ಹಸನಾದ ಹೋರಾಟ ಗಾಂಧಿ ಯವರ ಹೋರಾಟಕ್ಕಿಂತ ಹೆಚ್ಚು ಹಿರಿದಾದದ್ದು. ಕೇವಲ ಸ್ವಾತಂತ್ರ್ಯಕ್ಕಾಗಿ ಗಾಂಧಿಯವರು ಹೋರಾಡಿದರೆ, ಅಂದು ಜಗದ್ಗುರುವರ್ಯರು ಭಾರತೀಯರ ಎಲ್ಲ ಕ್ಷೇತ್ರಗಳಲ್ಲಿನ ಬಡತನಕ್ಕಾಗಿ ಹೋರಾಡಿದ್ದರು. ಒಂದೇ ಎರಡೇ ! ಆಹಾರ ಆರ್ಥಿಕ ನೈತಿಕ ಸಾಂಸ್ಕೃತಿಕ ಅಸ್ಪೃಶ್ಯತೆ ಅಜ್ಞಾನಾದಿ ಎಲ್ಲ ಕ್ಷೇತ್ರ ಗಳಲ್ಲಿಯೂ ಹೋರಾಟ ನಡೆಸಿ ಎಲ್ಲದರಲ್ಲಿಯೂ ಸ್ವಯಂ ಪೂರ್ಣತೆಯನ್ನು ಗಳಿಸಿಕೊಟ್ಟು ಸಫಲರಾದುದು ಸಾಮಾನ್ಯವಾದ ಮಾತಲ್ಲ. ಅಸ್ಪೃಶ್ಯರಿಗೆ ಸಂಸ್ಕಾರ ಕೊಟ್ಟು ಸಮಾಜದಲ್ಲಿ ಸಮರಸಗೊಳಿಸುವ ವಿಶಿಷ್ಟ ವಿಧಾನವನ್ನು ಶ್ರೀ. ಜ. ಆದಿರೇಣುಕರೇ ಮೊದಲು ಮಾಡುವರು. ಇಂದಿನ ಅಸ್ಪೃಶ್ಯತಾ ನಿವಾರಣ ಈ ರೀತಿಯದಿಲ್ಲ. ಸಂಸ್ಕಾರವಿಲ್ಲದೆ ಕೇವಲ ರಾಜಕೀಯವಾಗಿ ಅಥವಾ ಶೈಕ್ಷಣಿಕವಾಗಿ ಮುಂದೆ ತರುವ ಸಾಹಸ ಇಂದಿನದು.

ಮಹಾ ಮಾನವತಾವಾದಿಗಳಾದ ಆದಿ ಜಗದ್ಗುರು ರೇಣುಕ ಶಿವಾ ಚಾರ್ಯರು ಅಸ್ಪೃಶ್ಯತೆ ಭಾರತದಲ್ಲಿ ತಲೆಯೆತ್ತಿ ನಿಂತಿರುವುದನ್ನು ಕಂಡು ಸಹಿಸಲಿಲ್ಲ. ಸರ್ವವನ್ನು ಸ್ಪೃಶ್ಯರನ್ನಾಗಿ ಮಾಡುವ, ಮೇಲು ಕೀಳು ಕುಲ ಗಳಿಲ್ಲದಂತೆ ಮಾಡುವ ಮಹಾಕ್ರಾಂತಿಯನ್ನೇ ಕೈಕೊಂಡು, ಹದಿನೆಂಟು ಕುಲ ಪಂಥಗಳನ್ನು ಎತ್ತಿಹಿಡಿಯುವ ಹೊಲಬಿನಲ್ಲಿ ಸರ್ವರಿಗೂ ಶಿವ ಸಂಸ್ಕಾರ ಅಗತ್ಯ ವೆಂದು ಭಾವಿಸಿ, ಹದಿನೆಂಟು ಕುಲದವರಿಗೆ ಶಿವ ಸಂಸ್ಕಾರವನ್ನೀಯಲು ಹದಿನೆಂಟು ಮಠಗಳನ್ನೇ ಸ್ಥಾಪಿಸಿದರು. ಅವು ಅವರು ಅವತರಿಸಿದ ಕುಲ್ಯ ಪಾಕ ಕ್ಷೇತ್ರದ ಸುತ್ತು ಮುತ್ತು ಈಗಲೂ ಇದ್ದು ಕೆಲವು ಮಾತ್ರ ಕೆಲಸ ಮಾಡುತ್ತಿವೆಯೆಂದು "ಕೊಲ್ಲಿ ಪಾಕ ಕ್ಷೇತ್ರ ದರ್ಶನ" ಎಂಬೀ ಗ್ರಂಥದಲ್ಲಿ ಶ್ರೀ ಷ. ಬ್ರ. ರೇಣುಕ ಶಿವಾಚಾರ್ಯರು, ಶಿಲಾಮಠ, ತಾವರೆಕೆರೆ ಇವರು ಹೀಗೆ ಹೇಳಿದ್ದಾರೆ. :

## ಹದಿನೆಂಟು ಮಠಗಳು ; ೧೮ ಕುಲೋದ್ಧಾರಃ

ಕುಲಕ್ಕೊಂದರಂತೆ ಹದಿನೆಂಟು ಕುಲಗಳಿಗೆ ಹದಿನೆಂಟು ಮಠಗಳನ್ನು ಸ್ಥಾಪಿಸಿ, ಹದಿನೆಂಟು ಕುಲದವರು ಆ ಮಠಗಳಲ್ಲಿ ಇರುವ ಮಾಹೇಶ್ವರರಿಂದ ಶಿವ ಸಂಸ್ಕಾರ ಪಡೆದು ಶಿವಾಚಾರಿಗಳಾಗಬೇಕೆಂದು ವ್ಯವಸ್ಥೆಯನ್ನೆಸಗಿದರು. ಆದೆಂತಹ ಉದಾತ್ತವಾದ ಮನೋಭಾವ ಅವರದು. ಅವರ ಆ ಮಹಾ ಮಾನವತಾ ವಾದಕ್ಕೆ ಇದೊಂದು ಕ್ರಿಯಾತ್ಮಕ ನಿದರ್ಶನವಾಗಿದೆ. ಕುಲ ಭೇದ ಗಳಿರಬಾರದೆಂದು ಬರೀ ಬೋಧಿಸಿ ಬಿಡದೆ ಕಾರ್ಯರೂಪಕ್ಕೆ ತಂದುದು ಅವರ ವಿಶಾಲ ಮನೋಭಾವಕ್ಕೆ ಮಹಾ ಮಣಿಹಕ್ಕೆ ನಿದರ್ಶನವಾಗಿದೆ.

ಆ ಹದಿನೆಂಟು ಮಠಗಳ ಕಿರುಪರಿಚಯುವನ್ನು ಕೃತಿಕಾರರು ಹೀಗೆ ಮಾಡಿದ್ದಾರೆ :

**೧. ಪೆದ್ದಮಠಂ** :– ಈ ಮಠಕ್ಕೆ ಅಧಿಕಾರಿಗಳು ಶ್ರೀ ವೇ॥ ಕೊಟ್ರೇಶ್ವರಯ್ಯನವರು. ಇವರು ಉಳಿದ ೧೭ ಮಠಗಳ ಮೇಲ್ವಿಚಾರಣೆ ಯನ್ನು ಮಾಡಬಹುದು. ಇವರು ಜಂಗಮರಾಗಿದ್ದು ಧರ್ಮ ಕಾರ್ಯಗಳನ್ನು ಮುಂದುವರಿಸಿಕೊಂಡು ಹೋಗುವರು. ಇವರು ಬ್ರಹ್ಮಚಾರಿಗಳಲ್ಲ. ಗೃಹಸ್ಥಾ ಶ್ರಮದಲ್ಲಿದ್ದು ಧರ್ಮದ ಕೆಲಸ ಕಾರ್ಯಗಳನ್ನು ನೋಡಿಕೊಳ್ಳುವರು. ಇವರು ವರುಷಕ್ಕೆ ೨–೩ ಸಾರೆ ಆ ಮಠದ ಶಿಷ್ಯರ ಮನೆಗಳಿಗೆ ತೆರಳಿ ಅವರಿಂದ ಭಕ್ತಿ ಕಾಣಿಕೆಗಳನ್ನು ಸ್ವೀಕರಿಸುತ್ತಾರೆ. ಧರ್ಮ ಪ್ರಚಾರ ಮೂಲ ಗುರಿಯಾಗಿರು ವುದು........

**೨. ಗಾಂಡ್ಲಮಠಂ** :– ಈ ಮಠಕ್ಕೆ ಶ್ರೀ ವೇ॥ ವೀರಭದ್ರಸ್ವಾಮಿ ಗಳು ಅಧಿಕಾರಿಗಳು. ಇವರೂ ಗೃಹಸ್ಥಾಶ್ರಮಿಗಳೆ ! ಶ್ರೀ ಸೋಮೇಶ್ವರ ಸ್ವಾಮಿ ದೇವಾಲಯದ ಪ್ರಧಾನ ಅರ್ಚಕರು. ದೇವಾಲಯದ ಜೀರ್ಣೋದ್ಧಾರ ಕಾರ್ಯದಲ್ಲಿ ಹೆಚ್ಚಿನ ಕಾಳಜಿ ವಹಿಸಿದ್ದಾರೆ.... ದೇವಾಲಯಕ್ಕೆ ಬಂದ ಶಿಷ್ಯ– ಸದ್ಭಕ್ತರಿಗೆ ಇರಲು ವ್ಯವಸ್ಥೆ ಕಲ್ಪಿಸಿದ್ದಾರೆ. ಮೊದಲಿಗಿಂತಲೂ ಹೆಚ್ಚು ಸುಧಾರಣೆಗೆ ತಂದಿದ್ದಾರೆ. ಇವರ ಮಠವು ದೇವಾಲಯಕ್ಕೆ ಒಂದು ಫರ್ಲಾಂಗು ದೂರ ಇರುತ್ತದೆ. ಮಠದಲ್ಲಿ 'ಶ್ರೀ ಚಾಂಡೇಶ್ವರ' ಎಂಬ ಶಿವ

ಲಿಂಗವಿರುವುದು. ಪೂಜೆ ನಿತ್ಯ ನಡೆಯುತ್ತದೆ. ಮಠದ ಶಿಷ್ಯರು ಅಪಾರ ವಿದ್ದು ಶೇಂದೀ ಮಾರುವ ಕಸುಬು ಮಾಡುತ್ತಾರೆ.

೩. **ಕುರುಮುಮಠಂ** :– ಈ ಮಠದ ಶ್ರೀ ವೀರಭದ್ರಯ್ಯನವರು ಗೃಹಸ್ಥರು. ಮಠದಲ್ಲಿ 'ಶ್ರೀ ಸಿದ್ಧೇಶ್ವರ ಲಿಂಗ' ಇದೆ. ಇದರ ಪೂಜಾ ಕಾರ್ಯಗಳನ್ನು ಇವರೇ ನೆರವೇರಿಸುವರು. ಇವರ ಶಿಷ್ಯರು ಕುರುಬರು. ಕುರಿ ಗಳನ್ನು ಸಾಕಿ, ಅದರಿಂದ ಬಂದ ಉತ್ಪನ್ನದಿಂದ ಉಪಜೀವಿಸುವರು. ವರುಷ ಕ್ಕೊಮ್ಮೆ ಮಠಕ್ಕೆ ಗುರು ಕಾಣಿಕೆಯನ್ನು ಸಲ್ಲಿಸುತ್ತಾರೆ.

೪. **ಮೇದರಮುಠಂ** :– ಈ ಮಠದ ಅಧಿಕಾರಿಗಳು ಶ್ರೀ ಮಲ್ಲಯ್ಯ ನವರು. ಈ ಮಠದಲ್ಲಿ 'ಕೇತೇಶ್ವರ ಶಿವಲಿಂಗ'ವಿದೆ. ಈ ಮಠವು ಸೋಮೇಶ್ವರ ದೇವಾಲಯದ ಎಡಭಾಗಕ್ಕೆ ಪೌಳಿಯ ಹೊರ ಭಾಗದಲ್ಲಿದೆ. ಇವರ ಶಿಷ್ಯರು ಬಿದಿರಿನಲ್ಲಿ ಬುಟ್ಟಿ, ತೊಟ್ಟಿಲು, ಚಾಪೆ, ಮರ ಮುಂತಾಗಿ ಮಾಡಿ ಮಾರುವುದೇ ಇವರ ಕಾಯಕ. ಅದರಿಂದ ಬಂದ ಸಂಪಾದನೆಯಲ್ಲಿ ತಾವೂ ಜೀವಿಸಿ, ತಮ್ಮ ಮನೆಯ ಗುರುಗಳಿಗೆ ಕಾಣಿಕೆಯಾಗಿ ಪ್ರತಿ ವರ್ಷ ಅರ್ಪಿಸುವ ರೂಢಿ ಇವರಲ್ಲಿ ಬೆಳೆದು ಬಂದಿದೆ. ಶ್ರೀ ವೀರಮಲ್ಲಯ್ಯನವರು ಇವ ಆಚಾರ ವಿಚಾರ ಸಂಸ್ಕಾರಾದಿ ಕ್ರಿಯೆಗಳನ್ನು ನೆರವೇರಿಸುತ್ತಾರೆ.

೫. **ಗೊಲ್ಲಮುಠಂ**:–ಈ ಮಠಾದಿಕಾರಿಗಳು ಶ್ರೀವೇ ಅಚವಯ್ಯಸ್ವಾಮಿ ಯವರು ಸಂಸಾರಿಗಳು. ಇವರ ಶಿಷ್ಯರು ಯಾದವ ವಂಶಕ್ಕೆ ಸೇರಿದವರು. ಬಡತನದಿಂದಾಗಿ ಗೊಲ್ಲ ಕಾಯಕವಂತರು.

೬. **ಸಾಲೆಮುಠಂ** :– ಈ ಮಠದ ಆಗುಹೋಗುಗಳನ್ನು ಶಿಷ್ಯರ ಶುದ್ಧಾಶುದ್ಧ ಕ್ರಿಯೆಗಳನ್ನು ನಿರ್ವಹಿಸುವವರು ಶ್ರೀ ವೇ॥ ಶಂಕರಯ್ಯ ಎಂಬ ವರು. ಇವರೂ ಗೃಹಸ್ಥರು. ಇವರ ಶಿಷ್ಯರು ಬಟ್ಟೆಯನ್ನು ತಯಾರಿಸುವ ನೆಯ್ಗೆ ಕಾಯಕದವರು. ವರುಷಕ್ಕೊಮ್ಮೆ ತಮ್ಮ ಗುರುಗಳಿಗೆ ಭಕ್ತಿ ಕಾಣಿಕೆ ಯನ್ನು ಸಲ್ಲಿಸುವರು.

೭. **ಕೋಮುಟಿಮುಠಂ** :– ಶ್ರೀ ವೇ॥ ನಾಗೇಂದ್ರಯ್ಯನವರು ಈ ಮಠದ ಅಧಿಕಾರಿಗಳು. ಇವರ ಮಠದಲ್ಲಿ 'ಶ್ರೀ ನಗರೇಶ್ವರ ಸ್ವಾಮಿ' ಶಿವ ಲಿಂಗವಿದೆ. ಈ ಮಠದ ಶಿಷ್ಯರು ವಾಣಿಜ್ಯ ವೃತ್ತಿಯವರು, ತಮ್ಮ ತಮ್ಮ

ವ್ಯಾಪಾರದಲ್ಲಿ ಜೀವನ ನಡೆಸಿ, ಉಳಿದಿದ್ದನ್ನು ಧರ್ಮ ಕಾರ್ಯಗಳಿಗೆ ಗುರುಗಳಿಗೆ ಕೊಡುವವರಂತೆ.

೮. **ಕಾಪುಲಮಠಂ :–** ಶ್ರೀ ವೇ॥ ಸೋಮಯ್ಯ ಗುರುಗಳು ಈ ಮಠದ ಕಾರ್ಯಕರ್ತರು. ಇಲ್ಲಿ ಶ್ರೀ ಮಲ್ಲಿಕಾರ್ಜುನ ಶಿವಲಿಂಗ ವಿರಾಜಿಸುವುದು. ಕಾಪ್ರುಲ ಎಂದರೆ ರೆಡ್ಡಿ ಜನ ಮತ್ತು ಒಕ್ಕಲಿಗರು. ಇವರು ವ್ಯವಸಾಯದಲ್ಲಿ ನಿಪುಣರು. ರಾಜಕೀಯಕ್ಕೂ ಅಂಟಿಕೊಂಡಿದ್ದಾರೆಂಬುದನ್ನು ಇಲ್ಲಿಯವರೇ ಸ್ಪಷ್ಟವಾಗಿ ಹೇಳುವರು.

೯. **ಮಾದಿಗಮಠಂ :–** ಮಾದಿಗರು ಮಾಲರು ಎಂದು ಎರಡು ಬಗೆ! ಮಾಂಸ, ಸುರೆಗಳನ್ನು ಮಾರುವುದು ಇವರ ಕೆಲಸ. ಇದು ಸಂಪ್ರದಾಯ ವಾಗಿ ಬಂದಿದೆ. ಅಲ್ಲದೆ ಕುಲ ಕಸುಬು ಆದ ಚಪ್ಪಲಿಗಳನ್ನೂ ಮಾಡುತ್ತಾರೆ. ಆದರೂ ಅದಷ್ಟು ಶುಚಿಯಾಗಿರುತ್ತಾರೆ. ಇವರಿಗೂ ಗುರುಗಳಿದ್ದಾರೆ. ಇವರ ಗುರುಗಳಿಗೆ ಲಿಂಗಧಾರಣೆ ಕಡ್ಡಾಯವಾಗಿರುವುದು,

೧೦. **ಮಾಲಮಠಂ :–** ಮಾದಿಗರಿಗಿಂತ ಮಾಲರು ನಸು ಹೆಚ್ಚಿನವರು. ಮಾಲಮಠ ಮಾದಿಗರ ಮಠದ ಕೆಳಗಡೆ ಇರುವಂತೆ ಏರ್ಪಡಿಸಿರುವರು. ಇದನ್ನು ಎರಡನೆಯ ವರ್ಗಕ್ಕೆ ಸೇರಿಸಿದ್ದಾರೆ. ಇವರೂ ಸಹ ಚಪ್ಪಲಿಗಳನ್ನು ಮಾಡುವರು. ಮಾದಿಗರೆಂದರೆ ನಮ್ಮಗಿಂತಲೂ ಕೆಳದರ್ಜೆಯಲ್ಲಿರುವರೆಂದು ಮಾಲವಾಂಡ್ಲು ಹೇಳುತ್ತಾರೆ. ಮಾ–ದಿಗವ ಉಂಡೆವಾಂಡ್ಲು ಎಂದು ತೆಲುಗಿನಲ್ಲಿ ಹೇಳಲಾಗುತ್ತದೆ.

೧೧. **ಗಾಣಿಗೆ ಮಠಂ :—**ಗಾಂಡ್ಲ ಗಾಣಿಗ ಎರಡೂ ಒಂದೇ. ಗಾಂಡ್ಲ ಪದ ತೆಲುಗು, ಗಾಣಿಗ ಕನ್ನಡ. ಆದರೂ ಇದರಲ್ಲಿ ಒಂದೆತ್ತಿನವರು, ಎರಡೆತ್ತಿನವರೆಂದು ಭೇದಗಳಿವೆ. ಗಾಣಿಗರು ಎಣ್ಣೆ ಜೊತೆಗೆ ಉಣ್ಣೆ ಕೆಲಸವನ್ನು ಮಾಡುವರಂತೆ ! ಈ ಮಠಕ್ಕೆ ಗುರುಗಳಿಲ್ಲವೆಂದು ಹೇಳುತ್ತಾರೆ.

೧೨. **ನೇರಮಠಂ :—**ಇವರಿಗೂ ಗುರುಗಳುಂಟು. ಮೇರರು ಬಟ್ಟೆ ಬರಿಗಳನ್ನು ಅಚ್ಚುಕಟ್ಟಾಗಿ ಹೊಲಿದು ಉಪಜೀವಿಸುವರು. ಅನೇಕ ವಿನ್ಯಾಸದ ಬಟ್ಟೆಗಳನ್ನು ಹೊಲಿದು ತಮ್ಮ ಜೀವನ ಕಾರ್ಯವನ್ನು ಮುಂದುವರಿಸಿದ್ದಾರೆ.

೧೩. **ಸಂಗರಿ ಮಠಂ** :—ಈ ಮಠದ ಶಿಷ್ಯರು ಮುಖ್ಯವಾಗಿ ಬೂಟುಗಳನ್ನು ಮಾಡುತ್ತಾರೆ, ಇವರದೇ ಆದ ಒಂದು ಸಮಾಜವುಂಟು. ಸಂಗರಿ ಶಬ್ದಕ್ಕೆ ವಿವರಣೆಯಿಲ್ಲ.

೧೪. **ಸಾಗಲಿ ಮಠಂ** :—ಇವರು ಮಾಡುವ ಕಾಯಕವೆಂದರೆ ಬಟ್ಟೆ ಬರೆಗಳನ್ನು ತೊಳೆದು ಶುಚಿಗೊಳಿಸುವಿಕೆ ! ಕರ್ನಾಟಕದಲ್ಲಿ ಇವರಿಗೆ ಅಗಸರೆಂದು ಕರೆಯುವರು. (ಸಾಗಲಿ ಅಲ್ಲ ಚಾಕಲಿ ಎಂದಿರಬೇಕು.)

೧೫. **ನಕಾಶ್ ಮಠಂ** :—ಇವರು ಕಲ್ಲುಕೆಲಸದವರು. ಕಲ್ಲಿನಲ್ಲಿ ವಿಧವಿಧವಾದ ಕೆತ್ತನೆ ಕೆಲಸ ಮಾಡುತ್ತಾರೆ. ಕಾಡಕಲ್ಲನ್ನು ಪೂಜೆಗೆ ಯೋಗ್ಯ ಶಿಲ್ಪವನ್ನಾಗಿ (ಪ್ರತಿಮೆಯನ್ನಾಗಿ) ನಿರ್ಮಿಸುವ ಚೇತನಶಕ್ತಿ ಇವರಲ್ಲಿದೆ. ಇಂಥ ಶಿಲ್ಪಿಗಳಿಂದು ಕಮ್ಮಿಯಾಗುತ್ತಿದ್ದಾರೆ.

೧೬. **ವಡ್ಡರಂಗಿ ಮಠಂ** :—ಇವರು ಬಡಿಗೆ ಕೆಲಸದವರು. ಕಾಡ ಮರಗಳಿದ್ದರೂ ಸಹ ಅದರಲ್ಲಿಯೇ ಸುಂದರವಾದ ಕೆತ್ತನೆ ಕೆಲಸ ಮಾಡುತ್ತಾರೆ.

೧೭. **ಮುಮ್ಮಾಯ ಮಠಂ** :—ಇವರಲ್ಲಿ ಈ ಐಯ್ದು ಭಾಗಗಳಿವೆ : ೧. ಹೌಸಲಮಠಂ–ಬಂಗಾರ ಕೆಲಸದವರು. ೨. ಕಮ್ಮಾರಮಠ–ಕುಲುಮೆ ಕೆಲಸದವರು. ೩. ವಡ್ಲಮಠಂ–ಬಡಗಿ ಕೆಲಸದವರು. ೪. ಕಂಚಳಮಠಂ–ಪಾತ್ರೆಗಳಿಗೆ ಕಲಾಯಿ ಮಾಡುವುದು. ೫. ಕಾಶಮಠಂ–ಕಲ್ಲು ಕೆತ್ತನೆಯ ಮಾಡುವ ಶಿಲ್ಪಿಗಳೆಂದು ಕರೆವರು.

೧೮. **ದ್ಯಾವಳ ಮಠಂ** :—ಈ ಮಠಕ್ಕೆ ಸೇರಿದವರು ಚಾಡರು ಇವರ ಕೆಲಸ ನೇಯ್ಗೆ ! ಕಂಬಳಿಗಳನ್ನು ಕಲಾತ್ಮಕವಾಗಿ ತಯಾರಿಸುವರು. ಬಟ್ಟೆಗಳಲ್ಲಿಯೂ ಸಹ ಒಳ್ಳೆಯ ಕೆಲಸವನ್ನು ಮಾಡಿ ತೋರಿಸಬಲ್ಲವರಿವರು.

ಈ ಮೇಲಿನ ಹದಿನೆಂಟು ಮಠಗಳನ್ನು ಇಂದಿಗೂ ಕಾಣಬಹುದು. ಕೆಲವು ಮಠಗಳು ತುಂಬಾ ಸಿಥಿಲವಾಗಿವೆ. ಉಳಿದ ಕೆಲವು ಚನ್ನಾಗಿವೆ. ಈ ಎಲ್ಲ ಮಠಗಳ ಅಧಿಕಾರಿಗಳಿಗೆ ಜಂಗಮರೆಂದೇ ಕರೆಯುವರು. ಇವರೆಲ್ಲರಿಗೂ ಇಷ್ಟಲಿಂಗಧಾರಣೆ ಕಡ್ಡಾಯವಾಗಿರುವುದು. ಇವರು ಪ್ರತಿನಿತ್ಯ ಪೂಜೆಯನ್ನು

ಮಾಡುವರು. ಇದು ಆದಿರೇಣುಕರು ಅಂದೇ ರೂಪಿಸಿದ ವಿಶ್ವ ವಿಶಾ
ಮನೋಭಾವದ ಕ್ರಾಂತಿ ! ಎಲ್ಲರಲ್ಲಿಯೂ ಮಾನವೀಯತೆಯನ್ನು ಮನಗಂ
ಕ್ರಾಂತಿ ! ಹೀಗೆ ವೀರಶೈವವನ್ನು ವಿಶಾಲಗೊಳಿಸಿದರು. ಅವರಿವರೆನ್ನ
ಎಲ್ಲರನ್ನೂ ಎತ್ತಿ ಹಿಡಿದು ಉದ್ಧಾರ ಮಾಡಿದರು. ಇದನ್ನು ನೋಡಿದ
ಹೊಸದೆನ್ನುವುದು ಎಲ್ಲಿದೆ ಎಂದೆನಿಸುತ್ತದೆ. ನಿಮ್ನೋದ್ಧಾರ ಕಾರ್ಯ ಇ
ಕ್ಕಿಂತಲೂ ಉಂಟೆ ? ಶಿವಾದ್ವೈತ ಸಿದ್ಧಾಂತಕ್ಕೆ ಸರ್ವರೂ ಒಂದೆ ! ಸರ್ವರೂ
ಶಿವಸ್ವರೂಪರೆ ! ಕೊಲ್ಲಿ ಪಾಕಯಕ್ರಾಂತಿ ಕ್ಷೇತ್ರದ ಇತಿಹಾಸವನ್ನು ಇಸೂ
ಸಂಶೋಧಿಸಬೇಕಾಗಿದೆ.

ಜಗದ್ಗುರು ಆದಿರೇಣುಕ ಶಿವಾಚಾರ್ಯರು ಅಂದು ರೂಪಿಸಿದ ಶಿವಾದ್ವೈತ
ಸಂಸ್ಕೃತಿ ಮಹಾಮೇರು ಸಂಸ್ಕೃತಿ ! ಭಾರತದ ಆ ಮಹಾಮೇರುವಿನ
ಪರಿಸರದಲ್ಲಿಯೇ ಮತ್ತೊಂದು ಜೀವಂತ ಸಾಂಸ್ಕೃತಿಕ ಮಹಾಮೇರುವನ್ನು
ಶ್ರೀ ರೇಣುಕರು ದಿಗಂತ ವಿಶ್ರಾಂತವಾಗಿ ಸೃಜಿಸಿದ್ದಾರೆ. ಆ ಮಹಾಮೇರುವಿ
ನಿಂದ ಕ್ರಿಯಾಜ್ಞಾನೇಚ್ಛಾ ಮಹಾ ವಾಹಿನಿಗಳು ಜನತೆಯ ಮನೋಭೂಮಿ
ಗಳಿಗೆ ಪ್ರವಹಿಸಿವೆ. ಸಾಮಾಜಿಕ ಸೈದ್ಧಾಂತಿಕ ಬೆಳೆಗಳನ್ನು ಸಮೃದ್ಧವಾಗಿ
ಬೆಳೆದಿವೆ. ಭಾರತೀಯರ ಬಾಳು ಬದುಕನ್ನು ಶ್ರೀಮಂತಗೊಳಿಸಿವೆ, ಧೀಮಂತ
ಗೊಳಿಸಿವೆ. ಅವರಿವರೆನ್ನದೆ ಸರ್ವರ ಶುದ್ಧಿಯನ್ನು ವೃದ್ಧಿಯನ್ನು ಸಾಧಿಸಿವೆ
ಸಿದ್ಧಿಯನ್ನೂ ಸಾಧಿಸಿವೆ. ಶ್ರೀ ರೇಣುಕ ಭಗವತ್ಪಾದರು ಬಿತ್ತಿ ಬೆಳೆದ ಬೆಳೆ
ಮನೆ ಮನೆಗೆ ಮತ್ತು ಮನ ಮನಕ್ಕೆ ಹಚ್ಚಿಟ್ಟ ಚಿತ್ಕಳೆ ಅಷ್ಟಿಷ್ಟಲ್ಲ, ಅಂತಿಂತಹ
ದಲ್ಲ.

''ತದಿದಂ ಸರ್ವಸಿದ್ಧಾಂತ ಸಾರಾಣಾಮುತ್ತಮೋತ್ತಮಂ ।
ವೇದ ವೇದಾಂತ ಸರ್ವಸ್ವಂ ವಿದ್ಯಾಚಾರ ಪ್ರಕಾಶಕಂ ।
ವೀರಮಾಹೇಶ್ವರಗ್ರಾಹ್ಯಂ ಶಿವಾದ್ವೈತ ಪ್ರಕಾಶಕಂ ॥"

—ಸಿ. ಶಿಖಾಮಣಿ

ಆದಿರೇಣುಕಶಿವಾಚಾರ್ಯರು ಅವನಿಗೆ ಅವತರಿಸಿದ್ದುದು ಇದಕ್ಕಾಗಿ ! ಈ
ಶಿವಾದ್ವೈತ ಸಿದ್ಧಾಂತ ಸ್ಥಾಪನೆಗಾಗಿ ! ! ಇದು ಸರ್ವ ಸಿದ್ಧಾಂತಸಾರ. ಸಾ
ಮಾತ್ರವಿಲ್ಲ, ಅದರೊಳಗೆ ಉತ್ತಮೋತ್ತಮ ವೇದ ವೇದಾಂತ ಸರ್ವಸ್ವ ! ಸರ್

ಶಿವಾಗಮ ನವನೀತ ! ಮಿಗಿಲಾಗಿ ಶಿವಾದ್ವೈತ ಸಿದ್ಧಾಂತ ವಿದ್ಯಾಚಾರ ಪ್ರಕಾಶಕ ! ಈ ಮಾತಿನಲ್ಲಿದೆ ಇದರ ವಿಶಿಷ್ಟ ವೈಭವ, ಪ್ರಕೃಷ್ಟ ಪ್ರಭಾವ, ಇದು ಕೇವಲ ಜ್ಞಾನಾತ್ಮಕವಲ್ಲ, ಜ್ಞಾನಕ್ರಿಯಾತ್ಮಕ, ವಿಚಾರಾಚಾರ ಪೂರಕ. ಸ್ವಯಾನುಭೂತಿಯುತ್ಪಾದಕ ! ಅಂತೆಯೇ ಇದು ಶಿವಶಕ್ತ ವಿಶಿಷ್ಟ ಅದ್ವೈತ ಪ್ರಕಾಶಕವಾಗಿದೆ. ಏಕೋಭಾವಯೋಗದಿಂದೊಡಗೂಡಿದೆ. ಇದು ಬರೀ ಸಮ ಯೋಗವಲ್ಲ ; ಸಮರಸ ಯೋಗ. ಸಮಷ್ಟಿ ಸಮರಸ ಯೋಗ. ವಿದ್ಯೆಯನ್ನು ವಿಶಿಷ್ಟಾಚಾರದಲ್ಲಿ ತರುವ ತಂದು ಅಚ್ಚಳಿಯದೆ ಆನಂದಿಸುವ ಯೋಗ ! ಅದುವೆ ಪರಶಿವಾನುಭವಯೋಗ !

ಜಗದ್ಗುರು ಆದಿರೇಣುಕ ಶಿವಾಚಾರ್ಯರು ಸರ್ವೋದಯಕ್ಕಾಗಿ ಸರ್ವ ಸಾಹಸ ಮಾಡಿದ ಪ್ರಥಮ ಚೇತನರು, ಪುರಾತನ ಚೇತನರು ; ಪ್ರತಿಭಾನ್ವಿತ ಪರಮ ಚೇತನರು. ಈ ದಿಸೆಯಲ್ಲಿ ಅತ್ಯಂತ ಪ್ರಮುಖ ಪಾತ್ರ ಅವರದು. ಜನ ಜೀವನವನ್ನು ವಿಶುದ್ಧಗೊಳಿಸಲು ವಿಶಾಲಗೊಳಿಸಲು ವಿಶೇಷವಾಗಿ ಪರಿಶ್ರಮಿ ಸಿದರು. ಪ್ರಯೋಗವನ್ನುಂಟು ಮಾಡಿದರು. ಉಭಯಾಂಗ ಕ್ಷೇಮಕ್ಕಾಗಿ ಉದ್ಯಮಿಸಿದರು ; ಉದ್ಬೋಧಿಸಿದರು. ಧರ್ಮ ದರ್ಶನಗಳ ವ್ಯಾಪ್ತಿಯನ್ನು ದೀಪ್ತಿಯನ್ನು ಹೆಚ್ಚಿಸಿದರು ; ನಿಚ್ಚಯಿಸಿ ನಿಚ್ಚಳಗೊಳಿಸಿದರು–ಕೊರತೆಯಿಲ್ಲ ದಂತೆ ! ಭಕ್ತಿ ಮುಕ್ತಿಗಳೆರಡನ್ನು ಸಮಗಂಡರು. ಕುಲ ಕೋಮು ಪಂಥ ಪಂಗಡ ಭಾವಗಳಿಲ್ಲದ ವ್ಯೂಹರಚನೆಯನ್ನು ಮಾಡಿದರು. ನೈತಿಕ ನಿಲವನ್ನು ಎತ್ತಿ ಹಿಡಿದರು. ನಿಷ್ಕಂಟಕ ಜೀವನವನ್ನು ರೂಪಿಸಲು ಮಾರ್ಗವನ್ನು ಹಾಕಿ ಕೊಟ್ಟರು. ಸರ್ವರೂ ಸಕ್ರಿಯಾಶೀಲರಾಗುವಂತೆ ಸಹಜೀವಿಗಳಾಗುವಂತೆ ವ್ಯವಸ್ಥೆ ಮಾಡಿದರು. ವಿದ್ಯೆ ನಿಷ್ಕ್ರಿಯತೆಗೆ ನೀತಿ ರಾಹಿತ್ಯತೆಗೆ ಕಾರಣವಾಗಬಾರ ದೆಂದು, ಶೋಷಣೆಗೆ ಸಾಧನವಾಗಬಾರದೆಂದು, ಧರ್ಮ ಆಚಾರಗಳು ಭೇದ ಗಳನ್ನು ಉತ್ಪಾದಿಸಬಾರದೆಂದು, ಸರ್ವಸಮನ್ವತೆಯನ್ನು ಸಾಧಿಸಬೇಕೆಂದು ತಿಳಿ ತಿಳಿಯಾಗಿ ತಿಳಿಸಿದರು. ತಿಳಿದುದನ್ನು ತಳುವದೆ ಆಚರಣೆಗೆ ತರುವಂತೆಸಗಿದರು. ಮಾನವ ಜೀವನದ ಆದರ್ಶಗಳನ್ನು ಎಲ್ಲರೂ ಎಲ್ಲ ಬಗೆಯಲ್ಲಿ ಅವಲಂಬಿಸು ವಂತೆ ಏರ್ಪಡಿಸಿದರು. ಅಣು ಅಣುವಿನಲ್ಲಿ ಚೇತನವಿದೆ ; ತೃಣಕಾಷ್ಠಗಳಲ್ಲಿ ಶಿಲೆ ಶೈಲಗಳಲ್ಲಿ ಚೇತನವಿದೆ. ಎಲ್ಲರನ್ನು ಎಲ್ಲವನ್ನು ಶಿವ ಸ್ವರೂಪದಲ್ಲಿ ಕಾಣ

ಬೇಕೆಂದು, ಇದುವೆ ಏಕೋಭಾವ ಜೀವನ ದರ್ಶನವೆಂದು ಮಾನವತೆಯ ಮೌಲ್ಯವೆಂದು ಮನದಟ್ಟಾಗಿಸಿದರು. ವಿಶ್ವಪ್ರೇಮುವನ್ನು ವಿಶ್ವಭ್ರಾತೃತ್ವವನ್ನು ವಿಶ್ವೈಕ್ಯಭಾವವನ್ನು ಬೆಳಸಿಕೊಳ್ಳಲು ಬೋಧಿಸಿದರು. ದೇವನಿತ್ತ ಪಡಿಪದಾರ್ಥ ಗಳು ಸರ್ವರಿಗೂ ಸಮಪಾಲು ಎಂಬುದನ್ನು, ಇದನ್ನು ಎಲ್ಲರೂ ಅಳವಡಿಸಿ ಕೊಳ್ಳಲು ಅನುವಾಗುವಂತೆ ಮಠಗಳನ್ನು ಧರ್ಮದಾಸೋಹಗಳನ್ನು ಏರ್ಪಡಿಸಿ ದರು. ಅಲ್ಲದೆ ಅಂದಿನ ಭಾರತದ ಬಹು ಮಂದಿ ರಾಜರನ್ನು ಧರ್ಮದಾಸೋಹ ನಡೆಯಿಸುವಂತೆ ಏರ್ಪಡಿಸಿದರು. ಮಾನವರನ್ನು ಮಾನವರನ್ನಾಗಿಸಿ ಒಂದು ಗೂಡಿಸಿ ಬಾಳಗಲಿಸುವುದು ಗಣಾಚಾರವಾದರೆ, ಸರ್ವರೂ ಶಿವಸ್ವರೂಪರೆಂದು ಭಾವಿಸಿ ಸರ್ವರ ಸೇವೆ ಸಲ್ಲಿಸುವುದು ಭೃತ್ಯಾಚಾರವೆಂದು ಇವೆರಡು ಆಚಾರ ಗಳಲ್ಲಿ ಅನುಗಾಲ ಬಾಳುವುದೇ ಸದಾಚಾರವೆಂದು ಸಮೀಚೀನವಾಗಿ ಪ್ರಚುರ ಗೊಳಿಸಿದರು. ಅಶಿವಾಚಾರಗಳಿಗಿಂತ ಶಿವಾಚಾರವೇ ಸರ್ವರ ನೆಮ್ಮದಿಗೆ ಶಿವತ್ವಾಭಿವ್ಯಕ್ತಿತ್ವಕ್ಕೆ ಅಂದರೆ ಸರ್ವಶುಭತ್ವಕ್ಕೆ ಸಾಧನವೆಂದು ಸಾರಿದರು. ಕಾಣದ ಆ ಮಹಾಚೈತನ್ಯವನ್ನು ಕರಸ್ಥಲದಲ್ಲಿ ಮರವನ್ನು ಬೀಜದಲ್ಲಿ ಕಾಣು ವಂತೆ ಕಂಡು ಆರಾಧಿಸಿ ಪಿಂಡಾಂಡವನ್ನು ಪವಿತ್ರಗೊಳಿಸಿಕೊಳ್ಳುವಂತೆ ಲಿಂಗಾ ಚಾರವನ್ನು ಪ್ರಬೋಧಿಸಿದರು. ಅವರ ಆ ಸತ್ಯ ಸಂದೇಶ ಬಡವ–ಬಲ್ಲಿದರಲ್ಲಿ, ಅಂತ್ಯಜ–ಅಗ್ರಜರಲ್ಲಿ, ಅಗಸ–ಅರಸರಲ್ಲಿ ಓತಪ್ರೋತವಾಗಿ ನೆಯ್ಗೆಗೊಂಡಿತ್ತು. ಕೇವಲ ಭೌತಿಕ ಭೋಗಪ್ರಧಾನ, ಅರ್ಥಪ್ರಧಾನ, ಅಧಿಕಾರ ಪ್ರಧಾನ– ಜೀವನವಾಗಬಾರದು. ಹೀಗಾದರೆ ಮೇಲು ಕೀಳು, ಸ್ವಾರ್ಥ ಸಂಕುಚಿತತೆ ಬೆಳೆದು ನಿಲ್ಲುತ್ತವೆ. ತ್ಯಾಗ–ಯೋಗ ಪ್ರಧಾನ, ಪರಮಾರ್ಥ ಪ್ರಧಾನ, ದಯೆ ವಿನಯ ಪ್ರಧಾನ, ಭಾವಪ್ರಧಾನ ಜೀವನವಾಗಬೇಕೆಂಬುದೆ ಜಗದ್ಗುರು ಆದಿರೇಣುಕ ಭಗವತ್ಪಾದರ ಭವ್ಯ ಧ್ಯೇಯವಾಗಿತ್ತು. ಹೀಗಿದ್ದರೆ ಪರಸ್ಪರ ಘರ್ಷಣ ಶೋಷಣಾದಿಗಳಿಗೆ ಅವಕಾಶವಿರದು ; ಇರುವುದಿಲ್ಲ. ಮಾನವತ್ವದ ಮೌಲ್ಯ ಮುಂದೆ ಬಂದು ನಿಲ್ಲುತ್ತದೆ. ಹಾಗಾಗುವುದೆ ಮಾನವ ಜೀವನ ಲಕ್ಷ್ಯವೆಂಬುದು ಶ್ರೀ ಆದಿ ರೇಣುಕ ಶಿವಾಚಾರ್ಯರ ಜೀವನ ಸಿದ್ಧಾಂತ ! ಆದರಲ್ಲಿ ಕ್ರಿಯಾತ್ಮಕ ೬೩ ಶೀಲಗಳು. ಆಚಾರಾತ್ಮಕ ೬೪ ವಿದ್ಯಾಕಲೆಗಳು, ನೂರೊಂದು ನೆಲೆಗಳು ಅಂದರೆ ಏಕೋತ್ತರ ಶತಸ್ಥಲಗಳು, ೩೬ ತತ್ತ್ವಗಳು– ಸರ್ವ ದರ್ಶನಗಳ ಸಾರಸರ್ವಸ್ವವಾದ ಶಿವಾದ್ವೈತ ಸಿದ್ಧಾಂತ ಇವಿಷ್ಟನ್ನು ಒಳಗೊಂಡಿದ್ದಿತು.

ಮುಖ್ಯವಾಗಿ ಅನಾದಿ ವೀರಶೈವರಾದ ರುದ್ರಭದ್ರರು ಹಾಕಿಕೊಟ್ಟ ಮಹಾ ಪಾಶುಪತ ಶಿವಾಚಾರ ಧರ್ಮ, ವೀರಮಾಹೇಶ್ವರ ಸಂಸ್ಕೃತಿ ತತ್ತ್ವಗಳನ್ನು ಬೀಸಾಗಿ ಬಿತ್ತರಿಸಿದರು ಜಗದ್ಗುರು ಆದಿರೇಣುಕಶಿವಾಚಾರ್ಯರು. ಮತ್ತು ಪೂರ್ವದ ವೀರಶೈವಾಗಮಗಳ ಸೂತ್ರಪ್ರಾಯವಾದ ತತ್ತ್ವಗಳನ್ನು ಸ್ವಾನುಭಾವಿಯಾದ ಶ್ರೀ ರೇಣುಕ ಶಿವಾಚಾರ್ಯರು ತಮ್ಮ ಪೂರ್ಣ ಪ್ರಜ್ಞೆ ಪರಮಾನುಭವಗಳ ಮೂಲಕ ವಿಶ್ಲೇಷಿಸಿ ವಿಶಿಷ್ಟ ರೀತಿಯಲ್ಲಿ ಕ್ರಿಯಾಶೀಲತೆಯ ಮಾಧ್ಯಮದಲ್ಲಿ ಆದಿಕಾಲದಲ್ಲಿ ಆದಿ ವೀರಶೈವದಲ್ಲಿ ಅಭಿವ್ಯಕ್ತಗೊಳಿಸುವರು. ಇಂತಹ ವಿಶಾಲ ಹೃದಯದ ವಿಶಿಷ್ಟಾನುಭೂತಿಯ ವಿಶ್ವ ವಿಭೂತಿತ್ವವನ್ನು ವೀರಾಗಮ ತನ್ನದೇ ಆದ ಶ್ರೇಷ್ಠ ಶೀಲಶೈಲಿಯ ಕಥನ ಕಲೆಯ ರನ್ನಗನ್ನಡಿ ಪಡಿಮೂಡಿಸಿದೆ. ಭಾವ್ಯಬಿಂಬವನ್ನಾಗಿಸಿದೆ. ಆ ರೇಣುಕ ಭಗವತ್ಪಾದರ ಭಾವ್ಯಬಿಂಬವನ್ನು ಹೊತ್ತು ತಂದ ಅಥವಾ ಮೂಡಿಸಿಕೊಂಡು ಬಂದ ವೀರಾಗಮ ಭಾಷಾ ದರ್ಪಣದ ಚೇತನ ಪುರುಷರು ಶ್ರೀ ಜಗದ್ಗುರು ಆದಿರೇಣುಕ ಶಿವಾಚಾರ್ಯರು. ಅವರು ಆದಿವೀರಶೈವ ಧರ್ಮಕ್ಕೆ ಕರುಣಿಸಿದ ಕೊರತೆಯಿಲ್ಲದ ಕೊಡುಗೆಯನ್ನು ತನ್ನ ಒಳ್ಳಿನ ಒಡಲಲ್ಲಿ ಇರಿಸಿಕೊಂಡು ಅಚ್ಚಳಿಯದೆ ಉಳಿಸಿದ ಉನ್ನತ ಕೀರ್ತಿ ವೀರಾಗಮದ್ದು. ಮತ್ತು ಅನನ್ಯಸಾಧಾರಣವಾದದ್ದು.

ವಿಶ್ವಮಾನವರಿಗೆ ಬೇಕಾದ ಬಾಳಿನ ಆಗುಹೋಗುಗಳನ್ನು, ಆಚಾರ-ವಿಚಾರಗಳನ್ನು, ಧರ್ಮದರ್ಶನಗಳನ್ನು, ಅನುಭವ-ಆನಂದಗಳನ್ನು ತಮ್ಮದೇ ಆದ ಶಕ್ತಿ (ದೀಪ್ತಿ) ಸಂಪತ್ತಿಯಿಂದ ಕ್ರಿಯಾತ್ಮಕಗೊಳಿಸಿ ಜನರನ್ನು ಕ್ರಿಯಾಶೀಲರನ್ನಾಗಿಸಿದ ಕಲಾಚೇತನರು ರೇಣುಕ ಭಗವತ್ಪಾದರು. ಇದರಿಂದಾಗಿ ಅಂದಿನವರ ಬಾಳಿನಲ್ಲಿ ಆಚಾರ-ವಿಚಾರಗಳು, ಅನುಭವ-ಆನಂದಗಳು ಎತ್ತರಕ್ಕೇರಿದವು. ಎಳಕುಳಿಯಿಲ್ಲದಂತೆ ವೀರಮಾಹೇಶ್ವರರಲ್ಲಿ ವೀರಭಕ್ತರಲ್ಲಿ ಮಾರ್ಪೊಳೆದವು. ಎಳೆಎಳೆಯಾಗಿ ಸಾರ್ವಜನಿಕರಲ್ಲಿ ಪಡಿಮೂಡಿದವು. ಹೀಗೆ ಜನಜೀವನದೊಡನೆ ಬಾಳಿ ಬೆಳಗಿದರು ಜಗದ್ಗುರುಗಳು. ಸಂಸ್ಕಾರ ಪ್ರಧಾನದಿಂದ ಸಾಧನ ಶಿಕ್ಷಣಗಳಿಂದ ಚಿಚ್ಛಕ್ತಿಜ್ಞಾನನಿಲಯಗಳಿಂದ ಶಿವಾದ್ವೈತ ಸಿದ್ಧಾಂತ ಬೋಧನದಿಂದ ಜನಜೀವನವನ್ನು ಹಸನು ಮಾಡಿದರು. ಕಳೆಯ ಹೊಳಹು-ಸುಳುಹು ದೋರಿದರು. ರಾಗ ದ್ವೇಷ, ಮದ ಮತ್ಸರ, ಲೋಭ

ಮೋಹಗಳಿಗಿಂಬಾಗದೆ ಸಮದರ್ಶಿಗಳಾದರು ; ಸಮಪಂಕ್ತಿಗಳಾದರು. ಜ್ಯೋತಿರ್ಮಯ ಜಗತ್ತಿನ ಜನತೆಯ ಗುರುಗಳಾದರು. ಜನತೆಯು ಭದ್ರವಾದ ಭಾವಪೀಠವನ್ನೇರಿದರು. ಮಹಾಮಣಿಹಗಳ ಪ್ರಚಾರ ವ್ಯಕ್ತವಾಗಿ ಅಷ್ಟೊಂದಿಲ್ಲದಿದ್ದರೂ ವ್ಯಕ್ತಿತ್ವದ ಪ್ರಭಾವಕ್ಕೆ ಏನೂ ಕೊರತೆಯಿರಲಿಲ್ಲ. ಹೆಸರು ಹೆರೆ ಹಿಂಗಿ ಹೋಗಿರಲಿಲ್ಲ. ಆಚಾರ್ಯವರೇಣ್ಯರಾಗಿ ವಿಖ್ಯಾತರಾದರು. ಶಿವಾದ್ವೈತ ಸಿದ್ಧಾಂತ ಸಂಸ್ಥಾಪಕರೆನ್ನಿಸಿದರು. ''ಪ್ರಸಾದವೇ ಜೀವನಸತ್ವ, ಪರಶಿವಾದ್ವೈತವೇ ಜೀವನತತ್ತ್ವ'' ಎಂಬುದನ್ನ ತಮ್ಮ ಕ್ರಿಯೆ ಜ್ಞಾನಾನುಭವಗಳ ಕ್ರಾಂತಿಯಿಂದ ಸಿದ್ಧ ಮಾಡಿದರು ; ಪ್ರಸಿದ್ಧಗೊಳಿಸಿದರು;

ವಿನೂತನತೆಗೆ ಭಾಷೆ ಮುಖ್ಯವಲ್ಲ ; ಭಾವಯೋಗ ಮುಖ್ಯ. ವಿಶಾಲತೆಗೆ ರಾಜಕೀಯ ಯಾವ ಅಧಿಕಾರ ಮುಖ್ಯವಲ್ಲ ; ಕ್ರಿಯೋಗ ಮುಖ್ಯ. ವಿಶ್ವಪ್ರೇಮಕ್ಕೆ ಧನ ಮುಖ್ಯವಲ್ಲ ; ಜ್ಞಾನಯೋಗ ಮುಖ್ಯ. ನುಡಿಗಿಂತ ನಡೆ ಮುಖ್ಯ. ಬುದ್ಧಿಗಿಂತ ಭಾವ ಮುಖ್ಯ. ಇದನ್ನೆಲ್ಲ ಬಿತ್ತರಿಸುವ ಭಾಷೆ ಯಾವುದಾದರೇನು ? ಪಾತ್ರೆ ಮಣ್ಣಿನದಾದರೇನು, ಬೆಳ್ಳಿಯದಾದರೇನು ? ಅದರೊಳಗಿನ ಅಮೃತರಸ ಮುಖ್ಯ. ಅಂತೆಯೇ ದೃಕ್ರಿಯಾ ಚೇತನ ಮುಖ್ಯ. ದೃಕ್ಕ್ರಿಯಾದೀಪ್ತ ಚೈತನ್ಯ ರೇಣುಕ ಜಗದ್ಗುರುಗಳವರದು. ಅವರು ಚಿದ್ವಿಭೂತಿ ಚೇತನರೂ ಅಹುದು. ಸಂಸ್ಕೃತಿಗೆ ಚಿರನೂತನ ಉತ್ಕ್ರಾಂತಿಗೆ ನಾಡು-ನುಡಿಗಳು ಮುಖ್ಯವಲ್ಲ ; ನಿರ್ಮಲ ನಡೆ ಮುಖ್ಯ. ನೈಜ ನಿರ್ಣಯ ಮುಖ್ಯ. ಸಚ್ಚಾರಿತ್ರ ಮುಖ್ಯ. ಎಲ್ಲಿಯೋ ಕಂಡು, ಅದನ್ನು ಕೊಂಡುಬಂದು ಬಿತ್ತರಿಸಿದ ವಾಗ್ದರ್ಶನಕ್ಕಿಂತ, ತಾವೇ ತಮ್ಮೊಳಗೆ ಕಂಡು ಕ್ರಿಯಾತ್ಮಕವಾಗಿ ಕಾಣಿಸಿದ ದರ್ಶನ ಅಥವಾ ಸಿದ್ಧಾಂತ ವಿಶಿಷ್ಟಪೂರ್ಣವಾದುದು. ಈ ವಿಶಿಷ್ಟ ವ್ಯಕ್ತಿತ್ವ-ವಿದ್ಯೋತತತ್ತ್ವ ಸಾಕ್ಷಾತ್ ಶಿವನೆಂದೆನಿಸಿದ ಶ್ರೀ ಜಗದ್ಗುರು ಆದಿರೇಣುಕಶಿವಾಚಾರ್ಯರದು. ಅವರ ಬಹುಭಾಗದ ಸಚ್ಚಾರಿತ್ರವನ್ನು ತನ್ನೊಡಲೊಳಗಿರಿಸಿಕೊಂಡ ವೀರಾಗಮದ್ದು.

## ಚಿಚ್ಛಕ್ತಿ ಜ್ಞಾನನಿಲಯ, ಚಿನ್ಮಯಾನುಭಾವಿಗಳು.

ದಿವ್ಯ ಚೇತನರಾದ ರೇಣುಕ ಭಗವತ್ಪಾದರು ಬರೀ ಸಾಮಾಜಿಕ ಸಮಸ್ಯೆಗಳನ್ನು ಸಾರ್ವಜನಿಕ ಜಾಗತಿಕ ಜೀವನವನ್ನುರೂಪಿಸಿ ತೃಪ್ತರಾಗಲಿಲ್ಲ.ಆಧ್ಯಾತ್ಮಿಕ

ಜೀವನ ಪ್ರಗತಿ ಕಾರಣಗಳಾದ ಆಚಾರ-ವಿಚಾರಗಳನ್ನು ಮಾತ್ರ ರೂಪಿಸಿ ಬಿಡಲು ಅವರಿಗೆ ಸಮಾಧಾನವಿರಲಿಲ್ಲ. ಅಷ್ಟಾವರಣ ಪಂಚಾಚಾರ ಷಟ್‌ಸ್ಥಲ ಸಂಹಿತೆಯನ್ನು ಸೃಜಿಸಿದ ಬಳಿಕ ಸರ್ವರಿಗೂ ಬೇಕಾದ ನಿತ್ಯಸತ್ಯವನ್ನು ಕಂಡು ಅದರ ಆ ದಿವ್ಯಾನುಭವದಲ್ಲಿ ಎಲ್ಲರು ಪೂರ್ಣಾಖಂಡಾನಂದಾಮೃತದಲ್ಲಿ ಸಮರಸವಾಗಬೇಕೆಂಬುದೇ ಅವರ ಚರಮಧ್ಯೇಯವಾಗಿದ್ದಿತು. ಅದಕ್ಕಾಗಿ ಸಾರ್ವಜನಿಕವಾಗಿ ಚಿಚ್ಛಕ್ತಿ ಜ್ಞಾನನಿಲಯಗಳನ್ನು ಪ್ರತಿಷ್ಠಾಪಿಸಿದರು.

ಚಿತ್-ವಿಶ್ವಚೇತನಶಕ್ತಿ, ವಿಶ್ವಸೃಜನಶೀಲ ದಿವ್ಯರಸ ; ದಿವ್ಯಕಳೆ, ಅದಿಲ್ಲದೆ ಈ ಜಗತ್ತು ಬಾಳಲು ಬೆಳಗಲು ಮತ್ತು ಬಿನದಿಸಲು ಸಾಧ್ಯವಿಲ್ಲ. ಅದು ನಿತ್ಯ ಸತ್ಯ. ಅದು ಸರ್ವಾಂತರ್ಯಾಮಿ. ಅದಿಲ್ಲದ ವಸ್ತುವಿಲ್ಲ ; ಜೀವ ಜಂತುವಿಲ್ಲ. ಅದರ ಜ್ಞಾನಾನುಭವದಿಂದ ಅಖಂಡ ಪರಮಾನಂದ ! ವ್ಯಷ್ಟಿ ಸಮಷ್ಟಿಗಳೆರಡನ್ನೂ ಅಳವಡಿಸಿಕೊಳ್ಳುವ ವಿಶ್ವವಿಶಾಲತೆಯು ಅದರ ಸಾಕ್ಷಾತ್ಕಾರದಿಂದ ಲಭಿಸುವುದು-ಎಂದು ಆದಿರೇಣುಕ ಶಿವಾಚಾರ್ಯರು ಮೊದಲು ಮನಗಂಡವರು. ಅದರಿಂದ ಅವರ ಚಿತ್ಪ್ರತಿಭೆ-ಪ್ರಭಾವಗಳು ಪರಿಪೂರ್ಣಗೊಂಡಿದ್ದವು ; ಪರಮೋನ್ನತವಾಗಿದ್ದವು. ಅದರಿಂದ ಅವರು ಅವನ್ನು ಸರ್ವರಿಗೆ ಕರುಣಿಸಲು ಚಿಚ್ಛಕ್ತಿಜ್ಞಾನನಿಲಯಗಳನ್ನು ನಿರ್ಮಿಸಿದರು. ಅವುಗಳಲ್ಲಿ ಯಾವ ಭೇದ ಭಾವವಿಲ್ಲದೆ ಪ್ರವೇಶವನ್ನು ಕಲ್ಪಿಸಿದ್ದರು. ವ್ಯಕ್ತಿ ಹಾಗು ಸಮಾಜಗಳ ಪ್ರಗತಿಗೆ ದಿವ್ಯನಾದಾನುಸಂಧಾನಕ್ಕೆ, ದಿವ್ಯರಸಾನುಭವಕ್ಕೆ ದಿವ್ಯಕಳಾನುಸಂಧಾನಕ್ಕೆ ಸರ್ವಸ್ವತಂತ್ರಾಭ್ಯಭಿವ್ಯಕ್ತಿಗೆ ಚಿಚ್ಛಕ್ತಿ ಜ್ಞಾನನಿಲಯ ಸಮರ್ಥ ಸಾಧನಸಿದ್ಧಿಗಳಿಗೆ ಕೇಂದ್ರವಾಗಿದ್ದಿತು. ಪೂರ್ಣಕ್ರಿಯೆಗೆ ಪೂರ್ಣಾನುಭೂತಿಗೆ ಚಿಚ್ಛಕ್ತಿಜ್ಞಾನ ಮೂಲಾಧಾರ. ಮಹಾಚೇತನ. ಮತ್ತು ಸತ್ಯ ಶಿವ ಸೌಂದರ್ಯ ಸಂಪ್ರಾಪ್ತಿಗೆ ಚಿತ್ಕಳೆಯೆ ಸಲ್ಲುವ ನೇತ್ರ. ಚಿದ್ರಸವಿಲ್ಲದ ಜೀವನ ಅದೆಂತಹದೇ ಇರಲಿ ಅದು ನೀರಸ ; ನಿಜಕ್ಕೂ ಆಭಾಸ. ಇದನ್ನು ತಪ್ಪಿಸಿ ಸರ್ವಶಕ್ತಿ ಜೀವನವನ್ನು ಸರ್ವಾಂಗಸುಂದರವಾಗಿ ರೂಪಿಸುವ ಸರ್ವೋನ್ನತ ಸಾಧನ ಕೇಂದ್ರ ಚಿಚ್ಛಕ್ತಿಜ್ಞಾನನಿಲಯ ! ಆದಿರೇಣುಕ ಶಿವಾಚಾರ್ಯರ ಅರಳಿ ವಿಕಾಸಗೊಂಡ ಚಿತ್ತಾಕಾಶದ ಉದಯ.

## ಚಿಚ್ಛಕ್ತಿಜ್ಞಾನನಿಲಯ : ಉದಯ

(ಆಧುನಿಕ ಅನುಭವ ಮಂಟಪಗಳ ಹಿನ್ನೆಲೆ)

ಅಂದು ಭಾರತ ಕಗ್ಗತ್ತಲಲ್ಲಿ ಕಾಣದಾಗಿತ್ತು. ಭಾರತೀಯರು ಅಜ್ಞಾ
ನಾಂಧಕಾರದಲ್ಲಿ ಮುಳುಗಿದ್ದರು. ವೈಚಾರಿಕ ಬೆಳಕಿರಲಿಲ್ಲ, ಆಚರಣೆಯ ಚೇತನ
ವಿರಲಿಲ್ಲ. ಅಂದರೆ ಮಾನವೀಯ ಧರ್ಮಾಚರಣೆ ಕ್ಷೀಣವಾಗಿದ್ದಿತು. ರಾಮಾಯಣ
ಕರಾಳ ಕಾಳಗದ ಬಿಸಿ ಬೇರೆ ಜನಾಂಗಕ್ಕೆ ಸೋಂಕಿದ್ದಿತು. ರಾಗ ದ್ವೇಷ ಮದ
ಮತ್ಸರಗಳು ಮಿತಿಮೀರಿದ್ದವು. ಭೇದ ಭಾವ ವಿಜೃಂಭಿಸಿದ್ದಿತು–ಚಾತುರ್ವರ್ಣ
ಮಾಧ್ಯಮದಲ್ಲಿ ! ಅಗ್ರಜರು ಅಂತ್ಯಜರನ್ನು ದಾಸ್ಯದ ದಳ್ಳುರಿಯಲ್ಲಿ ಸೂ
ದ್ದರು. ಮಾನವ ಸಹಜ ಜೀವನ ಸೌಕರ್ಯಗಳಿಗೆ ಅಂತ್ಯಜರು ಅತ್ಯಂತ ವಂಚಿತ
ರಾಗಿದ್ದರು. ದಯೆ ಕರುಣೆ ಮಮತೆಗಳ ಮಾತಿರಲಿಲ್ಲ. ರಜಸ್ತಮೋಗುಣಗಳು
ಜನ ಜೀವನವನ್ನು ಆವರಿಸಿದ್ದವು ; ಸತ್ವಗುಣವನ್ನು ಆಕ್ರಮಿಸಿದ್ದವು. ಸರ್ವ
ಸಮತೆ ಸಹಾಯ ಸಹಕಾರಗಳೆಂಬ ಹೊಂಗಿರಣಗಳ ಸುಳಿವಿರಲಿಲ್ಲ, ಹೊಳವಿರ
ಲಿಲ್ಲ, ನಡೆ–ನುಡಿ, ಜ್ಞಾನ–ಕ್ರಿಯೆ, ಆಚಾರ–ಅನುಭವಗಳ ಸಂಗಮವಿರಲಿಲ್ಲ
ಹುಟ್ಟಿನಿಂದ ಮೇಲು–ಕೀಳುಗಳು ರೂಢಿಯಲ್ಲಿದ್ದವಲ್ಲದೆ ಗುಣ ಕ್ರಿಯೆಗಳಿಂದಿರ
ಲಿಲ್ಲ. ಉಚ್ಚಕುಲದವರು, ನೀಚಕುಲದವರು ಎಂಬ ಭೇದ ಭಾವ ಬಲವಾಗಿ
ದ್ದಿತು. ಎಲ್ಲರೂ ಒಬ್ಬ ದೇವರ ಮಕ್ಕಳು.

'ಸಪ್ತಧಾತು ಸಮಂ ಪಿಂಡಂ, ಸಮಯೋನಿ ಸಮುದ್ಭವಂ ।
ಆತ್ಮಜೀವಸಮಾಯುಕ್ತಂ ವರ್ಣಾನಾಂ ಕಿಂ ಪ್ರಯೋಜನಂ ?"
ಜನ್ಮನಾ ಜಾಯತೇ ಶೂದ್ರಃ ಕರ್ಮಣಾ ದ್ವಿಜ ಉಚ್ಯತೇ ।
ಶ್ರುತೇನ ಶ್ರೋತ್ರಿಯಶ್ಚೈವ ಬ್ರಹ್ಮ ಚರತಿ ಬ್ರಾಹ್ಮಣಃ ॥
ಅಂತ್ಯಜಾತೋ ದ್ವಿಜಾತೋವಾ ಚೈಕಯೋನಿ ಸಮುದ್ಭವಃ ।
ಸ್ವಪಚೋಽಪಿ ಮುನಿಶ್ರೇಷ್ಠಃ ಶಿವಭಕ್ತೋ ದ್ವಿಜಾಧಿಕಃ ।
ಶಿವಭಕ್ತಿವಿಹೀನಶ್ಚ ದ್ವಿಜೋಽಪಿ ಶ್ವಪಚಾಧಿಪಃ ॥

ಎಂಬಿವೇ ಮೊದಲಾದ ಪುರಾತನ ಶಿವಾಚಾರ್ಯರ ಕ್ರಾಂತಿ ಪರ ಉಕ್ತಿಗಳ
ಬಳಕೆಗೆ ಬಂದಿರಲಿಲ್ಲ ; ಉಚ್ಚವರ್ಣದವರು ಇವುಗಳಿಗೆ ಬೆಲೆಯನ್ನೂ ಕೊಟ್ಟಿ
ಲಿಲ್ಲ. ಸಾಂಪ್ರದಾಯಿಕ ಮೂಢ ರೂಢಿಯಲ್ಲಿಯೇ ಕುಲ ಪಂಥಗಳು ಮುಂದು
ವರಿಯುತ್ತಿದ್ದವು. ಸಮದರ್ಶಿತ್ವ ಸಮವರ್ತಿತ್ವಗಳು ಮಾಯವಾಗಿದ್ದವು.

"ಚಿದೇಕಭಾಜನಂ ಯಸ್ಯ ಚಿತ್ತವೃತ್ತಿಃ ಶಿವಾತ್ಮಿಕಾ।
ನಾನ್ಯತ್ರಸ್ಯ ಕಿಮೇತೇನ ಮಾಯಾ ಮೂಲೇನ ವಸ್ತುನಾ॥
ಚಿತ್ ಪ್ರಕಾಶಯತೇ ವಿಶ್ವಂ ತದ್ವಿನಾ ವಸ್ತು ನಾಸ್ತಿಹಿ।
ಚಿದೇಕನಿಷ್ಠ ಚಿತ್ತನಾಂ ಕಿಂ ಮಾಯಾಪರಿಕಲ್ಪಿತೈಃ?॥

ಚಿತ್ಕಳೋಪಾಸಕರಿಗೆ ಈ ಯಾವ ವಿಶ್ವಭೇದಬಾವಗಳಿಲ್ಲದೆ ಕುಲಪಂಥ ಭೇದಗಳಿಲ್ಲದೆ ಸರ್ವವು ಶಿವಾತ್ಮಿಕವಾಗಿಯೆ ಕಾಣುತ್ತದೆ. ವಿಶ್ವವನ್ನು ಚಿತ್ತಳೆಯೇ ಪ್ರಕಾಶಿಸುತ್ತದೆ. ಅದರ ಹೊರತು ಬೇರೆ ವಸ್ತು ವಿಶ್ವದಲ್ಲಿ ಕಾಣುವುದಿಲ್ಲ. ಎಂಬೀ ಸಮದರ್ಶನ ಸಮವರ್ತನ ಸೂತ್ರವನ್ನು ಸಾಧಕರಲ್ಲಿ ಅಳವಡಿಸಲು ಆದಿ ಜಗದ್ಗುರು ರೇಣುಕ ಶಿವಾಚಾರ್ಯರು ಚಿಚ್ಛಕ್ತಿ ಜ್ಞಾನನಿಲಯುಗಳನ್ನು ಅಂದು ಸ್ಥಾಪಿಸಿದರು.

"ಶೂನ್ಯೇ ಚಿದಂಬರೇ ಸ್ಥಾನೇ ದೂರೇ ವಾಙ್ಮನ ಸಾಧ್ವಸಃ ।
ವಿಲೀನಾತ್ಮಾ ಮಹಾಯೋಗೀ ಕೇನಕಿಂ ವ್ಯಾಪಿ ಭಾವಯೇತ್॥
ಅವಿಶುದ್ಧೇ ವಿಶುದ್ಧೇ ವಾ ಸ್ಥಲೇ ದೀಪ್ತಿರ್ಯಥಾ ರವೇಃ।
ಪತತ್ಯೇವಂ ಸದಾವೃದ್ವೃತ್ತೀ ಸರ್ವತ್ರ ಸಮವೃತ್ತಿಮಾನ್॥
ಏಕಭಾವೇನ ರೂಢಸ್ಯ ನಿಷ್ಕಲಂಕೇ ಚಿದಂಬರೇ।
ಕ್ವ ಜಾತಿವಾಸನಾಯೋಗಃ ಕ್ವ ದೇಹಿತ್ವಂ ಪರಿಭ್ರಮಃ॥" ರೇ. ಗೀತೆ

ಅವರು ಸ್ಥಾಪಿಸಿದ ಆ ಚಿಚ್ಛಕ್ತಿ ಜ್ಞಾನ ನಿಲಯು ಗಳಲ್ಲಿ ಚಿದಂಬರ ಸ್ವರೂಪ ಶೂನ್ಯ ತತ್ತ್ವದ ಸಾಕ್ಷಾತ್ಕಾರದ ಸ್ವಾನುಭವದ ಸಾಧನೆಯನ್ನು ಸರ್ವರಿಗೆ ಬೋಧಿಸಿ ಸರ್ವರನ್ನು ಸಮದರ್ಶಿಗಳನ್ನಾಗಿ ಸಮವರ್ತಿಗಳನ್ನಾಗಿ ಮಾಡುತ್ತಿದ್ದರು. ಆ ಚಿಚ್ಛಕ್ತಿ ಜ್ಞಾನನಿಲಯಾನು ಭಾವಿಗಳಲ್ಲಿ ಸಾಮಾಜಿಕ ಜಾತಿವಾಸನೆಯಾಗಲಿ ವೈಯಕ್ತಿಕ ದೇಹ ಭಾವದ ಸ್ವಾರ್ಥ ಸಂಕುಚಿತ ಮೋಹವಾಗಲಿ ಇರುತ್ತಿರಲಿಲ್ಲ. ಜಾತಿ ಕಲ್ಪನೆ ಸ್ವಾರ್ಥ ಭಾವನೆಗಳು ದಿಟಕ್ಕೆ ಪರಿಭ್ರಮಕ್ಕೆ ಕಾರಣಗಳು. ರವಿಯು ತನ್ನ ದೀಪ್ತಿಯನ್ನು ಶುದ್ಧಾಶುದ್ಧ ಸ್ಥಲ ಭೇದಗಳನ್ನೆಣಿಸದೆ ಎಲ್ಲೆಲ್ಲಿಯೂ ಸಮವಾಗಿಯೇ ಚಲ್ಲುವ ಸಮವೃತ್ತಿಯುಳ್ಳವನಾಗಿರುವಂತೆ ಚಿಚ್ಛಕ್ತಿ ಜ್ಞಾನಿಗಳು ಎಲ್ಲರಲ್ಲಿ ಎಲ್ಲೆಲ್ಲಿ ಸಮ ವೃತ್ತಿಯುಳ್ಳವರಾಗಿರುತ್ತಿದ್ದರು. ಬರೀ ಬಾಹ್ಯ ಜೀವನದಲ್ಲಿ ಮಾತ್ರವಲ್ಲ, ಭಿನ್ನ ವ್ಯಕ್ತಿ ವಸ್ತುಗಳಲ್ಲಿ ಮಾತ್ರವಲ್ಲ,

"ನ ಬಿಭೇತಿ ಜರಾಮೃತ್ಯೋರ್ನ ಕ್ಷುಧಾಯಾವಶಂ ವ್ರಜೇತ್।
ಪರಿಪೂರ್ಣನಿಜಾನಂದ ಸಮಾಸ್ವಾದಾನ್ಮಹಾ ಸುಖೀ॥
ಅದ್ವೈತ ವಾಸನಾವಿಷ್ಟ ಚೇತಸಾಂ ಪರಯೋಗಿನಾಂ।
ಪಶ್ಯತಾಮಂತರಾತ್ಮಾನಂ ಜ್ಞಾತೃತ್ವಂ ಕಥಮನ್ಯಥಾ॥
ನಿರಸ್ತಭೇದಜಲ್ಪಸ್ಯ ನಿರೀಹಸ್ಯ ಪ್ರಶಾಮ್ಯತಃ।
ಸ್ವೇಮಹಿಮ್ನಿ ವಿಲೀನಸ್ಯ ಕಿಮನ್ಯದ್ ಜ್ಞೇಯ ಮುಚ್ಯತೇ?॥
ಏಕೀಭೂತೇ ನಿಜಾಕಾರೇ ಸಂವಿದಾ ನಿಷ್ಪ್ರಪಂಚಯಾ।
ಕೇನ ಕಿಂ ವೇದನೀಯಂ ಸ್ಯಾದ್ವೇತ್ತಾಕಃ ಪರಿಭಾಷ್ಯತೇ॥
ಮಹಾಸತ್ತಾ ಮಹಾಸಂವಿದ್ವಿಶ್ವರೂಪಾ ಪ್ರಕಾಶತೇ।
ತದ್ವಿನಾ ನಾಸ್ತಿ ವಸ್ತ್ವೇಕಂ ಭೇದಬುದ್ಧಿಂ ವಿಮುಂಚತಃ॥"

—ರೇ. ಗೀತೆ

ತನ್ನಲ್ಲಿಯೇ ಒದಗುವಂತಹ ಪ್ರಾಕೃತಿಕ ವಿಕೃತಿ ವಿಭೇದಗಳಾದ ಮುಪ್ಪು-ಮೃತ್ಯುಗಳಿಗಂಜದೆ ಅಳುಕದೆ, ಹಸಿವು-ನೀರಡಿಕೆಗಳ ವಶವಾಗದೆ ಪರಿಪೂರ್ಣವಾದ ಅಂದರೆ ಯಾವ ಕೊರತೆಯಿಲ್ಲದ ಸ್ವಯಾನಂದ ಸಮಾಸ್ವಾದದಿಂದ ಪರಮಾನಂದ ಪರಿಣಾಮಿಯಾಗಿ ಚಿಚ್ಛಕ್ತಿ ಜ್ಞಾನನಿಲಯದ ಚಿತ್ಕಳಾನುಭಾವಿ ಚಿದ್ರಸಾಮೃತಾಸ್ವಾದಿಯಾಗಿರುತ್ತಿದ್ದನು.

ಆ ಬಗೆಯ ಭವ್ಯ ದಿವ್ಯಯೋಗವುಳ್ಳವರೆ ಪರಯೋಗಿಗಳು. ಅವರು ಆ ಶಿವಾದ್ವೈತ ವಾಸನಾಸಕ್ತ ಚೇತಸ್ಕರಾಗಿರುತ್ತಿದ್ದರು. ಇದ್ದು ವಿಶ್ವಾಂತರಾತ್ಮನನ್ನು ಸ್ವಾಯತ್ತೀಕರಿಸಿಕೊಂಡ ಆ ಮಹಾನುಭಾವರಿಗೆ ಅನ್ಯದರ ಜ್ಞಾತೃತ್ವವೆಂಬುದೆಂಬುದೆಲ್ಲಿಯದು? ತನಗನ್ಯದಿಲ್ಲವಾಗಿ ತಾನೇ ಎಲ್ಲ: ಎಲ್ಲವೂ ತಾನೆ! ಭೇದವಾದ ವಿವಾದಭ್ರಾಂತಿಯಿಲ್ಲದೆ ಯಾವಆಶೋತ್ತರಗಳಿಲ್ಲದೆ ಪ್ರಶಾಂತನಾದ ತನ್ನ ಮಹತ್ತತೆಯಲ್ಲಿ ತಲ್ಲೀನನಾದ ಚಿದಾತ್ಮನಿಗೆ ಬೇರೆ ಅರಿಯಬೇಕಾ (ಜ್ಞೇಯವಾ) ದುದು ಏನಿದೆ? ನಿಷ್ಪ್ರಪಂಚ ಸಂವಿತ್ತಿಯಿಂದ ಸ್ವಸ್ವರೂಪದಲ್ಲಿ ಸಮರಸವಾದ ಆ ಪರ ಯೋಗಿಗೆ ಯಾವುದರಿಂದ ಏನನ್ನು ಅರಿಯಬೇಕಾಗಿದೆ? ಅರಿವವನು ಅಂದರೆ ಜ್ಞಾತೃವು ಎಲ್ಲಿರುವನು? ವ್ಯಷ್ಟಿಭಾವವೇ ಇರದು; ಅಲ್ಪತ್ವವೇ ಇರದು. ಮಹಾಸತ್ತೆಯಾಗಿ ಮಹಾಸಂವಿತ್ತಾಗಿ ವಿಶ್ವರೂಪನಾಗಿ ಪ್ರಕಾಶಿಸುತ್ತಾನೆ; ಪರಿಶೋಭಿಸುತ್ತಾನೆ. ಏನೆಲ್ಲ ಭೇದ ಬುದ್ಧಿಯನ್ನು ಬಿಟ್ಟವನಿಗೆ ನಿತ್ಯ ಪೂರ್ಣಾಖಂಡ ಮಹಾಸತ್ತೆಯ ಹೊರತು ಒಂದು

ವಸ್ತುವೂ ಇರದು, ಇಲ್ಲ. ''ನೇಹ ನಾನಾಸ್ತಿಕಿಂಚನ'' ಆ ಮಹಾ ಚಿತ್ಪ್ರಸಾದ ಸಂಪತ್ತಿಯಿಂದುಂಟಾಗುವ ನಿರುಪಮ ನಿಷ್ಪತ್ತಿಯಿದು. ಆ ಚಿತ್ಪ್ರಸಾದದನುಭವವೇ ಪರಮಾನುಭವ. ಆಪರಮಾನುಭವ ಪರಿಣಾಮಿಗೆ ಪದಾರ್ಥ ಪ್ರಜ್ಞೆಯಿರದು. ಪದಾರ್ಥ ಪ್ರಜ್ಞೆಯಿರುವಲ್ಲಿ ಪ್ರಾಪಂಚಿಕ ವ್ಯವಹಾರವಿರುತ್ತದೆ. ವಿಕಲ್ಪವಿರುತ್ತದೆ. ದ್ವಂದ್ವದಂದುಗವಿರುತ್ತದೆ. ಅಶುದ್ಧಮಾಯೆಗೆ ಬದ್ಧನಾಗಬೇಕಾಗುತ್ತದೆ. ಪದಾರ್ಥಪರಿಜ್ಞಾನ ಸಾಮಾನ್ಯವಾಗಿ ಸುಷುಪ್ತನಿಗಿರದು, ಇರುವುದಿಲ್ಲ. ಇನ್ನು ಆ ಶಿವಾದ್ವೈತ ಸಂವಿದುಲ್ಲಾಸದರ್ಶಿಗೆ ಸತ್ಯ ಸುಖ ಸ್ಫೂರ್ತಿ ಸ್ವರೂಪನಿಗೆ ಜೀವನ್ಮುಕ್ತನಿಗೆ ಇರುವುದೆಂದರೇನು ? ಆತ ಆ ನಿರುಶಯ ನಿರಾಳ ಪ್ರಸಾದಿಂದ ನಿತ್ಯತೃಪ್ತನು, ನಿತ್ಯ ನಿರಾಳ ಚಿತ್ತನು. ಮತ್ತು ಕ್ರಿಯಾನಿಷ್ಪತ್ತಿ, ಜ್ಞಾನ ನಿಷ್ಪತ್ತಿ ಭಾವನಿಷ್ಪತ್ತಿಗೊಂಡ ನಿರುಪಮ ನಿರ್ಮಲ ಚರಿತ್ರನು. ಚಿದಂಬರ ಸ್ವರೂಪ ಶೂನ್ಯ (ಪೂರ್ಣ) ಚೇತನನು. ಅದರಿಂದ ಆತನ ಆ ಪಿಂಡಾಕಾಶವು ಚಿದಾಕಾಶವಾಗಿ ಶಿವಾದ್ವೈತ ಸ್ವರೂಪವಾಗಿರುತ್ತದೆ. ಷಟ್ತ್ರಿಂಶತ್ತತ್ತ್ವ ಸಂಯಕ್ತವಾದ ಆತನ ಆ ಮಹಾಲಿಂಗಾಂಗವು ಚಿದ್ದೀಪ್ತಿಯಿಂದ ಪೂರ್ಣ ಪ್ರಕಾಶಮಾನವಾಗಿರುತ್ತದೆ. ಚಿದಮೃತದಿಂದ ನಿತ್ಯ ಸತ್ಯವಾಗಿರುತ್ತದೆ. ಚಿನ್ನಾದಾತ್ಮಕವಾಗಿ ನಿಶ್ಶಬ್ಧ ಬ್ರಹ್ಮ ಸ್ವರೂಪವಾಗಿರುತ್ತದೆ. ಆತನಿಗೆ ಸೀಮಿತ ಸಂಕುಚಿತ ವ್ಯಕ್ತಿತ್ವವೇ ಇರದು. ಚಿದಂಬರದಂತೆ ವಿಭುವಿಗೆ ವಿಭುವಾಗಿರುತ್ತದೆ. ಆತನ ಆಹೃದಯಾಕಾಶ! ಆತನೇ ಪ್ರತ್ಯಕ್ಷ ಪರಮಾತ್ಮ! ಆತನೇ ಮಹತೋಮಹೀಮಾನ್ ಮಹಾಲಿಂಗ ಸ್ವರೂಪವ ಆ ಮಹಾಲಿಂಗ ಸ್ವರೂಪವನ್ನು ಶಿವಾಚಾರ್ಯರು ದಿವ್ಯಕಾವ್ಯಮಯವಾಗಿ ಆದರೂ ಭಾವ್ಯವಾಗಿ ನವನವೋನ್ಮೇಷ ಪ್ರತಿಭಾವಶಾಲಿಯಾಗಿ ಕ್ರಾಂತದರ್ಶಿಯಾಗಿ ಬಿತ್ತರಿಸಿ ಬಣ್ಣಿಸಿದ್ದಾರೆ. ಅವು ಬರೀ ಮುಖ ಶಬ್ದಗಳಲ್ಲ, ಅಂತರಂಗದ ಅಂತರಾಳದ ಅಂತರಾತ್ಮನಿಂದ ಹೊಮ್ಮಿಬಂದ ಹಾಲ್ಗಡಲ ಹನಿಗಳು, ಚಿದ್ರವಿ ರಶ್ಮಿಗಳು;

''ಅನಿರ್ದೇಶ್ಯಮನೌಪಮ್ಯ ಮವಾಙ್ಮನಸ ಗೋಚರಂ।
ಸರ್ವತೋಃಮುಖಸಂಪನ್ನಂ ಸತ್ತಾನಂದ ಚಿದಾತ್ಮಕಂ॥
ಕಾಲಾತೀತಂ ಕಲಾತೀತಂ ಕ್ರಮಯೋಗಾದಿವರ್ಜಿತಂ।
ಸ್ವಾನುಭೂತಿ ಪ್ರಮಾಣಸ್ಥಂ ಜ್ಯೋತಿಷಾಮುದಯಸ್ಥಲಂ॥
ಶಿವಾಖ್ಯಂ ಪರಮಂ ಬ್ರಹ್ಮ ಪರಮಾಕಾಶ ಲಕ್ಷಣಂ।

ಲಿಂಗಮಿತ್ಯುಚ್ಯತೇ ಸದ್ಭಿರ್ಯದ್ವಿನಾನ ಜಗತ್ ಸ್ಥಿತಿಃ॥
ಪರಮಾಕಾಶಮವ್ಯಕ್ತಂ ಪ್ರಬೋಧಾನಂದ ಲಕ್ಷಣಂ।
ಲಿಂಗಂ ಜ್ಯೋತಿರ್ಮಯಂ ಪ್ರಾಹುರ್ಲೀಯಂತೇ ಯತ್ರಯೋಗಿನಃ
ಸಂವಿದೇವ ಪರಾಕಾಷ್ಠಾ ಪರಮಾನಂದ ರೂಪಿಣೀ।
ತಾಮಾಹುಃ ಪರಮಾಕಾಶಂ ಮುನಯೋ ಮುಕ್ತಸಂಶಯಾಃ॥....=''

ಸವಿದಿರಾ, ಈ ಪಂಚ ಪದ್ಯಗಳಲ್ಲಿ–ಹತ್ತುಪಂಕ್ತಿಗಳಲ್ಲಿ–ಇಪ್ಪತ್ತು ಪಾದಗಳಲ್ಲಿ ಇರುವ ನುಡಿಗಡಣ ತನಿ ಹನಿಗಳನ್ನು! ಮೂಸಿದಿರಾ ತನಿಗಂಪನ್ನು! ನೋಡಿದಿರಾ ತನಿವೆಳಗನ್ನು! ಸೋಂಕದಿರಾ ಆ ತನಿಸೋಂಕನ್ನು! ಕೇಳಿದಿರಾ ಆ ತನಿದನಿಯನ್ನು! ಪರಿಣಯಿಸಿದಿರಾ ಆ ತನಿತೃಪ್ತಿಯನ್ನು! ಪಡೆದಿರಾ ಶಿವಸ್ವರೂಪಶಿವಾಚಾರ್ಯರ ಆ ತನಿಹರಕೆಯನ್ನು! ಓ ಓದುಗರೆ, ಅದನ್ನು ತೆರೆದು ತೋರುವಿರಾ? ಎಂದು ಕೇಳಿದವರಿಗೆ ಇಲ್ಲಿದೆ ಪುತ್ತರ–ಮೇಲಿನ ಶಿವಾಚಾರ್ಯರ ಪಂಚ ಶ್ಲೋಕಗಳಲ್ಲಿ! ಇಂತು.

ಅದು ತೋರಬಾರದ್ದು, ಹೋಲಿಸಬಾರದ್ದು, ಮಾತುಮನಗಳಿಗೆ ನಿಲುಕದ್ದು, ಅದು ಎಲ್ಲೆಡೆಗೆ ಮೊಗವುಳ್ಳದ್ದು, ಸಚ್ಚಿದಾನಂದಾತ್ಮಕವಾದದ್ದು, ಅದು ಕಾಲ ಕಲೆ ಕ್ರಮಗಳಿಗೆ ಮೀರಿದ್ದು. ಆದರೂ ಸ್ವಾನುಭವಕ್ಕೆ ಸಂವೇದ್ಯವಾಗುವಂತಹದ್ದು, ಅದುವೇ ಈ ಭೌತಿಕ ಜ್ಯೋತಿಗಳಿಗೆಲ್ಲ ಉಗಮ ಮೂಲಸ್ಥಲವಾದದ್ದು,ಅದರ ಹೆಸರು ಪರಶಿವಬ್ರಹ್ಮ ಅದರದು ಪರಮಾಕಾಶ ಲಕ್ಷಣ; ಅದುವೇ ಮಹಾಲಿಂಗ; ಅದನ್ನುಳಿದು ಈ ಜಗತ್ತಿನ ಸ್ಥಿತಿಯಿಲ್ಲ. ಅದು ಅವ್ಯಕ್ತವೂ ಪ್ರಬೋಧಾನಂದ ಲಕ್ಷಣವುಳ್ಳದ್ದೂ ಜ್ಯೋತಿರ್ಮಯವೂ ಎಂದು ಲಿಂಗವೇ ಆದ ಪರಯೋಗಿಗಳು ಪ್ರತಿಪಾದಿಸುವರು. ಅಲ್ಲದೆ ಆ ಲಿಂಗದಲ್ಲಿ ಅವಿರಳವಾದ ಸಂವಿಚ್ಛಕ್ತಿಯೊಂದಿದೆ. ಅದುವೇ ಪರಕಾಷ್ಠ. ಪರಮಾನಂದರೂಪಿಣಿ!

ಸವಿದಿರಾ, ಮೂಸಿದಿರಾ–ಎಂದು ಮುಂತಾಗಿ ಸಹೃದಯರನ್ನು ಕೇಳಿದ ಕೇಳಿಕೆಗಳಿಗೂ ಅದೇ ಮಾರ್ನುಡಿ,-ಮೇಲಿನ ಶಿವಾಚಾರ್ಯರ ಸೂಳ್ನುಡಿ ಗಡಣವೇ ಸಲ್ಲಿಂಗ–ಚಿಲ್ಲಿಂಗ–ಸುಖಲಿಂಗಗಳೆಂದು!

ಶಿವ (ಲಿಂಗ) ಶಕ್ತಿಗಳಿಗಿರುವ ಅವಿರಳ ಸಂಬಂಧವೇ ವಿಶ್ವಕ್ಕೂ ಇದೆಯೆಂಬುದನ್ನು ಇವ್ಮಾದ ಉಪಮೆಗಳಿಂದ ಉದ್ದೀಪನಗೊಳಿಸುವ ಶಿವಾಚಾರ್ಯರ ಶಿವಕವಿ–ಶಿವಾನುಭಾವಿ ಭಾಷಾ ವೈಖರಿಯಲ್ಲಿಯೆ ನಿರ್ದೇಶಿಸೋಣ:

"ತರಂಗಾದಿರ್ಯಥಾ ಸಿಂಧೋಃ ಸ್ವರೂಪಾನ್ನಾತಿರಿಚ್ಯತೇ।
ತಥಾ ಶಿವಾತ್ ಪರಾಕಾಶಾದ್ವಿಶ್ವಮೇತನ್ನಭಿದ್ಯತೇ॥
ಯಥಾ ಪುಷ್ಪ ಪಲಾಶಾದಿರ್ವೃಕ್ಷರೂಪಾನ್ನ ಭಿದ್ಯತೇ।
ತಥಾ ಶಿವಾತ್ಪರಾಕಾಶಾಜ್ಜಗತೋ ನಾಸ್ತಿ ಭಿನ್ನತಾ॥
ಯಥಾ ಜ್ಯೋತೀಂಷಿ ಭಾಸಂತೇ ಭೂತಾಕಾಶೇ ಪೃಥಕ್ ಪೃಥಕ್।
ತಥಾ ಭಾಂತಿ-ಪರಾಕಾಶೇ ಬ್ರಹ್ಮಾಂಡಾನಿ ವಿಶೇಷತಃ॥
ನಿರಸ್ತೋಪಾಧಿಸಂಬಂಧಂ ನಿರ್ಮಲಂ ಸಂವಿದಾತ್ಮಕಂ।
ಪರಾಕಾಶಂ ಜಗಚ್ಚಿತ್ರವಿಲಾಸಾಲಂಬಭಿತ್ತಿಕಂ॥"

–ರೇ. ಗೀತೆ

ಕಾಣುವೀ ಪ್ರಪಂಚ ಪರಶಿವ ಪರಾಶಕ್ತಿಯರಷ್ಟೇ ಸತ್ಯ ಮತ್ತು ಅವಿಭಾಜ್ಯಗಳೆಂಬುದನ್ನು ಜಲ–ತರಂಗ, ವೃಕ್ಷ-ವೃಕ್ಷಾಂಗ, ವ್ಯೋಮ-ವ್ಯೋಮನಿಷ್ಠ ರವಿಶಶಿ ತಾರಾಕಾದಿ ಜ್ಯೋತಿಗಳ ಮತ್ತು ಚಿತ್ರ ಭಿತ್ತಿಗಳ ಸೂಕ್ತ ಸುಂದರ ಉಪಮೆಗಳಿಂದ ಕಾವ್ಯವಾಣಿ ವೈಭವದಿಂದ ನಿರೂಪಿಸಿದ ನಿಪುಣತೆಯನ್ನಿಲ್ಲಿ ನಿರೀಕ್ಷಿಸಬೇಕು. ಇದುವೇ ವೀರಶೈವ ಸಿದ್ಧಾಂತ ಮತ್ತು ಸಂಸ್ಕೃತಿ! ಇದಕ್ಕೆ ಶಿವಾಚಾರ್ಯರ ಅಪ್ರತಿಮ ಕೊಡುಗೆ! ಜಗತ್ತು ಬೇರೆಯಲ್ಲ ಜಗದೀಶ ಬೇರೆಯಲ್ಲ ಅಂಗಾಂಗಿ ಭಾವದಲ್ಲಿ ಅವಿನಾಭಾವ ಸಂಬಂಧವನ್ನು ರೇಣುಕರು ಸಿದ್ಧಾಂತಿಸಿದ್ದಾರೆ. ಅವರ ಆ ಚಿದನುಭೂತಿ ಅಂದೇ ಅಪಾರವಾಗಿತ್ತು ಅಂತೆಯೆ ಅವರು ಚಿಚ್ಛಕ್ತಿ ಜ್ಞಾನ ನಿಲಯುಗಳನ್ನು ಅಪೂರ್ವವಾಗಿ ಸ್ಥಾಪಿಸಿ ಚಿದಂಬರ ಶೂನ್ಯತತ್ತ್ವವನ್ನು ಇವರಷ್ಟು ಸ್ವಾನುಭಾವದಿಂದ ವಿಸ್ತರಿಸಿ ವಿನ್ಯಾಸಿಸಿದವರು ಇಂದಿನವರೆವಿಗೂ ಯಾರಿಲ್ಲ. ಪರಮಾನಂದ ರೂಪ ಪರಾಕಾಷ್ಠ ಸಂವಿತ್ತೇ ಚಿಚ್ಛಕ್ತಿಯೆಂದು ಅದುವೇ ಪರಮಾಕಾಶವೆಂದು ಹೇಳಿ ತಮಗಿರುವ ಪರಮಾನುಭವವನ್ನು (ಚಿಚ್ಛಕ್ತಿ ಜ್ಞಾನವನ್ನು) ಅಸಾಮಾನ್ಯವಾಗಿ ವಿನ್ಯಾಸಗೊಳಿಸಿ ವೀರಶೈವ ಸಂಸ್ಕೃತಿಗೆ ಮಹತ್ತಮ ಮಹತಿಯನ್ನು ತಂದವರಲ್ಲಿ ಅಗ್ರಗಣ್ಯರಾಗಿದ್ದಾರೆ.

## ಏಸಳು ಮೂರು

# ಆಧುನಿಕ ವೀರಶೈವ

(ಒಂದು ಅಧ್ಯಯನ–ಸಂಶೋಧನ)

(ಕ್ರಿ. ಶ. ೬ನೆಯ ಶತಮಾನದಿಂದ)

### ಮುಮ್ಮಾತು

ವೀರಶೈವ ಧರ್ಮದ ಎಂಟು ಸಾವಿರ ವರುಷಗಳ ಇತಿಹಾಸದಲ್ಲಿ ಕ್ರಿ. ಶ. ಆರನೆಯ ಶತಮಾನದಲ್ಲಿ ವಿನೂತನಯುಗವೊಂದು ಪ್ರಾರಂಭವಾಗುವುದು. ಶಿವಯೋಗಿ, ಮುದ್ದದೇವ, ಸಿದ್ಧನಾಥ ಶಿವಾಚಾರ್ಯ, ಶಿವಯೋಗಿ ಶಿವಾಚಾರ್ಯ, ಪಂಡಿತಾಚಾರ್ಯರುಗಳು ೬–೭–೮ ಈ ಮೂರು ಶತಮಾನಗಳಲ್ಲಿ ಅನಾದಿ ವೀರಶೈವಕ್ಕೆ ಆಧುನಿಕತೆಯನ್ನು ತಂದು ತೊಳಗಿಸಿದ ನವಯುಗವದು. ಅವರೆಲ್ಲ ಶಿವಾಚಾರಸಿದ್ಧರು, ಶಿವಜ್ಞಾನ ಸಾಗರರು. ಶಿವಭಕ್ತಿ ಸುಧಾಸಿಂಧು ವಿಜೃಂಭಣ ಚಂದ್ರರು ಶಿವಯೋಗಿಜನ ಮೂರ್ಧನ್ಯರು–ಅಗ್ರಗಣ್ಯರು, ಎಲ್ಲ ಪ್ರಾಣಿಗಳಿಗೆ ಲೇಸ ಬಯಸುವವರು, ಶರಣಾಗತರಿಗೆ ಪ್ರಬೋಧಿಸುವವರು, ಪ್ರಖ್ಯಾತರು. ಶಾಂತರು. ಶಿವಸಿದ್ಧಾಂತ ನಿರ್ಣೀತರು, ಶಿವಾತ್ಮ ವಿದ್ವಾನ್ವಿತರು, ವೀರಶೈವ ಶಿಖಾರತ್ನರು, ವಿಶಿಷ್ಟಾಚಾರ ಸಂಪತ್ತುಳ್ಳವರು. ವೀರಶಿವಾಚಾರ್ಯ ಶಿಖಾರತ್ನರು, ಚಿದಾನಂದ ಪರಾಕಾಶ ಶಿವಾನುಭವ ಯೋಗವುಳ್ಳವರು. ಶಿವಾಗಮ ಪರಿಜ್ಞಾನ ಪರಿಪಾಕರು ಸನಾತನ ಶಿವಭಕ್ತಿ ರಕ್ಷಕರು, ಶಿವತತ್ತ್ವ ಪರಿಜ್ಞಾನ ಚಂದ್ರಿಕೆಯುಳ್ಳ ಚಂದ್ರಮರು, ಮಿಗಿಲಾಗಿ ಮಹಾವೀರಶೈವ ಧರ್ಮಮಾರ್ಗ ಪ್ರವರ್ತಕರು, ವೀರಶೈವ ಸಕಲಾರ್ಥ ಪ್ರಕಾಶಕರು, ಅಸನ್ಮಾರ್ಗ ನಿರಾಸಕರು, ಪ್ರಜ್ಞಾವಂತ ಪ್ರಮೋದಕರು, ಪರಿಶುದ್ಧ ಹೃದಯರು, ಶಿವಾದ್ವೈತ ಭಾವ ಪ್ರಸಾದರು, ರುದ್ರ ಪಶುಪತಿ ಮತಸಾರಜ್ಞರು; ಅಂದರೆ ಅನಾದಿ ವೀರಶೈವ ಧರ್ಮದಿವ್ಯಾನುಭಾವಿಗಳು ಆಗಿದ್ದರು. ಆದರಿಂದಾಗಿ ಅವರು ವಿನೂತನ ವೀರಶೈವ ಯುಗವೊಂದನ್ನು ಸ್ಥಾಪಿಸಲು ಸರ್ವಸಮರ್ಥರಾದರು. ಇದನ್ನೆಲ್ಲ ಸಿದ್ಧಾಂತ

ಶಿಖಾಮಣಿಯೆಂಬ ಹೆಸರುಳ್ಳ ರೇಣುಕಗೀತೆ (ರೇಣುಕಾಗಮ) ಉದ್ಧರಿಸಿ ಉದ್ದಾಮವಾಗಿ ಸಿದ್ಧಗೊಳಿಸಿದೆ.

ಮೊದಲಿಲ್ಲದ ಮರವಾಗಿತ್ತು ವೀರಶೈವವೆಂಬ ಹೆಮ್ಮರ; ಹಳೆಮರ, ಅನಾದಿಯಿಂದ ಬಂದುದೆಂದು ಎರಡು ಸಾವಿರ ವರುಷಗಳ ಹಿಂದಿನಿಂದಿರುವ ಆಗಮಗಳು, ಸಾವಿರಾರು ವರುಷಗಳಿಂದಿರುವ ಸೂಳ್ನುಡಿ (ವಚನ)ಗಳು ಹೇಳಿರುವವಲ್ಲದೆ, ಆ ಅನಾದಿ ಕಾಲ ಯಾವುದೆಂಬುದು, ಮೊದಲು ಮಾಡಿದ ಆ ಮಹಾಪುರುಷ(ರು) ಯಾರೆಂಬುದು ನಿರ್ದಿಷ್ಟವಾಗಿರಲಿಲ್ಲ. ಅನಾದಿ ಶಬ್ದಕ್ಕೆ ಒಮ್ಮೊಮ್ಮೆ ಆಧ್ಯಾತ್ಮಿಕಾರ್ಥವನ್ನು ಮಾಡಿರುವರಲ್ಲದೆ, ಮತ್ತು ಆ ಪರಮ ವಸ್ತು ಆದಿಯಲ್ಲದ್ದು (ಆದಿಯಿಲ್ಲಿದ್ದು) ಎಂದಿರುವುದಲ್ಲದೆ ವೀರಶೈವ ಕಾಲ-ಕರ್ತೃಗಳ ಬಗೆಗೆ ಯಾರೂ ಎಲ್ಲಿಯೂ ಸ್ಪಷ್ಟವಾಗಿ ನಿರ್ದಿಷ್ಟಗೊಳಿಸಿಲ್ಲ, ನಿದರ್ಶನಕ್ಕಾಗಿ,

'ಆದಿ ಅನಾದಿಯಿಲ್ಲದಂದು, ಆದಿಯನಾದಿಗತೀತಲಿಂಗ, ಆದಿಯಲ್ಲಿ ಬಂದುದಲ್ಲ, ಅನಾದಿ ಬಿಂದುವಿನಲ್ಲಿ ಆದುದಲ್ಲ, ಆದಿ ಅನಾದಿಗೆ ಭೇದವುಂಟೆ ! ಆದಿಯ ತೋರದೆ, ಅನಾದಿಯ ನರುಹದೆ, ಆದಿ ಅನಾದಿಯಿಂದತ್ತ ಮುನ್ನ....ಇತ್ಯಾದಿ ! ಇವುಗಳಿಂದ ಆ ಪರಶಿವತತ್ತ್ವ ಪ್ರತಿಪಾದಿತವಾಗಿದೆ. ಅದು ಆದಿ ಅನಾದಿಗಳಿಂದಾಚೆಯದೆಂದು ಭಾವಿಸಲಾಗಿದೆ ಅನಾದಿ ಆದಿಗಳ ವಿಚಾರಕ್ಕೆಡೆಯಿಲ್ಲ. ಆದಿ ಅಂಗ (ದೇಹ), ಅನಾದಿ ಲಿಂಗ (ಆತ್ಮ) ಎಂದು ವಿವೇಚಿಸಿ ನಿರೂಪಿಸುವುದೂ ಉಂಟು. ಆದಿ ಗುರು, ಆದಿಲಿಂಗ, ಆದಿ ಜಂಗಮ, ಆದಿಭಕ್ತ, ಆದಿಶಕ್ತಿ, ಆದಿಶಿವ ಎಂದು ಮುಂತಾಗಿ ಹೇಳುವುದುಂಟು. "ಆದಿಯನಾದಿ ತತ್ತ್ವದ ಭೇದಿಸಿ ಕೊಟ್ಟ ಗುರುವೆ, ಅಪ್ರಮಾಣದ ಬೆಳಗ ಭೇದಿಸಿಕೊಟ್ಟ ಗುರುವೆ, ಅಕಾರ ಉಕಾರ ಮಕಾರ ಕಳೆಯನರುಹಿಸಿ ಕೊಟ್ಟ ಗುರುವೆ, ಇಷ್ಟ ಪ್ರಾಣಭಾವ ವಿದೆಂದು ತೋರಿದ ಗುರುವೆ, ನಿಜದರಿವನರುಹಿಸಿಕೊಟ್ಟ ಗುರುವೆ, ನಿರ್ಮಳ ಪ್ರಭೆಯ ತೋರಿದ ಗುರುವೆ, ನಿಜವನನುಭವಕ್ಕೆ ತಂದ ಗುರುವೆ, ನಿಮ್ಮ ಘನವ ಕಾಂಬ ಕಣ್ಣು ಕ್ರಮಗೆಟ್ಟಿತ್ತು...." ಎಂದು ಗುರು ಗೀತವ ಘನವಾಗಿ ಹಾಡಿದವರುಂಟು. "ಆದಿಯಲ್ಲಿ ಗುರುಬೀಜವಾದ ಪಿಂಡಕ್ಕೆ ಅನಾದಿಯೆಂಬುದನೊಬ್ಬರು

ತಿಳುಹಲುಂಟೆ ? ಆದಿ ಕಾಯ, ಅನಾದಿ ಪ್ರಾಣ...." ಎಂದು ಕಂಡು ಕೊಂಡವರುಂಟು. "ಅನಾದಿವಿಡಿದು ಬಂದ ಗುರು, ಅನಾದಿವಿಡಿದು ಬಂದ ಲಿಂಗ, ಅನಾದಿವಿಡಿದು ಬಂದ ಜಂಗಮ ; ಅನಾದಿವಿಡಿದುಬಂದ ವೀರಶೈವ...." ಎಂದು ತೋಂಟದ ಸಿದ್ಧೇಶ್ವರರು ಮಾತ್ರ 'ಅನಾದಿವೀರಶೈವ, ವೆಂದು ನಿರ್ದೇಶಿಸಿದ್ದಾರೆ ; "ಅನಾದಿಗಣನಾಥನ ಶಿಷ್ಯನು ಆದಿಗಣನಾಥನು ; ಆದಿಗಣನಾಥನ ಶಿಷ್ಯನು ಅಧ್ಯಾತ್ಮಗಣನಾಥನು...." ಎಂದು ಪ್ರಭುದೇವನು ಪ್ರಭಾವಿಸಿ ಪ್ರಭಾಷಿಸಿದ್ದಾನೆ. ಇಲ್ಲಿ ಬರುವ ಅನಾದಿಗಣನಾಥ-ಆದಿಗಣನಾಥ ನಾಮ ಪದಗಳು ಯಾರನ್ನು ಬೋಧಿಸುತ್ತವೆ ? ಎಂಬುದನ್ನು ಪರಿಶೀಲಿಸಿದರೆ ರುದ್ರ-ಭದ್ರರನ್ನೆಂದು ಹೇಳಬಹುದೆಂದೆನಿಸುತ್ತದೆ. ಗಣ ಪದ ರುದ್ರಗಣನಿಷ್ಠ ವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಅನಾದಿಗಣರು ರುದ್ರಗಣರೆ ! ಅವರಿಗೆ ನಾಥನು ರುದ್ರದೇವನೆಂದೆ ಹೇಳಬೇಕು. ಆತನ ಶಿಷ್ಯ (ಮಾತ್ರ ಅಥವಾ ಕರಕಂಜಾತ) ಭದ್ರನೆಂದು ಹೇಳಬೇಕು. ಹೀಗೆ ಅನಾದಿ ವೀರಶೈವವು ತೋಂಟದ ಸಿದ್ಧೇಶ್ವರನಿಂದ, ಅನಾದಿಗಣನಾಥ (ರುದ್ರ)ನ ಅರಿವೆ ಪ್ರಭು ದೇವನಿಂದ ಗೋಚರಿಸುತ್ತವೆ. 'ರುದ್ರಗಣ ಪ್ರಮಥಗಣ' ಎಂದು ಹೇಳುವುದ ರಿಂದ ರುದ್ರಗಣರು ಅನಾದಿಕಾಲದವರೆಂಬುದು "ಉಪಮಾತೀತರು ರುದ್ರ ಗಣಂಗಳು" ಎಂಬುದರಿಂದ ರುದ್ರಗಣರು ಅಗ್ರಮಾನ್ಯರೆಂಬುದು, "ಗಂಗೆ ವಾಳುಕ ರುದ್ರರೆಲ್ಲರು ಅಂಗವರತು ಲಿಂಗವನರಿದರು...." ಎನ್ನುವುದರಿಂದ ರುದ್ರಗಣರು ಅಸಂಖ್ಯಾತರು ಅನಾದಿ ಲಿಂಗವಂತರು ಎಂದು ವಿದಿತವಾಗುತ್ತದೆ. 'ಇಷ್ಟಲಿಂಗ ಶಿರೋಧಾರಿ ರುದ್ರ' 'ಲಿಂಗತತ್ತ್ವವೇ ರುದ್ರ' ಎಂದು ಹೇಳಿರುವುದರಿಂದ ರುದ್ರದೇವನು ಲಿಂಗವಂತನೆಂಬುದು ಸ್ಪಷ್ಟವಾಗುತ್ತದೆ. "ಅನಂತರುದ್ರೋಭಗವಾನ್ ಪ್ರಣತೋಽಸ್ಮಿ ಜಗದ್ಗುರೋ" ಎಂಬೀ ಚಂದ್ರ ಜ್ಞಾನಾಗಮೋಕ್ತಿಯಿಂದ ಅನಾದಿ ವೀರಶೈವ ಜಗದ್ಗುರು ರುದ್ರನೆಂದು, "ರುದ್ರೇಣದೀಕ್ಷಿತೋ ಭೂತ್ವಾಸ್ಕಂದ : ಶಿವಸಮೋಽಭವತ್ । ಶಿವಾಚಾರ ರಹಸ್ಯಸ್ಯ ಪಾತ್ರತಾಂ ಪ್ರಥಮಂ ಗತಃ। ಎಂಬೀ ಆದಿತ್ಯ ಪುರಾಣೋಕ್ತಿಯನ್ನು ಚನ್ನಬಸವಣ್ಣನು ಒಪ್ಪಿದ್ದರಿಂದ ಅನಾದಿ ಶಿವಾಚಾರ (ವೀರಶೈವ) ಸ್ಥಾಪಕ (ಉತ್ಪಾದಕ)ನು ಶ್ರೀರುದ್ರನೆಂದು ಸಿದ್ಧವಾಗುತ್ತದೆ. ಆ ರುದ್ರದೇವನ ಅನಾದಿವೀರಶೈವ ಪ್ರವರ್ತಕರು ವೀರಭದ್ರ ವೀರರೇಣುಕಾದಿಗಳು ಎಂಬುದನ್ನು "ವೀರಶೈವ ಉಗಮ-ನಿಗಮ" ಎಂಬೀ ನಮ್ಮ ಗ್ರಂಥದಲ್ಲಿ ಗಮನಿಸಬೇಕು.

ವೀರಶೈವ ಚಾರಿತ್ರವನ್ನು ಅನಾದಿ-ಆದಿ-ಆಧುನಿಕ ಎಂದು ನಾವೇ ವಿಭಾಗಿಸಿ ಸುಮಾರು ೨೫-೨೭ ವರುಷಗಳಾಗಿವೆ. ಅಂದಿನಿಂದ ಈ ಬಗೆಗೆ ಪರಶೋಧನ-ಪರಿಚಿಂತನಗಳು ನಡೆದೇ ಇವೆ. ಪರಿಶೋಧಿಸಿದಂತೆ ಶಿವಾಗಮ-ಸೂಳ್ನುಡಿ (ವಚನ) ಗಳಿಂದ ಅನಾದಿ-ಆದಿ ವೀರಶೈವದ ಚರಿತ್ರೇತಿಹಾಸ ಚನ್ನಾಗಿ ಮನದಟ್ಟಾಗುತ್ತ ಬಂದಿತು ; ಅದೇಕೆ, ನಿರ್ಣಯ ಮಟ್ಟಕ್ಕೆ ಮುಟ್ಟು ವಂತಾಯಿತು. ಇದರ ಫಲವೇ 'ವೀರಶೈವ ಉಗಮ-ನಿಗಮ, ಎಂಬ ಕೃತಿ ! ತಲಸ್ಪರ್ಶಿಯಾಗಿ ತಿಳಿಯಬೇಕೆಂಬುವವರು ಅದನ್ನು ತೆಗೆದುಕೊಂಬುದು. ಮೂಲ ಅನಾದಿವೀರಶೈವವನ್ನು ಪುನಶ್ಚೇತನಗೊಳಿಸಿದ ಆದಿ ವೀರಶೈವರ ಚಾರಿತ್ರ ಚನ್ನಾಗಿ ಆದಷ್ಟು ಬೇಗ ಬೇಗ ಸಿಕ್ಕಂತೆ ಆಧುನಿಕ ವೀರಶೈವವನ್ನು ಪ್ರಧಾನವಾಗಿ ರೂಪಿಸಿದ ರೂವಾರಿಗಳ-ಚರಿತ್ರೆ ಸಿಕ್ಕುವುದು ಸುಲಭ ಸಾಧ್ಯ ವಾಗಲಿಲ್ಲ. ಸಿಕ್ಕಿದರೂ ಸಮಂಜಸವಾಗಿ ಯೋಜಿಸುವುದು ಮತ್ತು ಮೂರು ಭಾಗಕ್ಕೂ ಕಾಲಮಾನ ವಿಭಾಗಿಸುವುದು ಸಾಧ್ಯವಾಗದಂತಾಗಿತ್ತು. ಇದೀಗ ಕೆಲವಂಶ ಕೈಗೆ ಎಟಕಿದಂತಾಗಿದೆ. ಸದ್ಯಕ್ಕೆ ಸಿಕ್ಕಷ್ಟನ್ನೆ ನಿರೂಪಿಸುವುದೇ ಈ ಕಿರುಹೊತ್ತಗೆಯ ಕಾರ್ಯ. ಅನಾದಿ ವೀರಶೈವದ ಬೆಂಬಳಿ ಹಿಡಿದು ಬಂದಿದೆ; ಮತ್ತು ಆದಿವೀರಶೈವದ ಬೆಂಬಲದಿಂದಲೂ ಬಂದಿದೆ-ಆಧುನಿಕ ವೀರಶೈವ ! ಇದರ ಕಾಲಮಾನ ಸು. ಎರಡು ಸಾವಿರ ವರುಷಗಳಷ್ಟೆಂದು ಊಹಿಸಲು, ಸಿದ್ಧಾಂತ ಶಿಖಾಮಣಿ ಕರ್ತೃ ಶಿವಯೋಗಿ ಶಿವಾಚಾರ್ಯರು ತಮ್ಮ ಗ್ರಂಥದಲ್ಲಿ ಮಾಡಿದ ಶಿವಾಚಾರ್ಯವಂಶ ವರ್ಣನೆಯೆ ಮುಖ್ಯ ಕಾರಣ ! ೭ ಮತ್ತು ೮ನೆಯ ಶತಮಾನದಲ್ಲಿದ್ದ ಶಿವಯೋಗಿ ಶಿವಾಚಾರ್ಯನು ತನ್ನ ತಂದೆ ತಾತನ ಹೆಸರು ಗಳನ್ನು ಹೇಳಿ, ತಾತನಾದ ಮುದ್ದದೇವ ಶಿವಾಚಾರ್ಯನು, ಆತನಿಗಿಂತ ಅದೆಷ್ಟೋ ತಲೆಮಾರಿನ ಹಿಂದಿದ್ದ 'ಶಿವಯೋಗಿ' ಹೆಸರುಳ್ಳ ಇನ್ನೊಬ್ಬ ಶಿವಾಚಾರ್ಯನ ವಂಶದಲ್ಲಿ ಜನಿಸಿದನೆಂದು ಹೇಳಿದ್ದರಿಂದ ಮೂಲ ಶಿವಯೋಗಿಯ ಕಾಲ ಸು. 3 ಅಥವ ನಾಲ್ಕನೆಯ ಶತಮಾನವಿರಬೇಕೆಂದೆನಿಸುತ್ತದೆ. ಕ್ರಿ.ಶ. ೫ನೆಯ ಶತಮಾನದ ಪೂರ್ವದಲ್ಲಿ ವೀರಶೈವರಿದ್ದರೆಂದು ಮಿ. ಫಿಲಪ್‌ಬ್ರೌನ್; ಮಿ. ರಾಯಸ್ ಮೊದಲಾದ ಪಾಶ್ಚಾತ್ಯ ಪಂಡಿತರು ಐತಿಹಾಸಿಕ ಆಧಾರಗಳಿಂದ ದೃಢೀಕರಿಸಿದ್ದಾರೆ, ಮತ್ತು ಶ್ರೀ ಲಿಂ॥ ಹರ್ಡೇಕರ್ ಮಂಜಪ್ಪನವರು, ತಮ್ಮ "ವೀರಶೈವ ಸಮಾಜ ಸುಧಾರಣೆ" ಎಂಬ ತಮ್ಮ ಗ್ರಂಥದಲ್ಲಿ-"ಈ ವೀರಶೈವವು

ಅನಾದಿಸಂಸಿದ್ಧವಾದುದೆಂಬುದನ್ನು ವಿವರಿಸಿ ಹೇಳಬೇಕಾದುದಿಲ್ಲ....ಈ ದೇಶದ ಐತಿಹಾಸಿಕ ಕಾಲಕ್ಕಿಂತಲೂ ಪೂರ್ವದಲ್ಲಿಯೇ ವೀರಶೈವ ಮತಾನುಯಾಯಿಗಳಿದ್ದರೆಂಬುದು ಮಹಾಭಾರತಾದಿ ಪ್ರಾಚೀನ ಗ್ರಂಥಗಳಿಂದ ವ್ಯಕ್ತವಾಗುತ್ತದೆ." ಎಂದಿದ್ದಾರೆ.

ಹೀಗಿದ್ದರೂ ಇತ್ತೀಚಿಗೆ ಹನ್ನೆರಡನೆಯ ಶತಮಾನದಿಂದೀಚಿನದೆಂಬ ಅಪಸ್ವರ ಅಲ್ಲಲ್ಲಿ ಕೇಳಿಬರುವಂತಾಗಿದೆ. ಐತಿಹಾಸಿಕ ಅಥವಾ ಚಾರಿತ್ರಿಕ ಪೂರ್ಣ ಪ್ರಜ್ಞೆಯಿಲ್ಲದವರ ಅಪಸ್ವರವಿದು.

ಆಧುನಿಕ ವೀರಶೈವದ ಎರಡು ಸಾವಿರ ವರುಷಗಳಲ್ಲಿ ಆರನೆಯ ಶತಮಾನದ ಆರಂಭದಿಂದ ಹದಿನಯ್ದನೆಯ ಶತಮಾನದ ಅಂತ್ಯದವರೆಗೂ ಅಂದರೆ ಒಂದು ಸಾವಿರ ವರುಷ ಸುವರ್ಣಯುಗ. ಇದರಲ್ಲಿ ಆರರಿಂದ ಹನ್ನೊಂದು ಶತಮಾನದ ಅಂತ್ಯದವರೆಗಿನ ಆರುನೂರು ವರುಷಗಳ ಕಾಲ ಶಿವಾಚಾರ್ಯರದೊಂದು ಅದ್ಭುತವಾದ ಕ್ರಾಂತಿಯುಗ ; ಆಧುನಿಕ ವೀರಶೈವದ ವಿನೂತನ ಯುಗ. ವೀರಶೈವ ಜೀವನದ ಮಹಾ ಮೌಲ್ಯಗಳನ್ನು ಶಿವಾಚಾರ್ಯರು ಸ್ಥಾಪಿಸಿದ ಮನ್ವಂತರ. ಅಧಿಕಾರ ದಾಹವಿಲ್ಲದೆ ಆಶೆ ಅಕಾಂಕ್ಷೆಗಳಿಗೊಳಗಾಗದೆ ಮಹಾ ಮಣಿಹಗಳನ್ನು ಮಾಡಿದ ಮನ್ವಂತರ. ಕಾಳಾಮುಖ ಲಾಕುಳ ಬೌದ್ಧ ಜೈನಧರ್ಮಗಳವರ ದಾಳಿಗಳನ್ನು ಸ್ಪರ್ಧೆಗಳನ್ನು ಜಯಿಸಿ ವೀರಶೈವವನ್ನು ವಿಪುಲವಾಗಿ ವಿಸ್ತರಿಸಿದ ಶಿವಾಚಾರ್ಯರ ಸರ್ವೋನ್ನತ ಸಚ್ಚರಿತ್ರವು ಸಮೃದ್ಧಿಗೊಂಡ ಆದರ್ಶಯುಗ. ಶಿವಾಚಾರ್ಯರ ಸಚ್ಚಾರಿತ್ರ ಅನಾದಿ ಆದಿ ಮತ್ತು ಆಧುನಿಕ ಯುಗಗಳಿಂದ ಹಿರಿದಾಗಿ ಪರಿ ಪರಿಯಾಗಿ ಹರಿದು ಬಂದಿದ್ದರೂ ಇಂದಿಗೂ ಗುಪ್ತಗಾಮಿಯಾಗಿಯೇ ಇದೆ. ಶಿವಾಚಾರ್ಯರದು ಶಾಂತಿಯುತ ಸತ್ಯಸಾಂಸ್ಕೃತಿಕ ಕ್ರಾಂತಿ! ವಿಶಾಲ ವಿಪುಲಕ್ರಾಂತಿ! ಉತ್ಪಾದಕ ಪ್ರವರ್ತಕ ಸ್ಥಾಪಕ ಕ್ರಾಂತಿ ! ಶಿವಾಗಮಿಕ ಸೈದ್ಧಾಂತಿಕ ಸಾಂಸ್ಕೃತಿಕ ಶ್ರೇಷ್ಠ ಕ್ರಾಂತಿ! "ನವೀರಶೈವ ಸದೃಶಂ ಮತಮಸ್ತಿ ಜಗತ್ತ್ರಯೇ" ಎಂದೆನಿಸಿ ಡಿಂಡಿಮ ಬಾರಿಸಿದ ಮಹಾಕ್ರಾಂತಿ ! ಆಧುನಿಕ ವೀರಶೈವ ಶಿವಾಚಾರ್ಯರ ಇನ್ನೊಂದು ವಿಶಿಷ್ಟಕ್ರಾಂತಿಯೆಂದರೆ ಕನ್ನಡ ಸೂಳ್ನುಡಿಗಳ ಸೃಜಿಸಿದಕ್ರಾಂತಿ! ಸಂಸ್ಕೃತದಲ್ಲಿ ಷಟಸ್ಥಲ ಸಿದ್ಧಾಂತವನ್ನು ನೂರೊಂದು ಉಪಸ್ಥಲಗಳನ್ನು ರೂಪಿಸಿದ ಸಮಗ್ರ

ಕ್ರಾಂತಿ ! ಮತ್ತು ಶಿವಾನುಭವಸೂತ್ರ, ವಿಶೇಷಾರ್ಥ ಪ್ರಕಾಶಿಕೆ, ಕವಿಕರ್ಣ ರಸಾಯನ, ಮೊದಲಾದ ಶಾಸ್ತ್ರ ಮತ್ತು ಕಾವ್ಯಗಳನ್ನು ರಚಿಸಿದ ಆದರ್ಶ ಕ್ರಾಂತಿ ! ವೀರಶೈವಚಾರಿತ್ರಕ್ಕೆ ಅತ್ಯಂತ ಪುರಾತನತೆಯನ್ನು ಪ್ರಕಾಶ ಪಡಿಸಿದ ಪ್ರಸಿದ್ಧ ಕ್ರಾಂತಿ ! ಬಸವ ಪೂರ್ವಯುಗವೆಂದು ಶಾಸನ ಸಂಶೋಧಕರು ಉಲ್ಲೇಖಿಸುವಷ್ಟು ಪ್ರಸಂಗ ತಂದ ಕ್ರಾಂತಿ ! ಎಂದು ಮುಂತಾಗಿ ಹೇಳಲು ಹೆಮ್ಮೆಯೆನಿಸುತ್ತದೆ. ಶಿವಾಚಾರ್ಯರದು ಭಾರತಾದ್ಯಂತ ಬಿತ್ತರಗೊಂಡ ಕ್ರಾಂತಿಯೆಂಬುದನ್ನು ಕಣ್ಣರಳಿಸಿ ಕಾಣಬೇಕು. ಶಿವಾಚಾರ್ಯರು ವೀರಶೈವರಿಗೆ ಮಾತ್ರವಲ್ಲ, ವಿಶ್ವಮಾನವರಿಗೆ ಶಿವಾಚಾರ ಕೊಟ್ಟ ವಿಶಿಷ್ಟ ಕೊಡುಗೆ; ಯಾರೇ ಒಪ್ಪಲಿ. ಬಿಡಲಿ ಶಿವಾಚಾರ ಮಾನವತೆಯನ್ನು ರೂಪಿಸುವ ಮಹತ್ತರ ಸತ್ಸಾಧನ, ಅದರಿಂದ ವಿಕೃತಿಯಾಗದು ಮಾನವ ಜೀವನ ; ಆಗುವುದು ನಿರಾಮಯ ಜೀವನ, ನಿಷ್ಕಂಟಕ ಜೀವನ, ಶಿವಾಚಾರದಿಂದ ವಿಷಯಾತ್ಮಕ ವಿಲಾಸ ಜೀವನ ವಳಿದು ವಿಕಾಸ ಜೀವನ ಜರಗುತ್ತದೆ. ಶಿವಕ್ರಿಯೆ ಶಿವ ಜ್ಞಾನ ಶಿವಭಾವ ಶಕ್ತಿಯುಂಟಾಗುತ್ತದೆ. ಶೈವೀಗುಣಗಳು ಸಂವೃದ್ಧಿಸುತ್ತವೆ. ಶುದ್ಧಿಸಿದ್ಧಿಸುತ್ತದೆ. ಶಿವಭಕ್ತಿಗೂ ಶಿವಾಚಾರ ಅನಿವಾರ್ಯ. ಶಿವಾಚಾರವೆ ಶುದ್ಧ ಜೀವನ ಚೈತನ್ಯ; ಸತ್ಯಶಿವ ಲಾವಣ್ಯ. ಇದನ್ನೆಲ್ಲ ಗುರುತಿಸಿ ಆಚರಿಸಿ ಅನುಭವಕ್ಕೆ ತಂದುಕೊಂಡು ಸಾಮಾಜಿಕರಿಗೆ ಆಚರಿಸಲು ಬೋಧಿಸಿದ್ದುದು ಶಿವಾಚಾರ್ಯರ ಸ್ವಾನುಭಾವಿಕ ಸತ್ಯ. ಇಂತಹ ಶಿವಾಚಾರ ಅನಾದಿ ಕಾಲದ ಶ್ರೀರುದ್ರದೇವನಿಂದ ಬಂದುದೆಂಬುದು ಅಷ್ಟೇ ಐತಿಹಾಸಿಕ ಸತ್ಯ. ಅದನ್ನು ಆದಿಕಾಲದ ಶಿವಾಚಾರ್ಯರು ಮತ್ತು ಆಧುನಿಕ ಕಾಲದ ಶಿವಾಚಾರ್ಯರು ಚಿಂತನ ಪೂರ್ವಕ ಅಧ್ಯಯನಿಸಿ ಆಚರಿಸಿ ಸಾಮಾಜಿಕರನ್ನು ಆಚರಿಸುವಂತೆ ನಿರೂಪಿಸಿ ಅನ್ವರ್ಥಕವಾಗಿ ಶಿವಾಚಾರ್ಯರೆಂದೆನಿಸಿದರು, ಶಿವಾಚಾರಕ್ಕಿರುವುದು ಶಾಶ್ವತ ಮೌಲ್ಯ ; ಸಾಕಲ್ಯ, ಷಟಸ್ಥಲ (ಸ್ಥಲಿ)ಗಳಿಗೆಲ್ಲ-ಎಲ್ಲರಿಗೂ ಅತ್ಯಗತ್ಯ. ಈ ದಿಸೆಯಲ್ಲಿ ಜಗದ್ಗುರು ಪಂಡಿತಾಚಾರ್ಯ, ಸಿದ್ಧನಾಥ ಶಿವಾಚಾರ್ಯ, ಶಿವಯೋಗಿ ಶಿವಾಚಾರ್ಯ ವಿರೂಪಾಕ್ಷ ಶಿವಾಚಾರ್ಯ, ಚಂದ್ರಗುಂಡ ಶಿವಾಚಾರ್ಯ, ರೇವಣಸಿದ್ಧ ಶಿವಾಚಾರ್ಯ, ಮರುಳಸಿದ್ಧ ಶಿವಾಚಾರ್ಯ ಕರಿಬಸವ ಶಿವಾಚಾರ್ಯ, ಉರಿಲಿಂಗ ದೇವ ಶಿವಾಚಾರ್ಯ, ವಿಶ್ವೇಶ್ವರ ಶಿವಾಚಾರ್ಯರು ಗಣ್ಯರು ; ಸಂಸೇವ್ಯರು, ಆಧುನಿಕ ವೀರಶೈವ ಶಿವಾಚಾರ್ಯವರ್ಯರು. ಅವರಿಂದ ಎಲ್ಲ ಬಗೆಯಲ್ಲಿ ಆಧುನಿಕ ವೀರಶೈವ ವೈಶಿಷ್ಟ್ಯ ವೃದ್ಧಿಸಿತು; ಸಿದ್ಧಿಸಿತು.

೬ನೆಯ ಶತಮಾನದಿಂದ ೧೧ನೆಯ ಶತಮಾನದ ವರೆವಿಗೂ ಇರುವ ಶಿವಾಚಾರ್ಯರು ಧಾರ್ಮಿಕ ಸಾಮಾಜಿಕ ಸಾಂಸ್ಕೃತಿಕ ಸೈದ್ಧಾಂತಿಕವಾಗಿ ಉತ್ಕ್ರಾಂತಿಗಳನ್ನೆಸಗಿ ವೀರಶೈವವನ್ನು ಸರ್ವತೋಮುಖವಾಗಿ ಎತ್ತಿಹಿಡಿದುದು ವೀರಶೈವರ ಪುಣ್ಯ. ವೀರಶೈವಧರ್ಮ ಧನ್ಯ ; ಮತ್ತು ನಾಡಧನ್ಯ. ಅಂದಿನ ಶಿವಾಚಾರ್ಯರು ಶಿವಾಚಾರ ಶಿವವಿಚಾರ ಶಿವಾನುಭವಗಳನ್ನು ಬಿತ್ತಿಸಿದರು. ಅವರ ಶಿವದೀಕ್ಷಾ ಸಂಸ್ಕಾರಗಳಿಂದ ಕರ್ಮ ನಿರ್ಮಲವಾಯಿತು: ಅಜ್ಞಾನವಳಿದು ಜ್ಞಾನೋದಯವಾಯಿತು. ಭಾವಭ್ರಾಂತಿ ಹರಿದು ಅನುಭೂತಿ ಯುಂಟಾಯಿತು. ಅವರ ಆ ಷಟ್‌ಸ್ಥಲೋಪದೇಶದಿಂದ ಭವಿಗಳು ಭಕ್ತರಾದರು. ಮಾಹೇಶ್ವರರಾದರು, ಪ್ರಸಾದಿ ಪ್ರಾಣಲಿಂಗಿಗಳಾದರು ಮತ್ತು ಶರಣರಾದರು. ಐಕ್ಯಸ್ಥಲಿಗಳಾದರು. ಮನುಜರು ಶರಣರಾದರು. ಶರಣ ಸಂಸ್ಕೃತಿಯನ್ನು ಸಾತಿಶಯವಾಗಿ ಬೆಳಸಿದರು. ಶಿವಾಚಾರ್ಯರು ಸೂಳ್ನುಡಿಗಳನ್ನು ಸೃಜಿಸಿದರು. ಸೂಳ್ನುಡಿಗೆ ಶಿವಸ್ವರೂಪವನ್ನು ತಂದರು. ಮಾನವೀಯತೆಗೆ ಚ್ಯುತಿಬಾರದಂತೆ ಇರಿಸುವ ಶಕ್ತಿಯನ್ನುಂಟು ಮಾಡಿದರು ಸೂಳ್ನುಡಿಗೆ ! ಕನ್ನಡತನಕ್ಕೆ ಒಂದು ಹೊಚ್ಚ ಹೊಸ ಶೈಲಿಯನ್ನು ತಂದರು. ಅಚ್ಚ ಕನ್ನಡತನವನ್ನು ಹೆಚ್ಚಿಸಿದರು. ವಿಶ್ವಸಾಹಿತ್ಯಕ್ಷೇತ್ರದಲ್ಲಿ ಕನ್ನಡಕ್ಕೆ ಮೌಲ್ಯವನ್ನುಂಟುಮಾಡಿದರು. ೧೨ನೆಯ ಶತಮಾನದ ವಚನವಾಙ್ಮಯಕ್ಕೆ ಆಕರವನ್ನಾಗಿಸಿದರು. ಸಾಮಾಜಿಕ ಸಾಹಿತ್ಯಕ ಸಾಂಸ್ಕೃತಿಕವಾಗಿ ೧೧ನೆಯ ಶತಮಾನದಲ್ಲಿ ಹೆಚ್ಚು ಪ್ರಭಾವಶಾಲಿಯಾಗಿ ಪ್ರಗತಿಸಾಧಿಸಿದರು– ಶಿವಾಚಾರ್ಯರು. ವಚನಪದ ಪ್ರಯೋಗದಿಂದ ಅಚ್ಚ ಕನ್ನಡತನ ಬಿದ್ದು ಹೋಯಿತು ೧೨ನೇ ಶತಮಾನದಲ್ಲಿ !

ಒಟ್ಟಾರೆ ಕ್ರಿ.ಶ. ೬ನೆಯ ಶತಮಾನದ ಶ್ರೀಶೈಲ ಜಗದ್ಗುರು ಪಂಡಿತಾರಾಧ್ಯರಿಂದ ಮೊದಲ್ಗೊಂಡು ೧೩–೧೪ನೆಯ ಶತಮಾನದ ಓರಂಗಲ್ಲ ಕಾಕತೀಯ ರಾಜಗುರು ಶ್ರೀವಿಶ್ವೇಶ್ವರ ಶಿವಾಚಾರ್ಯರ ವರೆವಿಗೂ ಅಂದರೆ ಎಂಟು ನೂರು ವರುಷಗಳ ಸುದೀರ್ಘಾವಧಿಯಲ್ಲಿ ವೀರಶೈವ ಮಹಾಕ್ರಾಂತಿಗಳನ್ನು ಸಫಲವಾಗಿ ನಡೆಸಿದವರು ಶಿವಾಜಾರ್ಯರು. ಇವರು ಕ್ರಾಂತಿಯ ರೂವಾರಿಗಳು, ಐತಿಹಾಸಿಕವಾಗಿ ನಡೆಯಿಸಿದ್ದರೂ ನಾಡಿನ ಬರಹಗಾರರು ಗಮನಿಸುತ್ತಿಲ್ಲ. ಸಾಹಿತ್ಯವಿದ್ದರೂ ಪ್ರಚಾರವಿಲ್ಲ. ಮುಖ್ಯವಾಗಿ ಇಂದಿನ ಶಿವಾಚಾರ್ಯರೇ ಇದನ್ನು ಗಮನಿಸುತ್ತಿಲ್ಲ. ೧೨ನೆಯ ಶತಮಾನದಲ್ಲಿ ಶಿವಶರಣರು, ೧೫ನೆಯ ಶತಮಾನ

ದಲ್ಲಿ ಶ್ರೀ ತೋಂಟದಾರ್ಯರಾದಿಯಾಗಿ ನೂರೊಂದು ವಿರಕ್ತರು ಮಾಡಿದ ಕ್ರಾಂತಿಗಳ ಪ್ರಚಾರ ಸಾಕಷ್ಟು ನಡೆಯುತ್ತದೆ. ೨೦ನೆಯ ಶತಮಾನದಲ್ಲಿ ಪರಮಪೂಜ್ಯರಾದ ಹಾನಗಲ್ಲ ಕುಮಾರ ಮಹಾಸ್ವಾಮಿಗಳವರು ವೀರಶೈವ ಮಹಾಸಭೆಯನ್ನು ಮತ್ತು 'ಶಿವಯೋಗಮಂದಿರು' ಶಿವಯೋಗ ಸಂಸ್ಥೆಯೊಂದನ್ನು ಸ್ಥಾಪಿಸಿ ಚಿರಸ್ಮರಣೀಯ ಕ್ರಾಂತಿಯನ್ನು ನೆರವೇರಿಸಿರುವರು. ಹೀಗೆ ಆಧುನಿಕ ವೀರಶೈವ ಧರ್ಮವು ತನ್ನ ನಿಲವನ್ನು ನಿರೂಪಿಸಿಕೊಂಡಿರುವ ಇತಿಹಾಸವನ್ನು ಈ ಕಿರುಕೃತಿ ಯಥಾ ಶಕ್ತಿಯಾಗಿ ರೂಪಿಸುವ ಪಥದಲ್ಲಿ ಪ್ರಥಮ ಪದಾರ್ಪಣಮಾಡಿದೆ.

## ೧. ಆಧುನಿಕ ವೀರಶೈವ

### (ಚಾರಿತ್ರಕ ಚಿಂತನ)

ಮಾನವೀಯ ಧರ್ಮದ ಇತಿಹಾಸದಲ್ಲಿ ವೀರಶೈವ ಧರ್ಮದ ಇತಿಹಾಸ ಅತ್ಯಂತ ಪುರಾತನದ್ದಾಗಿದೆ; ಅತ್ಯಂತ ವಿಶಾಲವೂ ವಿಶುದ್ಧವೂ ಸರ್ವಾಂಗೀಣವು ಆಗಿದೆ. ಸಮಾಜವಾದದಲ್ಲಿ ಸಮನ್ವಯ ನಿರ್ಣಯದಲ್ಲಿ ಮುಂದುವರಿದುದಾಗಿದೆ ; ಮುಮ್ಮೊದಲಿನದಾಗಿದೆ. ಕ್ರಿಯಾಶೀಲತೆಯ ಮೌಲ್ಯವನ್ನು ಮೊದಲು ಕಂಡುಹಿಡಿದು ಬಿತ್ತರಿಸಿದ ಧರ್ಮವಾಗಿದೆ. ಅಷ್ಟೇಕೆ ಅನಾದಿಕಾಲದಲ್ಲಿಯೆ ಅಂದರೆ ಪ್ರಾಗೈತಿಹಾಸಿಕ ಕಾಲದಲ್ಲಿಯೇ ಕ್ರಿಯಾಶೀಲ ಕೃಷಿಕ್ರಾಂತಿಯನ್ನೆಸಗಿದ ಮಹಾಧರ್ಮವಾಗಿದೆ. ಜೊತೆಗೆ ಅಧ್ಯಾತ್ಮಿಕ ಕೃಷಿಯ ಮಹಾಕ್ರಾಂತಿಯೂ ವೀರಶೈವಧರ್ಮದ್ದಾಗಿದೆ. ಅಂತೆಯೇ ವಿಕಾಸವಾದಲ್ಲಿ ಸ್ಥಿತಿಗತಿಗಳಲ್ಲಿ ಮುಂಚೂಣಿಯಲ್ಲಿದೆ. ವಸಾಹತುದಾರರ ವಿವಿಧ ದಾಳಿಗಳನ್ನು ಅಣಗಿಸಿ ಸಮನ್ವಯಿಸುವುದರಲ್ಲಿ ತನ್ನದೇ ಆದ ಆದರ್ಶ ಚಾರಿತ್ರವನ್ನು ರೂಪಿಸಿಗೊಂಡಿದೆ. ಆರ್ಯದ್ರಾವಿಡ ಸಮನ್ವಯ ಕಾರ್ಯದಲ್ಲಿ ಆಚಾರ್ಯಸ್ಥಾನದಲ್ಲಿದೆ. ವೀರಭದ್ರನ ದಕ್ಷಯಜ್ಞ ಕ್ರಾಂತಿಯ ನಂತರ ವೀರೇಶನಿಂದಲೆ ಆರ್ಯದ್ರಾವಿಡ ಸಮನ್ವಯ ಮಹಾಕ್ರಾಂತಿಯೂ ಆಗಿ ಆರ್ಯದ್ರಾವಿಡ ಸಮನ್ವಯಾಚಾರ್ಯ ಪಟ್ಟದ ಅರ್ಹತೆಯುಳ್ಳವನಾಗಿರುವನು. ತನ್ನ (ವೀರೇಶನ) ತಂದೆಯಾದ ರುದ್ರನಿಂದ ಆರಂಭವಾದ ಶಿವಾಚಾರವನ್ನು ವೀರಶೈವವನ್ನಾಗಿಸಿ ಅನಾದಿ ವೀರಶೈವವೆಂದೆನಿಸಿದನು. ಈ ದಿಸೆಯಲ್ಲಿ ಆತನಿಗೆ ಆತನ ಧರ್ಮ ಪತ್ನಿಯಾದ

ಭದ್ರಕಾಳಿ ಭವಾನಿ, ವೀರಚೌಡೇಶ್ವರಿ, ಸಪ್ತಮಾತೃಕೆಯರ ಬೆಂಬಲವು ಲಭ್ಯವಾಗುವುದು. ರುದ್ರ ಭದ್ರರಿಂದ ಗಣತಂತ್ರ ಮತ್ತು ಸ್ತ್ರೀ ಸ್ವಾತಂತ್ರ್ಯಗಳು ಮೊದಲಾಗಿರುವುವು. ಶೋಷಿತ ಪೀಡಿತ ಜನಗಳ ವಿಮೋಚನಕಾರ್ಯವೂ ರುದ್ರಭದ್ರರಿಂದ ಪ್ರಾರಂಭವಾಯಿತು. ಕಂಬಾರ ಕುಂಬಾರ ಮೊದಲಾದ ಕಾರ್ಮಿಕರಿಗೆ ಪ್ರೋತ್ಸಾಹ ಮತ್ತು ಪ್ರಾಧಾನ್ಯ ಕ್ರಾಂತಿಯೂ ಅವರದೇ ಆಗಿದೆ. ಜನಗಳ ಪಾಶವಿಕ ಜೀವನ ಪರಿಹಾರ ಕಾರ್ಯವೂ ಕ್ರಾಂತಿಯೂ ಅವರಿಂದಲೇ ಆರಂಭವಾಗುವುದು. ಅಷ್ಟವರಣ-ಪಂಚಾಚಾರಗಳ ಉತ್ಪಾದನ ಪ್ರವರ್ತನ ಕ್ರಾಂತಿಯೂ ಅವರದೇ ಆಗಿದೆ. ಇದರಿಂದ ಮಹಾಪಾಶುಪತ ಶಿವಾಚಾರ ಅರ್ಥಾತ್ ಅನಾದಿ ವೀರಶೈವ ಅವರುಗಳದೇ ಆದ ನಿರ್ಣಾಯಕ ಮಣಿಹಗಳಾಗಿ ಮುಂದುವರಿದವು. ಇದರಿಂದಾಗಿ ಅವರಿಂದಿತ್ತೀಚಿನ ಅಪರಶಿವನಿಂದಾದ ಶೈವ ಮತಗಳಿಗೆಲ್ಲಕ್ಕೂ ವೀರಶೈವವು ಪೂರ್ವದ್ದಾಗಿದೆ. ಕ್ರಿ.ಶ. ಪೂರ್ವ ಆರು ಸಾವಿರ ವರುಷಗಳ ಕಾಲದ್ದಾಗಿದೆ. ಆ ಅನಾದಿ ವೀರಶೈವದ ಪ್ರಭಾವಮುಂದೆ ಮೂರು ಸಾವಿರ ವರುಷಗಳ ವರೆವಿಗೂ ಇರುತ್ತದೆ. ಅಂದರೆ ಕ್ರಿ.ಶ. ಪೂರ್ವ ಮೂರು ಸಾವಿರ ವರುಷಗಳ ಕಾಲವಿರುತ್ತದೆ. ಅದನ್ನು ನಾವು ರುದ್ರ ಭದ್ರರ ಯುಗವೆಂದು ಕರೆಯುತ್ತೇವೆ. ಅಂದು ಭಾರತದಲ್ಲಿ ಸಂಭವಿಸಿದ ಕ್ರಾಂತಿಕಾರಿ ಪರಿವರ್ತನಗಳಿಗೆ ಪರಿಸ್ಥಿತಿಗಳಿಗೆ ರುದ್ರಗಣ, ವೀರಗಣ, ವೀರಮಾಹೇಶ್ವರ ಗಣರು ಕಾರಣರಾಗಿದ್ದಾರೆ. ಅವರುಗಳ ಶಿವಾಚಾರ ಸತ್ವ, ಧಾರ್ಮಿಕ ದೀಪ್ತಿ ಅಂದಿನ ಜನತೆಯ ಸುಸ್ಥಿತಿ ಸತ್ತೆಯನ್ನುಂಟು ಮಾಡಲು ಸರ್ವಸಮರ್ಥವಾಗಿದೆ. ಅವರ ಆ ತ್ಯಾಗಜೀವನವು ಮತ್ತು ಕ್ರಾಂತಿಯೂ ಇತರರ ಶೋಷಣ ಘರ್ಷಣ ಪದ್ಧತಿಗಳನ್ನು ತೊಡೆದು ಹಾಕುತ್ತಿತ್ತು. ಅವರ ಆ ಯೋಗ ಜೀವನವು ಭೋಗ ಜೀವನವನ್ನು ದಮನಿಸುತ್ತಿತ್ತು. ಜನರಲ್ಲಿ ಆರೋಗ್ಯ ಭಾಗ್ಯವನ್ನು ಹೆಚ್ಚಿಸುತ್ತಿತ್ತು. ಸತ್ಕಲೆ ಚಿತ್ಕಳೆಗಳು ಮಿಗಿಲಾಗಿ ಜನ ಜೀವನದಲ್ಲಿ ಮೂಡಿ ಬಂದವು; ಕೂಡಿ ಬಂದವು. ಸುಖ ಶಾಂತಿಗಳು ನೆಲಸುವಂತಾಯಿತು. ಅಂದಿನ ಭಾರತದ ಎಲ್ಲ ಪಂಗಡಗಳ ಜನರಲ್ಲಿ ಆಧ್ಯಾತ್ಮಿಕ ನೈತಿಕ ಆಚಾರ ಪ್ರವೃತ್ತಿಯನ್ನು ಜಾಗ್ರತಗೊಳಿಸುವುದರಲ್ಲಿ ರುದ್ರಭದ್ರರು ಅವರ ಅನುಯಾಯಿಗಳು ಒಂದು ವಿಶಿಷ್ಟ ಪಾತ್ರಗಳನ್ನು ವಹಿಸಿದರು. ಪಶು-ಪಾಶ-ಪತಿ ಅಂದರೆ ಪರಿವಿಡಿದು ಜೀವ-ಮಲ-ಆತ್ಮರನ್ನು ಸಂಸ್ಕರಿಸಿ ಪಶು (ಜೀವ) ಭಾವವನ್ನು

ತೊಡೆದು ಅಂಗಭಾಗವನ್ನು, ಕರ್ಮ-ಮಾಯೆ-ಅಣು ಮಲಗಳನ್ನು ತೊಳೆದು ಕ್ರಿಯೆ-ಜ್ಞಾನ-ಬೃಹದ್ಭಾವಗಳನ್ನು ಬೆಳೆದು, ಪತಿ (ಲಿಂಗ) ಭಾವವೆಂಬ ಫಲ ಗಳನ್ನುಂಟು ಮಾಡಿದರು. ಈ ದಿಸೆಯಲ್ಲಿ ಶಿವರುದ್ರಾಗಮಗಳು ವಿಶಿಷ್ಟ ಪಾತ್ರವನ್ನು ಪ್ರಪ್ರಥಮದಲ್ಲಿ ವಹಿಸಿದವು. ಅನಾದಿ ವೀರಶೈವದ ವಿಶಿಷ್ಟ ಪ್ರಕಾರವನ್ನು ಪ್ರತಿನಿಧಿಸಿದವು. "ನ ವೀರಶೈವ ಸದೃಶಂ ಮತಮಸ್ತಿ ಜಗತ್ರಯೇ ಭೋಗಮೋಕ್ಷಪದಂ ಪುಣ್ಯಂ ಶಿವಸಾಯುಜ್ಯ ದಾಯಕಂ॥" ಎಂದು ಎತ್ತಿದ ಧ್ವನಿಯಲ್ಲಿ ಉಗ್ಗಡಿಸಿದವು. ೨೮ ಶಿವರುದ್ರಾಗಮಗಳ ಉತ್ತರ ಭಾಗಗಳು ವೀರಶೈವಾಗಮಗಳು. ಅವನ್ನು ಸಾಮೂಹಿಕವಾಗಿ ಸಮೀಕ್ಷಿಸಿದಲ್ಲಿ ಅನಾದಿ-ಆದಿಕಾಲೀನ ವೀರಶೈವ ಸಾಮಾಜಿಕ ಸಾಂಸ್ಕೃತಿಕ ಧಾರ್ಮಿಕ ಚಾರಿತ್ರಕ್ರಿಯೆ ಜ್ಞಾನಯೋಗ ಭಾವಗಳ ಭಾಂಡಾಗಾರಗಳೆಂದು ಬಿಚ್ಚಳಿಸಿ ಬಿತ್ತರಿಸುವಲ್ಲಿ ಔಚಿತ್ಯಕ್ಕೆ ಹೊರನಾಗುವಂತಿಲ್ಲ. ಆಧುನಿಕ ವೀರಶೈವದ ನವ್ಯಕ್ರಾಂತಿಗಳೆಂದು ಹೇಳುವವುಗಳೆಲ್ಲವೂ ಆಗಮಗಳ ಗರ್ಭಕೋಶದಲ್ಲಿ ತುಂಬಿ ತೊಳಗಿವೆ. ಅವುಗಳಲ್ಲಿ ಜಾಜ್ವಲ್ಯಮಾನವಾದ ಜೀವಕಳೆಯಿಂದ ವೀರಕಲೆ ಯಿಂದ ಆಚಾರ್ಯ ಸಂಸ್ಕೃತಿಯಿಂದ ತುಂಬಿದ ಆಗಮವೆಂದರೆ ವೀರಾಗಮ. ಅದು ದಿಟಕ್ಕೂ ದಿವ್ಯಾಚಾರ್ಯ ಕೃತಿಯೆಂದೆ ಹೇಳಬೇಕು. ಆದಿರೇಣುಕ ಶಿವಾಚಾರ್ಯ ಭಗವತ್ಪಾದರ ಸಾಂಸ್ಕೃತಿಕ ಸಾಮಾಜಿಕ ಮಾನವೀಯ ಮಹಾಕ್ರಾಂತಿ ಮೌಲ್ಯ ಮಾಪನಕ್ಕೆ ಅದು ಅನನ್ಯಕೃತಿಯಾಗಿದೆ. ಶಿವಾಚಾರ್ಯರ ಸಾಂಸ್ಕೃತಿಕ ಕ್ರಾಂತಿಯ ವ್ಯಾಪಕತೆಯ ಪ್ರಕಾಶನಕ್ಕೆ ಅದು ಮುಡುಪಾಗಿದೆ. ಶಿವನಷ್ಟೆ ಅದೇಕೆ ಶಿವನಿಗಿಂತಮಿಗಿಲು ಶ್ರೀಗುರುವೆಂಬುದನ್ನು ಮೊದಲು ಪ್ರಬೋಧಿಸಿದ ಅಗ್ಗಳಿಕೆ ಆಗಮ ಸಂಹಿತೆಯದು. "ನ ಗುರೋರಧಿಕಂ, ನ ಗುರೋರಧಿಕಂ, ನಗುರೋರಧಿಕಂ-ಶಿವ ಶಾಸನತಃ ಶಿವ ಶಾಸನತಃ ಶಿವ ಶಾಸನತಃ ಎಂಬ ವೀರಾನುಭೂತಿಯ ಆಗಮ ವಿಭೂತಿವಾಣಿಯನ್ನು ಯಾರು ಕೇಳಿ ತಿಳಿಯರು? ಗುರುತತ್ತ್ವ ವಿಶ್ವವ್ಯಾಪಕ ಘನತೆಯನ್ನು ಮಾನ್ಯತೆಯನ್ನು ಪಡೆದಿದೆ. ಗುರು ತತ್ತ್ವಕ್ಕಿರುವ ಆಚಾರ್ಯ ನಿರುಕ್ತ ನಿಗಮಾಗಮಗಳಷ್ಟೇ ಪ್ರಾಚೀನವಾಗಿದೆ. ಪೂರ್ವಾಚಾರ್ಯರು ನಿರೂಪಿಸಿದ ನಿರ್ಮಲಾಚಾರ, ಅರ್ವಾಚೀನ ಅನಾಚಾರ ಅತ್ಯಾ ಚಾರ ಭ್ರಷ್ಟಾಚಾರಾದಿಗಳ ವಿಮೋಚನೆಗೆ ಅತ್ಯಗತ್ಯವಾದ ಅನಿವಾರ್ಯವಾದ ಉತ್ತಮೋತ್ತಮ ಉಪಾಯವಾಗಿದೆ. ಅಂತೆಯೇ ಅವರು ಶಿವಾಚಾರಕ್ಕೆ

ಹೆಚ್ಚಿನ ಪ್ರಾಧಾನ್ಯತೆಯನ್ನಿತ್ತರು. ಶಾಂತಿಕ್ರಾಂತಿಗೆ ಕಾರಣರಾಗಿ ಶಿವಾಚಾರ್ಯನೆಂದೆನಿಸಿದರು.

## ಶಿವಾಚಾರ್ಯರ ಸುವರ್ಣಯುಗ : ಆದಿ ವೀರಶೈವ!

ಆದಿ ವೀರಶೈವವು ಶಿವಾಚಾರ್ಯರ ಸುವರ್ಣಯುಗವು. ಆದಿವೀರಶೈವದ ಕಾಲಮಾನ ಕ್ರಿ.ಶ. ಪೂರ್ವ ಮೂರು ಸಾವಿರ ವರುಷಗಳು. ಕ್ರಿ.ಶ. ಪೂರ್ವ ಸುಮಾರು ಒಂದು ಸಾವಿರ ವರುಷದ ಹಿಂಚು ಮುಂಚು ಜಗದ್ಗುರು ಆದಿ ರೇಣುಕ ಶಿವಾಚಾರ್ಯ ಭಗವತ್ಪಾದರ ಅವತಾರ! ಅದೇ ಸಮಯದಲ್ಲಿ ದಾರುಕ ಘಂಟುಕರ್ಣ, ಗಜಕರ್ಣ ಮೊದಲಾದ ಹನ್ನೆರಡು ಸಾವಿರ ಶಿವಾಚಾರ್ಯರ ಅವತಾರ! ಅದು ರಾಮಾಯಣ ಕಾಲ. ರಾಮ ರಾವಣರ ಯುದ್ಧ ಮುಗಿದ ಕಾಲ. ಭಾರತದ ಭೀಕರ ಸ್ಥಿತಿ. ಬಡವರ ಬಾಳು ಬೀಳಾದ ಕರಾಳ ಕಾಲ. ಹೊಟ್ಟೆ ಬಟ್ಟೆಗಳಿಗಿಲ್ಲದ ರಿಕ್ತಕಾಲ. ಎಲ್ಲಿ ನೋಡಿದರೂ ಆಹಾರಕ್ಕಾಗಿ ಹಾಹಾಕಾರ! ಆರ್ತತೆಯ ಅಟ್ಟಹಾಸ! ಆ ದುರ್ಭರ ದುಃಸ್ಥಿತಿಯನ್ನು ಕಂಡು ರೇಣುಕ ಶಿವಾಚಾರ್ಯರು ಮಮ್ಮಲ ಮರುಗುವರು. ಕರುಣೆ ಕೋಡಿವಡೆಯಿತು. ಭಾರತಾದ್ಯಂತ ಸುತ್ತಿ ಸುಳಿದರು. ತಾವೂ ತಮ್ಮೊಡನಿರುವ ಶಿವಾಚಾರ್ಯ ಸಮೂಹವೂ ಕ್ರಿಯಾಶೀಲ ಕಾಯಕನಿರತರಾದರು. ಎಲ್ಲೆಂದರೆ ಅಲ್ಲಿ ಧರ್ಮ ದಾಸೋಹಗಳನ್ನಿಕ್ಕಿದರು; ಇಕ್ಕಿಸಿದರು. ಮಾಂಡಲಿಕ ಅರಸುಗಳನ್ನೆಲ್ಲ ಶಿಷ್ಯರನ್ನಾಗಿಸಿಕೊಂಡು ಅವರವರ ಅರಮನೆಗಳಲ್ಲಿ ಧರ್ಮದಾಸೋಹಗಳನ್ನು ನಡೆಸುವಂತೆಸಗಿದರು. ಮಠಗಳನ್ನು ಕಟ್ಟಿಸಿ ಅವುಗಳಲ್ಲಿ ಧರ್ಮದಾಸೋಹಗಳನ್ನೆಸಗಿದರು. ಆಹಾರ ಸಮಸ್ಯೆ ಹದಕ್ಕೆ ಬಂದೊಡನೆ ಜನರನ್ನು ಕ್ರಿಯಾಶೀಲ ಕಾಯಕಗಳಿಗೆ ಹಚ್ಚಿ ಹಿಂದೆ ವೀರಭದ್ರ ಗುರುವಿನಿಂದ ಮೊದಲಾದ ಕಾಯಕಕಲೆಯನ್ನು ಪುನಶ್ಚೇತನಗೊಳಿಸುವರು. ಜನರನ್ನು ಸ್ವಾವಲಂಬಿಗಳನ್ನಾಗಿಸಿದರು. ಆಹಾರ ಅರ್ಥ ಸಮೃದ್ಧಿಯನ್ನುಂಟು ಮಾಡುವರು. ಬಳಿಕ ಆಧ್ಯಾತ್ಮ ಸಾಧನೆಗಾಗಿ ದೃಕ್ ಕ್ರಿಯಾಶೀಲತೆಗಾಗಿ ಚಿಚ್ಛಕ್ತಿಜ್ಞಾನ ನಿಲಯಗಳನ್ನು ಸ್ಥಾಪಿಸುವರು. ಅವುಗಳಲ್ಲಿ ಧರ್ಮದರ್ಶನಗಳ ಸೈದ್ಧಾಂತಿಕೆಯನ್ನು ನಿರೂಪಿಸುವರು. ಹಿಂದಿನಿಂದ ಬಂದ ಶಿವಾಚಾರವನ್ನು ಮುಂದುವರಿಸಿದ್ದಲ್ಲದೆ ಜೊತೆಗೆ ಶಿವವಿಚಾರ (ಶಿವಜ್ಞಾನ), ಶಿವಾನುಭವಗಳನ್ನು ಮಂಡಿಸುವರು. ಕ್ರಿಯಾಜ್ಞಾನಗಳ ಜೊತೆಗೆ ಅನುಭವ

ಅಗತ್ಯವೆಂದು ಕಂಡುಕೊಂಡು ಪ್ರಕಾಶಪಡಿಸಿದರು. ಸಿದ್ಧಾಂತ ಸ್ಥಾಪನ ಮಾಡಿದರು. ವಿದೇಹಮುಕ್ತಿಗಿಂತ ಜೀವನ್ಮುಕ್ತಿ ಮುಖ್ಯವೆಂದು ಸಾರಿದರು. ಶ್ರೀ ಜಗದ್ಗುರು ರೇಣುಕರಿಂದ ಸಿದ್ಧಾಂತದ ಉಗಮವಾದಂತೆ. ತತ್ತ್ವಾನುಭವದ ಉಗಮವಾಯಿತು. ಶಿವಾದ್ವೈತ (ಶಿವಶಕ್ತಿ) ತತ್ತ್ವಜ್ಞಾನ, ಶಿವಾದ್ವೈತ ತತ್ತ್ವದರ್ಶನ, ಶಿವಾದ್ವೈತ ತತ್ತ್ವಾನುಭವಗಳಿಗೆ ಅವರೇ ಮೂಲ ಕಾರಣರು. ಅಪ್ರಾಕೃತತ್ವವನ್ನು ಮೊದಲು ಅಳವಡಿಸಿದವರೂ ಅವರೆ! ಇವೆಲ್ಲವುಗಳ ಅನ್ವೇಷಣ - ಅನುಸಂಧಾನ ಅವರದಾಗಿತ್ತು. ಇದರಿಂದಾಗಿ ಶಿವಾಚಾರ್ಯರಲ್ಲಿ ಅವರಿಗ ವಿಶಿಷ್ಟ ಸ್ಥಾನಮಾನಗಳು ಮೀಸಲಾಗಿದೆ.

ಆದಿರೇಣುಕರ ಕಾಲಕ್ಕೆ ಹಿಂದೆ ಹಲವಾರು ಆಗಮಗಳಿದ್ದರೆ ಅವರ ಕಾಲಕ್ಕೆ ಮತ್ತು ಅವರ ನಂತರ ಹಲವು ಹತ್ತು ಆಗಮಗಳು ಉಗಮಿಸಿದವು. "ಆಗಮೋ ನಾಮ ಆ ಮಹೇಶ್ವರಾತ್ ಗುರು ಪಾರಂಪರ್ಯಾಗತಂ ಶಾಸ್ತ್ರಂ!"– ಪಾಶುಪತ ಸೂತ್ರ. ಇದೇ ಅಭಿಪ್ರಾಯವನ್ನು 'ಶಿವಯೋಗ ವರ್ಣನ'ವೆಂಬ ಹಸ್ತಪ್ರತಿಯು "....ಸರ್ವಾನು ಜಿಘೃಕ್ಷಯಾ ಗುರುಪರಂಪರಯಾ ಯೋಗ್ಯೇಷು ಪ್ರವರ್ತಯತಿ॥" ಎಂದು ಹೇಳಿದೆಯೆಂದು ಡಾ॥ ಹೆಚ್. ಪಿ. ಮಲ್ಲೇದೇವರು, 'ಶಿವಾಗಮ ಸೌರಭ' ಕೃತಿಯಲ್ಲಿ 'ಆಗಮ' ಶಬ್ಧ ನಿರ್ವಚನ – ಎಂಬ ತಮ್ಮ ಲೇಖನದಲ್ಲಿ ಉಲ್ಲೇಖಿಸಿರುವರು. (ಪು–೧೪). ಇವುಗಳಿಂದ ಶಿವಾಗಮಗಳಿಗೆ ಶಿವಾಚಾರ್ಯರು ಕಾರಣರೆಂಬುದು ಕಂಡು ಬರುತ್ತದೆ. ಅಲ್ಲದೆ ಆದಿರೇಣುಕರು "....ಕಥಿತಂ ಮಯಾ ತೇ ತಂತ್ರಮೀದೃಶಂ। ಸ್ಥಾಪ್ಯತಾಂ ಸರ್ವಲೋಕೇಷು ತಂತ್ರಿಮೇತತ್ತ್ವಯಾ ಮುನೇ ! ಈ ದೃಶಂ ಶಿವಬೋಧಸ್ಯ ಸಾಧನಂ ನಾಸ್ತಿ ಕುತ್ರಚಿತ್॥" ಎಂದು ಅಗಸ್ತ್ಯ ಮಹಾಮುನಿಗೆ ಉಪದೇಶಿಸುವ ಮೂಲಕ ತಮ್ಮಿಂದಾದ ತಂತ್ರೋತ್ಪತ್ತಿಯನ್ನು ತಿಳಿಸಿರುವರು. ಇದರಂತೆ ಶಿವಾದ್ವೈತ ಸಿದ್ಧಾಂತ ಶಾಸ್ತ್ರವೂ ಶ್ರೀ ಆದಿರೇಣಕರಿಂದಲೇ ಉಗಮಿಸಿತೆಂಬುದಕ್ಕೆ "ತದಿದಂ ಸರ್ವಸಿದ್ಧಾಂತ ಸಾರಾಣಾಮುತ್ತಮೋತ್ತಮಂ! ವೇದ ವೇದಾಂತ ಸರ್ವಸ್ವ ವಿದ್ಯಾಚಾರಪ್ರಕಾಶಕಂ। ವೀರಮಾಹೇಶ್ವರ ಗ್ರಾಹ್ಯಂ ಶಿವಾದ್ವೈತ ಪ್ರಕಾಶಕಂ। ಶಾಸ್ತ್ರಂ ತವ ಮುಖೋದ್ಗೀರ್ಣಂ ಶಿವಾದ್ವೈತಪರಂ ವರಂ॥" ಎ.ಬೀ ಅಗಸ್ತ್ಯ ಮಹಾಮುನಿಯ ಉಕ್ತಿಗಳೇ ಉತ್ತಮ ಸಾಕ್ಷಿಯಾಗಿವೆ.

ಶಿವಾಚಾರಕ್ಕೆ ಭದ್ರಬುನಾದಿಯನ್ನು ಹಾಕಿದರು ರುದ್ರಭದ್ರರು ಆ

ಅನಾದಿ ವೀರಶೈವಕ್ಕೆ! ಅದು ಆಗ ಅಷ್ಟಾವರಣಾಂಗದಲ್ಲಿ ಆಚರಿತವಾಗಿ ಅಭಿವೃದ್ಧಿಗೊಂಡಿತು. ಅದರಂತೆ ಆದಿಯಲ್ಲಿ ಶಿವಾದ್ವೈತ (ಶಕ್ತಿವಿಶಿಷ್ಟಾದ್ವೈತ) ಸಿದ್ಧಾಂತಕ್ಕೆ ಬುನಾದಿ ಹಾಕಿ ಮೇಲೆ ಸೌಧ ನಿರ್ಮಾಣ ಮಾಡಿದರು ಶಿವಾಚಾರ್ಯರು. ಈ ಮಹಾ ಮಣಿಹದಲ್ಲಿ ಧೀರೋದಾತ್ತ ಪಾತ್ರವಹಿಸಿದರು ಆದಿ ರೇಣುಕ ಶಿವಾಚಾರ್ಯರು. ಅದಕ್ಕೆ ನೇರವಾಗಿ ನೆರವಾದರು ದಾರುಕ, ಘಂಟಾಕರ್ಣ, ಗಜಕರ್ಣಾದಿ ಶಿವಾಚಾರ್ಯರು. ರೇಣುಕ ದಾರುಕಾದಿಗಳು ಶಾಸನೋಕ್ತರು. ಮರಡಿಪುರ ಶಾಸನ (ಕ್ರಿ.ಶ. ೧೨೮೦) ಹೀಗಿದೆ. "....ಮಹಾಕಾಳ ವೀರಭದ್ರ ಭೃಂಗಿನಾಥ ಅಂಗಜ, ಆ ತಗ್ರೀವ, ಮಯಗ್ರೀವ ಘಂಟಾಕರ್ಣ ಅಗ್ಗಳಗಣ್ಣ (ಗಜಕರ್ಣ), ದಾರುಕ ರೇಣುಕ ಸಾರೂಪ್ಯ ಸಾಯುಜ್ಯ ಸಾಮ್ರಾಜ್ಯ ಪದವಿಯಂ ಹಡೆದ ಗಂಗೆವಾಳುಕಸಮಾರುದ್ರ ಸಕಳ ಗಣ ಪರಿವೇಷ್ಟಿತ ಯೊಕ್ಕೋಟಿಗಳು ಪೂಜಿತ...." ಎಂಬೀ ಶಾಸನದಲ್ಲಿ ರೇಣುಕಾದಿ ಶಿವಾಚಾರ್ಯರು ಉಲ್ಲೇಖಿತ ರಾಗಿದ್ದಾರೆ. ಸಿದ್ಧಾಂತ ತತ್ತ್ವ ಸ್ರಷ್ಟಾರರು ಶಿವಾಚಾರ್ಯರು. ಶಿವಾದ್ವೈತ ತತ್ತ್ವದ್ರಷ್ಟಾರರು ಶಿವಾಚಾರ್ಯರು. "ಕಾಮಿಕಾದೀನಿ ತಂತ್ರಾಣಿ ಸಿದ್ಧಾಂತಾ ಇತಿ ಕೀರ್ತಿತಾಃ।" ಕಾರಣಾಗಮ. "....ಸಿದ್ಧಾಂತಂ ವೇದಸಮ್ಮತಂ" ಮತ್ತು

"ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ।
ನಿರ್ದಿಷ್ಟಮುತ್ತರೇ ಭಾಗೇ ವೀರಶೈವ ಮತಂ ಪರಂ॥

—ರೇಣುಕಾಗಮ

ಈ ಉಕ್ತಿಗಳಲ್ಲಿ ಸಿದ್ಧಾಂತ ಸಾಹಿತ್ಯ, ಸಿದ್ಧಾಂತ ಮೌಲ್ಯ, ಸಿದ್ಧಾಂತ ಸಾಹಿತ್ಯಕ್ಕೂ ವೀರಶೈವ ಧರ್ಮಕ್ಕೂ ಇರುವ ಸಂಬಂಧ ಮತ್ತು ಸಮಯಗಳು ಸುಸ್ಪಷ್ಟವಾಗುತ್ತವೆ.

ವೇದಾಂತವೆಂದರೆ ಜ್ಞಾನದ ಕೊನೆ; ಸಿದ್ಧಾಂತವೆಂದರೆ ನಿರ್ಣಯದ ಕೊನೆ. ಮತ್ತು ಸಂಸ್ಥಾಪಿತವಾದ ತತ್ತ್ವ! ವೇದಾಂತ ಮತ್ತು ಸಿದ್ಧಾಂತ ಇವೆರಡಕ್ಕೂ ಇರುವ ತರತಮ ಭಾವವಿದು. ಇಂತಹ ಸಿದ್ಧಾಂತವನ್ನು ಸ್ಥಾಪಿಸಿದ ಅಥವಾ ಉತ್ಪಾದಿಸಿದ, ಉತ್ಪಾದಿಸಿ ಪ್ರವರ್ತಿಸುವಂತೆಸಗಿದ ರೇಣುಕಾದಿ ಶಿವಾಚಾರ್ಯ ಮೌಲ್ಯ ಮಾತಿಗೆ ಎಟುಕದಂತಹದು. ಆದಿಕಾಲದ ಶಿವಾಚಾರ್ಯರು ಮಾಡಿದ

ಮಹಾಮಣಿಹಗಳಿಗೆ ಇತಿಮಿತಿಯಿಲ್ಲವಾಗಿ ಅವನ್ನೆಲ್ಲ ಇಲ್ಲಿ ಈ ಕಿರು ಹೊತ್ತಿಗೆಯಲ್ಲಿ ಉಲ್ಲೇಖಿಸಲು ಉಚಿತವಲ್ಲ; ಅನುವೂ ಇಲ್ಲ.

ಜೀವನದ ಜೀವಂತ ಧರ್ಮಸ್ವರೂಪದ ನೆಲೆಕಲೆಗಳನ್ನು ನಿರೂಪಿಸುವುದರಲ್ಲಿ ಸಿದ್ಧಾಂತವೆಂದು ಪ್ರಸಿದ್ಧವಾದ ಶಿವರುದ್ರಾಗಮಗಳೇ ವೀರಶೈವ:ಪ್ರಾಚೀನವೂ ಪ್ರಾಮುಖ್ಯವೂ ಆದ ಪ್ರಮಾಣ ಗ್ರಂಥಗಳೆಂದು ಅಂಗೀಕೃತವಾಗಿವೆ. ಸಿದ್ಧಾಂತ ವೀರಶೈವ ಜೀವಂತ ಜೀವನ ಷಟ್‌ಸ್ಥಲ ಶಾಸ್ತ್ರ; ಏಕೋತ್ತರ ಶತಸಂಹಿತೆ. ತಾತ್ತ್ವಿಕ ದರ್ಶನ. ಜೀವನದ ಅಭ್ಯುದಯ ಶ್ರೇಯಗಳೆರಡಕ್ಕೂ ಇದು ಕಾರಣವಾಗಿದೆ. ನಿರ್ಣಯಾತ್ಮಕವಾಗಿದೆ. ಜನಪ್ರಿಯವಾಗಿದೆ. ಹಂತಹಂತವಾಗಿ ಸಾಧನ ಮಾರ್ಗ ಕೊರತೆಯಿಲ್ಲದಂತೆ ನಿರೂಪಿತವಾಗಿದೆ. ಇದರಿಂದಾಗಿ ಆಗಮ ಸಿದ್ಧಾಂತವೆಂದು ಹೆಸರಾಂತಿದೆ. "ಆಗಚ್ಛಂತಿ ಬುದ್ಧಿಮಾರೋಹಂತಿ ಯಸ್ಮಾದಭ್ಯುದಯ – ನಿಃಶ್ರೇಯಸೋಪಾಯಃ ಸ ಆಗಮಃ" ಎಂದು ತತ್ತ್ವವೈಶಾರದಿಯಲ್ಲಿ ವಾಚಸ್ಪತಿಮಿಶ್ರರು ವಚಿಸಿರುವರು. ಶಿವಸ್ವರೂಪರಾದ ಆದಿ ಶಿವಾಚಾರ್ಯರು ಶಿವಾಗಮಿಕರು; ಶಿವತತ್ತ್ವ ಸಿದ್ಧಾಂತ ಪ್ರತಿಪಾದಕರು. ವಿಶ್ವ ವಿಭಾವಿನಿಯಾದ ಶಕ್ತಿ ತತ್ತ್ವ ಪ್ರತಿಷ್ಠಾಪಕರು. ಅವಿನಾಭಾವ ಶಿವಶಕ್ತಿ ತತ್ತ್ವ ಸಿದ್ಧಾಂತಾನುಭಾವಿಗಳು. ಅವರು ಪ್ರಪ್ರಥಮದಲ್ಲಿ ಪ್ರತಿಪಾದಿಸಿದ ಸಿದ್ಧಾಂತ ಜೀವನದ ಜೀವಂತ ತತ್ತ್ವಾನುಭವ. ಅದುವೆ ಆದಿ ವೀರಶೈವ ವಿಶಿಷ್ಟ ಜೀವನ್ಮುಕ್ತಿ ಪ್ರತಿಪಾದಕ ತಾತ್ತ್ವಿಕ ಧರ್ಮದರ್ಶನ!

ಶಿವಾಚಾರ್ಯರ ಶಿವಸಿದ್ಧಾಂತಾನುಭವದಲ್ಲಿ ಕರಣೇಂದ್ರಿಯಗಳ ಕೋಲಾಹಲವಿರುವುದಿಲ್ಲ. ಕಾಯವಿಕಾರವಿರುವುದಿಲ್ಲ. ಹಮ್ಮು ಬಿಮ್ಮುಗಳಿರುವುದಿಲ್ಲ. ಸ್ವಾರ್ಥ ಸಂಕುಚಿತಗಳಿರುವುದಿಲ್ಲ, ಅಂಗದಿಚ್ಛೆ ಅನ್ಯವಿಷಯದಿಚ್ಛೆ ಇರುವುದಿಲ್ಲ. ನಡೆನುಡಿಗಳಲ್ಲಿ ತತ್ವತಡೆಗಳಿರವು ; ಮತ್ತು ಹುಲುತನ ಹುಸಿತನಗಳಿರವು. ಭಾವಭ್ರಾಂತಿ, ಬೌದ್ಧಿಕ ಕುಯುಕ್ತಿಗಳಿರವು. ಸತ್ಯಸಹಜತೆ ಸತ್ವ ಸರಳತೆಗಳು ಸಮನಿಸಿರುತ್ತವೆ. ನಿರಾವಿಲಾನಂದ ನಿರವಯಾತ್ಮಕ ಸಾಮರಸ್ಯಗಳಿರುತ್ತವೆ. ಇಂತಿರುವಿಕೆಯು ಶಿವಾಚಾರ, ಶಿವಾನುಭವ, ಶಿವಾಚಾರ್ಯ ಸಿದ್ಧಾಂತ, ಶಿವಾದ್ವೈತ ಅಥವಾ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ ಆದಿ ವೀರಶೈವದ್ದು ; ಆದಿಶಿವಾಚಾರ್ಯ ಜನ್ಯವಾದದ್ದು. ರಾಗದ್ವೇಷ ಅಭಿನಿವೇಶದ್ದಲ್ಲ. ಅದರಿಂದ ಅದು ಸಫಲ.

ಆಧುನಿಕ ವೀರಶೈವ ೨ ಸಾವಿರ ವರುಷಗಳ ಕಾಲದ್ದು. ಮತಮತಾಂತರಗಳ ಹೋರಾಟ ವಿರಾಟಗಳು ಬೆಳೆದು ಬಂದ ಕಾಲ; ದರ್ಶನ ಸೃಜನಕಾಲ, ಭಾಷ್ಯಾದಿಗಳ ರಚನಾಕಾಲ. ಕಾಲಕ್ರಮದಲ್ಲಿ ಸೂಳ್ನುಡಿಗಳ ಸೃಜನಕಾಲ ಗುರುಕುಲ ಅನುಭವಗೋಷ್ಠಿ ಮತ್ತು ಮಂಟಪಗಳನ್ನು ರೂಪಿಸಿದ ಕಾಲ ಇದು ಒಂದು ಸಾವಿರ ಇನ್ನೂರು ವರುಷಗಳ ಕಾಲ. ಅಲ್ಲಿಂದೀಚೆ ಅಂದರೆ ೮ ನೂರು ವರುಷಗಳು ಸಂಸ್ಕೃತ ಕನ್ನಡಗಳೆರಡರಲ್ಲಿ ಸಾಹಿತ್ಯ ರಚನೆಯ ಕಾಲ. ಕಾಳಾಮುಖ, ಭೌದ್ಧ ಜೈನ ವೈದಿಕಾದಿಗಳ ಹೋರಾಟ ವಿರಾಟಕಾಲ.

## ೨. ಆಧುನಿಕ ವೀರಶೈವ : ಶ್ರೀ ಶೈಲ ಜ. ಪಂಡಿತಾಚಾರ್ಯ

(ವಿನೂತನ ಜಾಗೃತಿ, ವಿವರ್ಧನ ಕೃತಿ, ವಿಶಿಷ್ಟ ಮಹತಿ.)

(ಕ್ರಿ. ಶ. ೬ನೇ ಶತಮಾನ)

೧

ಆಧುನಿಕ ವೀರಶೈವವೆಂದರೆ ನೂರಾರು ವರುಷಗಳ ಮಾತಲ್ಲ ; ಸುಮಾರು ಎರಡು ಸಾವಿರ ವರುಷಗಳಿಂದ ಮೊದಲಾಗುತ್ತದೆ. ಮೊದಲಿನ ಅಯ್ದುನೂರು ವರುಷಗಳ ಇತಿಹಾಸ ಲಭಿಸುತ್ತಿಲ್ಲ. ಕ್ರಿ. ಶ. ೬ನೆಯ ಶತಮಾನದಿಂದ ಲಭ್ಯವಾಗುತ್ತಿದೆ. ಪೂರ್ವದ ಅಂದರೆ ಅನಾದಿ-ಆದಿಕಾಲಗಳ ಧರ್ಮ, ದರ್ಶನ, ತತ್ತ್ವಜ್ಞಾನ, ಸಿದ್ಧಾಂತ, ಸಂಸ್ಕೃತಿ, ಕ್ರಿಯಾಶೀಲ ಕಾಯಕ, ಧರ್ಮ ದಾಸೋಹ, ಮಂಟಪ-ನಿಲಯ-ಗುರುಕುಲಗಳ ಸಂಸ್ಥಾಪನ, ಅಸ್ಪೃಶ್ಯೋದ್ಧಾರ, ಸ್ತ್ರೀ ಸ್ವಾತಂತ್ರ್ಯಗಳೊಡನೆ ವೀರಶೈವ ಸಮಾಜ ವಿವರ್ಧನ ಕಾರ್ಯ ಆರನೆಯ ಶತಮಾನದಿಂದ ಶಿವಾಚಾರ್ಯರಿಂದ ಗಮನಾರ್ಹವಾಗಿ ಮುಂದುವರಿಯುತ್ತದೆ. ಭಾಷ್ಯಕಾರರು, ಸೂತ್ರಕಾರರು, ಚಂದ್ರಿಕಾಕಾರರು, ಕಾರಿಕಾಗಾರರು, ಸೂಳ್ನುಡಿಕಾರರು, ವಚನಕಾರರು, ಸಂಪಾದನಕಾರರು, ಸಂಗ್ರಹಕಾರರು, ಕೈವಲ್ಯಕಾರರು, ಸಾಂಗತ್ಯಕಾರರು, ಷಟ್‌ಪದಿಕಾರರು, ಮೊದಲಾದವರು ಆಧುನಿಕ ವೀರಶೈವ ಧರ್ಮದಲ್ಲಿ ಬೆಳಕಿಗೆ ಬಂದಿರುವರು. ಅಲ್ಲದೆ ಮಿಗಿಲಾಗಿ ಶಿವಾಚಾರ್ಯರು, ಶಿವಾಚಾರಸ್ಥರು, ಶಿವಾಚಾರಿಣಿಯರು, ರಾಣಿಯರು, ರಾಜರು, ದಣ್ಣಾಯಕರು, ಶಾಸಕರು, ಶಿವಶರಣೆಯರು ಧಾರ್ಮಿಕ ರಾಜಕೀಯ ಸಾಂಸ್ಕೃತಿಕ ಸಾಹಿತ್ಯಕಾದಿ ಕ್ಷೇತ್ರಗಳಲ್ಲಿ ಹೆಸರಾಗಿರುವರು. ಷಟ್‌ಸ್ಥಲ ತತ್ತ್ವ

ಜ್ಞಾನಿಗಳು ಸ್ವಾನುಭಾವಿಗಳು ಕ್ರಿಯಾಸಿದ್ಧರು ಪವಾಡ ಪುರುಷರು ಕಾಯಕ ವಂತರು ದಾಸೋಹಿಗಳು ಯೋಗಿಗಳು ತ್ಯಾಗಿಗಳು ವಿರಕ್ತರು ಭಕ್ತರು ಮಾಹೇಶ್ವರು ಪ್ರಸಾದಿಗಳು ಪ್ರಾಣಲಿಂಗಿಗಳು ಆಗಿ ವೀರಶೈವವನ್ನು ಊರ್ಜಿತ ಗೊಳಿಸಿರುವರು. ವಿನೂತನ ಜಾಗ್ರತಿಯಲ್ಲಿ ವಿವರ್ಧನ ಕಾರ್ಯದಲ್ಲಿ, ವಿಶಿಷ್ಟ ಮಹತಿಯಲ್ಲಿ ಮುನ್ನಡೆದಿರುವರು. ಪುನರ್ವಿಮರ್ಶೆಗೆ ಪುನರುಜ್ಜೀವನಕ್ಕೆ ಪುನರ್ನಿ ಯೋಜನಕ್ಕೆ ತೊಡಗಿ ಯಶಸ್ವಿಯಾಗಿರುವರು. ಶಿವಯೋಗಿಗಳಾಗಿ ಶಿವಜ್ಞಾನಿ ಗಳಾಗಿ ಶಿವಾಚಾರಸಿದ್ಧಿಯುಳ್ಳವರಾಗಿ ಸಿದ್ಧಾಗ್ರಣಿಗಳಾಗಿ ಶಿವಭಕ್ತಿ ಭಂಡಾರಿ ಗಳಾಗಿ ಶಿವಾಚಾರ್ಯ ಮೂರ್ಧನ್ಯರಾಗಿ ಪ್ರಬೋಧಕರಾಗಿ ಶಿವಸಿದ್ಧಾಂತ ನಿರ್ಣೀತ ರಾಗಿ ವೀರಶೈವಶಿಖಾರತ್ನರಾಗಿ ವಿಶಿಷ್ಟಾಚಾರ ಸಂಪತ್ತಿಯುಳ್ಳವರಾಗಿ ಪ್ರಾಣ ಲಿಂಗ (ಸಂವಿಲ್ಲಿಂಗ) ಪರಾಮರ್ಶಿಗಳಾಗಿ, ವೀರಶಿವಾಚಾರ್ಯ ಶಿಖಾರತ್ನರಾಗಿ, ಶಿವಾಗಮ ಸಮ್ಯಗ್ ಜ್ಞಾನಿಗಳಾಗಿ, ಶಿವಾಗಮ ಸಂಗ್ರಹಕಾರರಾಗಿ, ವಚನ ಸಂಗ್ರಹಕಾರರಾಗಿ ವೀರಶೈವಧರ್ಮ ಮಾರ್ಗ ಪ್ರವಕ್ತರಾಗಿ ಪ್ರಖ್ಯಾತರಾಗಿದ್ದಾರೆ. ಪುರಾತನ ಪರಂಪರೆಯ ಪ್ರಜ್ಞೆಯಿಂದ ಹಳತನ್ನು ಹೊಸತಾಗಿಸಿದವರಾಗಿದ್ದಾರೆ. ಪುನರಾಲೋಚನ ಪ್ರವೃತ್ತಿಯುಳ್ಳವರಾಗಿದ್ದಾರೆ. ವಿವಿಧ ಕಲಾಕಾರರೂ ಆಗಿ ದ್ದಾರೆ ; ಕವಿಗಳೂ ಸಾಹಿತಿಗಳೂ ಶಾಸ್ತ್ರಿಗಳೂ ಆಗಿದ್ದಾರೆ.

ಇದರಿಂದಾಗಿ ಆಧುನಿಕ ವೀರಶೈವವು ವಿನೂತನ ರೀತಿಯಲ್ಲಿ ವಿವಿಧ ಪ್ರಕಾರಗಳಲ್ಲಿ ಪ್ರಗತಿಯನ್ನು ಸಾಧಿಸಿದೆ. ಅಂತೆಯೇ ಅಂತಃಸತ್ವವುಳ್ಳುದೂ ಬಾಹ್ಯದಲ್ಲಿ ವ್ಯಾಪಾರ ವ್ಯವಸಾಯಾದಿ ಉದ್ಯಮಗಳಲ್ಲಿ ಉತ್ತಮಿಕೆಯುಳ್ಳುದೂ ಆಗಿದೆ. ಹೀಗೆ ಸರ್ವತೋಮುಖವಾದ ಸಾಮರ್ಥ್ಯಶಾಲಿಯಾಗಿದ್ದರೂ ಒಳ ಪಂಗಡಗಳಿಂದ ಒಡಕುತನವುಳ್ಳುದೂ ಆಗಿದೆ. ಒಗ್ಗಟ್ಟಿನ ಅಭಾವ ಅತಿಯಾಗಿ ಕೆಲವೊಂದು ಕ್ಷೇತ್ರಗಳಲ್ಲಿ ಪ್ರಗತಿ ಸಾಧಿತವಾಗುತ್ತಿಲ್ಲ. ಪ್ರತಿಯಾಗಿ ಅಂತಃಕಲಹ ಗಳಿಂದ ಆಘಾತಗಳಿಗೆ ಆಕ್ರಮಣಗಳಿಗೆ ಗುರಿಯಾಗಿರುವ ಆಗುತ್ತಿರುವ ಕ್ಷೋಭೆ ಗಳಿಗೆ ಕೊರತೆಯೇನಿಲ್ಲ. ಈ ದೃಷ್ಟಿಯಿಂದ ಮಾತ್ರ ವೀರನಾಮವಿದ್ದರೂ ಸಮಾಜ ಸಾಮರ್ಥ್ಯ ಹೀನವಾಗುತ್ತಿದೆ. ಸಾಮರಸ್ಯಭಾವ ಅಂದರೆ ಐಕ್ಯ ಮನೋಭಾವವಿಲ್ಲದಾಗುತ್ತಿದೆ. ಇದೊಂದು ದುರದೃಷ್ಟವಲ್ಲದೆ ಮತ್ತೇನು ? ಇದಲ್ಲದೆ ಇನ್ನೊಂದು ಇತ್ತೀಚಿಗೆ ತಲೆಯೆತ್ತಿ ನಿಂತಿದೆ. ಅದು ಅರ್ಥವಿಲ್ಲದ

'ಲಿಂಗಾಯತ' ಪದ ! ಇದು ೧೭-೧೮ನೆಯ ಶತಮಾನದಿಂದೀಚೆಗೆ ಹೇಗೋ ಯಾರಿಂದಲೋ ಬಳಕೆಗೆ ಬಂದು ಅಲ್ಲದ ಸಲ್ಲದ ಅವಾಂತರಕ್ಕೀಡು ಮಾಡು ತ್ತಿದೆ. ಲಿಂಗಾಯತ ವಾದಿಗಳು ಸ್ಥೂಲಾಂಗ ಮಾತ್ರ ಭಕ್ತರಾಗಿ ಸೂಕ್ಷ್ಮ-ಕಾರಣಾಂಗಗಳಲ್ಲಿ ಭವಿಗಳಾಗಿ ವರ್ತಿಸುತ್ತಿದ್ದಾರೆ-ದೀಕ್ಷಾ ಸಂಸ್ಕಾರವಿಲ್ಲದೆ ! ನಾವು ಹೋದಲ್ಲೆಲ್ಲ ಈ ವಾದದ ಕೊರತೆಯನ್ನು ತಿಳಿಸಿ ಅಲ್ಲಲ್ಲಿ ಆಗಾಗ ತ್ರಿವಿಧ ದೀಕ್ಷಾಕಾರ್ಯಗಳನ್ನು ನೆರವೇರಿಸುತ್ತಿದ್ದೇವೆ. ನಮ್ಮಿಂದ ಶಿವದೀಕ್ಷೆಯಾದ ವರ ಸಂಖ್ಯೆ ಹತ್ತಾರು ಸಾವಿರಕ್ಕೆ ಮೀರಿದೆ. ಈ ದಿಸೆಯಲ್ಲಿ 'ಸಂಸ್ಕಾರ' ಎಂಬ ಒಂದು ಅಪೂರ್ವ ಗ್ರಂಥವನ್ನು ಬರೆದು ಪ್ರಕಾಶಗೊಳಿಸಲಾಗಿದೆ ; ಪ್ರಚಾರ ಮಾಡಲಾಗಿದೆ. ಇದರ ಪ್ರಭಾವಕ್ಕೆ ಒಳಗಾಗಿ ಸಾವಿರಾರು ಜನ ಬೌದ್ಧಿಕ ಜೀವಿ ಗಳು ನಮ್ಮಿಂದ ತ್ರಿವಿಧ ಶಿವದೀಕ್ಷೆಯನ್ನು ಆಗಮೋಕ್ತವಾಗಿ ಪಡೆದು ಕೃತಾರ್ಥ ರಾಗಿದ್ದಾರೆ. 'ಸಂಸ್ಕಾರ' ಕೃತಿ ಇಡಿ ಸಮಾಜದಲ್ಲಿ ಏಕೈಕ ಕೃತಿಯಾಗಿದೆ. ೩-೪ ಆವೃತ್ತಿಯಲ್ಲಿ ಅಚ್ಚಾಗಿದೆ. ಆಯತ ಸ್ವಾಯತ ಸನ್ನಿಹಿತತ್ವದಿಂದ ವೀರಶೈವೀಯ ಪ್ರವೃತ್ತಿಯನ್ನು ಜನರಲ್ಲಿ ಹೆಚ್ಚಿಸುತ್ತಿದೆ. ಈ ಕೃತಿಯಿಂದ ಕೃತಕೃತ್ಯತೆ ಅಳ ವಟ್ಟದೆ ಅಳವಡುತ್ತಿದೆ ಎಂಬ ತೃಪ್ತಿ ನಮಗಿದೆ. ಈ ದಿಸೆಯಲ್ಲಿ ಇದೊಂದು ಗುರುಕೃತಿ ; ಗುರುಗುಣ ಕ್ರಿಯೆಯನ್ನು ವೀರಶೈವೀಯ ಭಕ್ತಗುಣ ಕ್ರಿಯೆ ಯನ್ನು ನೆಲೆಗೊಳಿಸುತ್ತಿರುವ ಕಲೆಯುಳ್ಳ ಬೆಲೆಯುಳ್ಳ ಕೃತಿಯೆಂದು ಅನಿವಾರ್ಯ ವಾಗಿ ಹೇಳಿಕೊಳ್ಳಬೇಕಾಗಿ ಬಂದಿದೆ. ಇದಿರಲಿ ; ಲಿಂಗಸ್ವಾಯುತ ಲಿಂಗಸನ್ನಿ ಹಿತ ಪದಗಳು ಹೇಗೆ ವೀರಶೈವತ್ವವನ್ನು ರೂಪಿಸುವ ಆಂತರಂಗಿಕ ಸಾಂಸ್ಕಾರಿಕ ವಿಧಾನಗಳೊ ಹಾಗೆ ಲಿಂಗಾಯತ ಪದ ಬಹಿರಂಗ ಸಾಂಸ್ಕಾರಿಕ ಏಕದೇಶೀಯ ಪದ. ಕೊರತೆಯುಳ್ಳ ಪದ. ಸಾಂಸ್ಕಾರಿಕ ಸಮಗ್ರತೆಯನ್ನು ಸೂಚಿಸುವ ಪದ ವಲ್ಲ. ಹೀಗಿರುವಾಗ 'ಲಿಂಗಾಯತ' ಎಂಬ ವ್ಯಕ್ತಿ ಮಾತ್ರಬೋಧಕ, ಬಹಿರಂಗ ಮಾತ್ರ ಸೂಚಕ ಪದ ಸಮಗ್ರ ಸಮಾಜ ಬೋಧಕ ಹೇಗಾಗಬಲ್ಲುದು ? ಸಮಾಜದ ಸಮಗ್ರತೆಯನ್ನು ವಿವೇಚಿಸದ ಮತ್ತು 'ಲಿಂಗಾಯತ' ಪದದ ಅಸಮಗ್ರತೆಯನ್ನು ಅರಿಯದ ಹಲವರು ವ್ಯಕ್ತಿ ಪೂಜೆಗೆ-ವ್ಯಕ್ತಿನಿಷ್ಠೆ ಪ್ರತಿಷ್ಠೆಗೆ ಬದ್ಧರಾಗಿ ವಿವಾದಿಸುತ್ತಿದ್ದಾರೆ. ೧೭ ಅಥವಾ ೧೮ನೆಯ ಶತಮಾನಗಳಿಂದ ಬಳಕೆಯಲ್ಲಿರುವ ಲಿಂಗಾಯತ ಪದವನ್ನು ೧೨ನೆಯ ಶತಮಾನಕ್ಕೆ ಸಾಮಾಜಿಕಾ ರ್ಥದಲ್ಲಿ ಒಯ್ಯಲು ಹೆಣಗುತ್ತಿದ್ದಾರೆ ನಿರಾಧಾರವಾಗಿ ! ಅಂತೆಯೆ ಸಮಾಜದ

ಅಸ್ತಿತ್ವವನ್ನೂ ಹನ್ನೆರಡನೆಯ ಶತಕದಿಂದ ಬಂದುದೆಂದು ಅವಾಸ್ತವವಾಗಿ ವಿವಾದಿಸುತ್ತಿದ್ದಾರೆ. ಇವರಿಗೆ ಅನಾದಿ-ಆದಿ-ವೀರಶೈವದ ವಿವೇಕವಿಲ್ಲದಿರುವಂತೆ, ಆಧುನಿಕ ವೀರಶೈವದ ಪೂರ್ಣವಿವೇಕವೂ ಇಲ್ಲದಿರುವುದರಿಂದ ಈ ಪುಟ್ಟ ಪುಸ್ತಿಕೆಯನ್ನು ಚಾರಿತ್ರಕವಾಗಿ ರೂಪಿಸೋಣವಾಗಿದೆ. ಪೂರ್ವಾಪರ ಮತ್ತು ಪರಂಪರೆಯ ಪ್ರಜ್ಞೆಯಿಲ್ಲದ ಇಂದಿನ ವಾತಾವರಣವು ಈ ಪುಸ್ತಕ ರಚನೆಗೆ ಪ್ರೇರಕವಾಗಿದೆ. ವೀರಶೈವ ಸಾಕಲ್ಯ ಧರ್ಮ ದರ್ಶನ ಮತ್ತು ಸಿದ್ಧಾಂತಗಳ ಅಧ್ಯಯನ ಅನ್ವೇಷಣಗಳನ್ನು ನೆರವೇರಿಸಲು "ಅಧ್ಯಯನ ಪೀಠ ಮತ್ತು ಸಂಶೋಧನ ಸಂಸ್ಥೆ"ಯೊಂದನ್ನು ಎರಡು ವರುಷಗಳಿಂದ ಸಂಸ್ಥಾಪಿಸಿ ಕಾರ್ಯ ಪ್ರವೃತ್ತರಾದುದರ ಫಲವೇ "ವೀರಶೈವ ಉಗಮ-ನಿಗಮ" (ಭಾಗ-೧), "ಆದಿ ವೀರಶೈವ" (ಭಾಗ-೨) "ಆಧುನಿಕ ವೀರಶೈವ" (ಭಾಗ-೩) ಈ ತ್ರಿವಿಧ ಅಪೂರ್ವ ಗ್ರಂಥಗಳು ರೂಪಗೊಂಡಿವೆ. ಇದೀಗ ಆಧುನಿಕ ವೀರಶೈವ ಎಂದಿನಿಂದ ಮೊದಲಾಗುವ ಮೊದಲಾದ ಕುರುಹಗಳಿವೆ ಚಾರಿತ್ರವಿದೆ ಎಂಬುದನ್ನು ಮುಂದೆ ವಿವರಿಸೋಣವಾಗುತ್ತದೆ.

ಪಂಚ ಪೀಠಗಳಲ್ಲಿ ಒಂದಾದ ಶ್ರೀಶೈಲ ಪೀಠದ ಆಧುನಿಕ ಯುಗದ ಮೂಲ ಪುರುಷರು ಪಂಡಿತಾಚಾರ್ಯರು ; ಇವರನ್ನೆ ಜಗದ್ಗುರು ಪಂಡಿತಾರಾಧ್ಯರೆಂದೂ ಕರಿಯಲಾಗುತ್ತದೆ. ಇವರ ಕಾಲ ಕ್ರಿ. ಶ. ೬ನೆಯ ಶತಮಾನ. ಈ ಯುಗದ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ವಿಶ್ವಾರಾಧ್ಯ ಈ ನಾಲ್ವರು ಶಿವಾಚಾರ್ಯರಿಗಿಂತ ಪೂರ್ವದವರು. ಈ ನಾಲ್ವರು ೧೧ನೆಯ ಶತಮಾನದವರು. ಜ. ಪಂಡಿತಾರಾಧ್ಯರು ೬ನೆಯ ಶತಮಾನದವರು. ಇವರಿಗಿಂತ ಅಯ್ದುನೂರು ವರುಷ ಹಿಂದಿನವರು. ಪರಮ ಪ್ರತಿಭಾವಂತರು. ಎರಡು ಸಾವಿರ ವರುಷಗಳ ಆಧುನಿಕ ವೀರಶೈವ ಇತಿಹಾಸದಲ್ಲಿ ಮೊದಲು ಸಿಕ್ಕುವವರು ಪಂಡಿತಾಚಾರ್ಯರು. ಭಾಷ್ಯಕರ್ತರಾದ ಇವರು ಶಾಸನೋಕ್ತರು. ಕರ್ನೂಲು ಜಿಲ್ಲೆಯ ಪಾಣಂ ಗ್ರಾಮದಲ್ಲಿ ದೊರೆತ ನಂ. ೧೮೯ ಶಿಲಾ ಶಾಸನದಲ್ಲಿ ಪಂಡಿತಾಚಾರ್ಯರ ಪ್ರಸಂಗವಿದೆ. ಶಾಸನ ಹೀಗಿದೆ.

"ಶ್ರಿಯೋರು ಗಂಟ್ಯಂತಕ ಮಾಚಿರಾಜು
ಪಲ್ಲೀ ಜನಃ ಶ್ರೀಗಿರಿ ಶೃಂಗವಾಸೀ
ಶ್ರೀ ಪಂಡಿತಾಚಾರ್ಯ ಗೃಹಸ್ಯದಾಸೋ ವಿಭೂತಿ ಗೌರ ಶರಣಾಗತೋವಃ ।"

ಈ ಶಾಸನವು ಕ್ರಿ. ಶ. ೮ನೆಯ ಶತಮಾನದ್ದೆಂದು ಮದ್ರಾಸ್ ಇಲಾಖೆಯವರು ನಿರ್ಣಯಿಸಿದ್ದಾರೆ. ಈ ಶಾಸನಾಕ್ಷರಗಳು ೮ನೆಯ ಶತಮಾನದ ಅಕ್ಷರಗಳನ್ನು ಹೋಲುತ್ತವೆಯೆಂದು ಅಭಿಪ್ರಾಯ ಪಟ್ಟಿದ್ದಾರೆ.

ಇನ್ನು ಕೆಲವರು ೭ನೆಯ ಶತಮಾನಕ್ಕೂ ಸಂಬಂಧಪಟ್ಟ ಅಕ್ಷರಗಳೆಂದು ಹೇಳುತ್ತಾರೆ. ಇದರಿಂದಾಗಿ ಈ ಎರಡು ಶತಮಾನಗಳ ಹಿಂದೆ ಶ್ರೀ ಪಂಡಿತಾಚಾರ್ಯರಿರಬೇಕೆಂದು ಹೇಳಬಹುದಾಗಿದೆ. ಅಲ್ಲದೆ ಶ್ರೀಶೈಲ ಗೂಳೂರು ಪೀಠದಲ್ಲಿರುವ ಶಿಲಾಸ್ತಂಭದಲ್ಲಿ ಮೂಲ ಪಂಡಿತಾಚಾರ್ಯರ ಭಾವಚಿತ್ರವಿದೆ. ಈ ಭಾವಚಿತ್ರದ ನಿಲವಿನಿಂದ ಇದು ಆರನೆಯ ಶತಮಾನದ ನಿಲವೆಂದು 'ವಿದ್ಯಾಲಂಕಾರ' ಎಂದು ಖ್ಯಾತರಾದ ಶ್ರೀ ಎಸ್.ಕೆ. ರಾಮಚಂದ್ರರಾಯರು ತೀರ್ಮಾನಿಸಿದ್ದಾರೆ. ಇವರು ಬಹು ಭಾಷಾ ಪಂಡಿತರು. ಬೆಂಗಳೂರು ಆಯುರ್ವೇದ ಅಕಾಡೆಮಿ ಅಧ್ಯಕ್ಷರು ; ವಿಶ್ವವಿದ್ಯಾನಿಲಯ ಭೂತಪರ್ವ (Nimhans) ಪ್ರಾಧ್ಯಾಪಕರು ಶಿಲ್ಪಲಕ್ಷಣಗಳಿಂದ ಕಾಲ ನಿರ್ಣಯಿಸುವಲ್ಲಿ ವಿಚಕ್ಷಣರು.

ಶ್ರೀ ಶೈಲ ಜಗದ್ಗುರು ಪಂಡಿತಾಚಾರ್ಯರಿಗೆ ವಿಭೂತಿ ಗೌರಯ್ಯ ಎಂಬವರು ದಾಸ ಅಂದರೆ ಭೃತ್ಯ ಅಥವಾ ಶಿಷ್ಯನಾಗಿದ್ದನೆಂದು ಈ ಶಾಸನದಿಂದ ಸ್ಪಷ್ಟವಾಗುತ್ತದೆ. "ಶ್ರೀ ಗಿರಿ ಶೃಂಗವಾಸೀ" ಎಂಬುದರಿಂದ ಶ್ರೀ ಶೈಲ ಪೀಠಾಧಿಪತಿಯಾಗಿದ್ದನೆಂಬುದು ಅರಿಕೆಯಾಗುತ್ತದೆ. 'ಶ್ರೀ ಪಂಡಿತಾರ್ಯ' ಎಂದಿರುವುವರಿಂದ ಆಚಾರ್ಯರೆಂಬುದು ಸುಸ್ಪಷ್ಟ ! ಆರ್ಯ, ಆಚಾರ್ಯಪದಗಳು ಪರ್ಯಾಯ ಪದಗಳಾಗಿವೆ. ಇವೆಲ್ಲದರಿಂದ ಈ ಶಾಸನೋಕ್ತರು ಶ್ರೀಶೈಲ ಮೂಲ ಪಂಡಿತಾಚಾರ್ಯರೆಂದೇ ಸಿದ್ಧವಾಗುತ್ತದೆ. ಸಾಹಿತ್ಯ ಶಿರೋಮಣಿ ಶ್ರೀ ಎಸ್. ಆರ್. ಸೋಮಶೇಖರ ಶರ್ಮ, ಎಂ. ಎ, ಎಲ್ ಎಲ್ ಬಿ ಅವರು ತಾವು ರಚಿಸಿದ "ಪಾಲುಕುರಿಕಿ ಸೋಮನಾಥ ಕವಿ" ಎಂಬ ಇತಿಹಾಸ ಗ್ರಂಥದ ಪುಟ–೨೯ರಲ್ಲಿ "....ವೀರಶೈವ ಮತ–ಪ್ರವರ್ತಕರಾದ ಶ್ರೀ ರೇವಣ, ಶ್ರೀ ಏಕೋರಾಮ ಮತ್ತು ಶ್ರೀ ಪಂಡಿತಾರಾಧ್ಯರೆಂಬ ಮೂರು ಜನ ಆಚಾರ್ಯರ ನಂತರ ಕ್ರಿ. ಶ. ಐದನೇ ಶತಮಾನದಲ್ಲಿ ಆಂಧ್ರ ದೇಶದಲ್ಲಿ ಶ್ರೀಕಂಠಾಚಾರ್ಯನೆಂಬ ಇನ್ನೊಬ್ಬ ಮಹಾವೀರಶೈವ ಆಚಾರ್ಯನು ಹುಟ್ಟಿದನು...." ಕ್ರಿ. ಶ. ಐದನೇ ಶತಮಾನಕ್ಕೆ ಹಿಂದಿದ್ದರೆಂದು ಅಭಿಪ್ರಾಯ

ಪಟ್ಟಿದ್ದಾರೆ. ಆದರೆ ಶ್ರೀಶೈಲ ಮೂಲ ಪಂಡಿತಾರಾಧ್ಯರ ೬-೭ ಶತಮಾನದ ಕಾಲದವರು ಶ್ರೀಕಂಠಶಿವಾಚಾರ್ಯರು. ಇವರು ಪಂಡಿತಾಚಾರ್ಯರಂತೆ ಶಿವಾದ್ವೈತ ಸಿದ್ಧಾಂತಪರವಾಗಿ ಬ್ರಹ್ಮಸೂತ್ರಕ್ಕೆ ಭಾಷ್ಯ ಬರೆದಿದ್ದಾರೆ.

ಈಚೆಗೆ ಪಂಡಿತತ್ರಯದಲ್ಲಿ ಒಬ್ಬರಾದ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಶ್ರೀಶೈಲ ಪೀಠದ ಅಧಿಪತಿಗಳೆಂದು ಅರ್ಥವಿಲ್ಲದೆ ಐತಿಹಾಸಿಕ ಪ್ರಜ್ಞೆಯಿಲ್ಲದೆ ವಾದಿಸುತ್ತಿದ್ದಾರೆ. ಈ ವಿವಾದವನ್ನು ಅದೆಷ್ಟು ಸಲ ಖಂಡಿಸಿದರೂ ಕೈ ಬಿಡದೆ ಉತ್ತರಿಸದೆ ಮತ್ಸರಗ್ರಸ್ತರಾಗಿ ಮತ್ತೆ ಮತ್ತೆ ಅದನ್ನೆ ಹಾಡುತ್ತಿದ್ದಾರೆ. ಪೀಠಗಳ ಪರಂಪರೆಯ ಸತ್ಯ ಚಾರಿತ್ರವನ್ನು ಇತಿಹಾಸ ಬರೆವವರು ಆ ಪೀಠಗಳ ಬಗೆಗಿರುವ ಏನೆಲ್ಲ ರಿಕಾರ್ಡುಗಳನ್ನು ಪೀಠಾಧೀಶ್ವರುಗಳ ತಲೆಮಾರಿನ ಪಟ್ಟವಲ್ಲರಿಯನ್ನು ಸ್ಥಳ ಪುರಣಾದಿ ಸಾಮಗ್ರಿ ಸಂಗ್ರಹವನ್ನು ಮೊದಲು ಮಾಡಿಕೊಳ್ಳಬೇಕು. ಶಾಸನಗಳು ತಾಳೆಗರಿಗಳು ಕೋರಿಕಾಗಧದ ಮೇಲೆ ಬರೆದ ಹಳೆಯ ಹಸ್ತ ಪ್ರತಿಗಳು ಇರುತ್ತವೆ. ಇವೆಲ್ಲವುಗಳ ಆಧಾರದ ಮೇಲೆ ಬರೆದರೆ ಇದು ಇತಿಹಾಸಕಾರರ ಸತ್ಯನಿಷ್ಠ ಪಾತ್ರ. ಇವನ್ನೆಲ್ಲ ಗಮನಿಸದೆ ಒಂದಂಶದಲ್ಲಿ ಹೆಸರಿನ ಸಾಮ್ಯವಿರುವ ಯಾವುದೋ ವ್ಯಕ್ತಿಯನ್ನು ಹಿಡಿದು ತಂದು ಮೂಲ ಪೀಠಾಚಾರ್ಯನೆಂದು ಹೇಳಿಬಿಡುವುದು ವಸ್ತುನಿಷ್ಠವಾದ ಪೀಠದ ಪೂರ್ವ ಚಾರಿತ್ರವನ್ನು ಅಪಲಾಪ ಮಾಡಿದಂತಾಗುತ್ತದೆ. ಅಪಚಾರ-ಅಪಪ್ರಚಾರಗಳನ್ನೆಸಗಿದಂತಾಗುತ್ತದೆ. ೧೨ನೆಯ ಶತಮಾನದಲ್ಲಿದ್ದ ಮಲ್ಲಿಕಾರ್ಜುನ ಪಂಡಿತಾರಾಧ್ಯರೇ ಶ್ರೀಶೈಲ ಪೀಠದ ಮೂಲ ಪುರುಷರೆಂದು ಬರೆದವರು ಭಾಷಣ ಮಾಡುವವರು ಈ ಪೀಠದ ಚಾರಿತ್ರದ ಅರಿವಿಲ್ಲದವರು ; ಅಪ್ರಬುದ್ಧರು. ಈ ಪೀಠದ ಬಗೆಗೆ ಚಾರಿತ್ರಿಕ ಕಾವ್ಯಗಳೇ ಹುಟ್ಟಿಕೊಂಡಿವೆ ; ಪುರಾಣಗಳೇ ರೂಪುಗೊಂಡಿವೆ. ತೆಲುಗು ಕನ್ನಡ ಭಾಷೆಗಳೆರಡರಲ್ಲಿ ಬೆಳಕು ಕಂಡಿವೆ. ೧೧ನೆಯ ಶತಮಾನದ ಕರಿಬಸವೇಂದ್ರರು, ಚಂದ್ರಗುಂಡ ದೇಶಿಕೇಂದ್ರರು, ೧೦ನೆಯ ಶತಮಾನದ ವಿರೂಪಾಕ್ಷ ದೇಶಿಕೇಂದ್ರರು, ಇಮ್ಮಡಿ ಪಂಡಿತಾರಾಧ್ಯರು, ೯ನೆಯ ಶತಮಾನದ ಸಿದ್ಧಮಲ್ಲ ಶಿವಾಚಾರ್ಯರು, ಅವರಿಗೆ ಹಿಂದಿದ್ದ ಮಲ್ಲಿಕಾರ್ಜುನ ಜಗದ್ಗುರುಗಳು, ಅವರ ಹಿಂದಿದ್ದ ಸುಮಾರು ೬-೭ ಶತಮಾನದ ಪೀಠದ ಮೂಲ ಜಗದ್ಗುರು ಪಂಡಿತಾಚಾರ್ಯರು ; ಇವರು ಶಾಸನೋಕ್ತರು. ಇವರೆಲ್ಲ ಏನಾಗಬೇಕು ? ಎಲ್ಲಿಗೆ ಹೋಗಬೇಕು ?

ಈ ಪೀಠಕ್ಕಿದ್ದ, ಇರುವ ಚಾರಿತ್ರಿಕ (ಐತಿಹಾಸಿಕ) ಸರ್ವ ಸಾಮುಗ್ರಿಗಳನ್ನು (ಹಳೆ-ಹೊಸ ದಾಖಲೆ-ಬರೆಹಗಳನ್ನು) ಬಳಸಿಕೊಳ್ಳದೆ, 'ತುಂಟ ಎತ್ತಿಗೆ ಕುಂಟ ನೆಪ. ಎಂಬ ನಾಣ್ನುಡಿಯಂತೆ ದ್ವೇಷೈಕ ದೃಷ್ಟಿಯಲ್ಲಿ ತಪ್ಪಿದ್ದುದನ್ನೆ ಮತ್ತೆ ಮತ್ತೆ ಒಪ್ಪೆಂದು ಬರೆವುದರಲ್ಲಿ, ಭಾಷಣ ರೂಪದಲ್ಲಿ ಅಪಪ್ರಚಾರ ಮಾಡುವುದರಲ್ಲಿ ಎಳ್ಳಷ್ಟೂ ಅರ್ಥವಿಲ್ಲ. ದಿಟಕ್ಕೂ ಸಹಜ ಭಾವಿಗಳಾಗಿದ್ದಲ್ಲಿ ಪುನರ್ವಿಮರ್ಶೆ ಪುನಃ ಪರಿಶೀಲನೆ ಮಾಡಬೇಡವೆ ? ಇದಕ್ಕಾಗಿ ಬಿಡಿ ಬರೆಹಗಳು ಹೊತ್ತಗೆಗಳು ಬೆಳಕಿಗೆ ಬಂದಿವೆ. ಅವನ್ನೆಲ್ಲ ಕಂಡೂ ಕಾಣದಂತೆ ಕುಹಕ ಕುಭಾಷೆಗಳನ್ನು ಬಳಸಿದರೆ-ಬಳಸುತ್ತ ಹೋದರೆ ಪ್ರಯೋಜನವೇನು ? ಪ್ರಯೋಜನವೊಂದೇ ಅದು ಸಮಾಜದಲ್ಲಿ ವಿಷಬೀಜ ಬಿತ್ತಿ ವೈಷಮ್ಯ ಒಡಕುಗಳನ್ನುಂಟು ಮಾಡುವಿಕೆ ! ಘಾತಕತನಕ್ಕೆ ಗುರಿಯಾಗುವಿಕೆ !! ಸಾಮಾಜಿಕ ಸರ್ವಾಂಗೀನ ಪ್ರೀತಿ;-ವಸ್ತು ನಿಷ್ಠ ದೃಷ್ಟಿ, ಸಹಜ ಭಾವ ಇರುವವರು ಹೀಗೆಲ್ಲ ಮಾಡರು ; ಹುಲು ಹೊಲಬಿನಲ್ಲಿ ಹೆಜ್ಜೆ ಹಾಕರು. ಹಾಕಿದರೆ ಮುಗ್ಗುರಿಸದಿರರು.

ಗುರುಪೀಠದ ಆಗು ಹೋಗುಗಳೇ ಸಮಾಜದ ಆಗು ಹೋಗುಗಳು. ಗುರು ಧರ್ಮವೇ ಸಮಾಜ ಧರ್ಮ. ಗುರು ಶಕ್ತಿ, ಗುರು ಪ್ರಭಾವ ಘನತರವಾದುದು. ಗುರುದೇವನ ದೃಕ್ಕ್ರಿಯಾ ಶಕ್ತಿಯಿಂದ ಸಮಾಜ ನಿರ್ಮಾಣವಾಗುತ್ತದೆ. ಸಮಾಜ ಧರ್ಮ ರೂಪಗೊಳ್ಳುತ್ತದೆ. ಅಂತಹ ಗುರುದೇವ ಸಮಾಜ ಪ್ರವರ್ತಕನೆನಿಸುತ್ತಾನೆ ; ಯುಗ ಪ್ರವರ್ತಕನೆನಿಸುತ್ತಾನೆ. ಶ್ರೀಶೈಲ ಪೀಠದ ಆರನೆಯ ಶತಮಾನದ ಮೂಲ ಜಗದ್ಗುರುಗಳಾದ ಪಂಡಿತಾಚಾರ್ಯರು ಪ್ರಕಾಂಡ ಪಂಡಿತರು ; ಪ್ರತಿಭಾವಂತರು.

ಈ ಯುಗದಲ್ಲಿ ಶ್ರೀಶೈಲಕ್ಕಿರುವ ಶ್ರೇಷ್ಠತೆ ಇನ್ನಾವ ಕ್ಷೇತ್ರಕ್ಕಿಲ್ಲ. ಆ ಶ್ರೇಷ್ಠತೆ ಕ್ಷೇತ್ರ ಮಾತ್ರದ್ದಲ್ಲ. ಸಾಮಾಜಿಕ ಸಾಂಸ್ಕೃತಿಕ ದಾರ್ಶನಿಕವಾಗಿಯೂ ಶ್ರೀಗಿರಿಯ ಹಿರಿಮೆ ಹೆಗಲೆಣೆಯಿಲ್ಲದುದು. ಇದಕ್ಕೆ ಕಳಾವಂತ ಕಾರಣರು ಪಂಡಿತಾಚಾರ್ಯರು. ಈ ದಿಸೆಯಲ್ಲಿ ಅಂದು ಅವರು ಮಾಡಿದ ವಣಿಹ ಅನ್ಯಾದೃಶವಾದುದು. ಅವರು ಕೇವಲ ಗುರು ದೇವರು ಮಾತ್ರವಲ್ಲ ; ಜೊತೆಗೆ ಭಾಷ್ಯಕರ್ತರು; ಸಮಾಜ ಸುಧಾರಕರು. ಮಾನವ್ಯದ ಮೌಲ್ಯಕ್ಕಾಗಿ

ಕಾಳಾಮುಖ, ಲಕುಲೀಶಾದಿಗಳೊಡನೆ ಹೋರಾಡಿ ಗೆಲವಾದವರು. ಅವರ ಆ ಹೋರಾಟವನ್ನು ಪರಿಶೋಧಿಸಿ ಪರಿಭಾವಿಸಿದಲ್ಲಿ ಅವರ ಅಂದಿನ ವೀರಶೈವೀಯ ವಿಶಿಷ್ಟಕ್ರಾಂತಿ ವಿದಿತವಾಗುತ್ತದೆ. ಆಧುನಿಕ ವೀರಶೈವದ ಉಚ್ಛ್ರಾಯ ಸ್ಥಿತಿಗೆ ಅವರು ಅದೆಲ್ಲ ಬಗೆಯಲ್ಲಿ ಕಾರಣಕರ್ತರಾಗಿದ್ದಾರೆ. ಮತ ಮತಾಂತರಗಳ ವಿವಾದವನ್ನು ತಿಕ್ಕಾಟಗಳನ್ನು ನಿಲ್ಲಿಸಿ ವೀರಶೈವೀಯ ಸಮನ್ವಯ ಭಾವವನ್ನು ನೂತನ ದೃಷ್ಟಿಯನ್ನು ಜನರಲ್ಲಿ ಮೂಡಿಸುವರು. ಕಾಳಾಮುಖರ ಕಣ್ಣುಗಳನ್ನು ತೆರೆಯಿಸಿ ವಿಭೂತಿಧಾರಣ ಲಿಂಗಧಾರಣಗಳಿಗೆ ಒಗ್ಗಿಸಿ ಅವರನ್ನೆಲ್ಲ ಶ್ವೇತಮುಖಿಗಳನ್ನಾಗಿಸಿ ಶ್ವೇತಾಚಾರ್ಯರೆಂದೆನಿಸಿದರು. ವಾಮ ಪಂಥಿಯರನ್ನೆಲ್ಲ ವಿಶುದ್ಧ ವೀರಶೈವ ಪಥಕ್ಕೆ ಬರುವಂತೆ ಮಾಡಿದ ಆಧುನಿಕ ವೀರಶೈವ ಮಹಾಪುರುಷರಲ್ಲಿ ಆಚಾರ್ಯರಲ್ಲಿ ಪಂಡಿತಾಚಾರ್ಯರು ಪ್ರಥಮಿಗರು. ಸತ್ವಶಾಲಿಯಾದ ತತ್ತ್ವ ಶೀಲವಾದ ವೀರಶೈವ ಸಿದ್ಧಾಂತವನ್ನು ತಮ್ಮ ಭಾವಪೂರ್ಣ ಭಾಷ್ಯದ ಮೂಲಕ ವೃದ್ಧಿಸುವರು. ಅಸಂಖ್ಯ ವಿದ್ವಾಂಸರನ್ನು ವೀರಶೈವ ಸಿದ್ಧಾಂತಕ್ಕೆ ಆಕರ್ಷಿಸಿದರು. ಕಾಳಾಮುಖ ಲಾಕುಳ ಲಕುಲೀಶಾದಿ ಜನರಲ್ಲಿರುವ ಪಶು ಸಹಜವಾದ ಪ್ರವೃತ್ತಿಗಳನ್ನು ಪರಿಹರಿಸುವರು. ಉಳಿದ ಜನರ ಮೂಢ ಸಂಪ್ರದಾಯದ ಜಾಡ್ಯತೆಯನ್ನು ಕಳೆದು ಜಾಗ್ರತೆಯ ಜೀವಂತತೆಯನ್ನು ತುಂಬಿ ತೊಳಗುವಂತೆ ಮಾಡಿದ ಮಹಾಚಾರ್ಯರು ಪಂಡಿತಾಚಾರ್ಯರು. ಅವರು ಆಚಾರಕ್ಕೆ ಸದಾಚಾರಕ್ಕೆ ಶಿವಾಚಾರಕ್ಕೆ ಹೆಚ್ಚಿನ ಮೌಲ್ಯವನ್ನಿತ್ತು ಜನರನ್ನು ಅವುಗಳಿಗೆ ಪ್ರೇರೇಪಿಸಿ ತಮ್ಮ ಆಚಾರ್ಯನಾಮವನ್ನು ಅರ್ಥವತ್ತಾಗಿಸಿಕೊಂಡ ಆಧುನಿಕ ವೀರಶೈವಾಚಾರ್ಯರಲ್ಲಿ ಅಗ್ರಗಣ್ಯರು. ಆಚಾರ ಅಥವಾ ಆಚರಣೆಯಿಲ್ಲದ ಭಕ್ತಿ–ಜ್ಞಾನ–ಭಾವಗಳು ಜಡವೆಂದು ನಿಷ್ಫಲಗಳೆಂದು ತಮ್ಮ ಪ್ರಾಸಾದಿಕವಾಣಿಯಿಂದ ಪ್ರಬೋಧಿಸಿದರು. ಆಚರಣೆಯಿಂದ ಅವೆಲ್ಲವೂ ಉದ್ದೀಪನಗೊಳ್ಳುವುವು ಉತ್ತುಮಿಕೆಯನ್ನು ತಾಳುವವು ಎಂದು ಉಳಿದವರು ಪರಿಭಾವಿಸುವಂತೆಸಗಿದರು. ಅನಾಚಾರ ಅತ್ಯಾಚಾರಗಳಿಂದ ಮಲಿನರಾದವರನ್ನು ನಿರ್ಮಲರನ್ನಾಗಿಸಿದರು. ಅಂತೆಯೇ ಶಾಸನದಲ್ಲಿ ಹೇಳಿದಂತೆ ವಿಭೂತಿ ಗೌರಯ್ಯ ಮಾಚಿರಾಜು ಮೊದಲಾದ ಮಾನ್ಯವ್ಯಕ್ತಿಗಳು ಮತ್ತು ಕಾಳಾಮುಖ ಲಾಕುಳಾದಿ ಜನಗಳು ಅವರಿಗೆ ಶುಶ್ರೂಷುಗಳಾಗಿದ್ದರು. ಅಸಂಖ್ಯ ಜನಗಳಿಂದ ಆಚಾರ್ಯರು ಅನ್ವರ್ಥಕವಾಗಿ ಆರಾಧ್ಯರಾದರು.

ಪಂಡಿತಾಚಾರ್ಯರು ಮಲ್ಲಿಕಾರ್ಜುನಾರಾಧನೆಗೆ ಎಲ್ಲ ಕುಲ ಪಂಥಗಳವರಿಗೂ ಅವಕಾಶವನ್ನು ಕಲ್ಪಿಸಿ ಕೊಟ್ಟದು ಪ್ರಪ್ರಥಮ ಸರ್ವಾದರ್ಶ ಸಮ ದರ್ಶಿತ್ವ ಅವರ ದಾಗಿದೆ. ದಲಿತರ ಪತಿತರ ಉದ್ಧಾರಕಾರ್ಯಕ್ಕೆ ನಾಂದಿ ಹಾಡಿದವರು ಅವರು. ತಮಗಿರುವ ಅಪಾರವಾದ ಕ್ರಿಯಾಸಿದ್ಧಿ ಜ್ಞಾನಾನುಭವ ಸಿದ್ಧಿಗಳಿಂದ ಜನರನ್ನು ಪರಿಶುದ್ಧ ಕ್ರಿಯಾಚರಣೆಯುಳ್ಳವರನ್ನಾಗಿಸಿದರು. ಅವರಲ್ಲಿ ಅಂತಹ ಕ್ರಿಯಾ ಶಕ್ತಿ ಜ್ಞಾನೇ ಚ್ಛಾ ಶಕ್ತಿಗಳು ಕರಿಗೊಂಡಿದ್ದವು. ಅದರಿಂದಾಗಿ ಅಂದಿನಿಂದ ಶ್ರೀಶೈಲ ಕ್ಷೇತ್ರವು ವೀರಶೈವರ ಕೇಂದ್ರವಾಯಿತು. ವೀರಶೈವ ಶ್ರೇಷ್ಠ ಸಾಧಕರನ್ನು ಶಿವ ಶರಣರನ್ನು ಕೇಂದ್ರೀಕರಿಸಿಕೊಂಡಿತು. ಎಂತವರಾದರೂ ಶ್ರೀಶೈಲದ ಅವಿಮುಕ್ತ ಕ್ಷೇತ್ರಕ್ಕೆ ಹೋಗದೆ ಮುಕ್ತಿಯಿಲ್ಲ ಎಂದು ಮಾದೇವಿ-ಮಾಪ್ರಭು ಅಂತವರೂ ಅರಿತು ಅಲ್ಲಿಗೆ ಬರುವಂತೆ ಇರುವಂತೆ ನಿರಾಳರಾಗು ವಂತೆ ಮಾಡಿತು. ಪಂಡಿತಾಚಾರ್ಯರ ಪರಮ ಪ್ರಭಾವದಿಂದ ಅಲ್ಲಿನ ಮಲ್ಲಯ್ಯ (ವೀರೇಶ) ಎಲ್ಲರವನಾದನು. ಇದಕ್ಕೆ ನಿದರ್ಶನ ಮುಂದಿನ ೧೨ನೆಯ ಶತಮಾನದ ವಚನಕಾರರಲ್ಲಿ ಹೆಚ್ಚು ಜನರಿಗೆ 'ಮಲ್ಲಿಕಾರ್ಜುನ' ಎಂಬದು ವಚನಾಮಂಕಿತವಾಗಿರುವುದೆ ಸತ್ಯ ಸಾಕ್ಷಿ ! ಸರ್ವಾದರ್ಶ ಸಾಕ್ಷಿ !!

ಆದಿರೇಣುಕ ಶಿವಾಚಾರ್ಯರು ಆಗಿ ಹೋದ ಮೂರು-ಮೂರುವರೆ ಸಾವಿರ ವರುಷಗಳಲ್ಲಿ ವೀರಶೈವದ ವಿಶಿಷ್ಟ ಶಕ್ತಿ ಕುಂದಿತ್ತು ; ಕಂದಿತ್ತು. ಕಾಲಾಮುಖಿ, ಕಾಪಾಲಿಕ, ಲಕುಲೀಶ ಪಾಶುಪತಾದಿಗಳು ಪ್ರಬಲಿಸಿದ್ದವು. ಅಂದಿನ ಆ ಶ್ರೀಶೈಲ ಪರಿಸರದಲ್ಲಿನ ಮತ ಮತಾಂತರಗಳ ಒಂದು ಕುರು ಕ್ಷೇತ್ರವೇ ಆಗಿತ್ತು. ಪರಸ್ಪರ ಘರ್ಷಣೆ-ಶೋಷಣೆಗಳು ಜರಗುತ್ತಿದ್ದವು. ವೀರಶೈವ ಸಾಮರ್ಥ್ಯ ಕುಗ್ಗಿತ್ತು. ಹೀನ ಮನೋಭಾವ ಜನರಲ್ಲಿ ಹಿರಿದಾಗಿತ್ತು. ಇದನ್ನು ಅಲ್ಲಿನ ಆ ಮಲ್ಲಯ್ಯ ಸಹಿಸದಾದನೊ ಏನೊ ? ಅಂತೆಯೆ-ಆತನ ಅಭೀಷ್ಟದಂತೆ ಪರಮಾಚಾರ್ಯ ಪಂಡಿತಾರಾಧ್ಯರ ಅವತರಣ ವಾಗುವುದು. ಕ್ರಿಯೆ ಜ್ಞಾನೇಚ್ಛಾ ಶಕ್ತಿಗಳನ್ನು ಅಗಾದವಾಗಿ ಅಭಿವೃದ್ಧಿಸಿ ಕೊಳ್ಳುವರು. ಆಚಾರ್ಯ ಶ್ರೇಷ್ಠರೆನಿಸುವರು. ಎನಿಸಿ ಅಂದಿನ ಆ ಮತ ಮತಾಂತರಗಳ ಅವಾಂತರಗಳನ್ನು ಅಡಗಿಸುವರು. ವೀರಶೈವರಲ್ಲಿ ತಮ

ಗಿರುವ ಸರ್ವಶ್ರೇಷ್ಠ ಸಿದ್ಧಾಂತದ ಅರಿವಾಯಿತು. ಅಂತೆಯೇ ಉಳಿದವರಿಗೂ ಉಂಟಾಯಿತು. ಅಂದಿನ ಆ ಪ್ರಭಾವ ಇಂದಿಗೆ ವೀರಶೈವರಲ್ಲಿ ಉಳಿದಿಲ್ಲ. ಇದಕ್ಕೆ ಹಲವು ಹತ್ತು ಕಾರಣಗಳಿವೆ. ಜಗದ್ಗುರು ಮೂಲ ಪಂಡಿತಾಚಾರ್ಯರ ಚಾರಿತ್ರಾದಿತ್ಯನಿಗೆ ಕಪ್ಪುಮೋಡಗಳು ಮುಸುಕಿವೆ. ಇವನ್ನು ಚದರಿಸಲು ಅವರ ನೈಜ ಚಾರಿತ್ರವಾಯು ಸಂಚಾರವಾಗುವುದೊಂದೆ ಹಿರಿಹೊಲಬು. ಈ ಹೆದ್ದಾರಿಯಲ್ಲಿ ಹೆಚ್ಚು ಹೆಚ್ಚು ಜನಪ್ರಿಯ ಬರೆಹಗಳು ಬಂದು. ತಪ್ಪುತಪ್ಪಾಗಿ ಬರೆದು ಭಾಷಣ ಮಾಡಿ ಸತ್ಯಚಾರಿತ್ರಕ್ಕೆ ಅಪಚಾರವೆನಿಸಗುತ್ತಿರುವವರು ಕಣ್ಣು ತೆರೆಯುವಂತಾಗಬೇಕು; ಮಾಸಿದ ಇವರ ಮನ ಬುದ್ಧಿಭಾವಗಳು ಹಸನಾಗು ವಂತಾಗಬೇಕು. ಆಧುನಿಕ ವೀರಶೈವ ಆದ್ಯಪ್ರವರ್ತಕರಾದ ಮೂಲ ಪಂಡಿತಾ ಚಾರ್ಯರ ಉಜ್ವಲಚಾರಿತ್ರದ ಹೊಂಬೆಳಗು ಹೊರಹೊಮ್ಮಿ ಸುಪ್ತರನ್ನೆಚ್ಚರಿಸಿ ಉತ್ತೇಜಿಸುತ್ತದೆ.ಊರ್ಜಿತ ಸತ್ವಶಾಲಿಯಾದ ಪರಂಪರೆಯನ್ನು ಉಳಿಸಿಕೊಂಡು, ಮುಂಬರುವ (ಭವಿಷ್ಯ) ಬಾಳು ಬದುಕಿನತ್ತ ಉತ್ಸಾಹ ಉಲ್ಲಾಸಗಳಿಂದ ಹೆಜ್ಜೆ ಹಾಕಲು, ಹಾಕಿ ಪ್ರಗತಿಶೀಲರಾಗಲು ಪ್ರೇರಕವಾಗುತ್ತದೆ. ಆದರೇನು ? ಸನಾತನ ಶಿವಾಚಾರ್ಯರಂತೆ ಆಧುನಿಕ ಶಿವಾಚಾರ್ಯರು ತಮಗಿರುವ ಒಂದುವರೆ ಸಾವಿರ ವರುಷಗಳ ಇತಿಹಾಸವನ್ನು ಕಳೆದುಕೊಂಡಿದ್ದಾರೆ. ಅಷ್ಟಿಷ್ಟಿದ್ದರೆ ಅದು ಬೇರೆ ಸಂಸ್ಕೃತಿಗೆ ಎಳೆಕುಳಿಯಾಗಿ ತಮ್ಮದೇ ಆಗಿ ಪ್ರಚಾರಪಡಿಸುತ್ತಿಲ್ಲ; ಅನ್ವೇಷಿಸಿ ಅನುಸಂಧಾನಿಸಿ ಹೇಳುತ್ತಿಲ್ಲ. ಅಧ್ಯಯನಕ್ಕೆ ಅವಕಾಶವೇ ಇಲ್ಲ ದಾಗಿದೆ. ಇಂತಿರುವಾಗ ಬೆಳೆದು ಬರುವುದಾದರೂ ಎಂತು? ಬೆಳೆವುದೊಂದೆಡೆ ಗಿರಲಿ, ಉಳಿವುದೇ ಕರಕಷ್ಟ! ಇಂತಾಗಿರುವುದು ದುರದೃಷ್ಟ! ಶಿವಾಚಾರ್ಯರು ವೀರಶೈವಕ್ಕೆ ಸಲ್ಲಿಸಿದ ಸೇವೆ ಚಾರಿತ್ರಗುಪ್ತವಾಗಿರುವುದಲ್ಲದೆ ನಾಡಿನಲ್ಲಿರುವ ಇವರ ಹೆಚ್ಚಾದ ನೆಲೆಗಳನ್ನೂ ಕಳೆದುಕೊಳ್ಳಲಾಗಿದೆ. ಇದು ಅನೇಕರಿಗೆ ಅಪ್ರಿಯವಾದರೂ ಐತಿಹಾಸಿಕ ಕಟು ಸತ್ಯ. ವಾಸ್ತವತೆಯ ಕಣ್ಣು ತೆರೆದರೆ, ಸಮನ್ವಯಭಾವ ಸಮನಿಸುವುದಾದರೆ ಕಳೆದುಕೊಂಡರೂ ಕಳೆದುಕೊಂಡಂತಲ್ಲ. ನಾವಾರು? ಅವರಾರು? ಒಂದೇ ಮೂಲದವರು. ಸೀಮಿತ ಸಂಕುಚಿತ ವಿಭೇದ ದೃಷ್ಟಿ ಬೆಳೆದಿದೆ ; ಬೆಳೆಯುತ್ತಿದೆಯಾಗಿ ಅನಿವಾರ್ಯವಾಗಿ ನೈಜವನ್ನು ನುಡಿದಾಗಿದೆ. ಬುದ್ಧಿಜೀವಿಗಳು ವಾಸ್ತವ ಪ್ರಜ್ಞೆಗೆ ವಂಚಿತರಾಗಬಾರದು– ಎಂಬುದೇ ನಮ್ಮ ಮನದಾಶಯ. ವಿಕಲ್ಪ ವಿರಹಿತವಾಗಿ ವಿಚಾರಿಸಿದರೆ ವೀರ

ಶೈವ ಒಳದಾಳಿ ಆಕ್ರಮಣ ಚರಿತ್ರೆಗಳಿಂದ ನಾವು ಪಾಠ ಕಲಿಯುವುದು ಕಂಡಷ್ಟಿದೆ. ವೀರಶೈವರಲ್ಲಿ ಅದರಲ್ಲಿ ಶಿವಾಚಾರ್ಯರಲ್ಲಿ ಮುಸುಕಿರುವ ಕಾಳ್ಗತ್ತಲೆಯನ್ನು ಕಳೆಯುವ ಕಾರ್ಯದಲ್ಲಿ ಸಂಶೋಧಕರ ಇತಿಹಾಸಕಾರರ ಪಾತ್ರ ಅಂದರೆ ಕರ್ತವ್ಯಶೀಲತೆ ಸಾಕಷ್ಟಿದೆ.

ಚಾರಿತ್ರಕವಾಗಿ ಸಮರ್ಪಕವಾದ ಸಾಹಿತ್ಯ ಮತ್ತು ಬೇರೆ ಹಳೆ ಉಳಿಮೆಗಳು ನಮ್ಮಲ್ಲಿ ದೊರೆವುದೇ ದುರ್ಲಭವಾಗಿದೆ. ಇದಕ್ಕೆ ನಮ್ಮ ಪೂರ್ವಜರು ಇತಿಹಾಸಕ್ಕೆ ಹೆಚ್ಚಾಗಿ ಗಮನ ಕೊಡದಿರುವುದೇ ಕಾರಣವಾಗಿದೆ. ಅಷ್ಟಿಷ್ಟು ಸಾಹಿತ್ಯ ರಚಿಸಿದ್ದರೂ ಅದನ್ನು ಉಳಿಸಿಕೊಳ್ಳುವ ಉಪಾಯವನ್ನು ಕಂಡುಕೊಳ್ಳದಿರುವುದೂ ಬೇರೊಂದು ಕಾರಣವಾಗಿದೆ. ಉಳಿದಿರುವಷ್ಟನ್ನಾದರೂ ಅನ್ವೇಷಿಸಿ ಪರಿಶೀಲಿಸಿ ಪ್ರಚಾರ ಮಾಡುವ ಶಕ್ತಿ ಆಸಕ್ತಿಗಳ ಅಭಾವ ಅತಿಯಾಗಿರುವುದು ದುರದೃಷ್ಟಕರ ! ತಮ್ಮದಲ್ಲದಿದ್ದರೂ ತಮ್ಮದನ್ನಾಗಿಸಿಕೊಳ್ಳುವಿಕೆ ಬೇರೆ ಸಾಗಿದೆ ! ಹೀಗೆಲ್ಲ ಆಗಿದ್ದರೂ ನೆಲದ ಮರೆಯ ನಿಧಾನದಂತೆ ಅಷ್ಟಿಷ್ಟು ನಿಂತು ಬಂದಿರುವುದಕ್ಕೆ ತೃಪ್ತಿ ಪಡಬೇಕಾಗಿ ಬಂದಿದೆ. ಬರದೆ ಬೇರೆ ಬಟ್ಟೆಯಿಲ್ಲ–ಇದಿರಲಿ.

ಆರನೆಯ ಶತಮಾನದ ವೀರಶೈವ ಧರ್ಮದಲ್ಲಿ ಭಾಷ್ಯಾಚಾರ್ಯ ಜಗದ್ಗುರು ಪಂಡಿತಾಚಾರ್ಯ ಒಂದು ಹೊಸ ಮನ್ವಂತರವನ್ನೆ ಮೂಡಿಸಿದರು. ಕಾಳಾಮುಖಿ ಕಾಪಾಲಿಕಾದಿಗಳ ವಾಮಾಚಾರಗಳನ್ನು ಬಿಡಿಸಿ ವೀರಶೈವಕ್ಕೆ ಸೇರಿಸಿ ಶುಭ್ರವಾಗಿ ವಿಭೂತಿ ರುದ್ರಾಕ್ಷ ಲಿಂಗಧಾರಕರನ್ನಾಗಿಸಿ ಶ್ವೇತಾಚಾರ್ಯರೆಂದು ಹೆಸರಾದುದನ್ನು ಹಿಂದೆ ಹೇಳಲಾಗಿದೆ. ಆಚಾರ್ಯರಲ್ಲಿ ಪಂಡಿತಾ (ಶ್ವೇತಾ) ಚಾರ್ಯ, ಸಿದ್ಧರಲ್ಲಿ ರೇವಣ ಸಿದ್ಧ, ಆರಾಧ್ಯರಲ್ಲಿ ಉದ್ಭಟ, ಪಂಡಿತರಲ್ಲಿ ಶ್ರೀಪತಿ–ಇವರು ಮುಖ್ಯರೆಂದು ಈ ಕೆಳಗಿನ ಶ್ಲೋಕಗಳು ಸಾಟುತ್ತಿವೆ :

> ''ರೇವಣೋ ಮರುಳಶ್ಚೈವ ಕೋರಾಮಃ ಸಿದ್ಧಾಃ ತ್ರಯಃ ಸ್ಮೃತಾಃ
> ಶ್ವೇತಾಚಾರ್ಯೋ ಲಾಕುಲೀಶೋ ನೀಲಕಂಠೋ ಜಗದ್ಗುರುಃ ।
> ಉದ್ಭಟಃ ಕೋಟಿಪಲ್ಲಶ್ಚ ವೇಮಾರಾಧ್ಯಃ ಪ್ರಕೀರ್ತಿತಃ ।
> ಶ್ರೀಪತಿರ್ಮಂಚಣಶ್ಚೈವ ಮಲ್ಲಿಕಾರ್ಜುನ ಪಂಡಿತಃ ॥''

ಇಲ್ಲಿ ಶ್ರೀ ಪಂಡಿತಾಚಾರ್ಯರು ಶ್ವೇತಾಚಾರ್ಯರೆಂದು ಉಲ್ಲೇಖಿತರಾಗಿದ್ದಾರೆ. ಮತ್ತು ಮಲ್ಲಿಕಾರ್ಜುನರು ಪಂಡಿತರಲ್ಲಿ ಅಂದರೆ ವಿದ್ವಾಂಸರಲ್ಲಿ

ಒಬ್ಬರೆಂದು ನಿರೂಪಿತರಾಗಿದ್ದಾರೆ. ಈ ಮಲ್ಲಿಕಾರ್ಜುನ ಪಂಡಿತರನ್ನು ಶ್ರೀಶೈಲ ಪೀಠದ ಮೂಲ ಅಧಿಪತಿಗಳೆಂದು ಅನೇಕರು ಭ್ರಾಂತಿಗೀಡಾಗಿರುವುದರಲ್ಲಿ ಅಚ್ಚರಿಯೇನಿಲ್ಲ. ಪಂಡಿತ ಎಂಬುದು ಮಲ್ಲಿಕಾರ್ಜುನ ವ್ಯಕ್ತಿಯ ಅಂಕಿತನಾಮವೇನಲ್ಲ. ಅಷ್ಟಕ್ಕೂ ಇವರು ಶ್ರೀಶೈಲ ಪೀಠದ ಅಧಿಪತಿಯೂ ಅಲ್ಲ. ಶ್ರೀಶೈಲ ಪೀಠಾಧ್ಯಪತಿ ಪಂಡಿತಾಚಾರ್ಯರು ೬ ಮತ್ತು ೭ನೆಯ ಶತಮಾನದಲ್ಲಿದ್ದರು. ಪಲ್ಲವ ರಾಜವಂಶದ ಮಹೇಂದ್ರ ವರ್ಮನಿಗೆ ಶಿವದೀಕ್ಷೆ ಕರುಣಿಸಿದ ಇತಿಹಾಸದಿಂದ ಆ ಕಾಲ ಸಿದ್ಧವಾಗುತ್ತದೆ.

೩

## ಸನಾತನ ಶಿವಾಚಾರ್ಯಸದ್ವಂಶ ! ಶಿವಯೋಗಿ ಶಿವಾಚಾರ್ಯ !!

ಎಂಟನೆಯ ಶತಮಾನದ ಆರಂಭದಲ್ಲಿದ್ದು 'ಸಿದ್ಧಾಂತ ಶಿಖಾಮಣಿ' ಎಂಬ ವೀರಶೈವ ಏಕೈಕ ಧರ್ಮಗ್ರಂಥವನ್ನು ರಚಿಸಿ ಪ್ರಬುದ್ಧನೂ ಪ್ರಸಿದ್ಧನೂ ಆದ ಶಿವಯೋಗಿ ಶಿವಾಚಾರ್ಯನ ಮುತ್ತಾತನಾದ "ಶಿವಯೋಗಿ" ಎಂಬುವರು ಸು. ೩ನೆಯ ಶತಮಾನದಲ್ಲಿದ್ದು ವಿಖ್ಯಾತರಾಗಿದ್ದರು. ಅವರ ಬಗೆಗೆ ಶಿವಾಚಾರ್ಯರು ತಮ್ಮ ಸಿದ್ಧಾಂತ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ.

## ಶಿವಜ್ಞಾನ ಮಹೋದಧಿ ಶಿವಯೋಗಿ !

ಆಸೀದಾಚಾರ ಸಿದ್ಧಾನಾಮಗ್ರಣೀಃ ಶಿವಯೋಗಿನಾಂ
ಶಿವಯೋಗೀತಿ ವಿಖ್ಯಾತಃ ಶಿವಜ್ಞಾನ ಮಹೋದಧಿಃ ।
ಶಿವಭಕ್ತಿ ಸುಧಾಸಿಂಧು ಜ್ರುಂಭಣಾಮಲ ಚಂದ್ರಿಕಾ
ಭಾರತೀಯಸ್ಯ ವಿದಧೇ ಪ್ರಾಯಃ ಕುವಲಯೋತ್ಸವಂ ॥"

ಹೆಸ್ರಿಯ ಹೆಸರು ಶಿವಯೋಗಿ ! ಶಿವಯೋಗವುಳ್ಳವ ಶಿವಯೋಗಿ ! ಅಂತೆಯೇ ಆತನು ಶಿವಯೋಗಿಗಳಲ್ಲಿ ಅಗ್ರಗಣ್ಯ ! ಸಾಮಾನ್ಯ ಶಿವಯೋಗಿಯಲ್ಲ ; ಕೇವಲ ಅಂಕಿತನಾಮದ ಶಿವಯೋಗಿಯಲ್ಲ. ಅನ್ವರ್ಥಕ ನಾಮವನ್ನಾಗಿಸಿಕೊಂಡಾತ ! ವೀರಶೈವ ಯೋಗ ಸಂಸ್ಕೃತಿಯ ಹೆಚ್ಚುಳಿಕೆಯನ್ನು

ಹೊಮ್ಮಿಸುವ ಹೆಸರುಳ್ಳಾತ! ಆ ಶಿವಯೋಗಿ ಶಿವಯೋಗಿಗಳಿಗೆ ಮಾತ್ರವಲ್ಲ, ಶಿವಾಚಾರ ಸಿದ್ಧರಿಗೂ ಅಗ್ರಗಣ್ಯ ! ಜೊತೆಗೆ ಶಿವಜ್ಞಾನ (ಶಿವಾಚಾರ) ರಸಾಮೃತ ಮಹಾಸಾಗರ! ವಿಖ್ಯಾತ ಅಂದರೆ ಶಿವಯೋಗ ಶಿವಕ್ರಿಯ ಶಿವಜ್ಞಾನಗಳಿಂದ ಪ್ರಸಿದ್ಧ! ಅಷ್ಟೇ ಅಲ್ಲ, ಶಿವಭಕ್ತಿಯೆಂಬುದೊಂದು ಸುಧಾಸಿಂಧು,ಅಂದರೆ ಕ್ಷೀರಸಾಗರ ; ಅದನ್ನು ಹೆಚ್ಚಿಸುವುದರಲ್ಲಿ ಶರಚ್ಚಂದ್ರನ ಬೆಳುದಿಂಗಳಂತಿದ್ದ ಆತನ ವಾಣಿಯು ಭೂಮಂಡಲವೆಂಬ ನೈದಿಲೆಯ ಹಬ್ಬವನ್ನುಂಟು ಮಾಡುವಂತಿತ್ತು. ಒಟ್ಟಾರೆ ವೀರಶೈವ ಶಿವಭಕ್ತಿ ಬೆಳವಿಗೆಗೆ, ಭಾರತೀ ವಿದ್ಯೆಗೆ ಶಿವಾಗಮ ಸಂಸ್ಕೃತ ಸಾಹಿತ್ಯಕ್ಕೆ ಅಂಗಲಿಂಗ ಸಾಮರಸ್ಯ ವಿದ್ವಾಂಸತೆಗೆ ವಿಶ್ವವ್ಯಾಪ್ತ ಕೀರ್ತಿಗೆ ಪೂರ್ಣಚಂದ್ರನಂತಿದ್ದನು ಮೂಲ ಶಿವಯೋಗಿ ಶ್ರೇಷ್ಠನು. 'ಕುವಲಯೋತ್ಸವ'ಕ್ಕೆ ಕಾರಣನಾಗಿದ್ದನೆಂದು ಹೇಳಿರುವಲ್ಲಿ ಅಪಾರ ಅರ್ಥ ಭಾವಗಳ ವ್ಯಾಪ್ತಿಯಿದೆ ; ಧ್ವನಿ ಶ್ಲೇಷಗಳಿವೆ. ಕುವಲಯವೆಂದರೆ ಬ್ರಹ್ಮಾಂಡ. ಉತ್ಸವವೆಂದರೆ ಉತ್ತೇಜನಕಾರಿಯಾದ ಸಡಗರ ಅಥವಾ ಮೆರವಣಿಗೆ ! ಶಿವಯೋಗಿಯ ಭಾರತೀ ಬ್ರಹ್ಮಾಂಡ ಭರಿತ ಉತ್ಸವಕ್ಕೆ ಉತ್ತುಂಗತೆಗೆ ಕಾರಣವಾಗಿದ್ದಿತೆಂಬ ಬಿತ್ತರದ ಭಾವವಿದೆ, 'ಆಚಾರ ಸಿದ್ಧಾನಾಂ ಶಿವಯೋಗಿನಾಂ ಅಗ್ರಣೀಃ' 'ಶಿವಜ್ಞಾನ ಮಹೋದಧಿ' 'ಶಿವಭಕ್ತಿ ಸುಧಾಸಿಂಧು ಜೃಂಭಣ ಚಂದ್ರಿಕಾ' 'ಬಾರತೀ' 'ಕುವಲಯೋತ್ಸವಂ' 'ವಿಖ್ಯಾತಃ' ಈ ಆರು ವಿಶೇಷಣಗಳು ಶಿವಯೋಗಿ ಶಿವಾಚಾರ್ಯರ ವಂಶದ ಮೂಲ ಪುರುಷನ ವೀರಶೈವ ಮಹೋನ್ನತತ್ವ ವಿದಿತವಾಗುತ್ತದೆ. ಮತ್ತು 'ಆಸೀತ್' ಎಂಬ ಕ್ರಿಯಾಪದ ಪ್ರಯೋಗದಿಂದಲೂ ಮತ್ತು ಮುಂದೆ ಹೇಳಿದ 'ತಸ್ಯ ವಂಶೇ' ಎಂಬುದರಿಂದಲೂ ಆತನ ಕಾಲ ಮುದ್ದದೇವ ಶಿವಾಚಾರ್ಯನಿಗಿಂತ ನಾಲ್ಕಾರು ತಲೆಮಾರುಗಳಿಗಿಂತ ಹಿಂದಿನವನೆಂಬುದು ಹೆಚ್ಚು ನಿಚ್ಚಳವಾಗುತ್ತದೆ. ಅಂದಾಜು ೩ ಅಥವಾ ೪ನೆಯ ಶತಮಾನದಲ್ಲಿದ್ದಿರಬೇಕೆನಿಸುತ್ತದೆ. ಆಗಲೆ ಆತನು ಶಿವಯೋಗದಲ್ಲಿ ಶಿವಾಚಾರದಲ್ಲಿ ಶಿವಜ್ಞಾನದಲ್ಲಿ ಶಿವಭಕ್ತಿಯನ್ನು ಬೆಳೆಸುವುದರಲ್ಲಿ ವಿಶ್ವವಿಖ್ಯಾತನಾಗಿದ್ದನೆಂದು ಹೇಳಬೇಕಾದರೆ ನಾವು ಹೇಳುವ ಆಧುನಿಕ ವೀರಶೈವ ವಯಸ್ಸು ಸು. ಎರಡು ಸಾವಿರ ವರುಷಗಳೆಂದು ಹೇಳುವಲ್ಲಿ ಯಾವ ಅತಿಶಯೋಕ್ತಿಯಿರುವುದಿಲ್ಲ.

ಭೂವಲಯ ಕುವಲಯ (ನೈದಿಲೆಯ) ಅರಳುವಿಕೆಗೆ ಕಾರಣವಾದ ಶಿವಯೋಗಿ ಆಚಾರ್ಯ ಭಾರತೀ ಅಂದಿನ ಆ ವೀರಶೈವ ಭಕ್ತಿರಸವನ್ನು ಸುಧಾಸಿಂಧುವಿನಂತೆ ಚಿತ್ತರಗೊಳಿಸಿರಬೇಕಾದರೆ ಆತನು ಅದೆಷ್ಟು ಕಾರುಣ್ಯಮೂರ್ತಿಯಾಗಿರಬೇಕೆಂಬುದನ್ನು ಊಹಿಸಲು ಸಾಧ್ಯವಿಲ್ಲ. ಆ ಮಹಾಚಾರ್ಯನಾದ ಶಿವಯೋಗಿಯು 'ಶಿವಭಕ್ತಿ ಸುಧಾಕರ'ನಾಗಿ, 'ಶಿವಜ್ಞಾನ ಮಹಾಸಾಗರ'ನಾಗಿ, 'ಶಿವಾಚಾರಸಿದ್ಧ'ನಾಗಿ, ಮತ್ತು 'ಶಿವಾಚಾರಸಿದ್ಧರಿಗೆ ಪ್ರಭಾಕರ'ನಾಗಿ, ಶಿವಯೋಗಿಗಳಿಗೆ ಅಗ್ರಗಣ್ಯನಾಗಿ ಇರಬೇಕಾದರೆ ಅಂದಿನ ಆ ವೀರಶೈವ ಧರ್ಮದ ವೈಭವ ಹೇಗಿರಬೇಕೋ ? ಅಲ್ಲದೆ ಶಿವಾಚಾರ್ಯವಂಶ ಆತನ ತಲೆ ಮಾರಿಗೆ ಹಿಂದೆ ಅದೆಷ್ಟು ಕಾಲದಿಂದ ಅಭಿವೃದ್ಧಿಸಿಕೊಂಡು ಬಂದಿರಬೇಕೋ ? ಐತಿಹಾಸಿಕ ಪ್ರಾಜ್ಞರೇ ಊಹಿಸಿ ಹೇಳಬೇಕು. ಮತ್ತು ಮಹತ್ವಪೂರ್ಣ ಅಂಶವನ್ನು ಗಂಭೀರವಾಗಿ ಗಮನಿಸಬೇಕು. ಎಲ್ಲದಕ್ಕೂ ಮುಖ್ಯವಾಗಿ ಶಿವಾಚಾರಸಿದ್ಧರಾದ ಮುಖ್ಯ ಶಿವಯೋಗಿಗಳಿಗೆ ಅಗ್ರಗಣ್ಯನಾದ ಆ ಶಿವಯೋಗಿ ಕಾಲದ ವೀರಶೈವ ಸ್ಥಿತಿಗತಿಗಳು ಅದೆಷ್ಟು ಉತ್ತಮವಾಗಿರಬೇಕೆಂಬುದನ್ನೂ ತುಂಬಾ ಗಂಭೀರವಾಗಿ ಗಮನಿಸುವದಾಗಬೇಕು. ಸಾಮಾಜಿಕ ಸ್ಥಿತಿಗತಿಗಳು ಹೇಗಿದ್ದರೆ ಹಾಗೆ ವ್ಯಕ್ತಿಧರ್ಮ ಇರಬಲ್ಲುದೆಂಬುದನ್ನು ಎಲ್ಲರೂ ಒಪ್ಪಲೇಬೇಕಾಗುತ್ತದೆಯಲ್ಲವೆ ? ಮುದ್ದದೇವ ಶಿವಾಚಾರ್ಯರಿಗಿಂತ ಪೂರ್ವದಲ್ಲಿದ್ದು ವಿಖ್ಯಾತನಾದ ಶಿವಜ್ಞಾನಿ ಶಿವಯೋಗಿಯ ಕಾಲದಲ್ಲಿ ಶಿವಾಚಾರಸಿದ್ಧರು ಶಿವಯೋಗಿಸಿದ್ಧರು ಅನೇಕರು ಸರ್ವಾಗ್ರಗಣ್ಯರಾಗಿದ್ದರೆಂದರೆ ಅಂದಿನ ವೀರಶೈವ ಸಮಾಜದ ಶ್ರೇಷ್ಠ ಸಂಸ್ಕೃತಿ ಸುಸ್ಥಿತಿಗತಿಗಳು ಎಂತಹವಿದ್ದವು ಎಷ್ಟು ಎತ್ತರಕ್ಕೆ ಬೆಳೆದಿದ್ದವು ಎಂಬುದು ಮನದಟ್ಟಾಗದಿರದು. ಅಂತೆಯೇ ವಿಶ್ವವಿಖ್ಯಾತ ಶಿವಯೋಗಿ ಶಿವಾಚಾರ್ಯನಂತಹ ಮಹಾ ವಿಭೂತಿ ಪುರುಷನನ್ನು ಪಡೆದಿತ್ತು ಸಮಾಜ ! ಪುಣ್ಯಶಾಲಿಯಾಗಿತ್ತು – ಸಮಾಜ !! ಶಿವಾಚಾರ ಶಿವವಿಚಾರ ಶಿವಯೋಗಾದಿಗಳಿಂದ ಶ್ರೀಮಂತವಾಗಿತ್ತು.

## ಮೂರ್ಧನ ಮುದ್ದದೇವ ಮಹಾಚಾರ್ಯ

"ತಸ್ಯ ವಂಶೇ ಸಮುತ್ಪನ್ನೋ ಮುಕ್ತಾಮಣಿರಿವಾಮಲಃ
ಮುದ್ದ ದೇವಾಭಿಧಾಚಾರ್ಯೋ ಮೂರ್ಧನ್ಯಃ ಶಿವಯೋಗಿನಾಂ ।
ಮುದ್ದನಾತ್ ಸರ್ವಜಂತೂನಾಂ ಪ್ರಣತಾನಾಂ ಪ್ರಬೋಧತಃ
ಮುದ್ದದೇವ ಇತಿಖ್ಯಾತಾ ಸಮಾಖ್ಯಾ ಯಸ್ಯ ವಿಶ್ರುತಾ॥...."

ವೀರಶೈವ ವಿಖ್ಯಾತನಾದ ಶಿವಯೋಗಿಯ ವಂಶದಲ್ಲಿ ಅಂದರೆ ಶೀಳಿಗೆಯಲ್ಲಿ ಮುದ್ದ ದೇವಾಚಾರ್ಯನು ಮಹಾ ಶಿವಯೋಗಿಗಳಿಗೆ ಮೂರ್ಧನ್ಯನಾಗಿ ಮುನ್ನೀರಿನಲ್ಲಿ ಮುಕ್ತಾಮಣಿಯಂತೆ ಜನಿಸುವನು ನಿರ್ಮಳನಾಗಿ ! ಒಲವು ಚಲುವುಗಳ ಪ್ರತೀಕ ಆಚಾರ್ಯನ ಅಭಿಧೇಯ, ನಾಮ ಮಾತ್ರವಲ್ಲ, ಆತನ ಗುಣ ಸ್ವಭಾವಗಳೂ ಮುದ್ದಾಗಿದ್ದವು ; ಬುದ್ಧಿಭಾವಗಳೂ ಮುದ್ದಾಗಿದ್ದವು. ಅದರಿಂದ ಆಚಾರ್ಯನು ಸಕಲ ಜೀವಾತ್ಮರಿಗೆ ಲೇಸನೆಸಗುತ್ತಿದ್ದನು. ಶರಣಾಗತರಿಗೆಲ್ಲ ಪರಿಣಾಮಕಾರಿಯಾಗಿ ಪ್ರಬೋಧಿಸಿ ಸಂತಸಗೊಳಿಸುತ್ತಿದ್ದನು. ಇದರಿಂದ ಆಚಾರ್ಯನು ಎಲ್ಲೆಲ್ಲಿಯೂ ವಿಖ್ಯಾತನೂ ಎಲ್ಲರಲ್ಲಿಯೂ ಸಮಾಖ್ಯನೂ ಆಗಿದ್ದನು. ಹೆಸರಿನಂತೆ ಹೃದಯವೂ ದಯಾಮಯವಾಗಿದ್ದಿತು. ಮುದ್ದದೇವ ಶಿವಾಚಾರ್ಯರದು ಹೆಂಪುಳ್ಳ ಹೆಸರು ; ಹೊಂಪುಳಿಸುವ ಕಾರುಣ್ಯಕ್ರಿಯೆ ; ಹುಂಪಿಸುವ ಪ್ರಬೋಧ. ಅದರಿಂದಾಗಿ ಆಚಾರ್ಯರು ವಿಶ್ವತೋಮುಖವುಳ್ಳ ವಿಶ್ರುತರು ; ವಿಶಾರದರು. ಮುಕ್ತಾಮಣಿಯಂತೆ ಮೌಲ್ಯವುಳ್ಳವರು ; ಮೂರ್ಧನ್ಯರು ; ಆಚಾರ್ಯರು.

ಮುದ್ದದೇವ ಶಿವಾಚಾರ್ಯರಲ್ಲಿ ಮೂರು ಮುಖ್ಯ ಸಾಮರ್ಥ್ಯಗಳಿದ್ದವು. ಆಚಾರದಲ್ಲಿ ಬಲ್ಲಿದನಾಗಿ ಆಚಾರ್ಯನೆನಿಸಿದನು, ಶಿವಯೋಗ ಶಕ್ತಿ ಸಂಪನ್ನನಾಗಿ ಶಿವಯೋಗಿಜನಾಗ್ರಣಿಯಾದನು. ಸರ್ವ ಜೀವದಯಾಪಾರಿಯಾದನು. ಪ್ರಬೋಧ ಪ್ರವೀಣನೂ ಆಗಿ ಶಿವಾಚಾತ್ಯ ಸಂಸ್ಕೃತಿಯನ್ನು ಸಂವೃದ್ಧಿಸಿದನು. ಶಿವಯೋಗಿವರ್ಯನಾಗಿ ವೀರಶೈವವನ್ನು ವಿಶ್ರುತಗೊಳಿಸಿದನು. ಇವರ ಕಾಲ ಆರನೆಯ ಶತಮಾನದ ಕೊನೆಯಿಂದ ಏಳನೆಯ ಶತಮಾನದ ಪೂರ್ವಾರ್ಧವೆಂದೇ ಹೇಳಬೇಕು.

## ಶಿವಸಿದ್ಧಾಂತ ನಿರ್ಣೀತಾ ವೀರಶೈವ ಶಿವಾಚಾರ್ಯ ಸಿದ್ಧನಾಥ ಶಿವಾಚಾರ್ಯ

"ತಸ್ಯಾಸೀನ್ನಂದನಃ ಶಾಂತಃ ಸಿದ್ಧನಾಥಾಭಿಧಃ ಶುಚಿಃ
ಶಿವಸಿದ್ಧಾಂತ ನಿರ್ಣೇತಾ ಶಿವಾಚಾರ್ಯಃ ಶಿವಾತ್ಮಕಃ ।
ವೀರಶೈವಶಿಖಾರತ್ನಂ ವಿಶಿಷ್ಟಾಜ್ಞಾನಸಂಪದಂ
ಶಿವ ಜ್ಞಾನ ಮಹಾಸಿಂಧುಂ ಯಂ ಪ್ರಶಂಸಂತಿ ದೇಶಿಕಾಃ ।

ಯದಾಚಾರ್ಯಕುಲೇ ಜಾತಾ ಸತಾಮಾಚಾರ ಮಾತೃಕಾ
ಶಿವಭಕ್ತಿಃ ಸ್ಥಿರಾ ಯಸ್ಮಿನ್ ಜಜ್ಞೇ ವಿಗತ ವಿಪ್ಲವಾ ॥"

ಸಕಲ ಜೀವ ಕಾರುಣ್ಯದಲ್ಲಿ ಪ್ರಬುದ್ಧ ಪ್ರಬೋಧದಲ್ಲಿ ಶರಣಾಗತ ರಕ್ಷಣ ಕಾರ್ಯದಲ್ಲಿ ವಿಶ್ವವಿಶ್ರುತನಾದ ಮುದ್ದದೇವ ಮಹಾಚಾರ್ಯನ ನಂದನ ಸಿದ್ಧನಾಥ ಶಿವಾಚಾರ್ಯ ! ಶಾಂತನೂ ಶುಚಿಯೂ ಆಗಿದ್ದು ಶಿವಾತ್ಮಸ್ವರೂಪ ನಾಗಿದ್ದನು. ಅಂದರೆ ಶಿವಾತ್ಮವಿದ್ಯೆಯಲ್ಲಿ ವಿಶಾರದನಾಗಿದ್ದನು. ಮತ್ತು ಶಿವಸಿದ್ಧಾಂತ ನಿರ್ಣಾಯಕನು. ವೀರಶೈವ ಶಿರೋರತ್ನನು. ವಿಶಿಷ್ಟಾಚಾರ ಶ್ರೀಮಂತನು. ಶಿವಜ್ಞಾನ ಮಹಾಂಬುಧಿಯು ; ಎಂಬುದಾಗಿ ಅಂದಿನ ಗುರುವರ್ಯರು ಘನಗಂಭೀರವಾಗಿ ಪ್ರಶಂಸಿಸುತ್ತಿದ್ದರು. ಅಂತಹ ಆ ಮಹಾ ಚಾರ್ಯರ ವಂಶದಲ್ಲಿ ಶಿವಾಚಾರ ಮೂಲವು ಉತ್ಪತ್ತಿಗೊಂಡಿದೆ. ಮತ್ತು ಪ್ರಬುದ್ಧನಾದ ಸಿದ್ಧನಾಥ ಶಿವಾಚಾರ್ಯನಿಂದ ವೀರಶೈವ ಶಿವಭಕ್ತಿಯು ಯಾತ ಯಾವ ವಿಪ್ಲವವಿಲ್ಲದೆ (ಆಂದೋಳನವಿಲ್ಲದೆ) ಸ್ಥಿರವಾಗಿ ನಿಲ್ಲುವುದು. ಹೀಗಿರು ವಾಗ ಸಿದ್ಧನಾಥ ಶಿವಾಚಾರ್ಯನನ್ನು ಕುಡ ಒಕ್ಕಲಿಗರ ವಂಶದಲ್ಲಿ ಜನಿಸಿದ ಸಿದ್ಧರಾಮನೆಂದು ಹೇಳುವಲ್ಲಿ ಯಾವ ಆಧಾರವಿಲ್ಲ. ಶಿವಾಚಾರ್ಯ ವಂಶ ದವನೆಂಬುದನ್ನು ಗಮನಿಸದೆ ಕಲ್ಪಿಸಿದ ಕಥನವದು. ಸತ್ಯದ ಒರೆಗಲ್ಲಿಗೆ ಬಣ್ಣ ವೆಂದು ; ನಿಲ್ಲದು.

ಸಿದ್ಧನಾಥ ಶಿವಾಚಾರ್ಯನ ಕಾಲ ಏಳನೆಯ (೭) ಶತಮಾನ. ಆತನ ಕಾಲದಲ್ಲಿಯೆ ಆತನಿಂದ ಆಧುನಿಕ ವೀರಶೈವವು ಎಣೆಯಿಲ್ಲದ ಏಳ್ಗೆಯನ್ನು ಪಡೆದಿತ್ತು. ಅತ್ಯಂತ ಊರ್ಜಿತ ಸ್ಥಿತಿಗೆ ತಂದು "ವೀರಶೈವ ಶಿಖಾರತ್ನ"ನೆಂಬ, "ವಿಶಿಷ್ಟಾಚಾರ ಶ್ರೀಮಂತ"ನೆಂಬ, "ಶಿವಜ್ಞಾನ ಮಹಾಸಿಂಧು"ವೆಂಬ, "ಶಿವಭಕ್ತಿ ಪ್ರತಿಷ್ಠಾಪಕ"ನೆಂಬ, ಮಿಗಿಲಾಗಿ "ಶಿವಸಿದ್ಧಾಂತ, ನಿರ್ಣೀತ"ನೆಂಬ ಈ ಪಂಚ ಪ್ರಭುದ್ಧ ಪ್ರಶಸ್ತಿಗಳನ್ನು ಪಡೆದಿದ್ದನು. ಈ ವಿಶಿಷ್ಟ ವಿಶೇಷಣ ಗಳಿಂದ ಆತನ ನೀಳನಿಲವು ನಿದರ್ಶನಕ್ಕೆ ಬರುವುದಲ್ಲದೆ ಕ್ರಿ.ಶ. ೭ನೆಯ ಶತ ಮಾನದ ವೀರಶೈವ ವೈಭವವೂ ವೇದ್ಯವಾಗುತ್ತದೆ. ಆಚಾರ್ಯಕುಲದಲ್ಲಿ ಆಚಾರ ಮೂಲ (ಮಾತೃಕೆ) ಜನಿಸಿತೆಂದು ಹೇಳಿರುವುದರಿಂದ ಆ ಕಾಲಕ್ಕೇನೆ ಆಚಾರ್ಯವಂಶ ಅತ್ಯಂತವಾಗಿ ಬೆಳೆದು ಬಂದಿತ್ತೆಂಬ ಪರಿಭಾವನೆ ಪ್ರತಿಷ್ಠಿತ

ವಾಗುತ್ತದೆ. ಶಿವಭಕ್ತಿ ರಕ್ಷಣೆಯೂ ಅಂದೇ ಶಿವಾಚಾರ್ಯನಿಂದಾಯಿತಲ್ಲದೆ ವೀರಶೈವ ಸಿದ್ಧಾಂತದ ನಿರ್ಣಯವೂ ಅಂದೇ ಆಗುವುದು. ಹೀಗಿರುವಾಗ ವೀರಶೈವ ನಿರ್ಣಯ ಇತ್ತೀಚಿನದೆಂದು ಇನಿತೂ ಯೋಚನೆಯಿಲ್ಲದೆ ಇತ್ತಂಡ ವಾದ ಮಾಡುವವರು ಇನ್ನಾದರೂ ಇದನರಿವ ಮನಸ್ಸು ಮಾಡುವರೆಂದು ಭಾವಿಸೋಣವೆ ?

ವೀರಶೈವೇತಿಹಾಸದಲ್ಲಿ ೭ನೆಯ ಶತಮಾನದ ಸಿದ್ಧನಾಥ ಶಿವಾಚಾರ್ಯನ ಸ್ಥಾನ ಮಾನಗಳು ವ್ಯೋಮದೆತ್ತರದವು. ಆತನು ಕೇವಲ ಶಾಂತಿಕಳಾನ್ವಿತ ನಾಗಿರಲಿಲ್ಲ ; ಜೊತೆಗೆ ಸರ್ವತೋಮುಖವಾದ ಸತ್ವಗತಿಯನ್ನುಂಟು ಮಾಡುವ ಸಾಮಾಜಿಕ ಸಂಸ್ಕೃತಿ ಕಳಾನ್ವಿತನೂ ಆಗಿದ್ದನು. ಅಂತೆಯೇ ನಿರ್ಮಳಜೀವಿ ; ನಿತ್ಯ ಶಿವಾತ್ಮ ಜೀವಿ. ಶಿವಾತ್ಮ ವಿದ್ಯೆಯಲ್ಲಿ ಆತನನ್ನು ಮೀರುವವರಿರಲಿಲ್ಲ. ಇದರಿಂದಾಗಿ ಶ್ರೀ ವೀರಶೈವ ಸಿದ್ಧಾಂತವನ್ನು ನಿರ್ಣಯಿಸಲು ಸರ್ವಸಮರ್ಥ ನಾದನು. ವಿಶಿಷ್ಟ ವೀರಶೈವೀಯ ಕ್ರಿಯೆಯೆ ಆತನ ಸಂಪತ್ತು. ವಿಶಿಷ್ಟಾ ಚಾರಗಳ ಅನುಷ್ಠಾನದಲ್ಲಿ ನಿರಂತರ ನಿರತ. ಕೊರತೆಯ ಮಾತಿಲ್ಲ. ಆತನದು ಅಸೀಮಿತ ಶಿವಜ್ಞಾನ ; ಅತ್ಯಂತ ಆಳವಾದ ಶಿವಜ್ಞಾನ. ಹಾಗು ಶಿವಾನು ಭವ. ಸರ್ವಾಚಾರಗಳ ಮೂಲಕ್ಕೆ ಮಾತೃಕೆಗೆ ಆತನ ಆ ಪರಂಪರೆಯ ಆಚಾರ್ಯ ಕುಲವೆ (ಗುರುಕುಲವೆ) ಆದಿ ಆಧಾರ. **"ಆಚಾರ್ಯಕುಲೇ ಜಾತಾ ಆಚಾರ ಮಾತೃಕಾ"** ಮತ್ತು "ವಿಗತವಿಪ್ಲವಾ ಶಿವಭಕ್ತಿ ; ಸ್ಥಿರಾ" ಎಂಬೀ ಅರ್ಥ ವತ್ತಾದ ಉಕ್ತಿಗಳು ರತ್ನಾಕ್ಷರಗಳಿಂದ ರೂಪಿಸತಕವುಗಳು. ಆಚಾರ ಪ್ರಧಾನ ವಾದ ವೀರಶೈವ ವೈಭವ ಕಾರಣಗಳು. ಈ ಮೂರು ಸರ್ವೋತ್ತಮ ಶ್ಲೋಕ ಗಳು ಸಿದ್ಧನಾಥ ಶಿವಾಚಾರ್ಯನ ಮತ್ತು ವೀರಶೈವದ ವಿಶಿಷ್ಟವ್ಯಕ್ತಿತ್ವಕ್ಕೆ ವಿಶಿಷ್ಟ ಚಾರಿತ್ರಕ್ಕೆ ಎತ್ತಿಹಿಡಿದ ನಿಲುಗನ್ನಡಿಗಳು. ನಿಜಕ್ಕೂ ನಂದನ ಎಂಬ ಪದ ಪ್ರಯೋಗ ಸರ್ವಾರ್ಧದಲ್ಲಿ ಸಾರ್ಥಕ-ಸಮರ್ಪಕ ! ಆ ಸಿದ್ಧನಾಥ ಶಿವಾಚಾರ್ಯನ ಜೀವನವೇ ಒಂದು ನಂದನವನ ! ಅದರಲ್ಲಿ ಶಾಂತಿ, ಶುಚಿ, ಶಿವಾತ್ಮತೆ, ವಿಶಿಷ್ಟಾಚಾರ, ಶಿವಜ್ಞಾನ, ಶಿವಾಚಾರ, ಶಿವಭಕ್ತಿ ; ಶಿವಸಿದ್ಧಾಂತಗಳೆಂಬ ಸುರತರು-ಸುರಲತೆಗಳು ಪರಿಮಳ ಪುಷ್ಪ-ಪರಿಣತ ಫಲಗಳಿಂದ ಭರಿತವಾಗಿ ನಿಂತಿವೆ ; ಪರಿಣಾಮಕಾರಿಗಳಾಗಿ ಪರಿಣಮಿಸಿವೆ. ಸಿದ್ಧನಾಥ ಶಿವಾಚಾರ್ಯನ ವಿಶಿಷ್ಟಾಚಾರ ಸಂಪತ್ತಿಯಿಂದ ಸುಪ್ತ ಚಿತ್ತ ಚೇತನಗೊಳ್ಳುತ್ತಿತ್ತು: ಶಿವಜ್ಞಾನ

ಮಹಾ ಅಮೃತ ರಸಕಿರಣಗಳಿಂದ ಸುಪ್ತ ಬುದ್ಧಿ ಸಂವರ್ಧನಗೊಳ್ಳುತ್ತಿತ್ತು. ಆತನ ಆ ಶಾಂತಕಳಾಮೃತದಿಂದ ವೀರಶೈವರ ತಪ್ತ ಹೃದಯ ಸಾಂತ್ವನ ಶೀಲವಾಗುತ್ತಿತ್ತು. ಆತನ ಆ ಶಿವಸಿದ್ಧಾಂತ ನಿರ್ಣಯದಿಂದ ಚಿದಾನಂದ ಧ್ಯೇಯ ನಿತ್ಯಪೂರ್ಣಗೊಳ್ಳುತ್ತಿತ್ತು. ಆತನಿಂದ ನಿಷ್ಕಂಟಕವ ಸ್ಥಿರವೂ ಆದ ಶಿವಭಕ್ತಿ ಪರಾಶಕ್ತಿ ಪ್ರಾಪ್ತಿಗೆ ಕಾರಣವಾಗಿರುತ್ತಿತ್ತು. ಆತನ ಆ ನಿರ್ಮಲ ಶಿವಾತ್ಮತೆಯಿಂದ ಶ್ರೇಯ ಅಭ್ಯುದಯಗಳು ಲಭ್ಯವಾಗುತ್ತಿದ್ದವು. ಇವೆಲ್ಲ ಪರಮ ಪ್ರಯೋಜನಗಳಿಂದ ಸಿದ್ಧನಾಥ ಶಿವಾಚಾರ್ಯನು **"ವೀರಶೈವ ಶಿಖಾರತ್ನ"** ನೆಂಬುದಾಗಿ ಅಸಾಧಾರಣ ಪ್ರಶಸ್ತಿಯನ್ನು ಪಡೆದನು,

**ಶಿವಸಿದ್ಧಾಂತ ನಿರ್ಣೀತ :** ಇದನ್ನು ಗಂಭೀರವಾಗಿ ಗಮನಿಸಬೇಕು. ಏಳನೆಯ ಶತಮಾನದಲ್ಲಿ ಇತರ ಸಿದ್ಧಾಂತಗಳು ಶಿವಾದ್ವೈತಸಿದ್ಧಾಂತದ ಮೇಲೆ ಮಬ್ಬು ಮುಸುಗುವಂತೆಸಗಿದ್ದವು. ಅಲ್ಲದೆ ಶಿವಾದ್ವೈತಸಿದ್ಧಾಂತ ಸ್ಥಾಪಕರಾದ ಆದಿರೇಣುಕ ಶಿವಾಚಾರ್ಯರು ಅವತರಿಸಿ ಹೋಗಿ ಸು. ಮೂರು ಸಾವಿರ ವರುಷಗಳಾಗಿದ್ದವು. ಚಲನ ಶಕ್ತಿ ಕುಂಠಿತವಾಗಿದ್ದಿತು. ಇದರಿಂದಾಗಿ ಪರಶಿವ ತತ್ತ್ವಸಿದ್ಧಾಂತ ನಿರ್ಣಯ ಮಾಡಬೇಕಾದ ವಾತಾವರಣ ಕ್ರಿ.ಶ. ಏಳನೆಯ ಶತಮಾನದಲ್ಲಿ ಸಾಮಾಜಿಕ ಕ್ಷೇತ್ರದಲ್ಲಿ ಸಹಜವಾಗಿದ್ದಿತು. ಈ ಕಾರ್ಯವನ್ನು ಸರ್ವಸಮರ್ಥರಾದ ಶ್ರೀ ಸಿದ್ಧನಾಥ ಶಿವಾಚಾರ್ಯರು ನೆರವೇರಿಸುವರು ವಿಶಿಷ್ಟ ಶಿವಾಚಾರ–ಶಿವಜ್ಞಾನ–ಶಿವಾತ್ಮತೆಯುಳ್ಳವರಾಗಿದ್ದರಿಂದ ಅವರಿಂದ ಸಾಧ್ಯವಾಯಿತು. ಜೊತೆಗೆ ನಶಿಸುತ್ತಿದ್ದ ಶಿವಭಕ್ತಿಯನ್ನು ಇನ್ನಳಿಯಲಾರ ದೆಂಬ ಭಯವಿಲ್ಲದೆ ಬಗೆಯಲ್ಲಿ ಸುಸ್ಥಿರಗೊಳಿಸಿದರು. ಆಚಾರ ಶಿವಾಚಾರ ಶಿವಾಚಾರ್ಯ (ಗುರು) ಕುಲದಲ್ಲಿ ಹುಟ್ಟುದಳೆದು ಬಂದಿದೆಯೆಂದು ಬಿತ್ತರಿಸಿ ದರು. ಇವೆಲ್ಲದರ ಪ್ರಕೃಷ್ಟ ಫಲವಾಗಿ ಶ್ರೀ ಸಿದ್ಧನಾಥ ಶಿವಾಚಾರ್ಯರು "ವೀರಶೈವ ಶಿಖಾರತ್ನ"ರೆಂಬ ಪ್ರಶಂಸೆಗೆ ಪಾತ್ರರಾದರು. ಅಂದಿನ ಅಸಂಖ್ಯ ದೇಶಿಕರು–ಬೋಧದೀಪಕರು ಹೃದಯಾರೆ ಹೊಗಳಿದರು. ಈ 'ವೀರಶೈವ ಶಿಖಾರತ್ನ, ಎಂಬ ಸೊಳ್ನುಡಿಯನ್ನು ಮುಂದಿನ ಶ್ಲೋಕದಲ್ಲಿ ಇನ್ನೂ ಮತ್ತೂ ಸ್ಪಷ್ಟಗೊಳಿಸಲಾಗಿದೆ.

ಏಳನೆಯ ಶತಮಾನದಲ್ಲಿ ಶಿವಾಚಾರ್ಯಸಂಕುಳಕ್ಕೆ ತನ್ನ ಪರಮ ಪ್ರತಿ ಭಾನ್ವಿತ ಪ್ರಭಾವದಿಂದ ವಿಶಾಲಕೀರ್ತಿಯನ್ನು ತಂದು ವೀರಶೈವ ಧರ್ಮಕ್ಕೆ

ನಿಡಿದಾದ ನೆಲೆ ಬೆಲೆ ಕಲೆಗಳನ್ನು ತಂದು ಹೋದ ಶ್ರೀ ಸಿದ್ಧನಾಥ ಶಿವಾಚಾರ್ಯ ರನ್ನು ನಾವೆಂದಿಗೂ ಮರೆಯಲು ಸಾಧ್ಯವಿಲ್ಲ ; ಈ ಒಳಕ್ಕೆ ಮರೆತಿರುವುದೇ ಸಾಕಾಗಿದೆ. ಸಾಕಷ್ಟು ಮನೋವ್ಯಥೆಗೀಡು ಮಾಡಿದೆ. ಇಂದಿನ ಈ ಅರಿವಿ ಯಿಂದ ಮುಂದೆ ಹರವಾಗಿಸಿ ಹರುಷಿಸೋಣ ! ಆಧುನಿಕ ವೀರಶೈವದ ಇತಿಹಾಸ ಕ್ಷೇತ್ರದಲ್ಲಿ **"ವೀರಶೈವ ಶಿಖಾರತ್ನ"** ಎಂಬ ಪ್ರಶಂಸೆಯನ್ನು ಪಡೆ ದಾತನೊಬ್ಬನೇ ಶ್ರೀ ಸಿದ್ಧನಾಥ ಶಿವಾಚಾರ್ಯನೆಂದು ಉಲ್ಲಾಸ ಉಕ್ಕಿ ಉಗ್ಗಡಿ ಸೋಣ !! ಉತ್ಕಂಠರಾಗೋಣ !! ಉತ್ತೇಜಿತರಾಗೋಣ !!!

**ಚಿದಾನಂದ ಪರಾಕಾಶ ಶಿವಾನುಭವಯೋಗಿ,**

**ಶ್ರಿ ಮಹಾ ವೀರಶೈವ ಧರ್ಮ ಮಾರ್ಗ ಪ್ರವರ್ತಕ ;**

**ಶಿವಯೋಗಿ ಶಿವಾಚಾರ್ಯ !**

"ತಸ್ಯ ವೀರಶಿವಾಚಾರ್ಯ ಶಿಖಾರತ್ನಸ್ಯ ನಂದನಃ
ಅಭವಚ್ಛಿವಯೋಗೀತಿ ಸಿಂಧೋರಿವ ಸುಧಾಕರಃ।
ಚಿದಾನಂದ ಪರಾಕಾಶ ಶಿವಾನುಭವಯೋಗತಃ
ಶಿವಯೋಗೀತಿ ನಾಮೋಕ್ತಿರ್ಯಸ್ಯ ಯಾಥರ್ಥ್ಯಯೋಗಿನಿ ॥

ಶಿವಾಗಮ ಪರಿಜ್ಞಾನ ಪರಿಪಾಕಸುಗಂಧಿನಾ
ಯದೀಯಕೀರ್ತಿಪುಷ್ಪೇಣ ವಾಸಿತಂ ಹರಿತಾಂ ಮುಖಂ ।
ಯೇನ ರಕ್ಷಾವತೀ ಜಾತಾ ಶಿವಭಕ್ತಿಃ ಸನಾತನೀ
ಚೌದ್ಧಾದಿ ಪ್ರತಿಸಿದ್ಧಾಂತ ಮಹಾಧ್ವಾಂತಾಂಶು ಮಾಲಿನಾ ॥

ಸ ಮಹಾವೀರಶೈವಾನಾಂ ಧರ್ಮಮಾರ್ಗ ಪ್ರವರ್ತಕಃ
ಶಿವ ತತ್ತ್ವ ಪರಿಜ್ಞಾನ ಚಂದ್ರಿಕಾವ್ಯತ ಚಂದ್ರಮಾಃ ।...."

ಶಿವಯೋಗಿ ಶಿವಾಚಾರ್ಯನ ಗುರು ತಂದೆ ಬರೀ 'ವೀರಶೈವ ಶಿಖಾರತ್ನ' ನಾಗಿರಲಿಲ್ಲ ; ಜೊತೆಗೆ "ವೀರ ಶಿವಾಚಾರ್ಯ ಶಿಖಾರತ್ನ"ನೂ ಆಗಿದ್ದನು. ವೀರ ಶಿವಾಚಾರ್ಯ ಪದ ದ್ವಂದ್ವಾರ್ಥವುಳ್ಳದಾಗಿದೆ. ವೀರಶೈವ ಶಿವಾಚಾರ್ಯ— ಎಂತಲೂ, ವೀರ ಮಾಹೇಶ್ವರ-ಎಂತಲೂ, ವೀರೇಶ ಸಂಪ್ರದಾಯದ ಶಿವಾ ಚಾರ್ಯ-ಎಂತಲೂ ಅರ್ಥಗಳಾಗುತ್ತವೆ. ಈ ಎಲ್ಲ ಅರ್ಥಗಳು ಸಿದ್ಧನಾಥ

ಶಿವಾಚಾರ್ಯನಿಗೆ ಸಲ್ಲುವಂತಿವೆ. ವೀರಶಿವಾಚಾರ್ಯ ಸಂಪ್ರದಾಯವೊಂದಿತ್ತೆಂದು ವ್ಯಕ್ತವಾಗುತ್ತದೆ. ಅಂತಹ ಸಿದ್ಧನಾಥ ಶಿವಾಚಾರ್ಯನ ನಂದನನು (ಸತ್ಪುತ್ರನು) ಶಿವಯೋಗಿಯು. ಈತನು ಸಿಂಧುವಿನಲ್ಲಿ ಜನಿಸಿದ ಸುಧಾಕರ(ಚಂದ್ರ)ನಂತಿದ್ದನು. ಸಿದ್ಧನಾಥ ಶಿವಾಚಾರ್ಯನೂ ಆಚಾರ ವಿಚಾರಾನುಭವಗಳಿಗೆ ಮತ್ತು ಕಾರುಣ್ಯರಸಕ್ಕೆ ಸಮುದ್ರದಂತಿದ್ದನು. ಅವನಿಂದ ಜನಿಸಿದ ಶಿವಯೋಗಿ ಶಿವಾಚಾರ್ಯನೂ ಶಾಂತಿ ಕಾಂತಿಗಳಿಂದ ಶಿವಸಿದ್ಧಾಂತ ಪ್ರಕಾಶದಿಂದ ಪೂರ್ಣ ಚಂದ್ರನಂತಿದ್ದನು. ಅಂತೆಯೇ ಆತನ ಹೆಸರು ಚಿದಾನಂದ ಪರಾಕಾಶ ಶಿವಾನ ಭವಯೋಗದಿಂದ ಯಥಾರ್ಥವಾಗಿದ್ದಿತು. ಶಿವಾನುಭವ ಯೋಗಕ್ಕಿಂತ ಶಿವ ಯೋಗ ಬೇರೆಯಿಲ್ಲ. ಅಂಕಿತನಾಮವನ್ನು ಅನ್ವರ್ಥಕವಾಗಿಸಿಕೊಂಡ ಶಿವಾ ಚಾರ್ಯನಿಗೆ ಶಿವಯೋಗ ಯಥಾರ್ಥಯೋಗವಾಗಿದ್ದಿತು. ಶಿವಾನುಭವ ಯೋಗ ದಿಂದ ಇನ್ನೂ ಮುಮ್ಮಿಗಿಲಾದ ಮೆರಗುವೊದಗಿದ್ದಿತು. ಸಾಲದಕ್ಕೆ ಆತನ ಆ ಶಿವಾನುಭವಯೋಗ ಸಾಮಾನ್ಯದ್ದಾಗಿರಲಿಲ್ಲ ; ಚಿದಾನಂದ ಪರಾಕಾಶ ಪರಶಿವ ಸ್ವರೂಪದ್ದಾಗಿದ್ದಿತು. ಇದರಿಂದ ಆತನ ಅನುಭವಯೋಗ ಅನನ್ಯ ಸಾಧಾರಣ ವಾಗಿದ್ದಿತು. ವೀರಶೈವೇತಿಹಾಸದಲ್ಲಿ "ಚಿದಾನಂದ ಪರಾಕಾಶ ಶಿವಾನುಭವ ಯೋಗ"ವುಳ್ಳವರಿನ್ನೊಬ್ಬರು ಇಂದಿಗೂ ಯಾರು ಆಗಿಲ್ಲ.

ಈ ದಿಸೆಯಲ್ಲಿ ಶಿವಯೋಗಿ ಶಿವಾಚಾರ್ಯರು ಪ್ರಪ್ರಥಮಿಗರು ಮತ್ತು ಪ್ರಬುದ್ಧರು. ಇವರಿಂದ ಆಧುನಿಕ ವೀರಶೈವಕ್ಕೆ ಅತ್ಯಧಿಕ ಕೀರ್ತಿ ಅಳವಟ್ಟಿದೆ. ಆ ಕೀರ್ತಿ ಅಷ್ಟಿಷ್ಟಲ್ಲ. ಅದು ದಿಗಂತ ಕೀರ್ತಿ. ಹತ್ತು ದಿಕ್ಕುಗಳನ್ನು ದಿವ್ಯ ಪರಿಮಳ ವಿಶಿಷ್ಟವನ್ನಾಗಿ ಮಾಡಿದ ಮಹಾಕೀರ್ತಿ ಶಿವಾಚಾರ್ಯನದು. ಅಂತಹ ಅಸಾಧಾರಣ ಕೀರ್ತಿ ಕುಸುಮ. ಅದು ಶಿವಾಗಮಗಳ ಪರಿಜ್ಞಾನದಿಂದ ಪರಿ ಪಾಕಗೊಂಡ ಪರಿಮಳ. ಪರಮ ಪರಿಣಾಮಕಾರಿಯಾದ ಶಿವಾಚಾರ್ಯನ ಶಿವಾಗಮಪರಿಜ್ಞಾನದಿಂದ ಪರಿಪಾಕಗೊಂಡ ಕೀರ್ತಿಕುಸುಮಪರಿ ಮಳವೆಂದರೆ ಅದಕೊಂದು ಸಾಟಿಯಿಲ್ಲ. ಆತನ ಆ ಕೀರ್ತಿ ಕುಸುಮ ಅಷ್ಟೊಂದು ಬೃಹತ್ತಾಗಿತ್ತು ; ಶಿವಾಗಮ ಪರಿಜ್ಞಾನ ಪರಿಪಾಕದಿಂದ ಮಹತ್ತಾಗಿತ್ತು. ಅಂತಾಗಲು ಅದಕ್ಕೆ ತಕ್ಕ ಹಿನ್ನೆಲೆಯಿದ್ದಿತು. ಆತನ ಗುರುಜನಕನು ಶಿವಜ್ಞಾನ ಮಹಾಸಿಂಧು, ವೀರಶೈವ ಶಿಖಾರತ್ನ ಮತ್ತು ವೀರಶಿವಾಚಾರ್ಯ ಶಿಖಾರತ್ನ, ಶಿವ ಸಿದ್ಧಾಂತ ನಿರ್ಣಾಯಕನಾಗಿದ್ದನೆಂಬುದನ್ನರಿತಿದ್ದೇವೆ. ಅಂತಹ ಮಹಾ

ಗುರುಜನಕನ ಶೈಕ್ಷಣಿಕ ಸಂಸ್ಕಾರದಿಂದ ಪರಿಪಕ್ವಗೊಂಡಿದ್ದಿತು, ತಂದೆಯ ವಿಶಿಷ್ಟಾಚಾರ ವಿಚಾರ ಸಂಪತ್ಸಂಗಮದಿಂದ ಆತನ ಕಾರುಣ್ಯ ಕಂದನಾದ ಶಿವಯೋಗಿ ಶಿವಾಚಾರ್ಯನಲ್ಲಿ ಇಮ್ಮಡಿ ಮುಮ್ಮಡಿ ಸೂರ್ಮಡಿ ನಿಡಿದಾಗಿ 'ಚಿದಾನಂದ ಪರಾಕಾಶ ಶಿವಾನುಭವಯೋಗ'ವಾಗಿ ಪರಿಪೂರ್ಣ ಚಿಚ್ಚಂದ್ರನಾಗಿ ಬೆಳ್ಳಂಬೆಳದಿಂಗಳಾಗಿ ಬೆಳಗಿದ್ದನು. ಮತ್ತು ಸರ್ವ ಶಿವಾಗಮಗಳ ಅಧ್ಯಯನ ಚಿಂತನಗಳಿಂದುಂಟಾದ ಪರಮ ಪರಿಜ್ಞಾನವು ಪರಿಪಾಕಗೊಂಡು ಹತ್ತು ದಿಕ್ಕುಗಳಿಗೆ ಪರಿಮಳ ಬೀರಿದ ಜೀವಂತ ಮಹಂತ ಕೀರ್ತಿ ಕುಸುಮವಾಗಿದ್ದನು. ವೀರಶೈವ ವ್ಯೋಮದಲ್ಲಿ ಏಕೈಕ ಚಿಚ್ಚಂದ್ರನೂ ವೀರಶೈವ ವಿಶ್ವದಲ್ಲಿ ಏಕೈಕ ಶಿವಾಗಮ ಪರಿಜ್ಞಾನ ಪರಿಪಾಕದಿಂದ ಪರಿಮಳಿತ ಜೀವಂತ ಕೀರ್ತಿ ಪುಷ್ಪನೂ ಆದ ಶಿವಯೋಗಿ ಶಿವಾಚಾರ್ಯನ ಆ ಮಹಾ ವ್ಯಕ್ತಿತ್ವ ಪರಾಕಾಶದಷ್ಟು ಎತ್ತರ-ಬಿತ್ತರ. ಮತ್ತು ಮಹತೋಮಹಿಯಾನ್ ಚಿದಾನಂದ ಚೇತನ. ಅಂತಹ ಶಿವಕವಿ-ಶಿವಾನುಭಾವಿ ಶಿವಯೋಗಿ ಶಿವಾಚಾರ್ಯನು ಸನಾತನ ಶಿವಭಕ್ತಿಯನ್ನು ಬೌದ್ಧಾದಿ ಪ್ರತಿ ಸಿದ್ಧಾಂತಗಳಿಂದ ರಕ್ಷಿಸಿರುವಲ್ಲಿ ಅಚ್ಚರಿಯೇನಿಲ್ಲ ; ಅಗಾಧವೇನಲ್ಲ. ಹಾಗು ಮಹಾವೀರಶೈವರಿಗೆ ವೀರಶೈವ ಧರ್ಮಮಾರ್ಗ ಪ್ರವರ್ತಕನೂ ಶಿವತತ್ತ್ವ ಪರಿಜ್ಞಾನ ಪ್ರಕಾಶಕನೂ ಆಗಿದ್ದುದು ಅಷ್ಟೇ ಸಹಜ ; ಸರ್ವಾದರ್ಶ !

ಶಿವಭಕ್ತಿ ಸನಾತನೀ ಎಂದು ಹೇಳಿ, ಇದಕ್ಕೆ ಬೌದ್ಧಾದಿ ಪ್ರತಿ ಸಿದ್ಧಾಂತಗಳೆಂಬಮಹಾಧ್ವಾಂತ ('ಮಹಾಂಧಕಾರ') ಆವರಿಸಿರುವುದನ್ನು ಶಿವಯೋಗಿ ಶಿವಾಚಾರ್ಯರೆಂಬ ಸಹಸ್ರ ಕಿರಣಗಳುಳ್ಳ ಸೂರ್ಯನಂತಿರುವವರಾಗಿ ನಿವಾರಿಸಿ ಕಾಪಿಟ್ಟರೆಂಬುದು ಮನನೀಯವಾದುದಾಗಿದೆ. ಇದಲ್ಲದೆ ಅಂದಿನ ಮಹಾವೀರಶೈವರಿಗೆಲ್ಲ ಮಾರ್ಗದರ್ಶಕನೂ ಶಿವತತ್ತ್ವ ಪರಿಜ್ಞಾನಕ್ಕೆ ಪೂರ್ಣ ಚಂದಿರನೂ ಆಗಿದ್ದನಂತೆ ! ಇದರಿಂದ ಶಿವಯೋಗಿ ಶಿವಾಚಾರ್ಯನೊಬ್ಬ ಸಾಮಾಜಿಕ ಸೋಜ್ವಲ ಕ್ರಾಂತಿಕಾರಿಯಾಗಿದ್ದನೆಂಬುದು ನಿತರಾಂ ನಿರ್ದಿಷ್ಟವಾಗುತ್ತದೆ. ಕ್ರಿ. ಶ. ೭-೮ ಶತಮಾನಗಳ ಸಾಮಾಜಿಕ ಸ್ಥಿತಿ ಗತಿಗಳು ತೀರ ಚಿಂತಾಜನಕವಾಗಿರಲು ಬೌದ್ಧಾದಿ ವಿರೋಧಿ ಸಿದ್ಧಾಂತಗಳ ಪ್ರಾಬಲ್ಯ ಹೆಚ್ಚಾಗಿದ್ದಿರಬೇಕು. ಅವನ್ನೆಲ್ಲ ಪ್ರತಿಭಟಿಸಿ ಪರಿಹರಿಸುವ ಕ್ರಾಂತಿ ಪಥದಲ್ಲಿ ಶಿವಾಚಾರ್ಯನು

ಮುನ್ನಡೆದು ಗೆಲುವು ಗಳಿಸಿದ ಚಾರಿತ್ರವನ್ನು ರೂಪಿಸಿ ಅದನ್ನು ಸೂತ್ರಪ್ರಾಯ ವಾಗಿ ಈ ಎರಡು ಶ್ಲೋಕಗಳ ಮೂಲಕ ನಿರೂಪಿಸಿದ್ದಾನೆ.

ಶಿವಯೋಗಿ ಶಿವಾಚಾರ್ಯನ ಶೈಕ್ಷಣಿಕ ಸೇವೆಯ ಕಾರ್ಯಕ್ಷೇತ್ರ ಸಾಲೋಟಗಿ ಅಥವಾ ಸಾಲವಟ್ಟಿಗೆ ! ಇದು ನಾಡಿನ ವಿಜಾಪುರ ಜಿಲ್ಲೆಯ ಇಂಡಿ ತರಂ ಅಂದರೆ ತಾಲೂಕಿನ ಒಂದು ಚಿಕ್ಕ ಊರು. ಊರು ಚಿಕ್ಕದಾದರೂ ಹೆಸರು ಚಿಕ್ಕದಲ್ಲ. ಇದು ಕ್ರಿ. ಶ. ೭-೮ನೆಯ ಶತಮಾನದಷ್ಟು ಪುರಾತನತೆಯಿದೆ. ಇದಕ್ಕೊಂದು ಐತಿಹಾಸಿಕವೂ ಶೈಕ್ಷಣಿಕವೂ ಆದ ಚಾರಿತ್ರವಿದೆ. ಆ ಕಾಲದಲ್ಲಿ ಆ ಊರಲ್ಲಿ ಒಂದು ವಿಶಿಷ್ಟವಾದ ವಿಶ್ವವಿದ್ಯಾನಿಲಯವಿದ್ದಿತು. ಅದರಲ್ಲಿ ಅಯ್ದುನೂರು ಮಂದಿ ಅಧ್ಯಾಪಕರಿದ್ದರು. ಅವರಿಗೆಲ್ಲ ಪ್ರಧಾನಾಧ್ಯಾಪಕ ರಾಗಿದ್ದು ಕುಲಪತಿಯೆನಿಸಿದ್ದರು ಶಿವಕವಿ ಶಿವಯೋಗಿ ಶಿವಾಚಾರ್ಯರು. ಶಿವ ಕವಿಯಾಗಿದ್ದಂತೆ ಶ್ರೇಷ್ಠ ಶಿವಾನುಭಾವಿಯೂ ಆಗಿದ್ದರು. ಅವರಿಗೆ ಸರ್ವ ಶಿವಾಗಮ ಪರಿಜ್ಞಾನ ಸಾಕಷ್ಟಿದ್ದಿತು. ಅಂತೆಯೇ ಶಿವತತ್ತ್ವ ಪರಿಜ್ಞಾನ ವೆಂಬ ಚಂದ್ರಿಕೆಯುಳ್ಳ ಚಂದ್ರನಂತಿದ್ದರು. ಮತ್ತು ಮಹಾವೀರಶೈವರಿಗೆ ಧರ್ಮಮಾರ್ಗ ಪ್ರವರ್ತಕರಾಗಿದ್ದರು. ಸಾಲೋಟಗಿ ವಿಶ್ವವಿದ್ಯಾನಿಲಯವನ್ನು ತಮ್ಮ ಕರ್ತೃತ್ವ ಶಕ್ತಿಯಿಂದ ಉನ್ನತೋನ್ನತ ಸ್ಥಿತಿಗೆ ತರುವರು. ಅದರ ಫಲ ವಾಗಿ ಅದು ಆಗ “ದಕ್ಷಿಣದ ತಕ್ಷಶಿಲೆ” ಎಂದು ಹೆಸರಾಗಿದ್ದಿತು. ಶಿವಯೋಗಿ ಶಿವಾಚಾರ್ಯನು ಮಹಾವೀರಶೈವರಿಗೆ ಧರ್ಮಮಾರ್ಗ ಪ್ರವರ್ತಕನಾಗಿ ಅಸದೃಶ ಸಾಮಾಜಿಕ ಸೇವೆ ಸಲ್ಲಿಸಿದಂತೆ ; ಅಯ್ದುನೂರು ಶಿಕ್ಷಕರಿಗೂ ಅಸಂಖ್ಯ ವಿದ್ಯಾರ್ಥಿಗಳಿಗೂ ಶಿಕ್ಷಣ ಮಾರ್ಗ ದರ್ಶಕನಾಗಿ ಆದರ್ಶ ಶೈಕ್ಷಣಿಕ ಸೇವೆ ಸಲ್ಲಿಸಿದ ಅನುಪಮ ಕೀರ್ತಿ ಶಿವಾಚಾರ್ಯನದಾಗಿದೆ. ಇವೆರಡಕ್ಕೂ ಮಿಗಿಲಾಗಿ “ಸಿದ್ಧಾಂತ ಶಿಖಾಮಣಿ”ಯೆಂಬ ಹೆಸರಿನಲ್ಲಿ ರೇಣುಕಾಗಸ್ತ್ಯ ಸಂವಾದದಲ್ಲಿ ರೇಣುಕ ಗೀತೆ ಯನ್ನು ರಚಿಸಿ ಸೈದ್ಧಾಂತಿಕ ಸಾಹಿತ್ಯ ಸೇವೆಯನ್ನು ಸಂಸ್ಕೃತದಲ್ಲಿ ಪ್ರಬುದ್ಧವಾಗಿ ಮಾಡಿದ ಮತ್ತೊಂದು ಮಹಾಕೀರ್ತಿ ಆತನದಾಗಿದೆ.

“ಆಲೋಕ್ಯ ಶೈವ ತಂತ್ರಾಣಿ ಕಾಮಿಕಾದ್ಯಾನಿ ಸಾದರಂ
ವಾತುಲಾಂತಾನಿ ಶೈವಾನಿ ಪುರಾಣಾನ್ಯಖಿಲಾನಿ ತು ।
ವೇದ ಮಾರ್ಗಾ ವಿರೋಧೇನ ವಿಶಿಷ್ಟಾಚಾರ ಸಿದ್ಧಯೇ
ಅಸನ್ಮಾರ್ಗ ನಿರಾಸಾಯ ಪ್ರಮೋದಾಯ ವಿವೇಕಿನಾಂ ॥

ಸರ್ವಸ್ವಂ ವೀರಶೈವಾನಾಂ ಸಕಲಾರ್ಥಂ ಪ್ರಕಾಶಕಂ
ಅಸ್ಪೃಷ್ಟಮುಖಿಲೈರ್ದೋಷೈರಾದೃತಂ ಶುದ್ಧಮಾನಸೈಃ ।
ವೀರಶೈವ ಮಹಾತಂತ್ರ ಮೇಕೋತ್ತರ ಶತಸ್ಥಲಂ
ಅನುಗ್ರಹಾಯ ಲೋಕಾನುಮಭ್ಯಧಾತ್ ಸುಧಿಯಾಂ ವರಃ ॥

ಸರ್ವೇಷಾಂ ಶೈವತಂತ್ರಾಣಾಮುತ್ತರತ್ವಾನ್ನಿರುತ್ತರಂ
ನಾಮ್ನಾ ಪ್ರತೀಯತೇ ಲೋಕೇ ಯತ್ಸಿದ್ಧಾಂತ ಶಿಖಾಮಣಿಃ ।
ಅನುಗತ ಸಕಲಾರ್ಥೇ ಶೈವತಂತ್ರೈಃ ಸಮಸ್ತೈಃ
ಪ್ರಕಟಿತ ಶಿವ ಬೋಧಾದ್ವೈತ ಭಾವ ಪ್ರಸಾದೇ ।
ವಿಧದತು ಮತಿಮಸ್ಮಿನ್ ವೀರಶೈವಾ ವಿಶಿಷ್ಟಾಃ
ಪಶುಪತಿ ಮತಸಾರೇ ಪಂಡಿತಶ್ಲಾಘನೀಯೇ ॥"

ಕಾಮಿಕಾದಿ ವಾತುಲಾಂತವಾದ ಇಪ್ಪತ್ತೆಂಟು ವೀರಶೈವಾಗಮಗಳನ್ನೂ ಸಮಸ್ತ ಶೈವ ಪುರಾಣಗಳನ್ನೂ ಕೂಲಂಕುಷವಾಗಿ ಕಂಡು,ಆದರ ಪೂರ್ವಕವಾಗಿ ಅಧ್ಯಯನಿಸಿ ಅನುಸಂಧಾನಿಸಿ, ತಲಸ್ಪರ್ಶಿಯಾಗಿ ಪರಿಶೀಲಿಸಿ ಪರಾಮರ್ಶಿಸಿ ಕೃತಿ ರಚನೆಯನ್ನು ಮಾಡಿದ್ದಾನೆ. ಮತ್ತು ವೇದಮಾರ್ಗಕ್ಕೆ ವಿರೋಧವಾಗ ದಂತೆ, ವಿಶಿಷ್ಟವಾದ ವಿಶುದ್ಧಾಚಾರಗಳು ಸಿದ್ಧಿಸುವಂತೆ, ಅಸನ್ಮಾರ್ಗ ನಿರಸನ ವಾಗುವಂತೆ, ಸನ್ಮಾರ್ಗದಲ್ಲಿ ನಿರತರಾಗುವಂತೆ, ವಿವೇಕಿಗಳುಸಂತೋಷಿಸುವಂತೆ ಸಿದ್ಧಾಂತ ಶಿಖಾಮಣಿಯನ್ನು ಸೃಜಿಸಿದ್ದಾನೆ. ಮಿಗಿಲಾಗಿ ವೀರಶೈವರ ಸರ್ವಸ್ವ ವಾದ, ಸಕಲಾರ್ಥ ಪ್ರಕಾಶಕವಾದ, ಯಾವ ದೋಷವಿಲ್ಲದ, ಸಹೃದಯರಿಂದ ಆದರಿತವಾದ, ನೂರೊಂದು ನೆಲೆಗಳುಳ್ಳ ವೀರಶೈವ ಮಹಾತಂತ್ರ (ಆಗಮ) ವನ್ನು ಲೋಕಾನುಗ್ರಹಕ್ಕಾಗಿ ಅಂದರೆ ವಿಶ್ವಕಲ್ಯಾಣಕ್ಕಾಗಿ ಶ್ರೇಷ್ಠ ಶಿವಾನು ಭಾವಿಯಾದ ಶಿವಯೋಗಿ ಶಿವಾಚಾರ್ಯನು ಸಿದ್ಧಾಂತಶಿಖಾಮಣಿಯನ್ನು ನಿರ್ಮಿಸಿರುವನು. ಅಂತೆಯೇ ಅದಕ್ಕೆ ರೇಣುಕಾಗಮವೆಂದು ಹೆಸರು ಬಂದಿದೆ. ಅದು ಎಲ್ಲ ವೀರಶೈವ ತಂತ್ರಗಳಿಗಿಂತ ಶ್ರೇಷ್ಠವಾಗಿದೆ. ಆದಕ್ಕೆ ಶ್ರೇಷ್ಠವಾದ ತಂತ್ರ ಬೇರೊಂದಿಲ್ಲವಾಗಿ ಸಿದ್ಧಾಂತ ಶಿಖಾಮಣಿಯೆಂದು ಹೆಸರಿಸಲಾಗಿದೆ. ಭಾರತೀಯ ಸಿದ್ಧಾಂತ ಗ್ರಂಥಗಳಲ್ಲಿ ಸರಿಮಿಗಿಲಿಲ್ಲದ ಪ್ರಬುದ್ಧ ಸಿದ್ಧಾಂತ ಗ್ರಂಥ. ಜೀವಂತ ಜ್ವಲಂತ ಮಹಂತ ಗ್ರಂಥ. ವಿಶಾಲ ವೀರಶೈವ ಪ್ರತಿ ಪಾದಕ. ಏಕೈಕ ಧರ್ಮದರ್ಶನ ಗ್ರಂಥ. ಕಾವ್ಯ-ಶಾಸ್ತ್ರ ಈ ಉಭಯಾಂಗ

ಸಂಗಮ ಗ್ರಂಥ. ಸಕಲ ಶಿವಾಗಳ ಸಾರವನ್ನು ಸ್ವಾನುಭೂತಿಯಿಂದ ಅನುಗತ ವಾಗಿ ಅರುಹುವ ಗ್ರಂಥ ! ಶಿವಾದ್ವೈತ ಸಿದ್ಧಾಂತವನ್ನು ಭಾವ ಪ್ರಸಾದದಲ್ಲಿ ಪ್ರಬೋಧಿಸುವ ತಂತ್ರ. ಪಶುಪತಿ ಮತಸಾರಭೂತವಾದ ತಂತ್ರ. ಪಂಡಿತ ಪ್ರಶಂಸೆಗೆ ಅರ್ಹವಾದ ತಂತ್ರ. ವೀರಶೈವೋತ್ತಮರು ಮಸ್ತಕದ ಮೇಲೆ ಹೊತ್ತು ಮೆರೆವ ತಂತ್ರ. ಇದರಲ್ಲಿ ಸತ್ಯಶಿವ ಸೌಂದರ್ಯ ದರ್ಶನವಿದೆ. ಶಿವ–ಶಕ್ತಿ ಸಂವೇದನವಿದೆ. ಶೀಲ ಸೌಂದರ್ಯವಿದೆ. ಸಮದರ್ಶನ–ಸಮವರ್ತನ ಪ್ರತಿಪಾದನವಿದೆ. ಅಖಂಡಯೋಗ–ಚಿದ್ವಿಭೂತಿಯೋಗಗಳಿವೆ. ಇದು ಮಹಿಳಾ ಮೌಲ್ಯವನ್ನು ದೀನ ದಲಿತೋದ್ಧಾರವನ್ನು ಪ್ರತಿಪಾದಿಸಿದೆ. "ವೃತ್ತಿಶೈತನ್ಯ ರೂಪಿಣೀ" ಅಂದರೆ 'ಕಾಯಕ ಕಳಾ ಚೈತನ್ಯ' ಎಂದು ಹೇಳಿ ಕಾಯಕ ಮೌಲ್ಯ ವನ್ನು ಹೆಚ್ಚಿಸಿದೆ. ವಿಶಿಷ್ಟ ರೀತಿಯಲ್ಲಿ ವಿಮರ್ಶ ಕಲೆಯನ್ನು ವಿವರಿಸಿದೆ. ಶಿವಯಜ್ಞವನ್ನು ಅನುಸಂಧಾನಿಸಿದೆ. ಜೀವನ್ಮುಕ್ತಿಯ ಪರಿಶೀಲನವಿದೆ. ಜಗದ್ಗುರುತ್ವದ ನಿರೂಪಣವಿದೆ. "ಅತ್ಯಂತ ಗೂಢ ಚೈತನ್ಯಂ ಜಡಮಿತ್ಯು ಚ್ಯತೇ" ಎಂಬೀ ವಿಜ್ಞಾನವಿದೆ. ಪರಿಸ್ಫೂರ್ತಿ ಪದದ ಸೃಷ್ಟಿ ಇದರದೇ ಆಗಿದೆ. ಇಂತಹ ಅನಂತ ವೈಶಿಷ್ಟ್ಯ ವೈವಿಧ್ಯಗಳಿಂದ ಕೂಡಿದ ಸೈದ್ಧಾಂತಿಕ ಗ್ರಂಥವೊಂದನ್ನು ಸಂಸ್ಕೃತದಲ್ಲಿ ಸುಂದರ ಶೈಲಿಯಲ್ಲಿ ಸೃಜಿಸಿದ ಅಗ್ಗಳಿಕೆ ಶಿ. ಶಿವಾಚಾರ್ಯರದಾಗಿದೆ. ನೂರೊಂದು ಉಪಸ್ಥಲಗಳ ಸಮಗ್ರ ವಿವರಣೆ ಯಿಂದೊಡಗೂಡಿದ ಷಟ್‌ಸ್ಥಲವನ್ನು ಹನ್ನೆರಡು ನೂರು ವರುಷಗಳ ಹಿಂದೆ ಪ್ರತಿಭಾನ್ವಿತವಾಗಿ ಪ್ರತಿಪಾದಿಸಿದ ವೈಶಿಷ್ಟ್ಯ ಶಿವಾಚಾರ್ಯರದಾಗಿದೆ. ಪ್ರಾರಂಭದಲ್ಲಿ ನಾಲ್ಕು ಪರಿಚ್ಛೇದಗಳನ್ನು ಕಾವ್ಯಮಯವಾಗಿ ಬರೆದ ಕಲಾ ತ್ಮಕತೆಯೂ ಅವರದಾಗಿದೆ. ಅನಾದಿ ವೀರಶೈವ ಧರ್ಮದ ಸಿದ್ಧಾಂತವನ್ನು ಪ್ರಬುದ್ಧವಾಗಿ ಪ್ರಪ್ರಥಮವಾಗಿ ಪ್ರಚುರ ಪಡಿಸಿದ ಪ್ರಖ್ಯಾತಿ ಶಿಚಾರ್ಯರ ದಾಗಿದೆ. ಅದರಲ್ಲಿಯೂ "ವೀರಶೈವ ಮಹಾತಂತ್ರ"ವನ್ನಾಗಿ, ಲೋಕಾನು ಗ್ರಹಕ್ಕಾಗಿ, ಸಕಲಾರ್ಥ ಪ್ರದಾಯಕವಾಗಿ, ಶಿವಾದ್ವೈತ ಭಾವ ಪ್ರಸಾದವಾಗಿ, ಪಶುಪತಿ – ಮತ ಸಾರವಾಗಿ ನಿರೂಪಿಸಿದ ನಿರುಪಮ ನಿಲುವು ಶಿವಾಚಾರ್ಯರ ದಾಗಿದೆ. ಅಪ್ರಾಕೃತ ಸದಾಚಾರಗಳನ್ನು ಶೈವೀ ವಿಚಾರಗಳನ್ನು ಷಟ್‌ಸ್ಥಲ ಸಿದ್ಧಾಂತಾನು ಭೂತಿಯನ್ನು ನಿರೂಪಿಸುವ ಸರ್ವಶಕ್ತರು ಶಿವಯೋಗಿ ಶಿವಾ ಚಾರ್ಯರು, ಶೀಲ ಸಂಪಾದನ ಮೌಲ್ಯವನ್ನು ಶಿವಾಚಾರ ಸಂಪತ್ತಿಯನ್ನು

ಶಿವದರ್ಶನ ಸಂವಿತ್ತಿಯನ್ನು, ಬಾಳಿಗೆ ಬೆಳಕನ್ನು ಚೇತನವನ್ನು ನಿಯತಿಯನ್ನು ಒದಗಿಸುವ ಕ್ರಿಯಾಗಮ – ಕ್ರಿಯಾಚಾರಗಳನ್ನು, ಜ್ಞಾನಾಚಾರ – ಭಾವಾಚಾರಗಳನ್ನು, ಕ್ರಿಯಾಪ್ರಕಾಶನ ಜ್ಞಾನ ಭಾವಪ್ರಕಾಶನಗಳನ್ನು ಸಾಮಾಜಿಕರಲ್ಲಿ ಭಾವಪೂರ್ಣವಾಗಿ ಬಿತ್ತರಿಸಿದರು. ಶಿವಯೋಗಿ ಶಿವಾಚಾರ್ಯರು. ಆತ್ಮಾನುಸಂಧಾನ ಕ್ರಿಯೆಶೀಲತೆಗೆ ಹೆಚ್ಚಿನ ಮೌಲ್ಯವನ್ನಿತ್ತು "ವೃತ್ತಿಶ್ಚೈತನ್ಯರೂಪಿಣೀ' ಅಂದರೆ ಕಾಯಕವೆ ಕಳಾಚೈತನ್ಯವೆಂದು ಹೇಳಿ ವೃತ್ತಿ ಶಕ್ತಿಯನ್ನು ಜನತೆಯಲ್ಲಿ ಮನದಟ್ಟಾಗಿಸಿದರು ಇವನ್ನೆಲ್ಲ ಸಾಮಾಜಿಕರ ಜೀವನ ಧರ್ಮಗಳನ್ನಾಗಿಸಿದರು. ತತ್ತ್ವ ದರ್ಶನ ಸಮರ್ಥಗಳನ್ನಾಗಿಸಿದರು. ಶಿವಶಕ್ತಿ ತತ್ತ್ವವೇ ಸರ್ವರ–ಸ್ವರೂಪವೆಂದು, ಅದರ ಐಕ್ಯ ಚಿಂತನದಿಂದ ಅನುಸಂಧಾನದಿಂದ ಸ್ವರೂಪಾತ್ಮರಾಗಿ ಚಿತ್ಕಳಾತ್ಮರಾಗಿ ಪ್ರಕಾಶಿಸುವರೆಂದು ಸಾಮರಸ್ಯಭಾವ ಪ್ರಸಾದ ಪ್ರಕಾಶಕರಾಗುವರೆಂದು, ಚರಾಚರವನ್ನು ಚಿದಾತ್ಮದಲ್ಲಿ ವಿನ್ಯಾಸಿಸಿಕೊಂಡು ವಿಶ್ವೈಕ್ಯ ಭಾವಿಗಳಾಗುವರೆಂದು, ವಿಮರ್ಶಾಖ್ಯ ಪರಾಶಕ್ತಿ ಸಂಪನ್ನರಾಗುವರೆಂದು, ವಿಶ್ವಾಧಾರವಾದ ಮಹಾಸಂವಿತ್ಪ್ರಕಾಶದಿಂದ ಪರಿಪೂರ್ಣರಾಗುವರೆಂದು. ವಿಶ್ವವಸ್ತು ಸ್ವರೂಪ ಪ್ರಕಾಶಕ ಪ್ರಬುದ್ಧ ಪ್ರತಿಭಾನ್ವಿತರಾಗುವರೆಂದು, ಸರ್ವ ಶಿವಾದ್ವೈತಾನುಭಾವಿಗಳಾಗುವರೆಂದು ತಮ್ಮ ಸರ್ವೋತ್ತಮವಾದ ರೇಣುಕಗೀತೆಯ ಮುಖಾಂತರ ಸರ್ವೋನ್ನತವಾಗಿ ಪ್ರಬೋಧಿಸಿ ಕಳಾ ಪ್ರಪೂರ್ವ ಕ್ರಾಂತಿಯನ್ನೆಸಗಿದರು. ರೇಣುಕ ಗೀತೆಯನ್ನು ಮೀರುವ ತತ್ತ್ವಸತ್ವವುಳ್ಳ ಗ್ರಂಥ ಮತ್ತೊಂದು ಇಂದಿಗೂ ಹುಟ್ಟಿಲ್ಲ.

ಕ್ರಿ. ಶ. ೬ನೆಯ ಶತಮಾನದಲ್ಲಿ ಜಗದ್ಗುರು ಪಂಡಿತಾಚಾರ್ಯರು ಕಾಳಾಮುಖಾದಿಗಳನ್ನು ವೀರಶೈವಕ್ಕೆ ಪರಿವರ್ತಿಸುವ ಕ್ರಾಂತಿಯನ್ನು ಯಶಸ್ವಿಯಾಗಿ ನಡೆಸಿ ಶ್ವೇತಾಚಾರ್ಯರೆಂದು ಪ್ರಸಿದ್ಧರಾದರು. ಕ್ರಿ. ಶ. ೭ನೆಯ ಶತಮಾನದಲ್ಲಿ ಸಿದ್ಧನಾಥ ಶಿವಾಚಾರ್ಯರು ವೀರಶೈವ ವಿಶಿಷ್ಟಾಚಾರ ವಿಚಾರಗಳ ಸಂಪತ್ತನ್ನು ಸಮೃದ್ಧಗೊಳಿಸಿ, ವೀರಶೈವ ಶಿಖಾರತ್ನನೆಂಬ, ಶಿವಸಿದ್ಧಾಂತ ನಿರ್ಣೀತನೆಂಬ, ಪ್ರಶಂಸೆಗೆ ಪಾತ್ರರಾದರು. ಅಂತೆಯೆ ಏಳೆಂಟನೆಯ ಶತಮಾನದಲ್ಲಿ ಸಿದ್ಧಾಂತ ಶಿಖಾಮಣಿ ಕರ್ತೃವಾದ ಶಿವಕವಿ–ಶಿವಾನುಭಾವಿ ಶಿವಯೋಗಿ ಶಿವಾಚಾರ್ಯರು ಬೌದ್ಧಾದಿ ಪ್ರತಿಸಿದ್ಧಾಂತ ಮಹಾಧ್ವಾಂತ ನಿವಾರಕ ಮಹಾಕ್ರಾಂತಿಯನ್ನೆಸಗಿ,

'ಮಹಾವೀರ ಶೈವ ಧರ್ಮ ಮಾರ್ಗ ಪ್ರವರ್ತಕ' 'ಶಿವತತ್ತ್ವ ಪರಿಜ್ಞಾನ ಪೂರ್ಣ ಚಂದ್ರಮ' ಎಂಬೀ ಪ್ರಶಸ್ತಿಗಳಿಗೆ ಪಾತ್ರರಾದರು. ಕ್ರಿಯಾಚಾರ ಶಿವಾಚಾರ ಗಳಿಂದ ನೈತಿಕ ಧರ್ಮವನ್ನು, ಜ್ಞಾನಾಚಾರ-ಭಾವಾಚಾರಗಳಿಂದ ಆಧ್ಯಾತ್ಮಿಕ ಧರ್ಮವನ್ನು ಅನುಭಾವಿಕ ಪ್ರಗತಿಯನ್ನು ಶಿವಾಚಾರ್ಯರು ಸಾಧಿಸಿದರು. ಸಮಾಜ ಸುಧಾರಣೆಯನ್ನು ಮಾಡಿದ್ದರಿಂದ ಮಹಾವೀರಶೈವ ಧರ್ಮವೆಂದೆನಿಸಿತು ; ಶಿ. ಶಿವಾಚಾರ್ಯರು ಆ ಮಹಾವೀರ ಶೈವ ಧರ್ಮ ಮಾರ್ಗ ಪ್ರವರ್ತಕರೆಂದೆ ಪ್ರಖ್ಯಾತರಾದರು. ಶಿವತತ್ತ್ವ ಪರಿಜ್ಞಾನದಲ್ಲಿ ಅವರನ್ನು ಮೀರಿದವರು ಯಾರಿಲ್ಲ. ಪರಿಜ್ಞಾನ. ಪರಿಭಾವ, ಪರಿಸ್ಫೂರ್ತಿ ಮೊದಲಾದ ಪಾರಿಭಾಷಿಕ ಪದಗಳ ಸ್ರಷ್ಟಾರರು ಶಿವಾಚಾರ್ಯರು.

ಕಾಲ ಚಕ್ರ ನೇಮದಂತೆ ಮೇಲುಕೀಳು-ಕೀಳು ಮೇಲು ಆಗುವುದು ಅನಿವಾರ್ಯ ! ಇದರಂತೆ ವೀರಶೈವವು ಕ್ರಿ. ಶ. ೧ ರಿಂದ ೫ನೆಯ ಶತಮಾನದವರೆಗೆ ಮತಾಂತರಗಳ ಉಬ್ಬರದಿಂದ ಕುಗ್ಗಿದ್ದಿತು. ಅವನತಿಯನ್ನು ಅನುಭವಿಸುತ್ತಿದ್ದಿತು. ಆಚಾರ ಧರ್ಮವನ್ನು ಭಕ್ತಿ ಭಾವವನ್ನು ಜ್ಞಾನಾನುಭಾವಸಂಪತ್ತಿಯನ್ನು ಕಡೆಗಣ್ಣಿಂದ ಕಾಣುತ್ತಿದ್ದರು ; ಕೈಬಿಡುತ್ತಿದ್ದರು. ಹೀಗಿರುವಾಗ ಜ. ಪಂಡಿತಾಚಾರ್ಯರು, ಶ್ರೀ ಸಿದ್ಧನಾಥ ಶಿವಾಚಾರ್ಯರು, ಮತ್ತು ಶ್ರೀ ಶಿವಯೋಗಿ ಶಿವಾಚಾರ್ಯರು ೬-೭-೮ ಶತಮಾನಗಳಲ್ಲಿ ತುಂಬಾ ದುಡಿಯಬೇಕಾಯಿತು ; ಹಿರಿದಾಗಿ ಹೋರಾಡ ಬೇಕಾಯಿತು. ಜ. ಪಂಡಿತಾಚಾರ್ಯರು ವೀರಶೈವೇತರರನ್ನು ತಮ್ಮ ಪ್ರಭಾವದಿಂದ ಆಕರ್ಷಿಸಿ ಸಂಸ್ಕರಿಸಿ ವೀರಶೈವರನ್ನಾಗಿಸುವ, ಆಗಿಸಿ ವರ್ಧಿಸುವ ಬದುಕನ್ನು ಮಾಡಿದರೆ, ಸಿದ್ಧನಾಥ ಶಿವಾಚಾರ್ಯನು ವೀರಶೈವ ವಿಶುದ್ಧಾಚಾರ ವಿಚಾರಗಳನ್ನು ಮನಂಬುವಂತೆ ಬೋಧಿಸುವ, ಶಿವ ಸಿದ್ಧಾಂತವನ್ನು ನಿರ್ಣಯಿಸುವ ಮಣಿಹವನ್ನು ಮಾಡಬೇಕಾಯಿತು. ಅಲ್ಲಾಡುತ್ತಿದ್ದ ಅಂದರೆ ಅಪ್ರತಿಷ್ಠಿತವಾದ ಭಕ್ತಿಯನ್ನು ಸ್ಥಿರವಾಗಿ ಪ್ರತಿಷ್ಠಿತಗೊಳ್ಳುವಂತೆಸಗಬೇಕಾಯಿತು. ಈ ನಿಟ್ಟಿನಲ್ಲಿ ಆತನಿಗೆ ಸರಿಸಮರಾದವರಿರಲಿಲ್ಲ. ಅದರಿಂದ ಆತನನ್ನು 'ವೀರಶೈವ ಶಿಖಾರತ್ನ' ಎಂದು ಪ್ರಶಂಸಲಾಯಿತು. ಅಷ್ಟೇ ಅಲ್ಲ ವೀರ ಶಿವಾಚಾರ್ಯರಿಗೂ ಶಿಖಾರತ್ನನೆಂದೆನಿಸಿ ನೀಳಾದ ನಿಲುವಿನಲ್ಲಿ ಬಾಳಿದನು.

ಮುಂದೆ ಈತನ ಮಗನಾದ ಶಿವಯೋಗಿ ಶಿವಾಚಾರ್ಯನು ಎಂಟನೆಯ ಶತಮಾನದಲ್ಲಿ ತನ್ನ ದೃಕ್ಕ್ರಿಯಾನುಭೂತಿಗಳಿಂದ ಬೌದ್ಧಾದಿ ಪ್ರತಿವಾದಿಗಳನ್ನು ಬಲವಾಗಿ ಪ್ರತಿಭಟಿಸಬೇಕಾಯಿತು. ಪ್ರತಿಭಟಿಸಿ ಸನಾತನ ಶಿವಭಕ್ತಿ ಪಂಥವನ್ನು ರಕ್ಷಿಸಬೇಕಾಯಿತು ; ರಕ್ಷಿಸಿದನು. ಅವನಲ್ಲಿ ಶಿವತತ್ತ್ವ ಪರಿಜ್ಞಾನ ಪೂರ್ಣವಾಗಿದ್ದಿತು. ಅಂತೆಯೇ ಆತನು ಶಿವಕವಿ. ಶಿವಾನುಭಾವಿಯಾಗಿ ಹೆಸರಾಂತಿರುವನು. ಮಹಾವೀರ ಶೈವ ಧರ್ಮ ಮಾರ್ಗ ಪ್ರವರ್ತಕನೂ ಆಗಿರುವನು. ಮಹಾಶಕ್ತವಂತ ! ಅಂತೆಯೇ ಪಿತೃವಾಣಿಯಾದ ಸಂಸ್ಕೃತ ಭಾಷೆಯಲ್ಲಿ 'ಸಿದ್ಧಾಂತ ಶಿಖಾಮಣಿ' ಎಂಬ ಅಭಿಧಾನವುಳ್ಳ ಉದ್ ಗ್ರಂಥವೊಂದನ್ನು ಬರೆಯಲು ಸರ್ವ ಸಮರ್ಥನಾದನು. ಮಾತೃಭಾಷೆ (ಕನ್ನಡ) ಸುಕುಮಾರ ಶೈಲಿ ; ಪಿತೃ (ಗುರು) ಭಾಷೆ ಸಂಸ್ಕೃತ ಏರುಂಜವ್ವನದ ಭಾಷೆ ! ಇದುವೆ ಷಟ್‌ಸ್ಥಲ ಸಿದ್ಧಾಂತ ಪ್ರತಿಪಾದನೆಗೆ ತಕ್ಕ ಭಾಷೆ ! ಶ್ರೀವಾಣಿ !! ನಾವು ಆಡುವ ಪ್ರತಿಯೊಂದು ನುಡಿಯ ಮೇಲೂ ತನ್ನ ಪ್ರಭಾವವನ್ನು ಸಂಸ್ಕೃತವು ಬೀರುತ್ತದೆ. ಅದಿಲ್ಲದೆ ಷಟ್‌ಸ್ಥಲ ನಾಮಗಳೇ ಇಲ್ಲ. ಅಂತೆಯೇ ಅಷ್ಟಾವರಣ –ಪಂಚಾಚಾರಗಳ ನಾಮಗಳೂ ಇಲ್ಲ. ನೂರೊಂದು ನೆಲೆಗಳ ಹೆಸರುಗಳೂ ಇಲ್ಲ. ಇಷ್ಟರಿಂದಲೇ ಅದರ ಮೌಲ್ಯ ಮನದಟ್ಟಾಗುತ್ತದೆ. ಅನಾದಿ ವೀರ ಶೈವ ಧರ್ಮದ ಮೂಲ ಗುರುವಾದ ರುದ್ರನು ಸಂಸ್ಕೃತದಲ್ಲಿ ಋಕ್‌ಗಳನ್ನು ಗಾಯತ್ರೀ ಛಂದದಲ್ಲಿ ಉತ್ಪಾದಿಸಿದ್ದಾನೆ. ಆತ ವೀರಶೈವಕ್ಕೆ ಗುರುಪಿತಾ ! ಅಲ್ಲದೆ ಭಾರತದ ಅದೇಕೆ ವಿಶ್ವದ ಬಹು ಜನರು ಬಲ್ಲ ಭಾಷೆ ! ನಮ್ಮ ದರ್ಶನ ನಮ್ಮ ಶಿವಾದ್ವೈತ ಸಿದ್ಧಾಂತ ಸಂಸ್ಕೃತ ಭಾಷೆಯ ಬುನಾದಿಯ ಮೇಲೆ ನಿಂತ ಸೌಧ ! ಆರುಪ್ಪರಿಗೆಯ ಸುಂದರ ಸೌಧ !! ಕಾವ್ಯ ಕಮನೀಯ ಶೈಲಿಯಲ್ಲಿ ಚಿದ್ರಸ ತರಂಗಿನಿ ಆರಂಗಗಳಲ್ಲಿ ಸಂಗಮಿಸಿ ಹರಿದಿದೆ. ಶಾಸ್ತ್ರೀಯ ಶುಭ್ರ ಶಬ್ದ ಬಲ್ಬಗಳಲ್ಲಿ ಚಿತ್ಕಳೆ ಬೆಳಗಿದೆ. ಸಂಸ್ಕೃತವಾಣಿ ವಿಶ್ವತೋ ಮುಖಿ; ವಿಶ್ವತೋ ವ್ಯಾಪ್ತಿ. ಸಂಸ್ಕತದಲ್ಲಿರುವ ಸಿದ್ಧಾಂತ ಶಿಖಾಮಣಿಯನ್ನು ಯಾವ ಭಾಷೆಗೂ ಅನುವಾದಿಸಬೇಕಿಲ್ಲ.

ಶಿವಯೋಗಿ ಶಿವಾಚಾರ್ಯ ಸಮನ್ವಯವಾದಿ. ವ್ಯಕ್ತಿ, ಸಮಾಜ, ವಿಶ್ವ ಈ ತ್ರಿವಿಧ ಸಮನ್ವಯಕ್ಕೆ ಮೌಲ್ಯವನ್ನಿತ್ತಿದ್ದಾನೆ.

"ಶಿವ ಏವ ಜಗತ್ಸರ್ವಂ ಶಿವ ಏವಾಹಮಿತ್ಯಪಿ ।
ಭಾವಯನ್ ಪರಮೋ ಯೋಗೀ ಭವದೋಷೈರ್ನ ಬಾಧ್ಯತೇ ॥"

ಇಲ್ಲಿ ಜಗತ್ತೆಲ್ಲವೂ ಶಿವವೆಂಬ ಭಾವಪ್ರಕಾಶನದೊಡನೆ, ಜಗನ್ಮಯ ಶಿವನೇ ತಾನೆಂದು ಪರಿಭಾವಿಸಿದಾತನೇ ಪರಮಯೋಗಿ ; ಆತನ ಈ ಭವ ದೋಷಗಳಿಂದ ಬಾಧಿತನಾಗುವುದಿಲ್ಲ. ಆತನು ಶಿವಾಚಾರದ ಶಿವವಿಚಾರದ ಸಮಾಜ ಕಟ್ಟಬಲ್ಲನು-ಕಟ್ಟುತ್ತಾನೆ. ಹೀಗೆ ಹೇಳಿದ ೮ನೇ ಶತಮಾನದ ಶಿವ ಯೋಗಿ ಶಿವಾಚಾರ್ಯನು ಮಹಾವೀರಶೈವ ಧರ್ಮಮಾರ್ಗಪ್ರವರ್ತಕನಾಗಿದ್ದ ನೆಂಬುದನ್ನು ಮರೆಯದೆ ಮನಕ್ಕೆ ತಂದುಕೊಳ್ಳಬೇಕು. ಆತನ ಕಾಲದ ಯುಗಧರ್ಮ ವಿಶ್ವ ವೀರಶೈವ ಧರ್ಮವಾಗಿದ್ದಿತು. ವ್ಯಕ್ತಿ ಸಮಾಜಕ್ಕೆ ವಿಶ್ವಕ್ಕೆ ಕಲ್ಯಾಣಕಾರಿಯಾಗುವಂತೆ ಬಾಳಬೇಕು. ವ್ಯಕ್ತಿ ತನ್ನ ವಿಶುದ್ಧ ವಿಶಿಷ್ಟ ವಿಶಾಲವಾದ ನಡೆ-ನುಡಿಗಳಿಂದ ಅಂದರೆ ಆಚಾರ-ವಿಚಾರಗಳಿಂದ ಪರ್ತಿಸ ಬೇಕು. ಬೀಜ ತನ್ನಲ್ಲಿ ಭೂಜವನ್ನಿರಿಸಿಕೊಂಡು ರಕ್ಷಿಸಿರುವಂತೆ ಇರಬೇಕು. ಸ್ವಾವಲಂಬಿಯಾಗಿ ಲೋಕೋಪಕಾರಿಯಾಗಿ ಜೀವಿಸಬೇಕು. ತನ್ನ ಭಕ್ತಿ ಶಕ್ತಿಗಳನ್ನು ಶಿವರೂಪವಾದ ಜಗತ್ತಿನಲ್ಲಿರಿಸಬೇಕು. ಜಗತ್ತಿನ ಜನ ಕಲ್ಯಾಣ ಕ್ಕಾಗಿ ವಿನಿಯೋಗವಾಗಬೇಕು. ಸಮಾಜ ವಿಶ್ವಗಳಿಂದ ತಾನು ಬೆಳೆಯಬೇಕು. ಬೆಳೆದ ತನ್ನ ಶಕ್ತಿ ಭಕ್ತಿಗಳು ವಿಶ್ವಕ್ಕೆ ವಿನಿಯೋಗವಾಗಬೇಕು. ತನ್ನ ಸರ್ವ ತೋಮುಖವಾದ ಬೆಳವಣಿಗೆಗಾಗಿ ಸಮಾಜ ವಿಶ್ವಗಳು ಬೇಕು. ಬೆಳೆದ ಬಳಿಕ ತಾನು ಸಮಾಜ-ವಿಶ್ವಗಳಿಗಾಗಿ ಮೀಸಲಾಗಬೇಕು. ಅಂದರೆ ಸಾಮೂಹಿಕ ಕಲ್ಯಾಣಕ್ಕಾಗಿ ತಾನಿರಬೇಕು.

"ಪರಸ್ತ್ರೀ ಸಂಗ ನಿರ್ಮುಕ್ತಃ ಪರದ್ರವ್ಯ ಪರಾಙ್ಮುಖಃ ॥
ಶಿವಾರ್ಥಕಾರ್ಯ ಸಂಪನ್ನಃ ಶಿವಾಗಮ ಪರಾಯಣಃ ।
ಶಿವಸ್ತುತಿ ರಸಾಸ್ವಾದ ಮೋದಮಾನಮನಾಃ ಶುಚಿಃ ।
ನಿರ್ಮಮೋ ನಿರಹಂಕಾರೋ ನಿರಸ್ತ ಕ್ಲೇಶ ಪಂಜಶಃ ॥
ಅಸ್ಪೃಷ್ಟ ಮದ ಸಂಬಂಧೋ ಮಾತ್ಸರ್ಯಾವೇಶವರ್ಜಿತಃ ॥
ನಿರಸ್ತ ಮದನೋನ್ಮೇಷೋ ನಿರ್ಧೂತಕ್ರೋಧ ವಿಪ್ಲವಃ ।
ಸದಾ ಸಂತುಷ್ಟ ಹೃದಯಃ ಸರ್ವ ಪ್ರಾಣಿ ಹಿತೇರತಃ ॥"

—ರೇ. ಗೀತೆ

ನೈತಿಕ ಆರ್ಥಿಕ ಕಾಯಕ ಶಿವಾಗಮಿಕ ಸರ್ವ ಜೀವ ಕಲ್ಯಾಣ ಕಾರಕನಾಗಿ ವ್ಯಕ್ತಿ ಜೀವಿಸಬೇಕು. ಮಮಕಾರ, ಅಹಂಕಾರ, ಕ್ಲೇಶ ಬಂಧನ, ಮದ, ಮತ್ಸರ, ಕಾಮೋದ್ರೇಕ, ಕ್ರೋಧಾನಾಹತಗಳಿಂದ ದೂರನಾಗಬೇಕು. ಸದಾ ಸಂತೋಷಚಿತ್ತನಾಗಿ–ಶಿವ ಚಿಂತನ ಪರನಾಗಿ–ಶುಚಿಯಾಗಿ–ಶಿವಾರ್ಥ ಕಾರ್ಯ ಸಂಪನ್ನನಾಗಿ ಬಾಳಿ ಬದುಕಬೇಕು. ಇದಕ್ಕಿಂತ ಮಾನವೀಯ ಧರ್ಮ ಇನ್ನೇನಿದೆ ? ಇಲ್ಲಿದೆ. ಶಿವಯೋಗಿ ಶಿವಾಚಾರ್ಯನ ಜೀವನದ ಜಗತ್ತಿನ ಉದಾತ್ತೀಕರಣ ದೃಷ್ಟಿ ! ವಿಶುದ್ಧ ವಿಶಾಲ ಸಾಹಿತ್ಯ ಸೃಷ್ಟಿ ! ! ಈ ಮೂರ್ನಾಲ್ಕು ಶ್ಲೋಕಗಳೇ ಸಾಕು ಜೀವನೋನ್ನತ ಕ್ರಾಂತಿ ಕಾಂತಿಗಳಿಗೆ ! ಎಂತಹ ದಿವ್ಯ ಸಂದೇಶವಿದು ! ಏನು ಸರ್ವ ಸಂಕೀರ್ಣ ಶುದ್ಧ ಪ್ರಬುದ್ಧ ಮನೋಭಾವವಿದು ! ! ಮಾತು ಮಾತಿನಲ್ಲಿ ಸತ್ಸಾಧನ ಸಂಪತ್ತಿಯಿದೆ ; ಸರ್ವ ಸಮಗ್ರ ಭಾವ ನಿಷ್ಪತ್ತಿಯಿದೆ. ವ್ಯಕ್ತಿ ವಿಕಾಸದ ವಿಶ್ವ ಕಲ್ಯಾಣದ ಪ್ರಪತ್ತಿ ಯಿದೆ. ಇನೇನಾಗಬೇಕು ? ವ್ಯಕ್ತಿ ವಿಕಾಸದಲ್ಲಿ ವಿಶ್ವ ಕಲ್ಯಾಣ ಸಾಧಿತ ವಾಗಬೇಕು; ಸರ್ವ ಪ್ರಾಣಿ ಹಿತ ರತತೆಯೆ ವಿಶ್ವಕಲ್ಯಾಣ ಭವನದ ಬುನಾದಿ. ಸದಾ ಸಂತುಷ್ಟ ಹೃದಯನಾಗಿರುವಿಕೆಯೆ ನಿಸ್ವಾರ್ಥ–ನಿಷ್ಕಂಟಕ ಜೀವನ ಸಂಜೀವಿನಿ. ಶಿವಾರ್ಥಕಾರ್ಯ (ಕಾಯಕ) ಸಂಪನ್ನತೆ ಮತ್ತು ಪರದ್ರವ್ಯ ಪರಾ ಙ್ಮುಖತೆ ಸಕ್ರಿಯಾಶೀಲ ಜೀವನ ಚೈತನ್ಯ ; ಸ್ವಾವಲಂಬನ ಜೀವನ ಲಾವಣ್ಯ. ಪರಸ್ತ್ರೀ ಸಂಗ ನಿರ್ಮುಕ್ತನಾಗಿರುವಿಕೆಯಲ್ಲಿದೆ ನೈತಿಕ ಜೀವನ ವೃಕ್ಷ ಬೀಜ. ಸ್ವಯಸ್ತುತಿ ವಿರಹಿತತೆ ಶಿವಸ್ತುತಿ ನಿರತತೆಗಳಿಗಿಂತ ನಿರತಿಶಯ ರಸಾಸ್ವಾದ ಬೇರೊಂದಿಲ್ಲ. ಮಮಕಾರ–ಅಹಂಕಾರ, ಮದ–ಮತ್ಸರ, ಕಾಮ–ಕ್ರೋಧ, ಲೋಭ–ಮೋಹಗಳನ್ನು ಬಿಡುವುದಕ್ಕಿಂತ ಶುದ್ಧಿ(ಶುಚಿ) ಬೇರಿಲ್ಲ ; ದುಃಖ ನಿವೃತ್ತಿ ಬೇರಿಲ್ಲ ; ಸತ್ಯ ಸುಖ ಸಂಪ್ರಾಪ್ತಿ ಬೇರಿಲ್ಲ. ಸರ್ವ ಪ್ರಾಣಿಗಳ ಹಿತ ದಲ್ಲಿ ರತನಾಗಿರುವುದಕ್ಕಿಂತ ಬೇರೆ ಧರ್ಮವಿಲ್ಲ. ವಿಶ್ವಧರ್ಮವಿಲ್ಲ. ಶಿವಾಚಾರ್ಯ ಶಿವಕವಿಯ ದೃಷ್ಟಿಯಲ್ಲಿ ಶಿವಭಾವ ಬೇರೆಯಲ್ಲ ; ಶಿವಮಯ ವಿಶ್ವಭಾವ ಬೇರೆಯಲ್ಲ. "ಸರ್ವಂ ಶಿವಮಯಂ ಜಗತ್" ಎಂಬುದೇ ಆತನ ಭಾವನೆ ! "ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।" ಈ ಭಗವ ದ್ಗೀತೋಕ್ತಿಯೂ ಆತನ ಭಾವನೆಯನ್ನೇ ಸಮರ್ಥಿಸಿದೆ. ಮಾನವೀಯ ಸ್ಥಿತಿ ಗತಿಗಳಿಗೆ ಶಿವಪದ–ಪದವಿಗಳಿಗಿಂತ ಬೇರೆ ಪದ–ಪದವಿಗಳಿಲ್ಲ ; ಶಿವಸಂಪದ

ಕ್ಕಿಂತ ಬೇರೆ ಸಂಪದವಿಲ್ಲ. ಅವು ಎಂದೆಂದಿಗೂ ಸವೆಯದ ಪದ-ಸಂಪದಗಳು ; ಸಾಮ್ಯವಿಲ್ಲದವುಗಳು.

"ಯತ್ರ ಜೀವಸ್ತತ್ರ ಶಿವಃ" ಜೀವ ಜೀವರೆಲ್ಲರೂ ಶಿವಸ್ವರೂಪರು. ಅದರಿಂದ ಸರ್ವ ಪ್ರಾಣಿ ಹಿತರತರಾಗಬೇಕು. ಜಗದ್ಭರಿತನಾದರೂ ಜೀವಿಗಳಲ್ಲಿ ವಿಶೇಷವಾಗಿ ವಿರಾಜಿಸುತ್ತಾನೆ. ವಿಶಿಷ್ಟ ಚೈತನ್ಯಮಯನಾಗಿ ವಿರಾಜಿಸುತ್ತಾನೆ. ಆತನ ಹೊರತಾಗಿ ಯಾವ ಪ್ರಾಣಿಯೂ ಇರುವುದಿಲ್ಲ, ಯಾವ ಪ್ರಪಂಚವೂ ಇರುವುದಿಲ್ಲ ; ಇಲ್ಲ.

"ಯಸ್ಮಾದೇತತ್ ಸಮುತ್ಪನ್ನಂ ಮಹಾದೇವಾಚ್ಚರಾಚರಂ
ತಸ್ಮಾದೇತನ್ನಭಿದ್ಯೇತ ಯಥಾ ಕುಂಭಾದಿಕಂ ಮೃದಃ ।
ಶಿವತತ್ತ್ವಾತ್ ಸಮುತ್ಪನ್ನಂ ಜಗದಸ್ಮಾನ್ನಭಿದ್ಯತೇ
ಫೇನೋರ್ಮಿ ಬುದ್ಬುದಾಕಾರೋ ಯಥಾ ಸಿಂಧೋರ್ನ ಭಿದ್ಯತೇ ।
ಯಥಾ ತಂತುಭಿರುತ್ಪನ್ನಃ ಪಟಸ್ತಂತುಮಯಃ ಸ್ಮೃತಃ
ತಥಾ ಶಿವಾತ್ ಸಮುತ್ಪನ್ನಂ ಶಿವ ಏವ ಚರಾಚರಂ ।
ಆತ್ಮಶಕ್ತಿ ವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ
ಕುಟೀಭಾವಾದ್ಯಥಾ ಭಾತಿ ಪಟಃ ಸ್ವಸ್ಯ ಪ್ರಸಾರಣಾತ್ ।
ಪತ್ರಶಾಖಾದಿರೂಪೇಣ ಯಥಾ ತಿಷ್ಠತಿ ಪಾದಪಃ
ತಥಾ ಭೂಮ್ಯಾದಿರೂಪೇಣ ಶಿವ ಏಕೋ ವಿರಾಜತೇ ॥"

ಇದು ಶಿ. ಶಿವಾಚಾರ್ಯರ ಶಿವ ಜಗನ್ಮಯ ಸಿದ್ಧಾಂತ. ಅರ್ಚನಾದಿಯಲ್ಲಿ ಆತ್ಮಲಿಂಗ (ಇಷ್ಟಲಿಂಗ) ನಿಷ್ಠೆ ; ಅರ್ಚನಾಂತ್ಯದಲ್ಲಿ ವಿಶ್ವಮಯ ಲಿಂಗನಿಷ್ಠೆ. ಯಾವುದನ್ನೂ ಕಡೆಗಣ್ಣಿನಿಂದ ಕಾಣುವಂತಿಲ್ಲ. ಕಾಣಬಾರದು. ತನ್ನ ಇಷ್ಟ ಲಿಂಗ ಪೂಜೆ ಮುಮ್ಮೊದಲಾಗಬೇಕು. ಆ ಬಳಿಕ ಸರ್ವ ಸಾಮಾನ್ಯ ಶಿವಭಾವದಲ್ಲಿ ಸಾಮಾನ್ಯೋಪಚಾರದಲ್ಲಿ ಉಳಿದ ದೇವರುಗಳನ್ನು ಮನ್ನಿಸಿದಲ್ಲಿ ತಪ್ಪಿಲ್ಲ. ಈ ಪರಿಭಾವವನ್ನು

"ಪೂಜಾ ವಿಧೌ ನಿಯಮ್ಯತ್ವಾಲ್ಲಿಂಗಮಾತ್ರೇ ಸ್ಥಿತಂ ಶಿವಂ ।
ಪೂಜಯನ್ನಪಿ ದೇವಸ್ಯ ಸರ್ವಗತ್ವಂ ವಿಭಾವಯೇತ್ ॥"

ಶಿವಾಚಾರ್ಯನು ತನ್ನ ಸ್ವಯಾನುಭೂತಿಯನ್ನು ಧೀರೋದಾತ್ತನಾಗಿ ಘೋಷಿಸಿದ್ದಾನೆ. ಸಾಮಾಜಿಕರ ಸಂಕುಚಿತ ಭಾವಕ್ಕೆ ವಿಭಾವದ ದೀಪ್ತ ವ್ಯಾಪ್ತ ದೀಕ್ಷೆಯನ್ನು ಕರುಣಿಸಿದ್ದಾನೆ. ಸಂಕುಚಿತ ಮನೋಭಾವದ ಕತ್ತಲೆ

ಯಿಂದ ಕಳಾ ಭೂಮಿಕೆಗೆ ಬರಿಸಿ ಬಿತ್ತರದ ಭಾವ ಬೀಜವನ್ನು ಬಿತ್ತಿ ಬೆಳೆದಿದ್ದಾನೆ. "ಶಿವಾತ್ಮಕಂ ವಿಶ್ವಮಿದಂ ವಿಬುಧ್ಯನ್...." ವಿಶ್ವವಿದು ಶಿವಾತ್ಮಕ ವೆಂಬುದನ್ನು ಅರುಹಿ ಅಂತಃಕರಣವನ್ನು ಅರಳಿಸಿ ಎಚ್ಚರಿಸಿ ಸಂಕುಚಿತ ಸೀಮಿತ ಸೀಮೆಯಿಂದ ಅಸೀಮಿತ ಸೀಮೆಗೆ ಕರೆದೊಯ್ಯುತ್ತಾನೆ. ಇಷ್ಟಲಿಂಗದಲ್ಲಿದ್ದ ಸೀಮಿತ ಭಾವನೆಯನ್ನು ಇಷ್ಟಲಿಂಗ ಪೂಜೆಯ ಬಳಿಕ ಬಿಡುವಂತೆ ಬೋಧಿಸಿದ್ದಾನೆ. ಭಕ್ತಿ ಶಕ್ತಿ ಸಣ್ಣದಲ್ಲ ; ಅಂತೆಯೇ ಭಾವ ದೀಪ್ತಿಯೂ ಸಣ್ಣದಲ್ಲ, ಇವು ಈ ಮಾನವ ಭೇದ, ದೇವ ಭೇದಗಳಿಂದಾಚೆ ಕರೆದೊಯ್ದು ಅಭೇದ ಭಾವ ವಿನ್ಯಾಸವನ್ನುಂಟು ಮಾಡುತ್ತವೆ. ಇದೋ ಆಲಿಸಿ :

"ಅಧಮೇ ಚೋತ್ತಮೇ ವಾऽಪಿ ಯತ್ರಕುತ್ರ ಚಿದೂರ್ಜಿತಾ ।
ವರ್ತತೇ ಶಾಂಕರೀ ಭಕ್ತಿಃ ಸ ಭಕ್ತ ಇತಿ ಗೀಯತೇ" ॥
ಭಕ್ತಿಃ ಸ್ಥಿರೀಕೃತಾ ಯಸ್ಮಿನ್ ಮ್ಲೇಚ್ಛೇವಾ ದ್ವಿಜಸತ್ತಮೇ ।
ಶಂಭೋಃ ಪ್ರಿಯಃ ಸ ವಿಪ್ರಶ್ಚ ನ ಪ್ರಿಯೋ ಭಕ್ತಿವರ್ಜಿತಃ ॥"

—ರೇಣುಕಗೀತೆ

ಭಕ್ತಿಭಾವಕ್ಕೆ ಕುಲ ಪಂಥ ಜಾತಿ ಭೇಧಗಳಿಲ್ಲ. ಅಧಮನಾಗಲಿ ಉತ್ತಮನಾಗಲಿ ಮಧ್ಯಮನಾಗಲಿ ಇನ್ನಾರಾಗಲಿ ಅವರಲ್ಲಿ ಶಿವಭಕ್ತಿಯಿದ್ದುದಾದರೆ ಅವರೇ ದಿಟವಾದ ಭಕ್ತರು. ಭಕ್ತಿಗೆ ಅಂತ್ಯಜ ಅಗ್ರಜರೆಂಬ ಭೇದ ಸಲ್ಲದು. ಭಕ್ತಿ ಬಿಡದಿರುವ ಅಂತ್ಯಜನಾದರೂ ಶಿವನಿಗೆ ಪ್ರಿಯನು. ಅದೇ ಭಕ್ತಿಯಿಲ್ಲದ ಅಗ್ರಜನಾದರೂ ಆತನು ಶಿವನಿಗೆ ಪ್ರಿಯನಲ್ಲ. ಎಂದು ಶ್ರೀ. ಶಿವಾಚಾರ್ಯರು ಘೋಷಿಸಿ ಎಂಟನೆಯ ಶತಮಾನದಲ್ಲಿಯೇ ವರ್ಣಕ್ರಾಂತಿಯನ್ನು ಮಾಡಿ ಜಾತಿ ಪಂಥಗಳ ಭೇದವನ್ನು ಖಂಡಿಸಿದ್ದಾರೆ. ಇದೇ ಕ್ರಾಂತಿಯನ್ನೇ ಮುಂದಿನವರು ಅನುಸರಿಸಿದರು. ಶಿವಯೋಗಿ ಶಿವಾಚಾರ್ಯರು ಸತ್ಯಕ್ಕೂ ತತ್ತ್ವನಿಷ್ಠ ಕ್ರಾಂತಿಯನ್ನು ದಿಟ್ಟತನದಿಂದ ಮಾಡಿ ಆಧುನಿಕ ವೀರಶೈವರಲ್ಲಿ ಅಗ್ರಮಾನ್ಯರಾಗಿದ್ದಾರೆ. ಅವರು ಕವಿಮಾತ್ರರಾಗಿ ಅಲ್ಲ ಅನುಭಾವಿಯಾಗಿ ಸಾಮಾಜಿಕ ಸಮನ್ವಯ ಕ್ರಾಂತಿಯನ್ನೆಸಗಿದ್ದಾರೆ. ಮತ್ತು ಅವರು ಸಮದರ್ಶಿಯಾಗಿ ಮಾತ್ರವಲ್ಲ ಸಮವರ್ತಿಯಾಗಿ ದಿವ್ಯ ಧರ್ಮಮಾರ್ಗ ಪ್ರವರ್ತಕರಾಗಿದ್ದಾರೆ.

"ಜನಪದದಲ್ಲಿ ಶಕ್ತಿ ಕುಂದಿದಾಗ, ನೀತಿ ಅಳಿದಾಗ, ಸ್ಥೈರ್ಯಲಯ

ವಾದಾಗ, ಕವಿ ಅದಕ್ಕೆ ಶಕ್ತಿ, ನೀತಿ, ಸ್ಥೈರ್ಯ ನೀಡುತ್ತಾನೆ. ಸಂಗ್ರಾಮದಿಂದ, ರೋಗದಿಂದ, ಆರ್ಥಿಕ ವಿಪನ್ನಾವಸ್ಥೆಯಿಂದ ಜನಪದ ಕಳೆಗುಂದಿ ಕಂಗೆಟ್ಟು ಕುಳಿತಾಗ ಕವಿ ತನ್ನ ಪಾಂಚಜನ್ಯ ಊದುತ್ತಾನೆ. ಬಾಳಿನಲ್ಲಿ ಜಿಹಾಸೆ ಹೊಂದಿದವರ ಮನಸ್ಸಿನಲ್ಲಿ ಆಸೆಯಂಕುರಿಸುವಂತೆ ಮಾಡುತ್ತಾನೆ.

ಸಾಮಾನ್ಯರಿಗೆ ಗೋಚರವಾಗದೆಡೆ ಕವಿಯ ಅತಿಸೂಕ್ಷ್ಮ ಚೇತನಕ್ಕೆ ಸತ್ಯ, ಸೌಂದರ್ಯ, ಶಕ್ತಿ ಕಾಣಿಸುತ್ತದೆ. ತನ್ನ ಅನುಭವ ಹಲವರ ಅನುಭವವಾಗುವಂತೆ ತನ್ನ ನಿತ್ಯಾನಂದ, ನಿತ್ಯತೃಪ್ತಿ, ನಿತ್ಯತೇಜಸ್ಸು ಹಲವರದಾಗುವಂತೆ ಮಾಡುವುದರಲ್ಲಿಯೇ ಕವಿ ಉದ್ಯುಕ್ತನಾಗುತ್ತಾನೆ...."

ಎಂದು ಶ್ರೀ ಅ. ನ. ಕೃಷ್ಣರಾಯರು ತಮ್ಮ "ಸಾಹಿತ್ಯ ಮತ್ತು ಯುಗಧರ್ಮ" ಗ್ರಂಥ (ಪು. ೧೭)ದಲ್ಲಿ ನಿರೂಪಿಸಿದುದು, ನಿಜಕ್ಕೂ ನಮ್ಮ ಶಿ. ಶಿವಾಚಾರ್ಯ ಶಿವಕವಿ–ಶಿವಾನುಭಾವಿಗೆ ಎಲ್ಲಂದದಲ್ಲಿ ಸಲ್ಲುತ್ತದೆ. ಶಿ. ಶಿವಾಚಾರ್ಯನು ಸಾಮಾಜಿಕ ಸಾಂಸ್ಕೃತಿಕ ಸಾಹಿತ್ಯಕ ಕ್ರಾಂತಿಯಲ್ಲಿ ಉಳಿದ ಯಾವ ಶಿವಾಚಾರ್ಯರಿಗೂ ಶಿವಶರಣರಿಗೂ ಕಡಿಮೆಯೇನಲ್ಲ. ಆದರೆ ಆತನ ಆ ನೀಳ ನಿಲವಿಗೆ ತಕ್ಕಂತೆ ಪ್ರಚಾರ ಸಾಗಿ ಬಂದಿಲ್ಲ. ಆತನ ಆ ಸೈದ್ಧಾಂತಕ ಕೃತಿಯ ಅಧ್ಯಯನ ನಡೆದು ಬಂದಿಲ್ಲ. ಸಾಲದ್ದಕ್ಕೆ ನಂಜುಗಣ್ಣಿನವರ ಅಲ್ಲದ ಸಲ್ಲದ ಅಪಪ್ರಚಾರ ಬೇರೆ. ಇದನ್ನೆಲ್ಲ ನೆನೆನೆನೆದು ಮನಸ್ಸು ಮರುಕುಗೊಳ್ಳುತ್ತದೆ. ವಸ್ತುನಿಷ್ಠವಾಗಿ ಹೃದಯಕ್ಕೆ ಮಿತಿ ಮೀರಿದ ನೋವುಂಟಾಗುತ್ತದೆ. ಹೀಗೆ ಹೇಳಿ ಸುಮ್ಮನೆ ಕುಳಿತುಕೊಳ್ಳುವುದು ಧರ್ಮವಲ್ಲ ; ಕರ್ತವ್ಯವಲ್ಲ. ಇನ್ನು ಮುಂದಾದರೂ ಆ ಆಚಾರ್ಯನ ಬಗೆಗೆ, ಆತನ ಆ ಸಾಮಾಜಿಕ ಸೈದ್ಧಾಂತಕ ಆಚಾರ್ಯಕೃತಿಯ ಬಗೆಗೆ ಸಂಶೋಧನ ಅಧ್ಯಯನ ಅಧಿಕ ಪ್ರಚಾರಗಳು ನಡೆಯುವಂತಾಗಬೇಕು. ಈ ದಿಸೆಯಲ್ಲಿ ಇದೊಂದು ನಮ್ಮ ಪುಟ್ಟ ಪ್ರಯತ್ನ ; ಪುಟ್ಟ ಪ್ರಕಾಶನ. ಇಷ್ಟು ಮಾತ್ರ ಸ್ಪಷ್ಟಪಡಿಸಲು ದೃಷ್ಟಿ ಬರಿಸಿದಾತನು ಶಿವಕವಿ–ಶಿವಾನುಭಾವಿ ಶಿವಯೋಗಿ ಶಿವಾಚಾರ್ಯನು. ಆತನ ಆ ಸಿದ್ಧಾಂತ ಗ್ರಂಥ ವೀರಶೈವ ಸರ್ವಸ್ವವಾದಂತೆ ಶಿವಾಗಮ ಶ್ರೀಮಂತ ಶಿವಾಚಾರ್ಯನೂ ವೀರಶೈವ ಸರ್ವಸ್ವವಾಗಿರುವನು ; ಶಿವಾಗಮ ವೀರಶೈವ ತರಣಿಯೂ ಚಿಂತಾಮಣಿಯೂ ಆಗಿರುವನು. ಮತ್ತು ಆತನು ಎಂಟನೆಯ ಶತಮಾನದ ಬೌದ್ಧಾದಿ ಪ್ರತಿಸಿದ್ಧಾಂತವೆಂಬ

ಮಹಾಧ್ವಾಂತವನ್ನು ಪರಿಹರಿಸಿದ ಕ್ರಾಂತಿಕಾರಿ ಕವಿಯೂ ರವಿಯೂ ಆಗಿರುವನು. "....ಬೌದ್ಧಸಮಯ ವಿಧ್ವಂಸನ-ಪ್ರವೀಣರುಂ...." ಎಂಬೀ ತಾಳಿಕೋಟೆ ಶಾಸನ (ಕ್ರಿ. ಶ. ೧೧೮೪) ಸಾಕ್ಷಿಯಾಗಿದೆ. (ಶಾಸನಗಳಲ್ಲಿ ಶಿವಶರಣರು, ಪ್ರ. ೨೯) ಅಂದಿನ ಆ ಮಹಾವೀರಶೈವರಿಗೆ ಧರ್ಮಮಾರ್ಗ ಪ್ರವರ್ತಕನಾಗಿದ್ದನು. ಪರಶಿವ ತತ್ತ್ವ ಪರಿಜ್ಞಾನ ಪ್ರವೃದ್ಧಿಗೆ ಚಿಚ್ಚಂದ್ರನಾಗಿದ್ದನು ; ಆಗಿರುವನು. ವೀರಶೈವ ಸುಧಾರಣೆ ವಿಸ್ತರಣೆ ಶಿವಾಚಾರ್ಯನಿಂದಾದವು. ಇತರ ಸಿದ್ಧಾಂತಗಳನ್ನು ಅತ್ಯದ್ಭುತವಾಗಿ ಜಯಿಸಲು ಸಿದ್ಧಾಂತ ಶಿಖಾಮಣಿ ಮಹಾಮೇರು ಗ್ರಂಥ ತುಂಬಾ ನೆರವಾಯಿತು. ಶಿವಕವಿಯ ತತ್ತ್ವಚಿಂತನೆ ಸತ್ಯ ನಿರೂಪಣೆ ಅಗಾಧವಾದವುಗಳು. ಕವಿಯ ಅಪ್ರತಿಮ ಪ್ರತಿಭೆಯಿಂದ ವೀರಶೈವ ತತ್ತ್ವಗಳು, ಷಟ್‌ಸ್ಥಲ ಸಿದ್ಧಾಂತವು ಸರ್ವಮಾನ್ಯವಾಗಿ ಸಮಗ್ರವಾಗಿ ಬೆಳೆದು ಬೆಳಗುವಂತಾಯಿತು. ಶಿವಾಚಾರ್ಯರು ಷಟ್‌ಸ್ಥಲ ಬ್ರಹ್ಮಿಗಳಾದರು ; ವೀರಶೈವ ಚಕ್ರವರ್ತಿಗಳಾದರು.

ಶಿವಯೋಗಿ ಶಿವಾಚಾರ್ಯನು ಶಿವಾಗಮಗಳ ನೂರೊಂದು ನೆಲೆಗಳನ್ನು ಸಮೀಕರಿಸಿ, ನೀಳಾದ ನಿಲವಿನ ಷಟ್‌ಸ್ಥಲ ಸೌಧವನ್ನು ಸುಂದರವಾಗಿ ಸಮಗ್ರವಾಗಿ ನಿರ್ಮಿಸಿ ನಿಲ್ಲಿಸಿರುವನು. ವೀರಶೈವಧರ್ಮ ಸಿದ್ಧಾಂತವನ್ನು ಸಪ್ರಮಾಣವನ್ನಾಗಿಸಿರುವನು. ಇಷ್ಟಲಿಂಗ ಲಕ್ಷಣ ಧಾರಣ ಅರ್ಚನಾದಿಗಳನ್ನು ಅಂದೇ ವಿಶದವಾಗಿ ವಿವೇಚಿಸಿದ್ದಾನೆ :

"ಇಷ್ಟಲಿಂಗಮಿದಂ ಸಾಕ್ಷಾದನಿಷ್ಟಪರಿಹಾರಕಂ
ಧಾರಯೇದವಧಾನೇನ ಶರೀರೇ ಸರ್ವದಾ ಬುಧಃ ।
ಮೂರ್ಧ್ನಿ ವಾ ಕಂಠದೇಶೇ ವಾ ಕಕ್ಷೇವಕ್ಷಸ್ಥಲೇऽಪಿ ವಾ
ಕುಕ್ಷೌ ಹಸ್ತಸ್ಥಲೇ ವಾಪಿ ಧಾರಯೇಲ್ಲಿಂಗಮೈಶ್ವರಂ ।
ನಾಭೇರದಸ್ತಾಲ್ಲಿಂಗಸ್ಯಧಾರಣಂ ಪಾಪಕಾರಣಂ
ಜಟಾಗ್ರೇ ತ್ರಿಕಭಾಗೇಚ ಮಲಸ್ಥಾನೇ ನ ಧಾರಯೇತ್ ।
ಬಾಹ್ಯಪೀಠಾರ್ಚನಾದೇತತ್ಕರ ಪೀಠಾರ್ಚನಂವರಂ
ಸರ್ವೇಷಾಂ ವೀರಶೈವಾನಾಂ ಮುಮುಕ್ಷೂಣಾಂ ನಿರಂತರಂ ।
ವೇದಶಾಸ್ತ್ರ ಪುರಾಣೇಷು ಕಾಮಿಕಾದ್ಯಾಗಮೇಷು ಚ
ಲಿಂಗಧಾರಣ ಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್...."

—ರೇಣುಕಗೀತೆ

ಅನಾದಿ ರುದ್ರ ಭದ್ರ ರೇಣುಕರಿಂದ ಬಂದ ಇಷ್ಟಲಿಂಗ ತತ್ತ್ವದ ಬಗೆಗೆ ಇತ್ತೀಚಿಗೆ ಅಂದರೆ ೮–೧೦ ವರುಷಗಳಿಂದ ಇಷ್ಟಲಿಂಗ ಇತ್ತೀಚಿನದೆಂದು, ೧೨ನೆ ಶತಮಾನಕ್ಕೆ ಹಿಂದೆ ಧಾರಣವಿರಲಿಲ್ಲೆಂದು, ಅಂತೆಯೇ ಕಳಪೀಠಾರ್ಚನವೂ ಇರಲಿಲ್ಲೆಂದು ಅರಿವಿಲ್ಲದ ಅರ್ಥವಿಲ್ಲದ ವಾದ ವಿವಾದವನ್ನು ಕೆಲವೇ ಜನರು ಕೈಕೊಂಡಿದ್ದಾರೆ. ಇದರಲ್ಲಿ ಯಾವ ವಾಸ್ತವಕತೆಯಿಲ್ಲ. ಇದೊಂದು ವ್ಯರ್ಥ ವಿವಾದವೆಂಬುದನ್ನು ಮೇಲಿನ ಶ್ಲೋಕಗಳು ಸ್ಪಷ್ಟಪಡಿಸಿವೆ. ಇದೆಲ್ಲವೂ ಶಿವಾಗಮಗಳಲ್ಲಿಯೇ ಎರಡು ಸಾವಿರ ವರುಷಗಳ ಪೂರ್ವದಲ್ಲಿಯೇ ಇಷ್ಟಲಿಂಗಧಾರಣಾರ್ಚನಾದಿಗಳಿದ್ದವೆಂಬುದನ್ನು ಅರಿತುಕೊಳ್ಳಬೇಕಾದಲ್ಲಿ ನಾವೇ ರಚಿಸಿದ "ಶಿವಾಗಮಗಳಲ್ಲಿ ವೀರಶೈವಧರ್ಮಸಿದ್ಧಾಂತ" ಎಂಬೀ ಕೃತಿಯನ್ನು ಕಣ್ಣಾಡಿಸಬೇಕು. ವ್ಯಕ್ತಿವಾಚಕವೂ ಏಕಾಂಗ ಸೂಚಕವೂ ಆದ ಲಿಂಗಾಯತ ಪದವನ್ನು ಪಟ್ಟಾಗಿ ಹಿಡಿದು, ಇದನ್ನು ಬಸವಣ್ಣನವರು ಸ್ಥಾಪಿಸಿದರೆಂದು ಸಮಾಜವಾಚಿಯೆಂದು ಅರ್ಥವಿಲ್ಲದ ಆಧಾರವಿಲ್ಲದ ಇನ್ನೊಂದು ವಾದವನ್ನು ಮಾಡುತ್ತಿರುವುದು ದೂರದೃಷ್ಟಿಯಿಲ್ಲದುದಾಗಿದೆ. ಇದರಲ್ಲಿಯೂ ಯಾವ ಹುರುಳಿಲ್ಲ ; ಔಚಿತ್ಯವಿಲ್ಲ. "ವೀರಶೈವ ವಿಚಾರ ವಾಹಿನಿ" ಎಂಬೀ ನಮ್ಮ ಇನ್ನೊಂದು ಗ್ರಂಥದಲ್ಲಿ ಇದನ್ನೆಲ್ಲ ಖಂಡಿಸಲಾಗಿದೆ.

೭ ಮತ್ತು ೮ನೆಯ ಶತಮಾನದ ವೀರಶೈವ ಪ್ರಾತಿನಿಧಿಕ ಶಿವಾಚಾರ್ಯರೂ ವೀರಶೈವಧರ್ಮ ಮಾರ್ಗ ಪ್ರವರ್ತಕರೂ ಶಿವಸಿದ್ಧಾಂತ ನಿರ್ಣೇತರೂ ಆದ ಸಿದ್ಧನಾಥ ಶಿವಾಚಾರ್ಯರು ಮತ್ತು ಅವರ ನಂದನರಾದ ಶಿವಯೋಗಿ ಶಿವಾಚಾರ್ಯರು ವೀರಶೈವ ಮಹಾಕ್ರಾಂತಿ ಕಾರಣರು ; ವೀರಶೈವರ ಸಂಘಟನೆಗೆ ಧರ್ಮಮಾರ್ಗ ಪ್ರವರ್ತನೆಗೆ ಹೋರಾಡಿದವರು. ಮತ್ತು ವೀರಶೈವ ಷಟ್‌ಸ್ಥಲ ಸಿದ್ಧಾಂತವನ್ನು ಶಿವಾಗಮಗಳಿಂದ ಸಂಪಾದಿಸಿ ಸಮಗ್ರವಾಗಿ ತಮ್ಮ ಸಾಂಸ್ಕೃತಿಕ ವೀರವಾಣಿಯಿಂದ ವಿಶಿಷ್ಟಾನುಭೂತಿಯಿಂದ ಸಾರಿದವರು. ಅವರಿಗಿಂತ ಹೆಚ್ಚಾಗಿ ಹೇಳಿದವರು ಅವರಿಂದೀಚೆಗೆ ಯಾರೂ ಇಲ್ಲ. ಲಿಂಗವಂತಿಕೆಗೆ ಪುರಾತನತೆಯಿದೆ. ಅನಾದಿ ವೀರಶೈವೋಕ್ತವಾಗಿ ಸಿದ್ಧವಾಗಿದೆ. ಸನಾತನವಾಗಿದೆ. ಅವರ ಸಿದ್ಧಾಂತ ಮಹಂತಕೃತಿ 'ವೀರಶೈವ ಮಹಾ ತಂತ್ರ'ವೆನಿಸಿದೆ. ಮತ್ತು ಲೋಕಾನುಗ್ರಹಕ್ಕಾಗಿ ರಚಿತವಾಗಿದೆ. ವೀರಶೈವಾಗಮ ಸಾರವಾಗಿದೆ. ಅಂದೇ ಸೈದ್ಧಾಂತಿಕವಾಗಿ

ಅಂದರೆ ನಿರ್ಣಯಾತ್ಮಕವಾಗಿ ಸಮಗ್ರತೆಯನ್ನು ಸೃಜಿಸಿದೆ ; ಸಾರಿದೆ. ೭–೮ ಶತಮಾನಗಳಿಂದೀಚಿನವರಿಗೆ ಇಲ್ಲಿಯವರೆಗೆ ಮುಂದಕ್ಕೂ ಅನೂನ ಆಧಾರವಾಗಿದೆ ; ಆಢ್ಯವಾಗಿದೆ. ಬೇರೆ ಬೇರೆ ಸಿದ್ಧಾಂತಗಳ ಮೇಲೆ ತನ್ನ ಕೊರತೆಯಿಲ್ಲದ ಬೆಳಕನ್ನು ಚೆಲ್ಲಿದೆ. ಪ್ರಶಾಂತ ಪ್ರಭಾವವನ್ನು ಬೀರಿದೆ. ಅಂತೆಯೆ ಶಿವಾನುಭಾವಿ ಶಿವಕವಿ ಶಿವಯೋಗಿ ಶಿವಾಚಾರ್ಯರ ಬೌದ್ಧಾದಿ ಪ್ರತಿಸಿದ್ಧಾಂತಗಳ ಮೇಲೆ ಮಾಡಿದ ಮಹಾಕ್ರಾಂತಿ ಮಹಾಶಾಂತಿ ನಿಯತಿಯಿಂದ ಕೂಡಿದುದು. ಕ್ರೂರವಲ್ಲ ; ಘೋರವಲ್ಲ. ಶಿ. ಶಿವಾಚಾರ್ಯನು ಸರ್ವರ ಧರ್ಮಮಾರ್ಗ ಪ್ರವರ್ತಕ, ಪ್ರತಿನಿಧಿ ಮತ್ತು ಆದಿವೀರಶೈವ ಪ್ರಸ್ಥಾನ ಪ್ರಾಚಾರ್ಯ. ವೀರಶಿವಾಗಮೋಕ್ತ ಧರ್ಮಧುರ್ಯ. ಆತನದು–"ಸರ್ವೇಷಾಂ ಶೈವತಂತ್ರಾಣಾಮುತ್ತರತ್ವಾನ್ನಿರುತ್ತರಂ । ನಾಮ್ನಾಪ್ರತೀಯತೇ ಲೋಕೇ ಯತ್ ಸಿದ್ಧಾಂತ ಶಿಖಾಮಣಿಃ॥" ಭಾವಪ್ರಸಾದ ಗೀರ್ವಾಣಿಯಿಂದ ಘನಗಂಭೀರವಾಗಿ ಬಿತ್ತರಿಸುವ ಸ್ಥೈರ್ಯ. ಸತ್ಯಕ್ಕೂ ನಿತ್ಯಕ್ಕೂ ಆತನ ನಿರುಪಮ ಕೃತಿ ಪಶುಪತಿ ಮತಸಾರವಾಗಿ ಪಡೆದಿದೆ ಪ್ರಾಚುರ್ಯ. ಇದಕ್ಕೆ ಈಡಾದ ಹೊತ್ತಗೆ ಕನ್ನಡದಲ್ಲಾಗಲಿ ಸಂಸ್ಕೃತದಲ್ಲಾಗಲಿ ಇನ್ನೂ ಹುಟ್ಟಿಲ್ಲ. ಹುಟ್ಟುವ ಲಕ್ಷಣವೂ ಇಲ್ಲ. ಏಕೆಂದರೆ ಶಿ. ಶಿವಾಚಾರ್ಯವದು ಅಷ್ಟೊಂದು ಅದ್ಭುತವಾದ ಅಗಾಧವಾದ ಸ್ವಾನುಭಾವಿಕ ಶಕ್ತಿ. ಅದು ಆ ಚಿದಾನಂದ ಪರಾಕಾಶ ಶಕ್ತಿ. ಸಕಲಾರ್ಥ ಪ್ರಕಾಶಕ ಸರಸ್ವ ಶಕ್ತಿ. ಪಂಡಿತ ಶ್ಲಾಘನೀಯ ಪರಮ ಪ್ರತಿಭಾನ್ವಿತ ಪ್ರಬುದ್ಧಶಕ್ತಿ ! ಆತನ ವೈವಿಧ್ಯಮಯ ಪ್ರೌಢ ವಿಚಾರಾನುಭವ ಸ್ವಾತಂತ್ರ್ಯ ಎಂತವರೂ ಮೆಚ್ಚತಕ್ಕುದು. ಹೆಚ್ಚಳಿಕೆಯ ಸಾರತಕ್ಕುದು. ಆತನ ಆ ಮಹಾ ಮೇರುಕೃತಿ ವ್ಯಕ್ತಿ–ವಿಶ್ವಗಳಿಗೆ ಅಥವಾ ವ್ಯಷ್ಟಿ–ಸಮಷ್ಟಿಗಳಿಗೆ ಸೇತುವೆಯಾಗಿ ಸರ್ವಮಾನ್ಯವಾಗಿದೆ. "ಸರ್ವಂ ಶಿವಮಯಂ ಜಗತ್" "ಯತ್ರ ಜೀವಸ್ತತ್ರ ಶಿವಃ" ಎಂಬೀ ಸರ್ವೋತ್ತಮ ವೀರಶಿವಾಗಮ ವಿಶಿಷ್ಟ ಸಂಸ್ಕೃತಿಯನ್ನು ವಿಶುದ್ಧ ಧರ್ಮರತಿಯನ್ನು ಉನ್ನತವಾಗಿ ಎತ್ತಿ ಸಾರುವುದೇ ಆತನ ಆ ಕೃತಿಯ ಹೃದಯವಾಗಿದೆ. ಸಾರಸರ್ವಸ್ವವಾಗಿದೆ.

ಸಿದ್ಧಾಂತ ಸಾಹಿತ್ಯವನ್ನು ರಚಿಸುವುದೂ ಒಂದು ರಸಮಯ ಬದುಕು ; ರಸಮಯ ಮೆಲುಕು. ಅದರಲ್ಲಿ ಸಿಕ್ಕುವ ಆನುಭಾವಿಕಾನಂದ ಆತ್ಯಂತಿಕಾನಂದ; ನಿಶ್ಚಲವೂ ನಿರ್ಮಲವೂ ಆದ ನಿರ್ಣಾಯಕಾನಂದ. ಅಲ್ಲಿ ಷಡೂರ್ಮಿಗಳ

ಉಮ್ಮಳವಿರದು. ಷಡ್ಭಾವವಿಕಾರಗಳಿರವು. ಅದರಲ್ಲಿಯೂ ಅತ್ಯುಚ್ಚ ಸಾಂಸ್ಕೃತಿಕ ಸಾಹಿತ್ಯ ಶ್ರೇಣಿಗೆ ಸೇರಲು ಸರ್ವಸಮರ್ಥವಾದ ಸೈದ್ಧಾಂತಿಕ ಗೀತ ರಚನ ಅದೊಂದು ಸತ್ಯಕ್ಕು ತಾತ್ತ್ವಿಕ ತಪಸ್ಸು; ತಾತ್ತ್ವಿಕ ಭವ್ಯ ಭವನಕ್ಕೆ ಹಚ್ಚಿಟ್ಟ-ಅಚ್ಚಳಿಯದೆ ಬೆಳಗುವ ದಿವ್ಯ ತೇಜಸ್ಸು. ಸರ್ವಾನುಭಾವಿ ಸಾರ್ವ ಭೌಮ ಶಿಖಾರತ್ನ. ಅಂತಿರುವ ಸಿದ್ಧಾಂತ ಶಿಖಾಮಣಿಯ ಮೂಲಗುರಿ ಸತ್ಯಾನುಸಂಧಾನ; ಲೋಕಾನುಗ್ರಹ. ಮತ್ತು ಪಿಂಡಾಂಡ ವಿಕಾಸ ವಿನ್ಯಾಸ! ಅದರ ಈ ಕ್ರಾಂತ ಅದರ ದೃಷ್ಟಿ ನಿತ್ಯ ನೂತನ; ಚಿರಂತನ; ಚೈತನ್ಯಪೂರ್ಣ. ಮತ್ತು ಅದರದೇ ಆದ ಪಾರಿಭಾಷಿಕ ಶೈಲಿಯಲ್ಲಿ ನಿರೂಪಿಸುವುದಾದರೆ- 'ಚಿದ್ವಿಲಾಸ ಪರಿಸ್ಫೂರ್ತಿ ಪರಿಪೂರ್ಣ ಸುಖಾದ್ವಯ' ಸಾಧನ! ಸನಾತನ ವೀರಶೈವ ಷಟಸ್ಥಲ ಸಂಸ್ಕೃತಿಯ ಸ್ಥಿರೀಕರಣ!! ಅದನ್ನು ಸ್ವಾಧ್ಯಾಯ ನಿಸುವ ಸಹೃದಯರಿಗೆ ನವ ಚೇತನ!! ಅದು ಎಂತವರಿಗೂ ಕ್ರತುಶಕ್ತಿಯನ್ನು ಕೊಡಬಲ್ಲುದು. ನೂರೊಂದು ಜನ ಕ್ರಾಂತಿಕಾರರು ಕಾರಣಿಕರು ಕೊಡದ ಕ್ರತು ಶಕ್ತಿಯನ್ನು ಅದು ಕೊಡಬಲ್ಲುದು ಖಚಿತವಾಗಿ ಕರನಿಷ್ಠೆ ಕರಿಗೊಂಡಲ್ಲಿ! ಇದು ಜಾತಿವಾದಿ ಸಿದ್ಧಾಂತ ಕೃತಿಯಲ್ಲ; ಜ್ಯೋತಿರ್ಮಯ ಸತ್ಯಶಿವ ಸೌಂದರ್ಯ ವನ್ನು ಪ್ರತಿಪಾದಿಸುವ ಪರಿಸ್ಫೂರ್ತಿ ಪ್ರದಾಯಕ ಕೃತಿ! ಮಾನವ ಕಲ್ಯಾಣ ವನ್ನೇ ಮುಖ್ಯಗುರಿಯನ್ನಾಗಿಟ್ಟುಕೊಂಡು ರೂಪುಗೊಂಡ ಕೃತಿ!! ಈ ಕೃತಿ ಕ್ರಾಂತಿ ಮಣಿಹಕ್ಕೆ ಅದೆಂದಿಗಿಲ್ಲ ಚ್ಯುತಿ!! ಇದಲ್ಲದೆ ಇವರ ಸಮಕಾಲೀನ ರಾದ ಶ್ರೀನೀಲಕಂಠ ಶಿವಾಚಾರ್ಯರು ವಿಶಿಷ್ಟಾದ್ವೈತ ಸಿದ್ಧಾಂತ ಭಾಷ್ಯಕರ್ತರಾಗಿ ಪ್ರಸಿದ್ಧರಾಗಿರುವರು. ಇವರ ಶಿಷ್ಯ ಹರದತ್ತ ಶಿವಾಚಾರ್ಯರು ಆದಿ ಶಂಕರಾ ಚಾರ್ಯರೊಡನೆ ಗೋಕರ್ಣದಲ್ಲಿ ವಾದ ಮಾಡಿಗೆದ್ದವರು. ೮ನೆಯ ಶತಮಾನ ಈ ನಾಲ್ವರು ಶಿವಾಚಾರ್ಯರ ಚೈತನ್ಯ ಸಂಗಮ ಕಾಲ.

## ಪ್ರಥಮ ವಚನ ರಚಕ ಇಮ್ಮಡಿ ಪಂಡಿತಾರಾಧ್ಯ!

ಕ್ರಿ. ಶ. ೯ನೆಯ ಶತಮಾನದಲ್ಲಿ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ರಾಗಿ ಶ್ರೀ ಮಲ್ಲಿಕಾರ್ಜುನ ಶಿವಾಚಾರ್ಯರು ಮತ್ತು ಶ್ರೀ ಸಿದ್ಧಮಲ್ಲ ಶಿವಾ ಚಾರ್ಯರು ಬೆಳಗಿದರು. ಅವರಿಬ್ಬರ ಚಾರಿತ್ರ ಸಿಕ್ಕಿಲ್ಲ. ಇವರಲ್ಲಿ ಶ್ರೀ ಸಿದ್ಧ ಮಲ್ಲ ಶಿವಾಚಾರ್ಯರ ಪುಣ್ಯನಾಮವನ್ನು ಅದೇ ೯ನೆಯ ಶತಮಾನದ ಅಂತ್ಯದಲ್ಲಿ

ಮತ್ತು ೧೧ನೆಯ ಶತಮಾನದ ಪೂರ್ವಭಾಗದಲ್ಲಿದ್ದು ವಚನ ರಚಿಸಿದ ಇಮ್ಮಡಿ ಪಂಡಿತಾರಾಧ್ಯರೆಂಬವರು ತಮ್ಮೊಂದು ವಚನಕ್ಕೆ ಅಂಕಿತವನ್ನಾಗಿಸಿಕೊಂಡಿರು ವರು. ಆ ವಚನ ಹೀಗಿದೆ :

"ಇಲ್ಲದ ಕುತ್ತವ ಕೊಂಡ ಬಲ್ಲವರ ಬಾಯ ಹೋಗ ಹೋದರೆ,
ಆ ಬಲ್ಲ ಬಲ್ಲವರೆಲ್ಲಾ ಆ ಬಲ್ಲಲ್ಲಿಯೆ ಅಲ್ಲತ್ತಗೊಳ್ಳುತ್ತಿದ್ದರು;
ಇದೆಲ್ಲಿಯ ಕುತ್ತು ಎಂದು ತಿಳಿದು ವಿಚಾರಿಸಲು ಅದೆಲ್ಲೇ
ಬಯಲಾಗಿತ್ತು ಗುರು ಸಿದ್ಧಮಲ್ಲು."

ಈಗ ಸಿಕ್ಕಿರುವ ವಚನಕಾರರಲ್ಲಿ ಇವರೇ ಮೊದಲಿಗರು. ಈ ಇಮ್ಮಡಿ ಪಂಡಿತಾರಾಧ್ಯರಿಗಿಂತ ಪೂರ್ವದವರ ವಚನಗಳು ಸಿಕ್ಕಿಲ್ಲ. ಶ್ರೀ ಪಂಡಿತಾ ರಾಧ್ಯರ ಈ ವಚನ ಲಭ್ಯವಾದುದೊಂದು ಭಾಗ್ಯವಿಶೇಷವೆಂದೆ ಹೇಳಬೇಕು.

## ವೀರಶೈವಾಂಬುಧಿ ರವಿ ವಿರೂಪಾಕ್ಷ ದೇಶಿಕೇಂದ್ರ: ಕಾಶ್ಮೀರದಲ್ಲಿ ಕ್ರಾಂತಿ !

ಅದೇ ಹತ್ತನೆಯ ಶತಮಾನದಲ್ಲಿ ಶ್ರೀಶೈಲ ಪೀಠಾಧಿಪತಿಗಳಾಗಿದ್ದ ಶ್ರೀ ವಿರೂಪಾಕ್ಷ ದೇಶಿಕೇಂದ್ರರು ವೀರಶೈವ ವಿಭೂತಿ ಪುರುಷರು. ಯೋಗ-ಶಿವ ಯೋಗಗಳಲ್ಲಿ, ವಿದ್ವತ್ತಿನಲ್ಲಿ, ಕ್ರಿಯಾಸಿದ್ಧಿಯಲ್ಲಿ ಅತ್ಯಂತ ಅಗ್ರಗಣ್ಯ ತೇಜಸ್ವಿ ಗಳು. ಅವರು ಉತ್ತರ ಭಾರತವನ್ನೆಲ್ಲ ಸಂಚರಿಸಿ ಎಲ್ಲೆಡೆಯಲ್ಲಿ ತಮ್ಮ ಪ್ರಭಾವವನ್ನು ಪ್ರಕಾಶಪಡಿಸಿದವರು. ತಮಗಿರುವ ಅತೀಂದ್ರಿಯ ಶಕ್ತಿಯಿಂದ ಅನೇಕ ಕಡೆಗಳಲ್ಲಿ ಪವಾಡಗಳನ್ನು ಪ್ರದರ್ಶಿಸಿ ಪ್ರಸಿದ್ಧರಾದವರು. ರಾಜ ಮಹಾರಾಜರುಗಳನ್ನು ಮನೀಷಿಗಳನ್ನು ಶಿವದೀಕ್ಷೆಯನ್ನಿತ್ತು ವೀರಶೈವರನ್ನಾಗಿಸಿ ಕಾಶ್ಮೀರದವರೆವಿಗೂ ವೀರಶೈವ ಧರ್ಮವನ್ನು ವಿಸ್ತರಿಸಿ ವಿಖ್ಯಾತಗೊಳಿಸಿದವರು. ಕಾಶಿಯಲ್ಲಿ ಅಮಾವಾಸ್ಯೆಯ ದಿನ ಚಂದ್ರನನ್ನು ತೋರಿಸಿ, ಶ್ರೀಪತಿಯನ್ನು ದಾರ್ಶನಿಕ ವಾದದಲ್ಲಿ ಜಯಿಸಿದವರು. ಶ್ರೀಪತಿಯು ಹತ್ತನೆಯ ಶತಮಾನದ ಪ್ರಕಾಂಡ ಪಂಡಿತನು. ಈತನು ಬ್ರಹ್ಮಸೂತ್ರಕ್ಕೆ ವೀರಶೈವ ಪರ ಭಾಷ್ಯವನ್ನು ಬರೆದವನು. ಕಾಶ್ಮೀರದ ಅರಸು ಮನೆತನದ ಶೈವರನ್ನು ತಮ್ಮ ದೀಕ್ಷಾನುಗ್ರಹ ದಿಂದ ವೀರ ಶೈವರನ್ನಾಗಿಸಿದವರು. ಮತ್ತು ಕಾಯಕದ ಮೌಲ್ಯವನ್ನು ಅವರಿಗೆ

ಮನವರಿಕೆ ಮಾಡಿಕೊಡುವುದಲ್ಲದೆ ಸ್ವತಃ ಶಿವದೇವ ಮಹಾರಾಜನನ್ನು ಕಾಯಕಕ್ಕೆ ಹಚ್ಚಿದರು. ಗುರು ಜಂಗಮರಿಗೆ ಅರಮನೆಯಲ್ಲಿ ನಿತ್ಯ ಧರ್ಮದಾಸೋಹವನ್ನು ಮಾಡಹಚ್ಚಿದರು. ಮತ್ತು ಕಾಶ್ಮೀರದ ಬಹುಜನಗಳ ಮೇಲೆ ತಮ್ಮ ಕ್ರಿಯಾತ್ಮಕ ಪ್ರಭಾವವನ್ನು ಬೀರಿ ವೀರಶೈವರನ್ನಾಗಿಸುವರು, ಮತ್ತೆ ಕೆಲವರನ್ನು ವೀರ ಮಾಹೇಶ್ವರರನ್ನಾಗಿಸುವರು.

## ಕಾಯಕ ಕ್ರಾಂತಿ !

ಕಾಯಕ ತತ್ತ್ವ ತುಂಬ ಪುರಾತನದ್ದು. ಕಾಯಕ ಸ್ರಷ್ಟಾರ ಶ್ರೀ ವೀರೇಶ್ವರ. ಆತನು ಸೃಷ್ಟಿಸಿದ ಕಾಯಕ ಪುರವಂತಿಕೆ ! ವೀರಗಾಸೆ ಧರಿಸುವಿಕೆ; ವೀರಕಾರ್ಯಗಳನ್ನೆಸಗುವಿಕೆ ! ಮತ್ತು ಲಿಂಗಕಾಯಕಗಳನ್ನು ಮಾಡಿ "ಲಿಂಗವೀರ" ರೆಂದೆನಿಸುವಿಕೆ ! ಲಿಂಗದ ಕ್ರಾಂತಿಯೆ ಲಿಂಗದ ವೀರರ ಕಾಯಕ! ಇವರೆಲ್ಲ ವೀರಭದ್ರದೇವನ ಶಿಷ್ಯ ಪ್ರಶಿಷ್ಯರು. ಕರ್ನಾಟಕ ಪ್ರಾಂತವೊಂದರಲ್ಲಿಯೇ ಪುರವಂತರು, ಲಿಂಗದ ವೀರರು ಸು. ನಾಲ್ವತ್ತು ಸಾವಿರ ಸಂಖ್ಯೆಯವರೆವಿಗೂ ಇರುವರೆಂದು ಕೇಳಿ ತಿಳಿದಿದ್ದೇವೆ. ಇಷ್ಟೊಂದು ದೀರ್ಘಕಾಲ ವೀರೇಶನ ಕಾಯಕವಂತರು ಉಳಿದು ಬೆಳೆದು ಬಂದುದು ಕಾಯಕ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿರಿಸಬೇಕಾದ ವಿಶಿಷ್ಟ ವಿಷಯವಾಗಿದೆ. ವೀರೇಶನಿಂದ ಆರಂಭವಾದ ಕಾಯಕತತ್ತ್ವ ಕಾಲಕಾಲಕ್ಕೆ ಹೆಚ್ಚಿನ ಮೆರಗನ್ನು ವೈವಿಧ್ಯಮಯವಾಗಿ ಪಡೆಯುತ್ತ ಬಂದಿದೆ. ಆಧುನಿಕ ವೀರಶೈವದಲ್ಲಿ ಮೊತ್ತಮೊದಲಿಗೆ ಅಂದರೆ ಹತ್ತನೆಯ ಶತಮಾನದಲ್ಲಿ ನಿಡುಮಾಮಿಡಿ ಶ್ರೀಶೈಲ ಪೀಠದ ಅಧಿಪತಿಗಳಾದ ಶ್ರೀ ವಿರೂಪಾಕ್ಷ ದೇಶೀಕೇಂದ್ರರಿಂದ ವಿಸ್ತಾರವಾಗಿ ವೈವಿಧ್ಯಮಯವಾಗಿ ಪ್ರಸಾರವಾಗುವುದು. ತಾವೇ ಮೊಮ್ಮೊದಲು ಶ್ರೀಶೈಲದಲ್ಲಿ ಕದಲೀವನ ನಿರ್ಮಾಣ ಕಾಯಕವನ್ನು ಕೈಕೊಂಡರು. ತಮ್ಮ ಶಿಷ್ಯರಾದ ಶ್ರೀ ಚಂದ್ರಗುಂಡರೇ ಮೊದಲಾದವರಿಂದಲೂ ಕಾಯಕ ಮಾಡಿಸುತ್ತಿದ್ದರು. ಅಲ್ಲದೆ ಗೃಹಸ್ಥ ಶಿಷ್ಯರಲ್ಲಿ ಹದಿನೆಂಟು ಕಾಯಕಗಳನ್ನು ಜಾರಿಗೆ ತಂದ ಕೀರ್ತಿ ವಿರೂಪಾಕ್ಷ ದೇಶೀಕೇಂದ್ರರು ಮತ್ತು ಚಂದ್ರಗುಂಡ ದೇಶಿಕೇಂದ್ರರು ಇವರುಗಳಿಗೆ ಸಲ್ಲುತ್ತದೆ. ಬಣಜಿಗರು, ಗಾಣಿಗರು, ಪಂಚಮಸಾಲಿಯವರು. ಕುರುಬರು, ಕುಂಬಾರರು, ಕಂಬಾರರು, ಕ್ಷೌರಿಕರು, ಶೀಲವಂತರು, ಕಡ್ಡಿಪುಡಿಯವರು,

ಒಡ್ಡರು, ಹಗಲು ವೇಷಧಾರಿಗಳು, ಈಡಿಗರು, ಬಾಲಜಂಘರು, ಸಂನ್ಯಾಸಿಗಳು ನಾಯಕರು, ಜೈನರು, ದೇಸಾಯರು, ಹೂಗಾರರು ಇವರುಗಳನ್ನೆಲ್ಲ ಕಾಯಕ ವಂತರನ್ನಾಗಿಸಿರುವರು. ಅಂತೆಯೇ ಅವರು ಹದಿನೆಂಟು ಪಣಕಟ್ಟಿನ ಪ್ರಥಮ ಗುರುಗಳಾಗಿ ಪ್ರಸಿದ್ಧರಾಗಿರುವರು.

ಶ್ರೀವಿರೂಪಾಕ್ಷ ದೇಶೀಕೇಂದ್ರರು ಕಾಶ್ಮೀರ ಪ್ರಾಂತ ಸಂಚಾರದಲ್ಲಿರು ವಾಗ ಅಲ್ಲಿನ ಮಾಂಡವ್ಯ ಪುರದರಸು ಶಿವದೇವನು ತನ್ನಲ್ಲಿಗೆ ಆಹ್ವಾನಿಸುವನು. ಆದರಾತಿಶಯದಿಂದ ಅರಮನೆಗೆ ಬಿಜಯಂಗೈಸಿಕೊಂಡು ಅರ್ಚನಾದಿಗಳನ್ನು ಅತ್ಯಂತ ಭಕ್ತಿಭಾವ-ವೈಭವಗಳಿಂದ ನೆರವೇರಿಸುವನು. ಬಳಿಕ ಪದ್ಧತಿಯಂತೆ ಪಾದಕಾಣಿಕೆಯನ್ನರ್ಪಿಸಲು ರಾಜಮನ್ನಣೆಗೆ ತಕ್ಕಂತೆ ಬೆಳ್ಳಿಯ ತಟ್ಟೆಯಲ್ಲಿ ಬಂಗಾರದ ನಾಣ್ಯಗಳನ್ನು ಕಿಲ್ಲತ್ತುಗಳನ್ನು ಇಟ್ಟುಕೊಂಡು ಸನ್ನಿಧಿಯ ಸಸಿಪಕ್ಕೆ ಬರುವನು. ಸನ್ನಿಧಿಯವರು ತಂದ ತಟ್ಟೆಯನ್ನು ನೋಡಿ, ಈ ನಿನ್ನ ಕಾಣಿಕೆ ನಮಗೆ ಸಲ್ಲುವುದಲ್ಲ. ಇದು ನಿನ್ನ ಸೊತ್ತಲ್ಲ; ಪ್ರಜರ ಸೊತ್ತು. ನಿನ್ನ ಕಾಯಕ ದಿಂದ ಬಂದುದೇನಾದರಿದ್ದರೆ ತಂದು ಸಲ್ಲಿಸೆಂದು ಅಪ್ಪಣೆಯ ನೀಯುವರು. ಆಗ ಅರಸನಿಗೆ ದಿಕ್ಕು ತೋಚದಂತಾಗಿ ಒಂದು ವಾರ ಅವಕಾಶವನ್ನು ಕೇಳಿ ಪಡೆ ವನು. ಶಿವದೇವ ಭೂಪನು ಏಳು ದಿನ ಕೂಲಿ ಮಾಡಿ ಕಂಬಾರನಿಂದ ಕಬ್ಬಿಣದ ತುಂಡೊಂದನ್ನು ಪ್ರತಿಫಲವಾಗಿ ಪಡೆದು ತಂದರ್ಪಿಸುವನು. ಅದನ್ನು ಸನ್ನಿಧಿಯವರು ಸಂತೋಷಚಿತ್ತವುಳ್ಳವರಾಗಿ ಕಾರುಣ್ಯದೃಷ್ಟಿಯಿಂದ ನಿಟ್ಟಿಸಿ ತಮ್ಮ ಅಮೃತ ಹಸ್ತದಿಂದ ಮುಟ್ಟುವರು. ಆಗ ಅದು ಕನಕವಾಗುವುದು. ಕಬ್ಬಿಣ ಕನಕವಾದುದನ್ನು ಕಂಡು ಕಡು ಅಚ್ಚರಿಪಡುವನು ಅರಸನು. ಆಗ ಸನ್ನಿಧಿ ಯವರು, ಓ ಶಿವದೇವಭೂಪ, ಇದು ನಮ್ಮೊಬ್ಬರ ಮೈಮೆ ಮಾತ್ರದಿಂದ ಆದುದಲ್ಲ; ಇದಕ್ಕೆ ನಿನ್ನ ಈ ಏಳು ದಿನದ ಕಾಯಕ ನಿಷ್ಠೆಯ ಕ್ರಿಯಾಸಿದ್ಧಿಯೂ ಕೂಡಿದೆ. ಎಂದಪ್ಪಣೆಯ ಮಾಡಿ, ಅದನ್ನು ತಮ್ಮ ಹಸ್ತದಲ್ಲಿ ತೆಗೆದುಕೊಂಡು ಮರಳಿ ಅರಸನ ಉಡಿಗೆ ಹಾಕುವರು. ತಮಗೆಂದು ಸಲ್ಲಿಸಿದುದನ್ನು ಮರಳಿ ನನಗೇಕೆ ಕೊಡುವಿರಿ-ಎಂದೆನ್ನಲು; ಅದಕ್ಕೆ ಸನ್ನಿಧಿಯವರು ಶಿವದೇವನೆ, ಇಷ್ಟೊಂದು ಚಿನ್ನವನ್ನು ನಾವೇನು ಮಾಡೋಣ ? ಅರಸನಾದ ನಿನಗೇ ಇದಿರ ಬೇಕಾದುದು ದಿಟವಾದರೂ ಇದನ್ನು ನಿನ್ನ ಸ್ವಂತಕ್ಕೆ ಉಪಯೋಗಿಸದೆ ಗುರು

ಜಂಗಮರ ದಾಸೋಹಕ್ಕಾಗಿ ಉಪಯೋಗಿಸು; ಆದರಿಂದ ಇದು ಅಕ್ಷಯ ವಾಗುತ್ತದೆ ಎಂದಪ್ಪಣೆಯನ್ನಿತ್ತು ಆತನಿಗೆ ಆಶೀರ್ವದಿಸುವರು. ಅರಸನ ಕೋರಿಕೆಯಂತೆ ರಾಜನನ್ನು ರಾಜ ಕುಟುಂಬ ವರ್ಗವನ್ನು ಬೇರೆ ಬಹುಜನರನ್ನು ಶಿವದೀಕ್ಷೆಯನ್ನಿತ್ತು ವೀರಶೈವರನ್ನಾಗಿಸುವರು. ಅಂದಿನಿಂದ ಕಾಶ್ಮೀರದಲ್ಲಿ ವೀರಶೈವವು ಅಸ್ತಿತ್ವವನ್ನು ತಳೆಯಿತು. ಅದರ ಫಲವಾಗಿ ಮುಂದೆ ಕಲ್ಯಾಣ ಬಸವಣ್ಣನವರು ಹನ್ನೆರಡನೆಯ ಶತಮಾನದಲ್ಲಿ ಕಾಶ್ಮೀರದಿಂದ ಜಂಗಮರನ್ನು ಒದಗಿಸಿಕೊಂಡು ತಮಗಿರುವ ಕೊರತೆಯನ್ನು ಕಳೆದುಕೊಳ್ಳುವರು. ಇದು ಸತ್ಯಕ್ಕೂ ಚಾರಿತ್ರಕವಾಗಿ ಗಮನೀಯ ವಿಚಾರ; ಗ್ರಹಣೀಯ ವಿಷಯ. ವೀರ ಶೈವ ಕ್ರಾಂತಿ ಒಂದು ಕಾಲದ್ದಲ್ಲ; ಒಬ್ಬಿಬ್ಬರಿಂದಾದುದಲ್ಲ. ಅನಾದಿಕಾಲದಿಂದ ರುದ್ರ ಭದ್ರ ರೇಣುಕದಾರುಕಾದಿಗಳಿಂದ ಬಂದುದು; ಪಂಡಿತಾಚಾರ್ಯ, ಸಿದ್ಧ ನಾಥ ಶಿವಾಚಾರ್ಯ, ಶಿವಯೋಗಿ ಶಿವಾಚಾರ್ಯರಿಂದ ಬೆಳೆದುದು. ಅಂತಯೆ ೧೦-೧೧ನೆಯ ಶತಮಾನಗಳೆರಡರಲ್ಲಿಯೂ ಚಂದ್ರಗುಂಡ ಶಿವಾಚಾರ್ಯರಿಂದ ದೇವರ ದಾಸಮಾರ್ಯರಿಂದ ರೇವಣಸಿದ್ಧ-ಮರುಳಸಿದ್ಧರಿಂದ, ಉರಿಲಿಂಗದೇವ ಕೊಂಡಕುಳಿ ಕೇಶರಾಜರಿಂದ ಪ್ರಭಾವಶಾಲಿಯಾಗಿ ಪ್ರಕಾಶಕ್ಕೆ ಬಂದುದು. ಉತ್ತುಂಗ ಶೃಂಗ (ಶಿಖರ)ಕ್ಕೇರಿ ನಿಂತುದು. ೧೧ನೆಯ ಶತಮಾನದಲ್ಲಿ ಬಡ ವಾಗಿತ್ತೆಂದು ಹೇಳುವುದು ತಪ್ಪು ಐತಿಹಾಸಿಕ ವಾಸ್ತವಕ್ಕೆ ಅಪಲಾಪ. ಮೇಲೆ ಹೇಳಿದವರೆಲ್ಲರೂ ಸಮಾಜವನ್ನುದ್ಧರಿಸಲು ಶ್ರಮಿಸಿದ್ದಾರೆ. ಸಾಮಾಜಿಕರ ಸಾರ್ವಜನಿಕರ ಅಂತರ್ಗತ ಚೇತನಗಳನ್ನು ಜಾಗ್ರತಗೊಳಿಸಿ, ಕ್ರಿಯಾಚಾರ ಜ್ಞಾನಾಚಾರ ಭಾವಾಚಾರಗಳನ್ನು ಬೋಧಿಸಿ, ಅನುಷ್ಠಿಸುವಂತೆಸಗಿ ಧರ್ಮ ಶ್ರೀಮಂತಿಕೆಯನ್ನುಂಟು ಮಾಡಿದ್ದಾರೆ; ದೇದೀಪ್ಯಮಾನರಾಗಿದ್ದಾರೆ.

೧೦ನೆಯ ಶತಮಾನದ ಶ್ರೀವಿರೂಪಾಕ್ಷ ದೇಶೀಕೇಂದ್ರರು ಕಾಶ್ಮೀರದಲ್ಲಿ ಮಾಡಿದ ಕಾಯಕ ಯೋಗಕ್ರಾಂತಿ ದಾರ್ಶನಿಕ ಧಾರ್ಮಿಕ ಕ್ರಾಂತಿ ಅಸಾಧಾರಣ ವಾದವುಗಳು. ಅವರ ಪ್ರಭಾವ ಸರ್ವ ಸಾಮಾನ್ಯರಿಂದ ಹಿಡಿದು ಅಭಿನವಗುಪ್ತ ಸ್ವಪ್ರಭಾನಂದರಂತಹ ಅಸಾಮಾನ್ಯರವರೆಗೂ ಪರಿಣಾಮವನ್ನುಂಟು ಮಾಡಿ ಒಂದು ಬಗೆಯ ವಿನೂತನ ವಾತಾವರಣವನ್ನೇ ಉಂಟು ಮಾಡಿದ್ದಿತು.

ವಿದ್ಯೆಯನ್ನಾಗಲಿ ವಿಚಾರಾಚಾರಗಳನ್ನಾಗಲಿ ತಾವಾಚರಿಸಿ ಜನಾಂಗಕ್ಕೆ

ಬೋಧಿಸುವವರು ಅಂದು ತೀರ ಅಭಾವವಾಗಿದ್ದರು. ಇದನರಿತ ವಿರೂಪಾಕ್ಷ ದೇಶಿಕೇಂದ್ರರು ಶ್ರೀಶೈಲದಲ್ಲಿದ್ದ ತಮ್ಮ ಪೀಠದಲ್ಲಿ "ಗುರುಕುಲ"ವೊಂದನ್ನು ಸ್ಥಾಪಿಸಿದ್ದರು. ಅದರಲ್ಲಿದ್ದು ಅತ್ಯಂತ ಆಸಕ್ತಿಯಿಂದ ಅನುಷ್ಠಾನಗಳನ್ನು ಮಾಡಿದವರಲ್ಲಿ ಗೋಪತಿಯೆಂಬುವರು ಅಗ್ರಗಣ್ಯರಾಗಿದ್ದರು. ಧರ್ಮ ಧುರೀಣರಾಗಲು ಎಲ್ಲ ಬಗೆಯಲ್ಲಿ ಯೋಗ್ಯರಾಗಿದ್ದರು. ಶಿವಾಚಾರ್ಯರಾಗಲು ಬೇಕಾದ ಸಂವಿಧಾನ ಸಂಪತ್ತಿಯುಳ್ಳವರಾಗಿದ್ದರು. ಶಿವಾಚಾರ, ಶಿವವಿಚಾರ, ಶಿವಗುಣ, ಶಿವಾನುಭವ ಸಂಪನ್ನರಾಗಿದ್ದರು. ಸರ್ವರಲ್ಲಿ ಶಿವಭಾವ ಶ್ರೀಯನ್ನು ಬೆಳಸಲು ತಕ್ಕ ಶಕ್ತಿಯುಳ್ಳವರಾಗಿದ್ದರು. ಪುರಾತನ ಧರ್ಮ ಚಾರಿತ್ರವನ್ನರಿತವರಾಗಿದ್ದರು. ಮಿಗಿಲಾಗಿ ವೀರಭಪ್ರನಲ್ಲಿ ವಿಶಿಷ್ಟ ನಿಷ್ಠೆಯುಳ್ಳವರಾಗಿದ್ದರು. ನೂತನ ಪ್ರಗತಿ ಪಥದಲ್ಲಿ ಸಕ್ರಿಯಾಶೀಲರಾಗಿ ಮುಂದುವರಿವ ಮಹತ್ತರವಾದ ಆಶಾಕಿರಣವನ್ನು ತಮ್ಮ ಗುರುಗಳಿಗೆ ಮುಮ್ಮೂಡಿಸಿದ್ದರು. ಅದರ ಫಲವಾಗಿ ವಿರೂಪಾಕ್ಷ ದೇಶಿಕೇಂದ್ರರು ತಮ್ಮ ಗುರು ಕುಲದಲ್ಲಿಯೇ ಇದ್ದ ಘನವಾಗಿ ಸಾಧನ ಮಾಡಿದ 'ಗೋಪತಿ'ಯನ್ನೇ ಉತ್ತರಾಧಿಕಾರಿಗಳನ್ನಾಗಿ ಅಂಗೀಕರಿಸಿ, ಚಂದ್ರಗುಂಡ ನಾಮಕರಣ ಮಾಡಿ ಪಟ್ಟಗಟ್ಟಿ ಪೀಠಾಧಿಕಾರಿಗಳನ್ನಾಗಿಸುವರು.

## ೬. ವೀರಶೈವ ವಾರಿಧಿ ಚಂದ್ರ

### ಚಂದ್ರಗುಂಡ ದೇಶಿಕೇಂದ್ರ

ಆಧುನಿಕ ವೀರಶೈವವನ್ನು ವಿಶಿಷ್ಟರೂಪದಲ್ಲಿ ರೂಪಿಸಿದ ಪಂಡಿತಾಚಾರ್ಯರಾದಿ ರೇವಣಸಿದ್ಧ ಮತ್ತು ಉರಿಲಿಂಗದೇವ ಶಿವಾಚಾರ್ಯಾಂತರಾದ ಮಹಾಕಾರಣಿಕ ಶಿವಾಚಾರ್ಯರಲ್ಲಿ ಹನ್ನೊಂದನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಚಂದ್ರಗುಂಡ ಶಿವಾಚಾರ್ಯರೊಬ್ಬರು; ಒಬ್ಬರು ಮಾತ್ರರಲ್ಲ ಅಗ್ರಗಣ್ಯರು. ಪ್ರಾಯೋಗಿಕ ಅನುಭವವುಳ್ಳವರು. ಸರ್ವ ಸಮವರ್ತಿಗಳು. ಹಲವು ಹತ್ತು ಪ್ರಾಯೋಗಿಕ ಸಾಧನೆಗಳಿಂದ ಸಾಮೂಹಿಕ ಜೀವನದಿಂದ ಅವರ ಅನುಭವ ಆತ್ಯಂತಿಕವಾಗಿತ್ತು. ಆದರ್ಶಮಯವಾಗಿತ್ತು. ಅಂತಾಗಬೇಕಾದರೆ ತತ್ತ್ವ ಚಿಂತನ, ಸಮ್ಯಕ್ ಪರಿಶೀಲನ, ದೀಪ್ತ ದೃಷ್ಟಿ, ಸಾಂಸ್ಕಾರಿಕ ಕ್ರಿಯಾಶೀಲತೆ, ವಿರೂಪಾಕ್ಷ ದೇಶಿಕೇಂದ್ರರಂತಹ ಗುರುಕರುಣೆಗಳು ಅನಿವಾರ್ಯವಾದವುಗಳು. ಇವೆಲ್ಲವೂ ಚಂದ್ರಗುಂಡ ಶಿವಾಚಾರ್ಯರಲಿ ಗಮನಾರ್ಹವಾಗಿದ್ದವು.

ಅಲ್ಲದೆ ಸಾಮಾಜಿಕಾಭಿವೃದ್ಧಿಯ ಕ್ರಾಂತಿ ಅಪೂರ್ವವೂ ಅಸಾಮಾನ್ಯವೂ ಆದುದಾಗಿದೆ. ಜೈನ (ಬಣಜಿಗ ಸಜ್ಜನ, ದೇವಾಂಗ, ಕವಾಡಿಗ, ಹೂಗಾರ, ಶೀಲವಂತ ಮೊದಲಾದವರನ್ನೆಲ್ಲ ಸಾಮೂಹಿಕವಾಗಿ ವೀರಶೈವರನ್ನಾಗಿಸಿದ ಅದ್ವಿತೀಯ ಕೀರ್ತಿ ಚಂದ್ರಗುಂಡ ಶಿವಾಚಾರ್ಯರದಾಗಿದೆ.

ಮಾನವೀಯ ಧರ್ಮಾಭಿವೃದ್ಧಿಯ ತೀವ್ರಾಸಕ್ತಿಯೂ ಅವರಲ್ಲಿದ್ದಿತು. ಅವರಿಗಿದ್ದಿತು ಅವರದೇ ಆದ ವಿಶಿಷ್ಟ ಜೀವಾನುಭವ. ಮತ್ತು ಸರ್ವ ಸಮನ್ವಯ ಭಾವ. ಅದು ಅವರನ್ನು ಸರ್ವಹಿತರಾಗುವಂತೆ ಪ್ರೇರೇಪಿಸಿತು. ಸಮಾಜದಲ್ಲಿ ಪರಿವರ್ತನವನ್ನುಂಟು ಮಾಡುವಂತೆಸಗಿತು. ಭಾರತೀಯರಲ್ಲಿನ ಪಂಥ ಪಂಗಡ ಕುಲ ಮೊದಲಾದ ಒಳ ಭೇದಗಳ ಭೀಕರ ದೃಶ್ಯ ಅವರ ಕಣ್ಣು ಮುಂದೆ ಬಂದು ನಿಂತಿತು. ಅವರ ಭಾವವನ್ನು ಪರಿವರ್ತಿಸಿತು. ಆಗಲೇ ಅವರು ತಮ್ಮ ಶ್ರೀಶೈಲ ಪೀಠದಲ್ಲಿ ಒಂದು ಅನುಭಾವ ಗೋಷ್ಠಿಯನ್ನು ಸ್ಥಾಪಿಸುವರು. ಸಂದಿಲ್ಲಿಂಗಾನುಭೂತಿಯನ್ನು ಹೆಚ್ಚಿಸುವರು. ಪ್ರಾಣ ಲಿಂಗಾನು ಸಂಧಾನ ಮೌಲ್ಯ ಮನದಟ್ಟಾಗುವಂತೆಸಗುವರು.

## ಶ್ರೀ ಶೈಲ ಪೀಠದಲ್ಲಿ ಪ್ರಥಮ ಶಿವಾನುಭಾವ ಮಂಟಪ

ಈ ಕಲಿಯುಗದಲ್ಲಿ ಶ್ರೀ ಶೈಲವೇ ಶ್ರೇಷ್ಠವಾದ ಸಗ್ಗಿನ ನೆಲೆ, ಪ್ರಶಾಂತ ಪ್ರದೇಶ. ಪ್ರಾಕೃತಿಕವಾಗಿಯೂ ವೈಶಿಷ್ಟ್ಯಪೂರ್ಣವಾದ ಪರ್ವತ ಅದರಲ್ಲಿ ಈ ಯುಗದ ಪಂಚಾಚಾರ್ಯರಲ್ಲಿ ಒಬ್ಬರಾದ ಪಂಡಿತಾಚಾರ್ಯರು ಸಂಸ್ಥಾಪಿಸಿದ ಪೀಠ. ಕ್ರಿ. ಶ. ೬ನೆಯ ಶತಮಾನದಿಂದ ಖ್ಯಾತಗೊಂಡ ಪೀಠ. ಪ್ರಭಾವಪೂರ್ಣವಾದ ಪ್ರಪೀಠ. ಪಂಡಿತಾಚಾರ್ಯರ ಬಳಿಕ ಮಲ್ಲಿಕಾರ್ಜುನ, ಸಿದ್ಧಮಲ್ಲ, ಇಮ್ಮಡಿ ಪಂಡಿತಾರಾಧ್ಯ, ವಿರೂಪಾಕ್ಷ ದೇಶಿಕೇಂದ್ರ ಶಿವಾಚಾರ್ಯರು ಒಂದೊಂದು ಬಗೆಯ ಪ್ರಭಾವವನ್ನು ಬೀರಿ ಪ್ರಖ್ಯಾತರಾದ ವೀರಶೈವ ಧರ್ಮಪೀಠ. ಮೂಲ ಪಂಡಿತಾಚಾರ್ಯರು ಭಾಷ್ಯವನ್ನು ಬರೆದು, ಕಾಳಾಮುಖರನ್ನು ಶ್ವೇತಮುಖರನ್ನು ಮಾಡಿ, ಪಲ್ಲವ ವಂಶವನ್ನು ಪಾವನಗೊಳಿಸಿ ಪ್ರಖ್ಯಾತರಾದರೆ ಇಮ್ಮಡಿ ಪಂಡಿತಾರಾಧ್ಯರು ಸೂಳ್ನುಡಿ ಬರೆದು ಪ್ರಥಮ ವಚನಕಾರರೆಂದು ಪ್ರಖ್ಯಾತ ರಾಗಿರುವರು. ಇನ್ನೂ ಅಯ್ದನೆಯವರಾದ ವಿರೂಪಾಕ್ಷ ದೇಶಿಕೇಂದ್ರ

ಶಿವಾಚಾರ್ಯರು ಉತ್ತರ ಭಾರತವನ್ನೆಲ್ಲ ಸಂಚರಿಸಿ ಕಾಶಿಯಲ್ಲಿ ತಮ್ಮ ಧಾರ್ಮಿಕ ದೀಪ್ತಿಯನ್ನು ಬೆಳಗಿ, ಕಾರಣಿಕಧ್ವಜವನ್ನೆತ್ತಿ, ಕಾಶ್ಮೀರದಲ್ಲಿ ಕಾರುಣ್ಯ ಪ್ರಭಾವದಿಂದ ವೀರಶೈವಧರ್ಮಗಳನ್ನು ರೂಪಿಸಿ, ಕಾಯಕ ದಾಸೋಹಧರ್ಮ ಗಳನ್ನು ಪ್ರತಿಭಾನ್ವಿತವಾಗಿ ಪ್ರತಿಷ್ಠಾಪಿಸಿ, ಶ್ರೀಶೈಲದಲ್ಲಿ ಪ್ರಬಲ ವಿರೋಧಿ ಯಾದ ವೀರಭಿಕ್ಷಾವೃತ್ತಿಯನ್ನು ತಮ್ಮ ಅಸಾಧಾರಣ ಯೋಗಬಲದಿಂದ ಜಯಿಸಿ, ಆತನಿಗೆ ಮಲ್ಲಿಕಾರ್ಜುನ ಅರ್ಚನಾಧಿಕಾರವನ್ನು ಅನುಗ್ರಹಿಸಿ, ಪೀಠ ದಲ್ಲಿ ಗುರುಕುಲವೊಂದನ್ನು ಸ್ಥಾಪಿಸಿ ಸುಪ್ರಸಿದ್ಧರಾಗಿರುವರು. ಮತ್ತು ಕದಳಿ ನಿರ್ಮಾಪಕರಾಗಿರುವರು. ಅದೇ ಪೀಠದ ಮೇಲೆ ಮಂಡಿಸಿ ರಾರಾಜಿಸುತ್ತಿದ್ದ ಶ್ರೀಚಂದ್ರಗುಂಡ ದೇಶೀಕೇಂದ್ರರು ಅದೇ ತಮ್ಮ ಪೀಠದಲ್ಲಿ ಪ್ರಥಮ ಶಿವಾನ ಭಾವ ಮಂಟಪ ರಚಿಸಿ, ಅದರಲ್ಲಿ ದೇವರದಾಸಮಯ್ಯ, ಶಂಕರ ದಾಸಮಯ್ಯ, ವೀರಶಂಕರದೇವ, ಶಿವದಾಸಮಯ್ಯ, ಶ್ರೀಪತಿ ಪಂಡಿತ, ಕೆಂಭಾವಿ ಭೋಗಣ್ಣ, ತುರುಗಾಹಿರಾಮಣ್ಣ, ಡೋಹರ ತಕ್ಕಮ್ಮ, ಢಕ್ಕೆಯ ಮಾರಯ್ಯ ಮೊದಲಾದವರು ವ್ಯಾಸಂಗ ಮಾಡುತ್ತಿದ್ದರು. ಇವರಲ್ಲಿ ಹೆಚ್ಚು ಜನ ನಿಮ್ನ ವರ್ಗದವರೇ ಇರುವರು. ಕಾಡಜನ ನಾಡ ನಿಮ್ನ ಜನರ ಉದ್ಧಾರವೆ ಚಂದ್ರ ಗುಂಡ ಶಿವಾಚಾರ್ಯರ ಮುಖ್ಯೋದ್ದೇಶವಾಗಿತ್ತು. ಅಂತೆಯೇ ದೇವರ ದಾಸಮಯ್ಯನಿಗೆ ಶಿವದೀಕ್ಷೆಯನ್ನಿತ್ತು ಕಾಡಜನರನ್ನು ಹಿಂಸೆಯಿಂದ ನಿವೃತ್ತಿ ಪಡೆವಂತೆ ನೀತಿವಂತರಾಗಿ ಬಾಳುವಂತೆ ಮಾಡಬೇಕೆಂದು ಆಜ್ಞಾಪಿಸುವರು. ಅಲ್ಲದೆ ಕಾಯಕ–ದಾಸೋಹಗಳನ್ನು ಕೈಕೊಂಡು ಬಿಡದೆ ಕಡೆತನಕ ನಡೆಸುವಂತೆ ಆಜ್ಞಾಪಿಸುವರು.

ಹೈಹಯ ವಂಶದವರು ಕಾರಣಾಂತರಗಳಿಂದ ಕಾಳಗದಲ್ಲಿ ಕೈಸೋತು ಮೈಸೋತು, ಮನೆ ಮಾರು ಊರು ಸೋತು, ದಿಕ್ಕುದೆಸೆಗಾಣದೆ ಓಡಿ ಹೋಗುತ್ತಿದ್ದಂತೆ. ಇನ್ನೇನು, ವೈರಿಗಳು ತೀರ ಹತ್ತಿರಕ್ಕೆ ಬಂದು ಪ್ರಾಣ ಗಳನ್ನು ತೆಗೆವರೆಂದು ತಿಳಿದೊಡನೆ ಧಾವಿಸಿ ಬಂದು ಶ್ರೀಚಂದ್ರಗುಂಡ ಶಿವಾಚಾರ್ಯ ಚರಣಕ್ಕೆ ಶರಣಾಗುವರು. ಹಗೆಗಳು ಬಂದು ಎಲ್ಲಿ ಆ ದುರ್ಜನ ರನ್ನು ಬಿಟ್ಟು ಬಿಡಿ ಎಂದು ಕೇಳಿದಾಗ, ಸನ್ನಿಧಿಯವರು ಅದೇನು, ನಮ್ಮ ಮೊರೆಹೊಕ್ಕವರು ದುರ್ಜನರಲ್ಲ, ಸಜ್ಜನರು, ಇನ್ನು ಇವರ ತಂಟೆಗೆ ನೀವು ಬರಬಾರದೆಂದು ಬುದ್ಧಿ ಹೇಳಿ ಹಗೆಗಳನ್ನು ಹಿಂದಕ್ಕೆ ಕಳಿಸಿಬಿಡುವರು. ಆಗ

ಹೈಹಯ ವಂಶದವರು ತಮ್ಮಿಂದ ನಮ್ಮ ಪ್ರಾಣಗಳು ಉಳಿದವು. ಇನ್ನು ಮುಂದೆ ತಾವೇ ನಮಗೆಲ್ಲ ತಾಯಿ ತಂದೆ ಬಂಧು ಬಳಗ ಗುರು ದೇವರು ! ನಮಗಿನ್ನಾರು ದಿಕ್ಕಿಲ್ಲ. ಬದುಕಲು ಆಧಾರವಿಲ್ಲ. ತಾವೇ ನಮ್ಮ ಸರ್ವಸ್ವ ಎಂದು ಕಣ್ಣೀರಿಡುತ್ತ ಅಂಗಲಾಚಿದಾಗ, ಕರುಣಾಳುವಾದ ಗುರು ದೇವರು ಅವರನ್ನೆಲ್ಲ ತಮ್ಮ ವಶದಲ್ಲಿ ಪೋಷಣೆಯಲ್ಲಿ ಹಲವಾರು ಕಾಲ ಇರಿಸಿಕೊಂಡು ಅವರಿಗೆ ಶಿವದೀಕ್ಷೆಯನ್ನಿತ್ತು ಸಜ್ಜನವೀರಶೈವರೆಂದು ಹೆಸರಿತ್ತು ತೈಲವೃತ್ತಿ ಯಿಂದ ಬದುಕಿರೆಂದು ಬೋಧಿಸಿ ಕಳಿಸಿಕೊಡುವರು. ಇದರಂತೆ ದೇವಾಂಗದ ವರಿಗೂ ಕವಾಡಿಗರಿಗೂ ಬಣಜಿಗರಾದಿಯಾಗಿ ಹದಿನೆಂಟು ಪಣಕಟ್ಟಿನವರಿಗೂ ಶಿವದೀಕ್ಷೆಯನ್ನು ಅನುಗ್ರಹಿಸಿ ವೀರಶೈವರನ್ನಾಗಿಸಿ, "ವೀರಶೈವವಾರಿಧಿ ಚಂದ್ರ" ಎಂದು ಹೆಸರಾಗುವರು. ಆಧುನಿಕ ವೀರಶೈವ ಶಿವಾನುಭಾವ ಮಂಟಪ ಇತಿಹಾಸದಲ್ಲಿ ಶ್ರೀ ಶೈಲ ಜಗದ್ಗುರು ಚಂದ್ರಗುಂಡ ಶಿವಾಚಾರ್ಯರ ಪ್ರಭಾವಪೂರ್ಣ ಪುಣ್ಯನಾಮವನ್ನು ಸುವರ್ಣಾಕ್ಷರಗಳಿಂದ ಬರೆದ ಶಾಸನ ವೊಂದಿರಿಸಲು ತಕ್ಕುದಾಗಿದೆ. ಶಿವಾನುಭಾವ ಮಂಟಪದ ರಚನೆಯ ಪ್ರಥಮ ಕೀರ್ತಿ ಅವರದಾಗಿದೆ.

## ನಂದಬೆಟ್ಟ–ನಂದಿಬೆಟ್ಟ ; ನಂದಿಗ್ರಾಮ !

ಶ್ರೀ ಶೈಲದಲ್ಲಿ ಗುರುಕುಲ ಸ್ಥಾಪಿಸಿದ ಶ್ರೀ ವಿರೂಪಾಕ್ಷ ದೇಶಿಕೇಂದ್ರರು ಬಡಗಣ ಭಾರತದ ಪಯಣವನ್ನು ಜೀವಂತ ಗುರುಕುಲವಾಗಿ ಕಾಶಿಕಾಶ್ಮೀರಾದಿ ಗಳಲ್ಲಿ ಕ್ರಾಂತಿಯನ್ನು ಮಾಡಿದಂತೆ ಅವರ ಕರಕಂಜ ಸಂಜಾತರಾದ ಶ್ರೀಚಂದ್ರ ಗುಂಡ ಶಿವಾಚಾರ್ಯರು ತೆಂಕಣ ನಾಡ ಪಯಣವನ್ನು ಜೀವಂತ ಶಿವಾನುಭವ ಮಂಟಪವಾಗಿ, ಹಳ್ಳಿ ಹಳ್ಳಿಗೂ ಶಿವಾಚಾರ ಶಿವವಿಚಾರ ಶಿವಾನುಭವಗಳ ಪ್ರಸಾರವನ್ನು ಮಾಡಿ, ಜನಗಳಲ್ಲಿ ಧರ್ಮ ಜಾಗೃತಿಯನ್ನುಂಟು ಮಾಡುವರು. ಪಾಪ ತಾಪಗಳನ್ನು ಕಷ್ಟ ಕಾರ್ಪಣ್ಯಗಳನ್ನು ಅನ್ಯಾಯ ಅನೀತಿಗಳನ್ನು ಅಶಾಂತಿ ಭ್ರಾಂತಿಗಳನ್ನು ಕಳೆದು ಶಾಂತಿಚಂದ್ರರಾಗಿ ಸುಳಿದರು. ತಂಬೆಳಗ ತುಂಬಿ ತೊಳಗಿಸಿದರು ಜನಮನಭಾವಗಳನ್ನು ! ಅಲ್ಲಲ್ಲಿ ವೀರಭದ್ರ ಮೂರ್ತಿಗಳನ್ನು ಸ್ಥಾಪಿಸಿದರು ; ವೀರೇಶನನ್ನು ಆರಾಧಿಸಿ ವೀರರೂ ಭದ್ರರೂ ಆಗಿರೆಂದು ಬೋಧಿಸಿದರು. ರಾಚೋಟಿ ವೀರಭದ್ರ, ಹಂಪೆಯ (ವಿಜಯನಗರದ)

ಉದ್ಧಾನ ವೀರಭದ್ರ, ಮಂಚನಮಲೆ ವೀರಭದ್ರ, ಗುಂಪಲೂರು ವೀರಭದ್ರ ಮೂರ್ತಿಗಳು ಮುಖ್ಯವಾಗಿ ಪ್ರಖ್ಯಾತವಾಗಿವೆ. ಚಿಕ್ಕಬಳ್ಳಾಪುರ ಬಳಿಯಿರುವ ನಂದ ಬೆಟ್ಟಕ್ಕೆ ದಯಮಾಡಿಸಿ ಅಲ್ಲಿ ನಂದಿಯೊಂದನ್ನು ಸ್ಥಾಪಿಸಿ, ನಂದಬೆಟ್ಟ ವೆಂದಿದ್ದ ಹೆಸರನ್ನು ಬದಲಿಸಿ 'ನಂದಿ' ಬೆಟ್ಟವೆಂದು ಹೆಸರನ್ನಿರಿಸಿದವರು ಶ್ರೀ ಚಂದ್ರ ಗುಂಡ ಶಿವಾಚಾರ್ಯರು. ಇದು ಶ್ರೀ ಸನ್ನಿಧಿಯವರ ವೀರ, ವೃಷಭ, ನಂದಿ ಸಂಸ್ಕೃತಿಯ ಆದರಾಭಿಮಾನ ಅದೆಂತಹದೆಂಬುದು ಅಭಿವ್ಯಕ್ತ ವಾಗುತ್ತದೆ. ಉಳಿದೆಲ್ಲ ಪೀಠಾಚಾರ್ಯರಿಗಿಂತಲೂ ಅತ್ಯಧಿಕವಾಗಿದೆ ; ಆದರ್ಶ ವಾಗಿದೆ. ನಂದಿ ಬೆಟ್ಟದ ಕಿಬ್ಬದಿಯಲ್ಲಿ ಒಂದು ನಂದಿ ಹೆಸರಿನ ಗ್ರಾಮವನ್ನೆ ನಿರ್ಮಿಸಿ, ಅದರಲ್ಲಿ ಒಂದು ತಮ್ಮ ಶಾಖಾಮಠವನ್ನೂ ಸ್ಥಾಪಿಸಿದ್ದಾರೆ. ಇಂದಿಗೂ ನಂದಿಗ್ರಾಮ ಕುಂದದಿದೆ.

## ಕೋಲಾರ ಪ್ರಾಂತದಲ್ಲಿ ಕ್ರಾಂತಿ !

ಕ್ರಿ.ಶ. ೧೧ನೆಯ ಶತಮಾನದ ಶ್ರೀ ಜಗದ್ಗುರು ಚಂದ್ರಗುಂಡ ಶಿವಾಚಾರ್ಯರು ನಂದಿ ಬೆಟ್ಟದ ಬಳಿಯಲ್ಲಿ ಮಾತ್ರವಲ್ಲ ಇಡಿ ಕೋಲಾರ ಪ್ರಾಂತ ದಲ್ಲಿಯೇ ಅಲ್ಲಲ್ಲಿ ಶಾಖಾಮಠಗಳ ನಿರ್ಮಾಣ, ವೀರೇಶ ಮತ್ತು ವೃಷಭೇಶ ಮೂರ್ತಿ ಸ್ಥಾಪನ, ೧೮ ಘಟಕಟ್ಟಿನವರ ಉದ್ಧರಣ. ವೀರಶೈವಧರ್ಮ ಪ್ರಸರಣ ಮೊದಲಾದ ಮಣಹಗಳನ್ನು ಮಾಡಿ ಒಂದು ಹೊಸ ಮನ್ವಂತರವನ್ನೆ ನಿರ್ಮಿಸಿ ದ್ದರು. ಜನಗಳನ್ನು ಸಕ್ರಿಯಾಶೀಲರನ್ನಾಗಿ ಸದ್ಧರ್ಮನಿರತರನ್ನಾಗಿ ಮತ್ತೆ ಹಲವರನ್ನು ಸುಜ್ಞಾನಿಗಳನ್ನಾಗಿ ಸದ್ಭಕ್ತಿವಂತರನ್ನಾಗಿ ಮಾಡಿದ್ದರು. ಇವರ ಹಿಂದಿನ ಶ್ರೀಸಿಡುಮಾಮಿಡಿ ಶ್ರೀ ಶೈಲ ಪೀಠದ ಶಿವಾಚಾರ್ಯರು ಅವರಿವರೆನ್ನದೆ ಆ ಪ್ರಾಂತ ಈ ಪ್ರಾಂತವೆನ್ನದೆ ಮಾನವೀಯ ಸಾಂಸ್ಕೃತಿಕ ಪ್ರವಾಹವನ್ನು ಪ್ರವಹಿಸಿಕೊಂಡು ಬಂದಂತೆ ಇವರೂ ಪ್ರಾಚುರ್ಯವಾಗಿ ಪ್ರವಹಿಸಿದ್ದರು. ಜನತೆಯ ಮೇಲೆ ಮಿಗಿಲಾದ ಪ್ರಭಾವವನ್ನು ಬೀರಿದ್ದರು; ಬೀರುತ್ತಿರುವರು. ತಮ್ಮ ಪರಿಶುದ್ಧವಾದ ಉದ್ದೇಶಗಳನ್ನು ಕಾರ್ಯಗತಗೊಳಿಸಿ, ಪ್ರಬುದ್ಧವಾದ ಆದರ್ಶಗಳನ್ನು ಉದ್ದಾಮವಾಗಿ ಅಲ್ಲಲ್ಲಿ ಉಳಿಸಿದ್ದಾರೆ. ನಂದಿ, ವಾಪಸಂದ್ರ, ಹುಣಸಮಾರನಹಳ್ಳಿ, ಸಿಡ್ಲಘಟ್ಟ, ಗುಡಿಬಂಡೆ, ಮಂಚನಮಲೆ, ಕೋಲಾರ, ಐತಾಂಡಹಳ್ಳಿ, ಮೊದಲಾದ ಊರುಗಳಲ್ಲಿ ಶಾಖಾಮಠಗಳನ್ನು ನಿರ್ಮಿಸಿದ್ದಲ್ಲದೆ

ಎಲ್ಲಕ್ಕೂ ಮಿಗಿಲಾಗಿ ಬಾಗೆಪಲ್ಲಿತರಂ ಗುಯಲೂರಿನ ಬಳಿ ಒಂದು ಬೃಹನ್ಮಠ ವನ್ನು ರೂಪಿಸಿ ಸಾರ್ವಜನಿಕ ಸರ್ವೋನ್ನತ ಗೌರವಕ್ಕೆ ಪಾತ್ರರಾಗಿದ್ದಾರೆ. ಅದರ ಚರಿತ್ರೆಯಿಂತಿದೆ ;

**ಗುಯ್‌ಲೂರು-ಗೂಳೂರು :**

ನಂದಿ ಬೆಟ್ಟದ ಪರಿಸರ ನಂದ (ರಾಜ) ಮಂಡಲವಾದರೆ ಗೂಳೂರು ಪರಿಸರ ಅಂದು ಚೋಳ (ರಾಜ) ಮಂಡಲ. ಗೂಳೂರು ಚೋಳರಾಜನ ರಾಜಧಾನಿ. ಗೂಳೂರಿಗೂ ಸಾವಿರಾರು ವರುಷಗಳ ಪೂರ್ವೇತಿಹಾಸವಿದೆ. ಗೊಯ್ಯದಪಾಡ ಎಂದು ಮತ್ತೊಂದು ಹೆಸರಿತ್ತೆಂದು ಶಾಸನದಿಂದ ತಿಳಿದು ಬರುತ್ತದೆ. ಶಾಸನ ಕ್ರಿ.ಶ. ೧೧೪೫ರ ಕಾಲಕ್ಕೆ ಸೇರಿರುತ್ತದೆ. "ಇದರಿಂದ ೧೨ನೇ ಶತಮಾನಕ್ಕೆ ಹಿಂದೆ ಗುಯಲೂರು ಸೀಮೆ ಹೈಯಯ ವಂಶದ ರಾಜೇಂದ್ರ ಜೋಳನಿಗೆ ಸೇರಿದ್ದಿತೆಂಬುದರಲ್ಲಿ ಸಂದೇಹವಿಲ್ಲ." ಎಂದು 'ಶ್ರೀಶೈಲ ಪಂಡಿತಾರಾಧ್ಯ ಚರಿತ್ರಮು' ಎಂಬ ಶ್ರೀಶೈಲ ನಿಡುಮಾಮಿಡಿ ಪೀಠದ ಚಾರಿತ್ರಿಕ ಗ್ರಂಥದ ಪೀಠಿಕೆಯಲ್ಲಿ ಆಸ್ಥಾನ ವಿದ್ವಾನ್ ಶ್ರೀ ಎಂ. ಜಿ. ನಂಜುಂಡಾರಾಧ್ಯರು ಉಲ್ಲೇಖಿಸಿದ್ದಾರೆ. ಗುಯ್‌ಲೂರ್‌ನ್ನು ಅದೇ ಹನ್ನೊಂದನೆಯ ಶತಮಾನದ ಪೂರ್ವಾರ್ಧದಲ್ಲಿ ಹೈಹಯ ವಂಶದ ಕಾರ್ತ ವೀರ್ಯಾರ್ಜುನನ ಪರಂಪರೆಯ ರಾಜೇಂದ್ರ ಚೋಳನು ಪರಿಪಾಲನೆಯನ್ನು ಮಾಡುತ್ತಿದ್ದನು. ಆತನಿಗೆ ಬ್ರಹ್ಮಹತ್ಯೆಯ ಪಾತಕವಿದ್ದಿತು. ಪ್ರತಿದಿನ ಒಂದು ಕೊಳ, ಒಂದು ಮಂಟಪ ಆ ಮಂಟಪದಲ್ಲಿ ಒಂದು ಶಿವಲಿಂಗ ಸ್ಥಾಪನೆಯನ್ನು ಮಾಡಿ ಊಟ ಮಾಡಬೇಕಾಗಿತ್ತು. ಇಲ್ಲವಾದರೆ ಊಟಕ್ಕೆ ತಟ್ಟೆಯಲ್ಲಿಟ್ಟ ಅನ್ನ ಹುಳಗಳಾಗುತ್ತಿತ್ತು. ಈ ಕರಕಷ್ಟದಲ್ಲಿ ಕಾಲಕಳೆಯು ತ್ತಿದ್ದನು.

ಮಾಘಮಾಸ ; ಮಂಗಳವಾರ ; ಮಧ್ಯಾಹ್ನ ಲಿಂಗಪೂಜಾಸಮಯ ಶ್ರೀ ಜಗದ್ಗುರು ಚಂದ್ರಗುಂಡ ಶಿವಾಚಾರ್ಯರು ನಂದಮಂಡಲದ ನಂದಿಬೆಟ್ಟ ನಂದಿಗ್ರಾಮಗಳಿಂದ ಬಿಜಯಂಗೈಯುತ್ತ ಅಲ್ಲಲ್ಲಿ ವೀರಶೈವಧರ್ಮ ಪ್ರಸಾರ ಮಾಡುತ್ತ ಹಲವಾರು ಜನರಿಗೆ ಗುರುಕಾರುಣ್ಯವನ್ನಿತ್ತು ವೀರಶೈವರನ್ನಾಗಿಸುತ್ತ ಪುಣ್ಯಪ್ರದ ಪ್ರಭಾವನ್ನು ಬೀರುತ್ತ ಅರ್ಥವತ್ತಾದ ಪ್ರಬೋಧವನ್ನೆಸಗುತ್ತ

ಚೋಳಮಂಡಳದ ಗುಯ್‌ಲೂರಿನ ಬಳಿಯಿರುವ ರಾಜೇಂದ್ರ ಚೋಳರಾಜನ ಉಪವನಕ್ಕೆ ಆಗಮಿಸುವರು. ಉಪವನದಲ್ಲಿ ಒಂದು ತಿಳಿನೀರಕೊಳ, ಅದರ ತೀರದಲ್ಲಿ ಒಂದು ಬಿಲ್ವಮರ ತೆಂಗಿನ ಮರ ತಮ್ಮ ಹಚ್ಚಹಸುರಿನಿಂದ ಮೆರೆಯುತ್ತಿದವು. ಅರಸುದೋಟದ ಈ ಚೆಸ್ನೋಟವನ್ನು ಚೆನ್ನಾಗಿ ನಿಟ್ಟಿಸಿ ಹರಿಹರುಷದಿಂದ ತಿಳಿನೀರಕೊಳದಲ್ಲಿ ಮಿಂದು ಬಿಲ್ವ ತೆಂಗುಮರಗಳ ಬುಡದ ತಣ್ಣೆಳಲಲ್ಲಿ ಕುಳಿತು ಲಿಂಗಾರ್ಚನೆಯನ್ನು ಸಾಂಗೋಪಾಂಗವಾಗಿ ನೆರವೇರಿಸಿ ಪ್ರಸಾದಕ್ಕೆಂದು ಅಣಿಯಾಗುವರು. ಆದರೆ ಪ್ರಸಾದಕ್ಕಾಗಿ ಅವರಲ್ಲಿ ಏನೂ ಇರಲಿಲ್ಲ. ಇದ್ದುದೆಲ್ಲ ತೀರಿಹೋಗಿತ್ತು. ಸನ್ನಿಧಿಯವರ ಭಾವೇಂಗಿತವನ್ನರಿತು ತೆಂಗಿನ ಮರ ತಾನೆ ಬಾಗಿ ತನ್ನ ಎಳೆನೀರುಳ್ಳ ಫಲವನ್ನು ಸನ್ನಿಧಿಗೆ ಅರ್ಪಿಸಿ ಕೃತಾರ್ಥವಾಗುವುದು. ಇದು ಸನ್ನಿಧಿಯವರ ಸತ್ಕ್ರಿಯಾಲಿಂಗಾರ್ಚನದ ಸಮ್ಯಕ್ ಕ್ರಿಯಾಸತ್ವಸಿದ್ಧಿಯ ಅದ್ಭುತ ಅಂದರೆ ಲೋಕೋತ್ತರ ಪವಾಡಕ್ಕೆ ಹೆಗ್ಗುರುತಾಗಿದೆ.

ಉಪವನದ ಅಂದರೆ ರಾಜೋದ್ಯಾನದ ತೋಟಿಗನೊಬ್ಬನು ಇದನ್ನು ಕಂಡು ಕಣ್ಣರಿಯದೆ ಕಳ್ಳ ಬಂದು ತೆಂಗಿನಕಾಯಿ ಕೆದಿಯುತ್ತಿದ್ದಾನೆಂದು ಕೂಗುವನು. ಇದನ್ನು ಕೇಳಿ ಇನ್ನೊಬ್ಬ ತೋಪಿಗೆ ಓಡಿ ಬಂದು ಕಂಡು, ಅಚ್ಚರಿಗೊಂಡು ಓ ಹುಚ್ಚ, ನೋಡು ಕಣ್ತೆರೆದು ನೋಡು, ಅವರು ಕಳ್ಳರಲ್ಲ, ಮಹಾಮಹಿಮರು. ಕಾಯನ್ನು ಕದಿಯುತ್ತಿಲ್ಲ ; ಗಿಡವೇ ಬಾಗಿ ತಾನೇ ಎಳೆನೀರು ಕೊಡುತ್ತಿದೆ–ಎಂದೆನ್ನಲು, ಇಬ್ಬರೂ ಅಚ್ಚರಿಯ ಮೇಲೆ ಅಚ್ಚರಿಗೊಂಡು ಆನಂದಿಸಿ ನಸು ತಡಮಾಡದೆ ಅರಸನ ಅರಮನೆಗೆ ಬಂದು ವಿದ್ಯಮಾನ ವಿಶೇಷವನ್ನು ವಿಜ್ಞಾಪಿಸಿ ಕೊಳ್ಳುವರು ಆಗ ರಾಜದಂಪತಿಗಳಿಗೆ ತುಂಬ ಸಂತೋಷವುಕ್ಕಿ ಇಂದಿಗೆ ತಮ್ಮ ಕರ್ಮ ಹರಿವುದು ಖಚಿತವೆಂದು ತಿಳಿದು ತಮ್ಮ ಉಪವನಕ್ಕೆ ಧಾವಿಸಿ ಬರುವರು.

ಓ ! ಲಿಂಗತೇಜ, ಅಂಗಾಂಗಗಳಲ್ಲಿ ಸಂಗಡಿಸಿ ತಿಂಗಳಬೆಳಕಿನಂತೆ ಕಂಗೊಳಿಸುತಿದೆ. ಶರಣಾಗತರ ಪಾಪ ಕತ್ತಲೆಯನೆಲ್ಲ ಪರಿಹರಿಸಲು ಹುಣ್ಣಿಮೆಯ ಪೂರ್ಣಚಂದ್ರನೆ ಚಂದ್ರಗುಂಡಶಿವಾಚಾರ್ಯರ ಮೂರ್ತಿ ರೂಪ ದಳೆದು ಧರೆಗಿಳಿತಂದಿರುವನೋ ಎಂಬಂತೆ ಭಾಸವಾಗುತ್ತಿದೆ. ರಾಜದಂಪತಿಗಳ ತಪ್ತ ಎದೆಗಳಲ್ಲಿ ತಂಬೆಳಗನು ಹುಯ್ದಂತಿದೆ. ದೂರಿಂದಲೆ ದೀರ್ಘದಂಡ

ನಮಸ್ಕಾರವನ್ನು ಮಾಡುತ್ತ ಸನ್ನಿಧಿಯ ಸನಿಹಕ್ಕೆ ಬಂದು ಫಲ ಪುಷ್ಪಾಹಾರಗಳ ತಟ್ಟೆಯನ್ನಿಟ್ಟು ಕುಳಿತುಕೊಳ್ಳುವರು. ಕಂಬನಿ ಕೆನ್ನೆಗಳ ಮೇಲೆ ಕಳಚುತ್ತಿದೆ. ಕೈಜೋಡಿಸಿ ಭಯಭಕ್ತಿಭಾವದಿಂದ ತಮಗಿರುವ ತೀರದ ತೊಂದರೆ ತೊಡಕುಗಳನ್ನು ಬಿನ್ನವಿಸಿಕೊಳ್ಳುತ್ತಾರೆ. ಸನ್ನಿಧಿಯವರು ಅತ್ಯಂತ ಕರುಣೆಯಿಂದ ವಿಭೂತಿಯನ್ನಿಟ್ಟು ಭೂಪನ ಕಿವಿಯಲ್ಲಿ ಮಂತ್ರೋಚ್ಚಾರ ಮಾಡಿದೊಡನೆ ಬ್ರಹ್ಮಹತ್ಯಾ ಶಾಪ ಗುಯ್ ಎಂದು ದನಿಯೊಡನೆ ಹೊರಕ್ಕೆ ಹೊರಟು ಹೋಗುವುದು. ಇದರಿಂದಾಗಿ 'ಗುಯಲೂರು' ಎಂದು ಅನ್ವರ್ಥಕ ನಾಮ ಗ್ರಾಮಕ್ಕೆ ಬಂತೆಂದು ಹೇಳುವರು. ರಾಜ ದಂಪತಿಗಳು ಪರಿಶುದ್ಧರಾದರು. ಪರೆ ಬಿಚ್ಚಿದ ಹಾವಿನಂತೆ ಹೃದಯ ಭಾರ ಹಗುರಾಯಿತು. ಹಿಂದಿದ್ದ ತೊಂದರೆ ತಾನೆಷ್ಟೂ ಇಲ್ಲದಾಯಿತು. ತೆಂಗಿನ ಮರವ ಬಾಗಿಸಿ ಕ್ರಿಯಾ ಸಿದ್ಧಿಯನ್ನು ತೋರಿದಂತೆ. ಬ್ರಹ್ಮಹತ್ಯೆಯ ಪಾಪವನ್ನು ಪರಿಹರಿಸಿ ಮಂತ್ರ ಸಿದ್ಧಿಯನ್ನು ತೋರುವರು. ರಾಜ ದಂಪತಿಗಳ ಬಾಳಿನಲ್ಲಿ ಒಂದು ಹೊಸ ಬೆಳಗನ್ನು ಬೀರುವರು. ಹೊಸ ತಿರೆಗೆ ತಂದು ನಿಲ್ಲಿಸುವರು. ಗಾಢಭಕ್ತಿಭಾವೋದಯವಾಗಿಅರಮನೆಗೆ ಸನ್ನಿಧಿಯವರನ್ನು ಬಿಜಯಂಗೈಸುವರು ರಾಜ ಮರ್ಯಾದೆಯಿಂದ ; ರಾಜಿಸುವ ಮಹೋತ್ಸವದಿಂದ !

## ಅಭಿನವ ಶ್ರೀಶೈಲ ಪೀಠ ಸ್ಥಾಪನ, ಶ್ರೀ ವೀರೇಶ್ವರ ಮೂರ್ತಿ ಪ್ರತಿಷ್ಠಾಪನ.

ಊರ ಜನರಿಗೆಲ್ಲ ಊರ್ಜಿತ ಉತ್ಸಾಹ, ಉನ್ನತ ಉಲ್ಲಾಸ. ಇದರಿಂದಾಗಿ ಊರ ತುಂಬ ವೈಭವ ಪೂರ್ಣ ಉತ್ಸವವಾಗಿ ಅರಮನೆಗೆ ಆಗಮಿಸಲಾಗುವುದು. ಅರಮನೆಯಲ್ಲಿಯೂ ಅಮಿತೋಲ್ಲಾಸ. ರಾಜದಂಪತಿಗಳು ಸನ್ನಿಧಿಯವರಿಂದ ಗುರುಕರುಣೆ ಪಡೆಯಲು ಮನಸ್ಸು ಮಾಡುವರು. ಅವರಿಚ್ಛೆಯನ್ನು ಮಹಾ ಸನ್ನಿಧಿಯವರು ನೆರವೇರಿಸುವರು. ಆದರಿಂದ ಇನ್ನೂ ಮತ್ತು ಉಲ್ಲಾಸ ಸ್ಫೂರ್ತಿವಂತರಾಗಿ ಮೊದಲು ತಮ್ಮ ಪೂಜೆ ಮಾಡಿದ ಉಪವನದ ಸ್ಥಾನದಲ್ಲಿ ಈಗಿರುವ ಬೃಹನ್ಮಠವೊಂದನ್ನು ಕಟ್ಟಿಸಿಕೊಡುವರು ಕಾಣಿಕೆಯಾಗಿ! ಬೆಳ್ಳಿ ಬಂಗಾರದ ಸಕಲ ಬಿರುದಾವಳಿಗಳನ್ನೂ ಕನಕ ಸಿಂಹಾಸನವೊಂದನ್ನು ರಚಿಸಿ ಶ್ರೀ ಚರಣಕ್ಕೆ ಸಮರ್ಪಿಸುವರು. ಪೀಠದಲ್ಲಿ ಒಂದು

ಶ್ರೀ ವೀರಭದ್ರಸ್ವಾಮಿಯನ್ನು ಮತ್ತು ರಾಜದಂಪತಿಗಳ ಸಿತ್ಯಾರ್ಚನೆಗಾಗಿ ಊರ ಬಳಿ ಒಂದು ಶ್ರೀ ವೀರಭದ್ರಸ್ವಾಮಿಯನ್ನು ದೇವಸ್ಥಾನದಲ್ಲಿ ಪ್ರತಿಷ್ಠಿಸುವರು ಸನ್ನಿಧಿಯವರ ಅಪ್ಪಣೆಯಂತೆ। ಆ ಬಳಿಕ ಕೋಲಾರ ಜಿಲ್ಲೆಯಲ್ಲಿ ಸಂಚರಿಸಿ ಚಿಂತಾಮಣಿ, ಶ್ರೀನಿವಾಸಪುರಗಳ ಬಹು ಜನರನ್ನು ಶಿಷ್ಯರನ್ನಾಗಿಸಿ ಕೊಂಡು, ಕೋಲಾರಕ್ಕೆದಯಮಾಡಿಸಿ ಅಲ್ಲಿ ವೀರಶೈವ ಧರ್ಮ ಬೋಧೆಯನ್ನೆಸಗಿ, ಅಲ್ಲಿಯೇ ಒಂದು ಕಂಬಳಿ ಮಠವನ್ನು ಕಟ್ಟಿಸುವರು. ಅಲ್ಲಿಂದಾಚೆ ಬಂಗಾರಪೇಟೆಗೆ ಬಿಜಯಂಗೈಸಿ ಅಲ್ಲಿ ಅನೇಕರಿಗೆ ಲಿಂಗಧಾರಣವನ್ನೂ ಕರುಣಿಸಿ, ಅಲ್ಲಿಯೇ ಬಳಿಯಿರುವ ಐತಾಂಡಹಳ್ಳಿಯಲ್ಲಿ ಒಂದು ಶಾಖಾಮಠವನ್ನು ಕಟ್ಟಿಸುವರು. ಆಬಳಿಕ ಬೆಂಗಳೂರು ಜಿಲ್ಲೆಗೆ ಆಗಮಿಸಿ ಹುಣಸಮಾರನಹಳ್ಳಿಯಲ್ಲಿ ಒಂದು ಶಾಖಾಮಠವನ್ನು ಸ್ಥಾಪಿಸಿ ಭಕ್ತರಿಂದ ಭೂರಿ ಸ್ಥಿರಾಸ್ತಿಯನ್ನು ಸಂಪಾದಿಸುವರು.

## ಹೊಲೆ ಹದಿನೆಂಟು ಜಾತಿಗಳ ಉದ್ಧಾರ ; ಮತ್ತು ಹದಿನೆಂಟು ಪಣಕಟ್ಟುಗಳ ಏರ್ಪಾಟು

ನಾಡಿನಲ್ಲಿ ನಿಡಿದಾಗಿ ಬೆಳದು ನಿಂತಿದ್ದ ಹೊಲೆ ಹದಿನೆಂಟು ಪಂಥ ಪಂಗಡಗಳನ್ನು ಪರಿಹಸುವುದಕ್ಕಾಗಿಯೇ ತಮ್ಮ ಬಾಳಿನುದ್ದಕ್ಕೂ ಪರಿಶ್ರಮಿಸಿದ ಪರಮ ಪೂಜ್ಯರು ಶ್ರೀ ಚಂದ್ರ ಗುಂಡ ಶಿವಾಚಾರ್ಯರು. ಮಾನವ ಸಹಜ ಅಂತಃಕರಣವುಳ್ಳವರು. ಮಾನವರಲ್ಲಿ ಮೇಲು ಕೀಳುಗಳಿರುವುದನ್ನು ಅದೆಷ್ಟೂ ಸಹಿಸದವರು: ದೀನ ದಲಿತರನ್ನು ಶೋಷಿತರನ್ನು ಪಾಪಕೃತ್ಯಗಳಿಂದ ಪತಿತರಾದವರನ್ನು ಕಂಡು ಅವರ ಹೃದಯ ಮಮ್ಮಲ ಮರುಗುತ್ತಿತ್ತು. ಬರೀ ಮರುಗಿ ಬಿಡುತ್ತಿರಲಿಲ್ಲ. ಅವರೆಲ್ಲರ ಉದ್ಧಾರಕ್ಕೆ ಉದ್ಯುಕ್ತರಾಗುತ್ತಿದ್ದರು. ಈ ಸಮತ್ವ ಸಾಧಕ ಪಾಠವನ್ನು ಅವರ ಗುರುವರ್ಯರಾದ ಶ್ರೀ ಜ. ವಿರೂಪಾಕ್ಷದೇಶಿಕೇಂದ್ರ ಶಿವಾಚಾರ್ಯರಿಂದ ಕಲಿತು ಪ್ರಚೋದಿತರಾಗಿದ್ದರು. ಅವರ ಸಹಾಯ ಸಹಕಾರವನ್ನು ಆಗಾಗ ಉಪಯೋಗಿಸಿಕೊಳ್ಳುತ್ತಿದ್ದರು. ವೀರಶೈವಾಗಸದ ಸೂರ್ಯ ಚಂದ್ರರಂತೆ ಅವರಿಬ್ಬರಿದ್ದರು. ಚಿತ್ಸೂರ್ಯನು ಅಸ್ತಂಗತನಾದ ಬಳಿಕ ಅಂದರೆ ಲಿಂಗೈಕ್ಯರಾದ ಬಳಿಕ ಚಿಚ್ಚಂದ್ರರಂತಿದ್ದ ಚಂದ್ರಗುಂಡ ಶಿವಾಚಾರ್ಯರು ತಮ್ಮ ಜಾಜ್ವಲ್ಯ ಜೀವನವನ್ನು ಸಾಮಾಜಿಕ ಅಸಮಾನತೆಯನ್ನು ಹೋಗಲಾಡಿಸಲು ಮುಡುಪಾಗಿಟ್ಟು ಹುಣ್ಣಿಮೆಯ ಚಂದಿರನಂತೆ ಬೆಳ್ಳಂ ಬೆಳಗಿದರು. ವೀರಶೈವ ಸಮಾಜದಲ್ಲಿ ವಿಶಾಲ ಭಾವದ

ಕ್ರಾಂತಿಕಾರೀ ಸ್ಥಿತ್ಯಂತರಗಳನ್ನು ಅಂದರೆ ಸಮಾನತೆಯನ್ನು ತರಲು, ತಂದು ವಿಶಾಲತೆಯನ್ನು ಮೂಡಿಸಲು ಶ್ರಮಿಸಿದ ಸರ್ವೋತ್ತಮ ಮಹಾತ್ಮರಿವರು ; ಕಾರಣಿಕ ಕಳಾತ್ಮರಿವರು. ಶ್ರಮ ಮಾತ್ರವಲ್ಲದೆ ಸಫಲರೂ ಆದರು. ಇಂದಿಗೂ ಹದಿನೆಂಟು ಪಣಕಟ್ಟಿನವರು ಸಮ ಧರ್ಮಿಗಳಾಗಿ ಸಂಸ್ಥಾನ ಮಠಕ್ಕೆ ಶ್ರದ್ಧೆಯಿಂದ ನಡೆದುಕೊಳ್ಳುತ್ತಿದ್ದಾರೆ. ಗುರು ಪುತ್ರರೆಂದು ಭಾವಿಸುತ್ತಿದ್ದಾರೆ. ತಮ್ಮ ತಮ್ಮಲ್ಲಿರುವ ಲೋಪದೋಷಗಳನ್ನು ತಿದ್ದಿಕೊಂಡು ಸರಿಪಡಿಸಿಕೊಳ್ಳಲು ಸಂಸ್ಥಾನ ಮಠವನ್ನೆ ಆಶ್ರಯಿಸುತ್ತಿದ್ದಾರೆ. ತಂತಮ್ಮ ಕಾಯಕ ಫಲದಿಂದ ಬಂದುದನ್ನು ಪರುಷಕ್ಕೊಮ್ಮೆ ಕಾಣಿಕಾ ರೂಪದಲ್ಲಿ ಸಮರ್ಪಿಸುತ್ತಾರೆ. ಈ ದಿಸೆಯಲ್ಲಿ ಮೊದಲು ಹೊಲೆಯರನ್ನು ಉದ್ಧರಿಸಿದರು. ಅವರಿಗೆ ಭಸ್ಮ ಧಾರಣ ಧರ್ಮವನ್ನು ವಿಧಿಸಿದರು. ಚಲ (ಛಲ) ವಾದಿತನದ ಧಾರ್ಮಿಕ ಹಕ್ಕನ್ನು ಕರುಣಿಸಿದರು. ಅವರಿಲ್ಲದೆ ಮಂಗಲ ಕಾರ್ಯಗಳನ್ನು ಯಾರೂ ನೆರವೇರಿಸುವಂತಿಲ್ಲ. ಇದು ಇಂದಿಗೂ ನಡೆದು ಬರುತ್ತಿದೆ. ಅಲ್ಲದೆ ಗುರುಗಳ ಉತ್ಸವಾದಿಗಳಲ್ಲಿ ಅವರಿಗೆ ಗಂಟೆ ಮುದ್ರೆಯನ್ನು ಹೊತ್ತು ಮುಂದೆ ನಿಂತು ಘಂಟಾನಾದ ರೂಪ ಸೇವೆ ಸಲ್ಲಿಸಲು ಏರ್ಪಡಿಸಿದರು. ಗಂಟೆ ಮುದ್ರೆಯ ಹೆಚ್ಚುಳಿಕೆಯನ್ನು ಹಬ್ಬಿಸಿದರು. ಮುದ್ರೆಯ ಮೇಲೆ ಹದಿನೆಂಟು ಕುಲ ವೃತ್ತಿ ಕಾರಣಗಳಾದ ಉಪಕರಣಗಳನ್ನು ಮತ್ತು ಆಯುಧಗಳನ್ನು ಮುದ್ರಿಸಿ ಅವುಗಳಿಗೆ ಮನ್ನಣೆ ಸಲ್ಲುವಂತೆಸಗಿ ಕಾಯಕಮೌಲ್ಯವನ್ನು ಬಳಕೆಯಲ್ಲಿ ಬೆಳಸಿದರು. ಕಾಯಕವಂತರಿಗೆ ಮಾತ್ರವಲ್ಲ. ಕಾಯಕಕ್ಕೆ ಸಹಾಯಕಗಳಾದ ಆಯುಧಗಳಿಗೂ ಉಪಕರಣಗಳಿಗೂ ಗೌರವ ಸಲ್ಲಬೇಕೆಂದು ಧರ್ಮಾಜ್ಞೆಯನ್ನು ಮಾಡಿ ಸ್ಥಾವರ-ಜಂಗಮವೊಂದೇ ಎಂದು ಅಂದೇ ಜಾರಿಗೆ ತಂದಿರುವರು. ಇಂದಿಗೂ ಅಚ್ಚಳಿಯದೆ ಮೆಚ್ಚಿನಿಂದ ನಡೆಯುತ್ತಿರುವುದು. ಇಂದಿನ ಭಾರತ ಸ್ವಾತಂತ್ರ್ಯ ತಂದ ಮಹಾತ್ಮಾಗಾಂಧಿಯವರು ಹೊಲೆಯರ ಅಂದರೆಅಸ್ಪೃಶ್ಯರ ಉದ್ಧಾರಕ್ಕಾಗಿ ಅಂದರೆ ಅಸ್ಪೃಶ್ಯತೆಯ ತೊಡೆದು ಹಾಕಲು ಹೋರಾಡಿದರು. ಆದರೂ ಅವರ ಆಶಯವಿದ್ದಷ್ಟು ಫಲ ದೊರೆಯದ ಸ್ಥಿತಿಯಲ್ಲಿಯೇ ಮುಂದು ವರಿಯುತ್ತಿದೆ. ಅದಕ್ಕಾಗಿ ಆ ಮರಣಾಂತ ಉಪವಾಸ ಕೈಕೊಂಬ ಪ್ರಸಂಗ ಒದಗಿ ಹೋಯಿತು. ದೇವ ಮಂದಿರಗಳ ಪ್ರವೇಶ ಕಲ್ಪಿಸಲು ಕೈಕೊಳ್ಳ

ಬೇಕಾಯಿತಾದರೂ ಅವರ ಜೀವಿತ ಕಾಲದಲ್ಲಿ ಅದು ಪೂರ್ಣ ಸಫಲವಾಗದೆ ಹೋಯಿತೆಂದು ಬೇರೆ ಹೇಳಬೇಕಾಗಿಲ್ಲ. ಹನ್ನೊಂದನೆಯ ಶತಮಾನದ ಶ್ರೀ ಜ. ಚಂದ್ರಗುಂಡ ಶಿವಾಚಾರ್ಯರಾದರೋ ಯಾವ ಉಪವಾಸ-ವನವಾಸ ಮಾಡದೆ ಅಸ್ಪೃಶ್ಯರನ್ನು ಮಠಗಳಲ್ಲಿ ಪ್ರವೇಶಗೊಳಿಸಿದ್ದರು. ಸ್ಪೃಶ್ಯರನ್ನಾಗಿಸಿದ್ದರು. ಭಸ್ಮಧಾರಣ, ಗಂಟೆ ಮುದ್ರೆಧಾರಣ, ಮಂಗಲ ಉತ್ಸವವಾದಿಗಳಲ್ಲಿ ಅಗ್ರ ತಾಂಬೂಲ-ಅಗ್ರ ಗಣ್ಯತೆ ಲಭಿಸುವಂತೆ ಮಾಡಿದರು. ಅವರ ಈ ಮಹಾಕ್ರಾಂತಿ ಕಾರ್ಯವನ್ನು ಅವರ ತರುವಾಯ ಗತಿಸಿದ ಸಹಾಸ್ರಾರು ವರುಷಗಳಲ್ಲಿ ಯಾರು ಮಾಡಲಾಗಿಲ್ಲ. ನಿಮ್ನ ವರ್ಗದವರೊಬ್ಬರ ಮನೆಯಲ್ಲಿ ಹೋಗಿ ಊಟ ಮಾಡಿ ಬಂದರೆ ಅದು ವೈಯಕ್ತಿಕವಾಯಿತಲ್ಲದೆ ಸಾಮಾಜಿಕವಾಗಲಿಲ್ಲ. ಆದರೆ ಚಂದ್ರಗುಂಡ ಶಿವಾಚಾರ್ಯರು ೧೧ನೆಯ ಶತಮಾನದಲ್ಲಿ ಸಾಮಾಜಿಕವಾಗಿ ನಿಮ್ನೋದ್ಧಾರ ಕಾರ್ಯವನ್ನೆಸಗಿ ಅಸದೃಶ ಯಶಸ್ಸನ್ನು ಗಳಿಸಿದವರು. ಅಪ್ರತಿಮ ಕ್ರಾಂತಿಯನ್ನು ನೆರವೇರಿಸಿದರು. ಹಡಪದವರು ಕುಂಬಾರರು, ಗಾಣಿಗರು, ಹೂಗಾರರು, ಪಂಚಾಳರು ಅಂದರೆ ಶೀಲವಂತರು, ಡೋಹರರು, ನೇಕಾರರು ಮೊದಲಾದವರು ಇಂದಿಗೂ ವೀರಶೈವರಾಗಿರುವರು. ಲಿಂಗ ನಿಯಮಗಳನ್ನು ನಡೆಸದಾಗದ ಕೆಲವರು ಮಾತ್ರ ಲಿಂಗಧಾರಣವಿಲ್ಲದಿರುವರು. ಎಂತೆಂತವರಿಂದ ವೈಯಕ್ತಿಕವಾಗಿ ಮಾಡಲಾಗದ್ದನ್ನು ಸಾಮಾಜಿಕವಾಗಿ ಸಾಮೂಹಿಕವಾಗಿ ಮಾಡಿದ ಮಹಾಕೀರ್ತಿ ಚಂದ್ರಗುಂಡಶಿವಾಚಾರ್ಯರಿಗೆ ಮಾತ್ರ ಸಲ್ಲಬೇಕು. ಆದರೆ ಇದನ್ನು ಹೇಳವವರಿಲ್ಲ; ಹೇಳಿದರೆ ಕೇಳುವವರಿಲ್ಲ. ಇದಲ್ಲವೇ ದುರದೃಷ್ಟಕರ? ಭಾಗ್ಯ-ಬಾಯಿ-ಬರೆಹ ಯಾರಿಗೆ ಹೆಚ್ಚಿದೆಯೋ ಅವರದೇ ತಾನೆ ಕಾಲ ? ಅವರಿಗೆ ತಾನೇ ಕೀರ್ತಿ ? "ಮತ್ಸ್ಯಾಡಯೋऽಪಿ ಜಾನಂತಿ ನೀರಕ್ಷೀರ ವಿವೇಚನಂ । ತಥಾಪಿ ಹಂಸಸ್ಯ ಕೀರ್ತಿರ್ಯಶಃ ಪುಣ್ಯೈರ ವಾಪ್ಯತೇ ॥ ಎಂಬ ಮಾತು ದಿಟಕ್ಕೆ ದಿಟ ತಾನೆ ?

೭

## ದೇವರ ದಾಸಿಮಯ್ಯನದು

## ಉದ್ಬೋಧಕ ಚರಿತ್ರ, ಉನ್ನತೋನ್ನತ ಕ್ರಾಂತಿಕಾರಕ ಪಾತ್ರ !

ಈತನು ಹುಟ್ಟಿದೂರು ಮುದನೂರು, ಈತನ ಕಾಲ ಕ್ರಿ. ಶ, ೧೦೦೮

ರಿಂದ ೧೯೫೦. ಈತನ ತಾಯಿ ತಂದೆ ಶಂಕರೀ ಕಾಮಯ್ಯ ಅಥವಾ ವೀರಭದ್ರರು. ತಂದೆಗೆ ಈ ಎರಡು ಹೆಸರುಗಳಿದ್ದವೆಂದು ತಿಳಿಯುತ್ತದೆ. ಸಾತ್ವಿಕನು. ಬಾಲ್ಯದಲ್ಲಿಯೇ ಆಸ್ತಿಕನು. ಅಲೌಕಿಕ ಜೀವಿಯು. ಶಿವಾಚಾರ ಶಿವಜ್ಞಾನ ನಿಷ್ಠನು. ದೇವಾಂಗ ಜನಾಂಗದವನು. ನೇಕಾರನಾಗಿದ್ದರಿಂದ ಜೇಡ ಎಂದೂ ಕರೆಯುತ್ತಿದ್ದರು. ಊರಿನಲ್ಲಿರುವ ರಾಮನಾಥನು ಈತನ ಮನೆ ದೇವರು. ರಾಮನಾಥನಲ್ಲಿ ಭಕ್ತಿ ಹೆಚ್ಚು. ಪೂಜೆ, ಪ್ರಾರ್ಥನೆಗಳಲ್ಲಿ ಪ್ರತಿನಿತ್ಯ ತೊಡಗಿರುತ್ತಿದ್ದನು. ಕಾಲ ಕಳೆದಂತೆ ಶಿವಜ್ಞಾನಿಯಾಗುವ ಬಯಕೆ ಹೆಚ್ಚುತ್ತದೆ. ಶ್ರೀಶೈಲ ಕ್ಷೇತ್ರದ ಮಹಿಮೆ, ಮಲ್ಲಿಕಾರ್ಜುನ ಪ್ರಭಾವಗಳು ಆತನ ಕಿವಿಗೆ ಆಗಾಗ ಬೀಳುತ್ತಿರುತ್ತವೆ. ಜೊತೆಗೆ ಅಲ್ಲಿರುವ ಸೂರ್ಯ ಸಿಂಹಾಸನ ಪೀಠದಲ್ಲಿ ಪ್ರತಿಷ್ಠಿತವಾದ ಶಿವಾನುಭವ ಮಂಟಪವೊಂದಿದ್ದು ಅಲ್ಲಿ ವೀರಶೈವ ಷಟ್‌ಸ್ಥಲ ಸಿದ್ಧಾಂತಗೋಷ್ಠಿ ನಡೆಯುತ್ತಿರುವ ಸುವಾರ್ತೆಯನ್ನು ಆಲಿಸಿ ಅಲ್ಲಿಗೆ ಧಾವಿಸುವನು. ಪಾತಾಳ ಗಂಗೆಯಲ್ಲಿ ಮಿಂದು, ಭೀಮೇಶ್ವರ ಲಿಂಗದ ದರ್ಶನ ಪಡೆದು, ಅಲ್ಲಿದ್ದ ಬಿಲ್ವವನದಲ್ಲಿ ಕುಳಿತು ಧ್ಯಾನದಲ್ಲಿ ನಿರತನಾಗುವನು. ದಿನಗಳೆದಂತೆ ಶ್ರೀಶೈಲ ಮಲ್ಲಿಕಾರ್ಜುನ ಸಾಕ್ಷಾತ್ಕಾರವಾಗಿ ಮಲ್ಲಯ್ಯನ (ವೀರೇಶನ) ನಿರ್ದೇಶದಂತೆ ಶ್ರೀಶೈಲ ಪೀಠಾಧಿಪತಿ ಶ್ರೀ ಚಂದ್ರಗುಂಡ ಶಿವಾಚಾರ್ಯರ ಸನ್ನಿಧಿಗೆ ಬಂದು ಶರಣಾಗತನಾಗುವನು ; ಸನ್ನಿಧಿಯ ಕಾರುಣ್ಯಕ್ಕೆ ಪಾತ್ರನಾಗುವನು. ಕಾಲ ಕಳೆದಂತೆ ಶ್ರೇಷ್ಠ ಶಿವಾಚಾರಿಯೂ ಶಿವಾನುಭಾವಿಯೂ ಆಗುವನು, ಸನ್ನಿಧಿಯವರ ಆದೇಶದಂತೆ ಅಲ್ಲಿನ ಪರಿಸರದ ಕಾಡ ಜನರನ್ನು ಬೋಧಿಸಿ ಶಿವಾಚಾರದವರನ್ನಾಗಿಸುತ್ತಿದ್ದನು. ಶ್ರೀಶೈಲ ಶಿವಾನುಭಾವ ಮಂಟಪದ ಉದ್ದೇಶ ಇದಾಗಿದ್ದಿತು. ಬರೀ ವೈಯಕ್ತಿಕವಾಗಿ ಅನುಭಾವಿಗಳಾಗುತ್ತಿರಲಿಲ್ಲ. ಜೊತೆಗೆ ಸರ್ವರೂ ಶಿವಾಚಾರ ಶಿವಜ್ಞಾನ ಶಿವಾನುಭವ ನಿರತರಾಗಬೇಕೆಂಬ ಸತ್ಯ ಸಂಕಲ್ಪಕ್ಕೆ ಸರಿಯಾಗಿ ತಮ್ಮಲ್ಲಿರುವವರನ್ನೆಲ್ಲ ಬೋಧಕ್ರಾಂತಿಯ ಮಾಡಲು ನಿಯಮಿಸಿದ್ದರು ಸನ್ನಿಧಿಯವರು; ಅದರಂತೆ ದಾಸಮಯ್ಯನೂ ಕಾಡ ಜನರನ್ನು ತಿದ್ದುವ ಕ್ರಾಂತಿಯನ್ನು ಎಲ್ಲರಿಗಿಂತಲೂ ಎತ್ತರವಾಗಿ ಬಿತ್ತರವಾಗಿ ಮಾಡತೊಡಗುವನು. ತನ್ನವರನ್ನಾಗಿ ಮಾಡಿಕೊಳ್ಳುತ್ತಿದ್ದನು. ದಾಸನ ಕುಲದೇಶವಡೆವಂತಾಯಿತು. ದಾಸಮಯ್ಯನನು ಧರೆಕೊಂಡಾಡುವಂತಾಯಿತು. ಕಾಡು ಜನರನ್ನೂ ತಿದ್ದುವ ಕಾರ್ಯ ಅದೊಂದು ಅಪೂರ್ವ !

## ಶಿವಶರಣ ಶಿಖಾಗ್ರಣಿ, ಶಿವಾಚಾರ್ಯ ಸಹಜ ಧರ್ಮಿ!

ದಾಸಮಯ್ಯನ ಧಾರ್ಮಿಕ ಸಾಂಸ್ಕೃತಿಕ ಚಳುವಳಿಯಿಂದ ಆತನ ಅನುಯಾಯಿಗಳು ಅಸಂಖ್ಯಾತರಾದರು. ಅವರೆಲ್ಲರು ಶಿವಾಚಾರದವರಾದರು. ಅವರೆಲ್ಲರ ಸಾಂಸ್ಕೃತಿಕ ಮಟ್ಟ ಸರ್ವಾದರ್ಶವಾಯಿತು.

> "ದಾಸನ ಕುಲವಾದಾತ ಈಶಂಗಲ್ಲದೆ ಶರಣೆನ್ನ ಆಸೆ ಮಾಡ ನೋಡಾ !
> ಅನ್ಯದೈವಂಗಳಿಗೆ ದೇಶದ ಪಿಶಾಚಿಗಳಿಗೆ ಆಸೆ ಮಾಡ ನೋಡಾ !!
> ಆಸೆ ಮಾಡಿದನಾದಡೆ ಅವ ದಾಸನ ಕುಲವಲ್ಲ ; ಅವನನ್ಯ ಕುಲ ನೋಡಾ
> ರಾಮನಾಥಾ !"

ಎಂದು ಆತನೇ ಹೇಳಿಕೊಂಡಿದ್ದಾನೆ. ಇದರಿಂದ ಆತನ ಪ್ರಭಾವ ಅದೆಷ್ಟಿರ ಬೇಕೆಂದು ಊಹಿಸಲು ಸಹ ಸಾಧ್ಯವಾಗದು. ಇದರಿಂದಾತನು ಶಿವಶರಣ ಶಿಖಾಗ್ರಹಿಣಿಯೆಂದೆನಿಸುವನು. ಆತನು ಮೆರೆದ ಪವಾಡಗಳಿಗೆ ಲೆಕ್ಕವಿಲ್ಲ. ಆತನು ದಾಸ ಕುಲದವರನ್ನು ಮಾತ್ರ ಉದ್ಧರಿಸಲಿಲ್ಲ ; ಜೈನರು ಬ್ರಾಹ್ಮಣರು ಒಕ್ಕಲಿಗರು ನೆಯ್ಗೆಯವರು ಮೊದಲಾಗಿ ಎಲ್ಲ ಕೋಮಿನವರನ್ನೂ ತನ್ನ ಗುರುವರ್ಯರಂತೆ ಬೋಧಿಸಿ ಅಂದರೆ ಕರುಣಿಸಿ ಉದ್ಧರಿಸಿರುವನು. ಇದರಿಂದಾಗಿ ಆತನು ಗುರು ಸಹಜ ಧರ್ಮಿಯೂ ಆಗಿದ್ದನು. ತನ್ನ ಗುರು ಮಹಾ ಸನ್ನಿಧಿಯಿಂದ ವೀರ ಮಾಹೇಶ್ವರ ದೀಕ್ಷೆಯನ್ನು ಪಡೆದಿದ್ದನು.

## ಅನನ್ಯ ಕಾಯಕ, ಅಸಾಮಾನ್ಯ ದಾಸೋಹ

ಶ್ರೀಶೈಲ ಜಗದ್ಗುರು ಚಂದ್ರಗುಂಡ ಶಿವಾಚಾರ್ಯರ ಅಪ್ಪಣೆ ಪಡೆದು ತನ್ನೂರಾದ ಮುದನೂರಿಗೆ ಮರಳುವನು. ಹಿಂದಿನಂತೆ ತನ್ನ ನೆಯ್ಗೆಯ ಕಾಯಕದಲ್ಲಿ ನಿರತನಾಗುವನು. ಮತ್ತು ಧಾರ್ಮಿಕ ಸಾಮಾಜಿಕ ಕ್ರಾಂತಿಯಲ್ಲಿಯೂ ನಿರತನಾಗಿರುವನು. ಆತನ ಕಾಯಕದಂತೆ ಮುಂದೆ ಯಾರೂ ಮಾಡಲಾಗಿಲ್ಲ. ಕಾಯಕ ನಿಷ್ಠೆಯಲ್ಲಿ ಆತನನ್ನು ಮೀರುವವರು ಯಾರೂ ಆಗಿಲ್ಲ ಇಂದಿನವರೆವಿಗೂ ! ಇದಕ್ಕೆ ನಿದರ್ಶನವೆಂದರೆ ಆತನು ಪಡೆದ ತವನಿಧಿಯು. ತವನಿಧಿಯು ದಾಸಮಯ್ಯನೆಂದು ನಾಡಿನಲ್ಲೆಲ್ಲ ಅನನ್ಯವಾಗಿ

ಹೆಸರಾಂತಿದ್ದಾನೆ. ಜೊತೆಗೆ ಸತಿಪತಿಗಳೊಂದಾಗಿ ಕಾಯಕ ಮಾಡಿ ತವನಿಧಿಯ
ಪಡೆದು ಅಸಾಮಾನ್ಯವಾಗಿ ದಾಸೋಹ ಮಾಡಿದ ಅಸದೃಶ ಸತ್ಕೀರ್ತಿ ಆತನ
ದಾಗಿದೆ. ತವನಿಧಿಯ ಒಡೆಯನಾಗಿದ್ದರೂ ಮಾಡುವೆ ಕೊಡುವೆನೆಂಬ ಹಮ್ಮು
ಬಿಮ್ಮುಗಳಿರಲಿಲ್ಲ. ಆತನ ದಾಸೋಹ ಕೈಕೊಳ್ಳಲು ಅದೆಷ್ಟೇ ಜನ ಬರಲಿ
ಬೇಸರಿಸದೆ ಮಾಡಿದ ದಾಂಪತ್ಯ ಜೀವನ ಅವರದು. ಇಬ್ಬರೂ ಹೆಗಲೆಣೆ
ಯಾಗಿ ನಿಂತು ಆಸರಿಸದೆ ಓಸರಿಸದೆ ಮಾಡಿದ ಮಹಂತರು ಸತಿಪತಿಗಳು.
ಸ್ವಾರ್ಥವಿಲ್ಲ, ಸಂಗ್ರಹ ಬುದ್ಧಿಯಿಲ್ಲ ; ಸಾಟಿ ಹೇಳುವ ಸ್ವಭಾವವಿಲ್ಲ. ಅವರ
ಆ ಶಿವಾಚಾರ, ಶಿವಸಂಸ್ಕಾರ, ಶಿವಜ್ಞಾನಾನುಭವಗಳ ಮೆಚ್ಚಿ ಅಂದಿನ
ಚಾಲುಕ್ಯ ಚಕ್ರವರ್ತಿ ಜಯಸಿಂಹನ ರಾಣಿ ಸುಗ್ಗಳೆಯು ದೇವರ ದಾಸಮಯ್ಯ
ನಿಂದ ವೀರಶೈವ ದೀಕ್ಷೆಯನ್ನು ಪಡೆಯುತ್ತಾಳೆ.

## ಆದರ್ಶ ಮಹಾರಾಣಿ ಸುಗ್ಗಳೆ ;
## ಆದರ್ಶ ಶಿವಾಚಾರಣಿ ದುಗ್ಗಳೆ.

ದಾಸಮಯ್ಯನಿಗೆ ಶಿಷ್ಯಳು ಮಹಾರಾಣಿಯಾದ ಸುಗ್ಗಳೆ ! ಸತ್‌ಸತಿಯು
ಶಿವಾಚಾರಿಣಿಯಾದ ದುಗ್ಗಳೆ !! ದೃಢವಾದ ಭಾವ, ಗಾಢವಾದ ಭಕ್ತಿ
ಸುಗ್ಗಳೆ-ದುಗ್ಗಳೆಯರದು. ತನ್ನ ಕುಲದವರಿಂದ, ತನ್ನ ಪತಿಯಿಂದ ಅದೆಷ್ಟು
ಕಿರುಕುಳ, ಅದೆಷ್ಟು ಉಪದ್ರವ, ಅದೆಷ್ಟು ಸತ್ವಪರೀಕ್ಷೆ ಬಂದರೂ ಬಿಡದೆ
ಸೋಲದೆ ತಾನು ಕೈಕೊಂಡ ಶಿವಾಚಾರವನ್ನು ಸಮರ್ಪಕವಾಗಿ ಸಮರ್ಥನೀಯ
ವಾಗಿ ನಡೆಯಿಸಿ ಕಡೆಗೂ ಉತ್ತೀರ್ಣಳಾದಳು ಶಿಷ್ಯೆ ಸುಗ್ಗಳೆ ! ತನ್ನ ಕಾಯಕ
ದಾಸೋಹಗಳಿಗೆ ಅದೆಷ್ಟು ತೊಂದರೆ, ಅದೆಷ್ಟು ಕೊರತೆಗಳು ಬಂದೊದಗಿದರೂ
ಕುಗ್ಗದೆ ಕುಗ್ಗದೆ ಕಡೆಯವರೆವಿಗೂ ನಡೆಯಿಸಿ ಜಯಶೀಲಳಾದಳು ಸತ್‌ಸತಿ
ದುಗ್ಗಳೆ !! ಇವರಿಬ್ಬರೂ ವೀರಶೈವ ಇತಿಹಾಸದಲ್ಲಿ ಎದ್ದು ಕಾಣುವ ಅಸದೃಶ
ವೀರ ಮಹಿಳೆಯರು, ತನ್ನ ಶಿಷ್ಯಳನ್ನು ಕಾಪಾಡಲು, ಆಕೆಯ ಪತಿ ಜಯಸಿಂಹ
ರಾಜನು, ಜೈನ ಪಂಡಿತರು, ಜೈನರು ತಂದೊಡ್ಡಿದ ತೀರಿಸಲಾಗದ ಮಹಾ
ಮಹಾ ಸ್ಪರ್ಧೆಗಳನ್ನು ನಿರಾಯಾಸದಿಂದ ಜಯಿಸಿ, ಅರಸನನ್ನು ಪಂಡಿತರನ್ನು
೦ ಸಾವಿರ ಜೈನರನ್ನು ವೀರಶೈವರನ್ನಾಗಿಸಿದಲ್ಲದೆ ಏಳ್ನೂರು ಬಸದಿಗಳನ್ನು

ವೀರಶೈವ ಮಠಗಳನ್ನಾಗಿಸಿದ ಕ್ರಾಂತಿ ಕಡೆಗಣ್ಣಿಂದ ಕಾಣತಕ್ಕುದಲ್ಲ ; ಶಕ್ತಿ ಸಣ್ಣದಲ್ಲ. "....ಪರಸಮಯಿಗಳು ಪಡಲ್ಪಡಿಸಿ, ಲೋಕಮನಾ ಕಂಡಂಗೊಳಿಸಿ, ಬಸದಿಗಳಂ ಹೊಸದು ಮುಕ್ಕಿ ಶಿವಲಿಂಗ ಸಿಂಹಾಸನಮಂ(ಕ)ಣ್ಗೊಳಿಸಿ ಚಲಮಂ ಮೆರೆದು ಧೀರರೊಳು ನೆರೆದು...." ಎಂಬೀ ತಾಳೀಕೋಟೆ ಶಾಸನ (ಕ್ರಿ. ಶ. ೧೧೮೪) ಸಾಕ್ಷಿಯಾಗಿದೆ. —ಶಾಸನಗಳಲ್ಲಿ ಶಿವಶರಣರು; ಪು. ೨೯. ಯಾರೂ ಮಾಡದ ಈ ಮಹಾಕ್ರಾಂತಿ ವೀರಶೈವೇತಿಹಾಸದಲ್ಲಿ ಸುವರ್ಣಾಕ್ಷರ ಗಳಿಂದ ಶಾಶ್ವತವಾಗಿ ಬರೆದಿರಿಸಬೇಕಾದುದಲ್ಲವೆ ? ಇಂತಿದ್ದರೂ ಇದಕ್ಕಿಂತ ಅಲ್ಪವಾದ ಕ್ರಾಂತಿಯನ್ನು ಅನಲ್ಪವನ್ನಾಗಿ ಕಲ್ಪಿಸಿ ವೀರಶೈವ ಸಾಹಿತಿಗಳು ಚಾರಿತ್ರ ಲೇಖಕರು ಬರೆಯುತ್ತಿರುವರಲ್ಲದೆ ವಸ್ತು ನಿಷ್ಠವಾದುದನ್ನು ಬರೆಯುತ್ತಿಲ್ಲ. ನಿದರ್ಶನಕ್ಕಾಗಿ "ಕಲ್ಯಾಣದ ಕ್ರಾಂತಿಯೆ ಕ್ರಾಂತಿ, ಕನ್ನಡ ತನದ ಸಾಹಿತ್ಯ ಸೃಷ್ಟಿಗೆ ಬಸವಾದಿ ಶರಣರು ನಾಂದಿ ಹಾಡಿದರು" ಎಂದು ಮುಂತಾಗಿ ಬರೆಯುತ್ತಿರುವರು. ಇದನ್ನು ಕಂಡು ಕಡು ಸೋಜಿಗ ವೆನಿಸುತ್ತದೆ. ಇವರಿಗಿಂತ ಹಿಂದಿದ್ದ ಕ್ರಾಂತಿಗಳನ್ನು ಕ್ರಾಂತಿಕಾರರನ್ನು ಎತ್ತಿ ಉದ್ಧರಿಸುತ್ತಿಲ್ಲ. ಸೂಳ್ನುಡಿಗಳ ಮಾತಿಲ್ಲ. ಹಿಂದಿನ ಅನುಭವ ಮಂಟಪ ಗಳ ಸೊಲ್ಲಿಲ್ಲ.

## ಅನುಭವ ಕೇಂದ್ರಗಳೆರಡು ; ಸೂಳ್ನುಡಿಗಳ ಹುಟ್ಟು

ಈ ಬಗೆಗೆ ಸೂಳ್ನುಡಿ ಮತ್ತು ವಚನಗಳನ್ನು ಸಾತಿಶಯ ಸಾಹಸದಿಂದ ಶ್ರಮವಹಿಸಿ ಸಂಪಾದಿಸಿ ಪ್ರಕಟಿಸಿದ ಶಿವೈಕ್ಯ ಡಾ॥ ಫ.ಗು. ಹಳಕಟ್ಟಿಯವರೇ ಹೀಗೆ ಉಲ್ಲೇಖಿಸಿದ್ದಾರೆ.

"ಕರ್ನಾಟಕದಲ್ಲಿ ವೀರಶೈವ ಧರ್ಮ ಪ್ರಸಾರವೂ ಕಾಲಕಾಲಕ್ಕೆ ಅನೇಕ ಮಹನೀಯರಿಂದ ಜರಗಿದ್ದು ಅದಕ್ಕೆ ಕೆಲವು ಕೇಂದ್ರಸ್ಥಾನಗಳುಂಟಾಗಿರುತ್ತವೆ. ಅವುಗಳಲ್ಲಿ ಶ್ರೀಶೈಲ ಪ್ರಾಂತವು ಮೊದಲಿನದಾಗಿತ್ತೆಂದು ದೇ. ದಾಸಮಯ್ಯನ ಚರಿತ್ರೆಯಿಂದ ತಿಳಿದು ಬರುತ್ತದೆ. ಅಲ್ಲಿಯೇ ಅವನು ವೀರಶೈವ ದೀಕ್ಷೆಯನ್ನು ಹೊಂದಿ, ಲಿಂಗಾನುಭವದ ರೀತಿಯನ್ನು ತಿಳಿದುಕೊಂಡನು, ಆ ಮೇಲೆ ದೇವರ ದಾಸಮಯ್ಯನ ಮೂಲಕ ಪೊಟ್ಟಲಕೆರೆಯು ಎರಡನೆಯ ಕೇಂದ್ರ

ವಾಯಿತು....ಇವರ ತರುವಾಯ ದೇ. ದಾಸಮಯ್ಯನು ಮುದನೂರಿಗೆ ಆಗಮಿಸಿ ಧರ್ಮ ಪ್ರಚಾರಕಾರ್ಯ ಮಾಡಿದ್ದರಿಂದ ಈ ಭಾಗದಲ್ಲಿ ಅನೇಕ ಶಿವ ಶರಣರು ಉತ್ಪನ್ನರಾದರು. ಆದುದರಿಂದ ಮುದನೂರು ವೀರಶೈವ ಧರ್ಮ ಪ್ರಸಾರಕ್ಕೆ ೩ನೆಯ ಕೇಂದ್ರವಾಯಿತು. ದೇವರ ದಾಸಮಯ್ಯನ ತರುವಾಯ ರೇವಣಸಿದ್ಧೇಶ್ವರನು ಮಂಗಳವಾಡದಲ್ಲಿ ಬಂದು, ಕರ್ನಾಟಕದಲ್ಲಿ ಸಂಚರಿಸುತ್ತ ಧರ್ಮ ಪ್ರಸಾರಕಾರ್ಯ ಮಾಡಿ ಕೊನೆಗೆ ಮಂಗಳವಾಡದಲ್ಲಿ ಚಂಗಣಿಗಿಲ ಮಂಟಪ ಮಾಡಿದ್ದರಿಂದ ವೀರಶೈವಧರ್ಮಕ್ಕೆ ನಾಲ್ಕನೆಯ ಕೇಂದ್ರವಾಯಿತು. ತರುವಾಯ ಬಸವೇಶ್ವರರ ಧರ್ಮಕ್ರಾಂತಿಯಿಂದ ಕಲ್ಯಾಣವು ೫ನೆಯ ಕೇಂದ್ರವಾಯಿತು....ಈ ಪ್ರಕಾರ ದೇವರ ದಾಸಮಯ್ಯನು ವೀರಶೈವ ಧಾರ್ಮಿಕ ಇತಿಹಾಸದಲ್ಲಿ ಉನ್ನತ ಸ್ಥಾನವನ್ನು ಹೊಂದಿದ್ದಾನೆ.

"ಕರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ ; ಹಿರಿದಪ್ಪ ರಾಜ್ಯ ವನಿತ್ತಡೆ ಒಲ್ಲೆ, ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ ನಿಮ್ಮನಿತ್ತೆ ಕಾಣಾ ರಾಮನಾಥಾ "ಕಡೆಗೀಲಿಲ್ಲದ ಬಂಡಿ ಹೊಡೆಗೆಡುವುದು ಮಾಬುದೆ? ಕಡೆಗೀಲು ಬಂಡಿಗಾಧಾರ. ಕಡುದರ್ಪವೇರಿದ ಒಡಲೆಂಬ ಬಂಡಿಗೆ ಮೃಢಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥಾ!" ಈ ವಚನಗಳ ಮೇಲಿಂದ ದೇವರದಾಸಮಯ್ಯನಿಗಿಂತಲೂ ಮೊದಲು ವಚನವಾಙ್ಮಯ ವಿತ್ತೆಂದು ತೋರುತ್ತದೆ. ಆದರೆ ಅದು ನಮಗೆ ದೊರೆತಿಲ್ಲ. ಮುದನೂರು, ಮಂಗಳವಾಡ, ಪೊಟ್ಟಲಿಕೆರೆ, ಕೊಲಪಾಕಿ ಮತ್ತು ಶ್ರೀಶೈಲ ಪ್ರಾಂತಗಳನ್ನು ಶೋಧಿಸಿದಲ್ಲಿ ವಚನವಾಙ್ಮಯದ ಹಿಂದಿನ ಕಾಲದ ಗ್ರಂಥಗಳು ನಮಗೆ ದೊರೆ ಯಬಹುದು" ಎಂದು ಸ್ಪಷ್ಟವಾಗಿ ಹೇಳಿದ್ದಾರೆ.

ದೇವರ ದಾಸಮಯ್ಯನು ತನ್ನ ಗುರುವರ್ಯರಾದ ಶ್ರೀಶೈಲ ಜಗದ್ಗುರು ಚಂದ್ರಗುಂಡ ಶಿವಾಚಾರ್ಯರ ಪಥದಲ್ಲಿ ಮುಂದುವರಿದು ಎರಡು ಅನುಭವ ಕೇಂದ್ರಗಳನ್ನು ಸ್ಥಾಪಿಸಿ, ಸೂಳ್ನುಡಿಗಳನ್ನು ಸೃಜಿಸಿದನು. ಹಲವಾರು ಜನ ರಿಗೆ ಸೃಜಿಸುವಂತೆ ಪ್ರೇರೇಪಿಸಿದನು. ವೀರಶೈವ ಸಮಾಜ, ಸಾಹಿತ್ಯ ಸಂಸ್ಕೃತಿಗಳನ್ನು ಸಂವೃದ್ಧಿಸಿದನು. ಸೂರ್ಯ ಸಿಂಹಾಸನಾಧೀಶ್ವರರ ಶಿಷ್ಯನಾದ ದೇವರ ದಾಸಮಯ್ಯನು ಸಾಮಾಜಿಕ ಕ್ರಾಂತಿ ಕ್ಷೇತ್ರದಲ್ಲಿ ಸೂರ್ಯನಂತೆ

ಪ್ರಕಾಶಿಸುತ್ತಿರುವನು. ಮೇರುವಿನಂತೆ ಎತ್ತರದಲ್ಲಿರುವನು. ಹೆಗ್ಗಡಲಿಗಿಂತ ಹೆಚ್ಚಳದಲ್ಲಿರುವನು. ಸಮತಾವಾದದಲ್ಲಿ ಸ್ತ್ರೀಪುರುಷ ಸಾಮ್ಯತೆಯಲ್ಲಿ, ಸತ್ಯಸಂಪಾದನೆಯಲ್ಲಿ, ಸತ್ಕಾಯಕದಲ್ಲಿ, ಧರ್ಮದಾಸೋಹದಲ್ಲಿ, ಸರ್ವಾಂಗವ ಲಿಂಗಮೀಸಲಾಗಿರಿಸುವಿಕೆಯಲ್ಲಿ ಪ್ರಾಮಾಣಿಕತೆಯಲ್ಲಿ, ತನ್ನ ತಾನರಿದಿರುವಿಕೆ ಯಲ್ಲಿ, ಮೂವತ್ತಾರು ತತ್ತ್ವಸಿದ್ಧಿಯಲ್ಲಿ, ವಿಶ್ವವಿಮರ್ಶೆಯಲ್ಲಿ, ಪ್ರಾಣ ಪ್ರಕೃತಿ ಪರಾಮರ್ಶೆಯಲ್ಲಿ, ಗುರು–ಲಿಂಗ ಸಂಬಂಧ ಸ್ವಾನುಭೂತಿಯಲ್ಲಿ, ಭಕ್ತಿ ಭಕ್ತ ಸಕೀಲ ಸಂವಿತ್ತಿಯಲ್ಲಿ, ಷಟ್‌ಸ್ಥಲದ ಸ್ವಾನುಭೂತಿಯಲ್ಲಿ, ಶೂನ್ಯ ಸಂಪಾದನೆಯಲ್ಲಿ, ಶಿವಾಚಾರ ಸಂಪತ್ತಿಯಲ್ಲಿ ದೇವರದಾಸಯ್ಯನನ್ನು ಮೀರುವವರಿಲ್ಲ. ಆತನ ೧೫೩ ಸೂಳ್ನುಡಿಗಳು ಮಾತ್ರ ಸಿಕ್ಕಿವೆ. ಇಷ್ಟರಲ್ಲಿಯೇ ಎಷ್ಟೊಂದು ಹಿರಿಮೆಯ ವಿಚಾರ, ಅಪಾರ ಅನುಭವ, ಮೀಸಳಿಯದ ಆಚಾರಗಳು ಅರಿಮೆಗೆ ಬರುತ್ತವೆಯಲ್ಲಾ ! ಇನ್ನು ಹೆಚ್ಚಿಗೆ ಸೂಳ್ನುಡಿಗಳು ಸಿಕ್ಕಿದ್ದರೆ ಸಿಕ್ಕುವುದಾದರೆ ನಮ್ಮ ಅದೃಷ್ಟಕ್ಕೆ ಕೊನೆಯೇ ಇರುವುದಿಲ್ಲ. ಇದೆಲ್ಲ ಮಣಿಹಗಳಿಂದ ಮುದನೂರನ್ನು ದಕ್ಷಿಣದ ವಾರಣಾಶಿ (ಕಾಶಿ)ಯೆಂದೆನಿಸಿದ ಅಗ್ಗಳಿಕೆ ದೇವರದಾಸಮಯ್ಯನದು. ಅಂತೆಯೇ ಆತನನ್ನು ಬಸವಣ್ಣನವರು ಸಿದ್ಧರಾಮಯ್ಯನವರು ಚನ್ನಬಸವಣ್ಣನವರಾದಿಯಾಗಿ ಬಹು ಜನ ಶರಣರು ಕವಿಗಳು ಸಾಹಿತಿಗಳು ಹೃದಯಾರೆ ಕೊಂಡಾಡಿದ್ದಾರೆ. ಕೊಂಡಾಡಲು ಕಾರಣ ವೇನೆಂದರೆ ವೀರಶೈವಾಚಾರ ವಿಚಾರಗಳ ಬಗೆಗೆ ಷಟ್‌ಸ್ಥಲದ ಬಗೆಗೆ ಅತ್ಯಂತ ಸೂಕ್ಷ್ಮವಾದ ಪರಾಮರ್ಶೆಯಾಗಿದೆ. "ಸ್ಥೂಲದಿಂದ ದೃಷ್ಟ, ಸೂಕ್ಷ್ಮದಿಂದ ಅದರ ಸುಸಂಗ, ಕಾರಣದಿಂದ ವಾಮಭ್ರಮೆ. ಇಂತೀತನುತ್ರಯಂಗಳ ಕಳೆದು ನಿಜದ ಉಳಿಮೆಯಲ್ಲಿ ಒಡಗೂಡಬೇಕು–ವೀರ ಶೂರ ರಾಮನಾಥನ" ದೇವಾಂಗ ಅಥವಾ ದೇವರ ದಾಸಮಯ್ಯನು ಶಿಲಾಶಾಸನನೋಕ್ತನು. ಶ್ರೀಶೈಲ ಜಗದ್ಗುರು ಚಂದ್ರಗುಂಡ ಶಿವಾಚಾರ್ಯರ ಶಿಷ್ಯರಲ್ಲಿ ಶ್ರೇಷ್ಠನು ; ಶಿಷ್ಯನು. ಮುಂದೆ ಸರ್ವಜ್ಞನಾಗಿ ಅವತರಿಸಿ ತ್ರಿಪದಿ ಸಾಹಿತ್ಯಕ್ರಾಂತಿ, ಸಾಮಾಜಿಕ ಕ್ರಾಂತಿಯನ್ನೆಸಗಿದನು.

## ೮. ಜಗದೊಳಗೊಬ್ಬರೆ ಶಿವಸಿದ್ಧ-ಭೂಲೋಕಪ್ರಸಿದ್ಧ ರೇವಣಸಿದ್ಧ

ಆಧುನಿಕ ಶಿವಾಚಾರ್ಯರ ಕ್ರಾಂತಿಕಾರಿ ಚರಿತ್ರ ಕ್ಷೇತ್ರದಲ್ಲಿ ರೇವಣಸಿದ್ಧ ಶಿವಾಚಾರ್ಯರ ಸಚ್ಚಾರಿತ್ರ ಪ್ರಬುದ್ಧವಾದುದು ; ಅತ್ಯಂತ ಉನ್ನತವಾದುದು. ಕಾಯಕ ವ್ಯಾಪ್ತಿಯಲ್ಲಿ, ದಾಸೋಹಧರ್ಮದಲ್ಲಿ, ಮಹಿಳೆಯರ ಉದ್ಧಾರದಲ್ಲಿ, ಕ್ರಿಯಾತ್ಮಕ ಸಿದ್ಧಿಯಲ್ಲಿ, ಸ್ವಯ ಸಾಮರ್ಥ್ಯದಲ್ಲಿ, ವೈವಿಧ್ಯಮಯ ವಿಶಿಷ್ಟ ಚಟುವಟಿಕೆಯಲ್ಲಿ, ಯೋಗಸಿದ್ಧಿಯಲ್ಲಿ, ಜನಹಿತಕಾರ್ಯಕರಣದಲ್ಲಿ,ಲೋಕೋತ್ತರ ಪವಾಡಗಳಲ್ಲಿ, ನಾಡಿನಲ್ಲಿ ಸಂಚರಿಸುತ್ತ ಯೌಗಿಕ ಶಕ್ತಿಯಿಂದ ವಿಲಕ್ಷಣ ಕ್ರಾಂತಿಗಳನ್ನೆಸಗುವುದರಲ್ಲಿ, ಬಡವರ ಉದ್ಧಾರ ಕಾರ್ಯದಲ್ಲಿ, ನಿರಹಂಭಾವ-ನಿಸ್ಸ್ವಾರ್ಥತೆಗಳಲ್ಲಿ. ಸಮದರ್ಶಿತ್ವದಲ್ಲಿ ರೇವಣಸಿದ್ಧಶಿವಾಚಾರ್ಯರನ್ನು ಮೀರುವ ಬೇರೆ ಶಿವಾಚಾರ್ಯರಿಲ್ಲ, ಶಿವಶರಣರಿಲ್ಲ, ನಾಡಿನ ಬದುಕಿಗೆ ಚೈತನ್ಯ ತುಂಬಿದ, ಸ್ಫೂರ್ತಿ ಚಿಮ್ಮಿಸಿದ ಅಪ್ರತಿಮರು ರೇವಣಸಿದ್ಧ ಶಿವಾಚಾರ್ಯರು. ಅನನ್ಯಧಾಮರು ರೇವಣಸಿದ್ಧಶಿವಾಚಾರ್ಯರು.ಆದಿವೀರಶೈವ ಸಾಂಸ್ಕೃತಿಕ ಧ್ವಜವನ್ನು ಆಗಸದೆತ್ತರಕ್ಕೆ ಏರಿಸಿದ ಮಹತೋಮಹಾನ್‌ರಾದ ಆದಿರೇಣುಕ ಶಿವಾಚಾರ್ಯರ ಸಾಂಸ್ಕೃತಿಕ ಸಾಮಾಜಿಕ ಪರಂಪರೆಯನ್ನು ಪ್ರತಿಭಾಶಾಲಿಯಾಗಿ ನವೀಕರಿಸಿ ಪ್ರಕಾಶಪಡಿಸಿದವರು ರೇವಣಸಿದ್ಧಶಿವಾಚಾರ್ಯರು. ವೀರಶೈವ ವಿಶಿಷ್ಟಕ್ರಾಂತಿ ಚಕ್ರವರ್ತಿ ರೇವಣಸಿದ್ಧಶಿವಾಚಾರ್ಯ. ಆ ಧೈರ್ಯ, ಆ ಆಧಿದೈವಿಕ ಆಧ್ಯಾತ್ಮಿಕ ಶೌರ್ಯ, ಆ ಔನ್ನತ್ಯದ ಔದಾರ್ಯ, ಆ ಗೌರೀಶಿಖರ ಗಾಂಭೀರ್ಯ ಆದಾರಿಗೆ ? ಆ ತೇಜ, ಆ ಯೋಗ ಓಜ ಇನ್ನಾರಲ್ಲಿ ? ರಾಜಕೀಯಕ್ಕೆ ಧುಮುಕದಿದ್ದರೂ ಆ ರಾಜರಾಜ ತೇಜ, ಆ ಘನಲಿಂಗ ಘನತೇಜ ಅವರನ್ನುಳಿದರೆ ಸಿಕ್ಕುವುದಿನ್ನಾರಲ್ಲಿ? ಕವಿ ಚಕ್ರವರ್ತಿ ಹರಿಹರ ಕವಿ ಕೀರ್ತಿಸಿದ ತೆರದಿ ಶಶಿಯಂತೆ ಸುಧೆಯಂತೆ ಸಿರಿಯಂತೆ ಸಸಿಯಂತೆ ಭೂಜನಕೆ ಸಖನಂತೆ ಸದಾಕಾಲ ಸರ್ವತ್ರ ಸುಳಿಸುಳಿದು ಸರ್ವರಿಗೆ ತಂಪನ್ನು ಕಂಪನ್ನು ಸೊಂಪನ್ನು ಪೆಂಪನ್ನು ಕರುಣಿಸಿದ ಅನನ್ಯ-ಅಸಾಮಾನ್ಯ ಕಾರಣಿಕನು ರೇವಣಸಿದ್ಧ ಶಿವಾಚಾರ್ಯನು. ಲೋಕವನ್ನು ಪಾವನ ಮಾಡುವುದೇ ಆತನ ಊರ್ಜಿತ ಜೀವನದ ಉನ್ನತ ಉದ್ದೇಶ ; ಉಜ್ವಲ ಉದ್ಯೋಗ. ಮತ್ತು ಮಹತ್ತಮ ಮಣಿಹ ; ಸದಾಸನ್ನಾಹ. ಆತನದೇ ಆಪ ಸಿದ್ಧಿ ನವ್ಯತೆಗೆ, ಜೊತೆಗೆ ದೀಪ್ತಿದಿವ್ಯತೆಗೆ, ಭಾವ್ಯಭವ್ಯತೆಗೆ ಜನತೆ ತಮಗಾದ ಬೆರಗನ್ನು

ಬಿತ್ತರಿಸುತ್ತಿದ್ದರು ; ಬೃಹತ್ತಾದ ಆತನ ಭಾವ ಬೆಡಗನ್ನು ಕಂಡುಂಡು ಬಗೆ ದುಂಬಿ ಬಣ್ಣಿಸುತ್ತಿದ್ದರು. ಆದರಿಂದ ಭುವನ ಜನ ಸೇವ್ಯನಾಗಿದ್ದನು. ಸುರ ಧೇನು ಸುರತರುವಾಗಿ ಸುಳಿದನು. ನಿತ್ಯಸತ್ಯಶೀಲನಾಗಿ ಸುಕೃತವೇ ಮೈವೆತ್ತಂತೆ ಸುಳಿವನು. ಶಾಂತಿ ಕಾಂತಿಗಳಿಂದ ದಾಂತಿ ನಿಶ್ಚಿಂತಿ ನಿರ್ಭೀತಿಗಳಿಂದ ನಿರುತ ಸುಳಿದನು. ಲೋಕೋತ್ತರ ಸಾಮರ್ಥ್ಯದಿಂದ ಸುಳಿದು, ಹೊಂಬೆಳಗಿನಿಂದ ಹೊಳೆದು ಸರ್ವರನು ಸರ್ವರೀತಿಯಲ್ಲಿ ಪಾವನ ಮಾಡಿ ಪೋಷಿಸಿದನು. ಈ ಎಲ್ಲ ದಿಸೆಗಳಲ್ಲಿ ಆತನ ಹೆಸರು ನಿಡುಗಾಲ ಹಚ್ಚ ಹಸುರಾಗಿ ನಿಲ್ಲುವಂತಾಗಿ ಸಲ್ಲುವಂತಾಗಿದೆ. ನಾಡಿನಲ್ಲೆಲ್ಲ ಆ ಮಹಾ ವಿಭೂತಿಯ ಸ್ಮಾರಕ ಮಂದಿರಗಳು ಮೆರೆಯುತ್ತಿವೆ. ವೈದ್ಯವಿಭಾಗದಲ್ಲಿಯೂ ಆತನ ವ್ಯಕ್ತಿತ್ವ ವಿಶಿಷ್ಟವಾದುದು. ಇದರಿಂದಾಗಿ ಹಿರಿಯಕವಿ ಹರಿಹರನು, "ಲೋಕಕ್ಕೆ ತಾಂ ಮರುಳ್, ತನಗೆ ಲೋಕಂ ಮರುಳ್ ; ಲೋಕದೊಳ್ ಸುಜನರ್ಗೆ ಶಿವನ ತತ್ತ್ವದ ಪ್ರರುಳ್ । ತಾನಾಗಿ ಸುಳಿಯುತಿರ್ದಂ ಸಿದ್ಧರೇವಣಂ, ನಾನಾ ವಿಧದ ಮಹಿಮೆಗಳನರಿಪ ಕಾರಣಂ ॥" ಎಂದು ಅರ್ಥಪೂರ್ಣವಾಗಿ ಅಭಿಸ್ತುತಿಸಿದ್ದಾನೆ. ಅಲ್ಲದೆ ಕವಿಯು ಇನ್ನೂ ಮುಂದುವರಿದು, "ಧೈರ್ಯದೊಳ್ ಧರೆಯಂತೆ, ತಂಪಿನೊಳ್ ಶಶಿಯಂತೆ, ಶೌರ್ಯದೊಳ್ ರವಿಯಂತೆ, ಉಷ್ಣದೊಳ್ ಶಿಖಿಯಂತೆ ; ಭರಿತದೊಳ್ ನಭದಂತೆ, ಸೋಂಕಿನೊಳನಿಲದಂತೆ, ಚರಿತದೊಳ್ ಭುವನಪಾವನ ದೇವನದಿ-ಬಡವರ ನವನಿಧಿಯಾಗಿ । ಪೊರ್ದಿಯುಂ ಪೊರ್ದನೀ ಜಗದ ಸಂಸಾರಮಂ, ಸಾರ್ವ ಸಾರಂ ನೋಡ ಭವಕುಲದ ಭಾರಮಂ ॥ ಇಂತು ನಿರ್ಲೇಪ ಚಾರಿತ್ರದಿಂ ಸುಳಿವುತುಂ ಸಂತತಂ ತನ್ನನರಿವವರ ಅಘವನಿಳುಪುತುಂ....॥" ಹೀಗೆ ಖಚಿತವಾದುದನ್ನೆ ಕಥಿಸಿದ್ದಾನೆ. ಹರಿಹರನ ಈ ಮಾತು ಮಾತಿನಲ್ಲಿ, ಪಂತಿ ಪಂತಿಯಲ್ಲಿ ಪರಮ ಕಾರಣಿಕ ರೇವಣಸಿದ್ಧಶಿವಾಚಾರ್ಯನ ಜೀವಂತ ಜೀವನದ-ವಿಶ್ವವಿಶಾಲ ವ್ಯಕ್ತಿತ್ವದ ಸತ್ಯ ಚಾರಿತ್ರದ ಮನಮುಟ್ಟುವ ಮಿಂಚಿದೆ. ಲೋಕವನ್ನೆ ಆಕರ್ಷಿಸಿದ ವ್ಯಕ್ತಿತ್ವ ! ಶಿವತತ್ತ್ವದ ಪ್ರರುಳಾದ ಶಕ್ತಿತ್ವ ! ನೂರಾರು ಸಾವಿರಾರು ಮಹಾಮಹಿಮೆಗಳನೊಳಗೊಂಡ ಹುರುಳುಳ್ಳ ಸುಳುಹು ; ಶಶಿ ಸೂರ್ಯ ಶಿಖಿಗಳ ಮೀರಿದ ಹೊಳಹು. ಧರೆಯೇ ದೇಹ ಧರಿಸಿ ಬಂದ ಧೈರ್ಯ. ಬಾನ್ ಬಿತ್ತರ, ಅದೇ ಎತ್ತರ. ತಂಗಾಳಿ ಸವಿಸೋಂಕು. ಭುವನವನ್ನೆ ಪಾವನಗೈವ ದೇವಗಂಗೆಯಂತಹ ಚರಿತ್ರ ; ಬಡವರ ಭಾಗ್ಯಪಾತ್ರ ಹೊದ್ದಿಯೂ

ಹೊದ್ದದ ಜಗದ ಸಂಸಾರವುಳ್ಳಾತ ; ಭವಕುಲದ ಭಾರವುಳ್ಳಾತ. ಬಂದೂ ಬಾರದಂತಿರುವಾತ. ಇಂತಿರುವ ನಿರ್ಲಿಪ್ತ ಕಂತುಹರ ಚಾರಿತ್ರ. ತನ್ನ ಬಳಿಗೆ ಬಂದವರ ಪಾಪತಾಪಗಳ ಪರಿಹರಿಸುತ್ತ ಸಂತತ ಸಂತಸದೆ ಸುಳಿದು ಸುಳಿಯದಂತಿರುವಾತ. ಆ ಮಹಾನುಭಾವ ಶಿವಾಚಾರ್ಯ ಚಾರಿತ್ರವಿಚಿತ್ರ; ಲೋಕೋತ್ತರ ಚರಿತ್ರ : ಆದರೂ ಲೋಕೋಪಯುಕ್ತ ಚರಿತ್ರ. ಭುವನ ಪಾವನಗೈವ ತುಂಗಭದ್ರಾಚರಿತ್ರ. ಭಾವ ಕಾವೇರಿ ಬದುಕಿಸುವ ಕಾರುಣ್ಯರಸ ಚರಿತ್ರ. ರೇವಣಸಿದ್ಧ ಶಿವಾಚಾರ್ಯವರ್ಯರ ಸರ್ವಾಂಗೀಣ ಸಚ್ಚಾರಿತ್ರ ನಿಡುಗಾಲ ನೆನವಿನ ನಂದಾದೀಪ. ಅದು ಇಂದಿನ ಶಿವಾಚಾರ್ಯರಿಗೆಲ್ಲ-ಅದೇಕೆ, ನಾಡಿಗರಿಗೆಲ್ಲ ಉತ್ಸಾಹ ಶಕ್ತಿಯನ್ನು ಹುರುಪುಹುಮ್ಮಸ್ಸು ಹೆಮ್ಮೆಗಳನ್ನು ಹಿರಿದಾಗಿ ಹುಟ್ಟಿಸುವ ಪಾವನ ಪ್ರತಾಪ. ರೋಮಂಥರೋಚಕ ರೋಮಾಂಚನಕಾರಿ ಮಹಾಮಣಿಹಗಳು.

## ಚಂಗಣಿಗಿಲ ಚೆಂದೋಟ ; ಚಂಗಣಗಲ ಮಂಟಪ !

ಓ ಅದೆಷ್ಟು ಅರ್ಥಪೂರ್ಣಸಮನ್ವಯ ; ಅಪೂರ್ವವೂ ಆದರ್ಶವೂ ಆದ ಸಂಯೋಜನ ! ನಿಸರ್ಗವೂ ಪಾವನವೂ ಆದ ಪರಿಸರ ನಿರ್ಮಾಣ ! ಇಲ್ಲಿದೆ ಶಿವಾಚಾರ್ಯರ ವೈಶಿಷ್ಟ್ಯಪೂರ್ಣ ಮಂಟಪೇತಿಹಾಸ ! ನಿಸರ್ಗಕ್ಕೆ ನಿರ್ಮಲ ಪರಿಸರಕ್ಕೆ ಶ್ರೀಶೈಲದ ಶ್ರೀಚಂದ್ರಗುಂಡ ಶಿವಾಚಾರ್ಯರು ಪ್ರಪ್ರಥಮವಾಗಿ ಪ್ರತಿಷ್ಠಾಪನಗೈದ ಅನುಭವ ಮಂಟಪವನ್ನು ಬಿಟ್ಟರೆ, ಇದೇ ಈ ಚಂಗಣಗಲ ಮಂಟಪವೇ ಎರಡನೆಯದು.

ಜಗದ್ಗುರು ರೇವಣಸಿದ್ಧರು ಸ್ವಂತಕಾಯಕದಿಂದ ಕಟ್ಟಿದ ತ್ರಿಪುರಾಂತಕ ಹೆಗ್ಗೆರೆಯ ತೀರದಲ್ಲಿ ತಾವೇ ರೂಪಿಸಿದ ಕೆಂಪು ಕಣಿಗಿಲ ಹೂದೋಟದ ನಟ್ಟನಡುವೆ ಚೆಂಗಣ (ರುದ್ರಗಣ)-ಗಲ-ಇರುವ ಅನುಭಾವ ಮಂಟಪವೊಂದನ್ನು ರೂಪಿಸುವರು. 'ಚಂಗಣಗಿಲ-ಚೆಂಗಣಗಲ' ಶಬ್ದಗಳೆರಡರಲ್ಲಿರುವ ಸುಂದರ ಶಬ್ದ ಶ್ಲೇಷ, ಬಂಧುರಅರ್ಥವಿಶ್ಲೇಷ, ಗಂಭೀರಭಾವವಿಮರ್ಶೆಗಳು ಪರಿಣಾಮಕಾರಿಯಾಗಿವೆ. ಪದಯುಗದ ಪದಚ್ಛೇದದಲ್ಲಿ ಆಗುವ ಆನಂದ ಅವರ್ಣನೀಯ ; ಪದವಿನ್ಯಾಸ ಪ್ರವೀಣತೆ ಪ್ರಗಮನೀಯ. ಹೆಸರಿಸಿದ ಹದನೆ

ಹದಗಾರ (ಅನುಭವಿಕ)ನೇ ಬಲ್ಲ. ಹದಗೇಡಿ ಅದೆತ್ತ ಬಲ್ಲ ? ಅದೆಷ್ಟು ಸೊಲ್ಲ !

"ಚಂಗಣಗಲ ಮಂಟಪದ ರೇವಣಸಿದ್ಧೇಶ್ವರಂಗೆ
ನಿರ್ಲಜ್ಜ ಶಾಂತಯ್ಯನೆಂಬ ದೇಶಕೇಂದ್ರನು ಬೋಧಿಸಿದರು ನೋಡಾ !
ಆದೇ ಪ್ರಸಾದವನು ರೇವಣಸಿದ್ಧೇಶ್ವರನೆಂಬ ದೇಶಕೇಂದ್ರನು
ತಮ್ಮಡಿಗೆರಗಿ ಬಂದ ಶಿವಶರಣರಿಗೆ
ಸ್ವಾನುಭವಸೂತ್ರವ ಬೋಧಿಸುತ್ತಿದ್ದರು ನೋಡಾ !...."

ಎಂದು ಸಂಗನಬಸವೇಶ್ವರ ವಚನದಲ್ಲಿ ನಿಚ್ಚಳವಾಗಿ ಉಲ್ಲೇಖವಾಗಿದೆ. ಚಂಗಣಗಲ ಮಂಟಪ ಸಂಸ್ಥಾಪಕರು ರೇವಣಸಿದ್ಧಶಿವಾಚಾರ್ಯರು. ಅವರ ತಂದೆ ಸಿರಿವಾಳ ಶಿಲಾಶಾಸನೋಕ್ತ ಶಿವಯೋಗಿ ಶಾಂತಮಯ್ಯಗಳಾದರೆ, ಶ್ರೀಗುರು ನಿರ್ಲಜ್ಜ ಶಾಂತಯ್ಯಗಳೆಂಬ ದೇಶಕೇಂದ್ರರು. ನಿರ್ಲಜ್ಜರೆಂದರೆ ನಿರ್ಲಿಪ್ತರೆಂದರ್ಥ! ಅಂತಃಕರಣಗಳ ವಿಪ್ಲವಕ್ಕೆ ಒಳಗಾಗದೆ ಶಾಂತರಾಗಿದ್ದರು. ನಿಶ್ಚಿಂತರಾಗಿದ್ದರು ನಿಶ್ಶಂಕರಾಗಿದ್ದರು. ಅಂದರೆ ನಿಶ್ಚಿತಸ್ವಯಾನುಭಾವಿಗಳು. ನಿರ್ಮೋಹಿ-ನಿರ್ದೇಹಿಯಾಗಿದ್ದರು. ಆದರಿಂದ ಅವರು ನಿರ್ಲಜ್ಜರು. ಮತ್ತು ನಿರ್ಮಮರು : ನಿರ್ಭವರು. ನಿರ್ವೃತ್ತಿ ನಿವೃತ್ತಿಗಳಿಂದ ನಿಷ್ಪತ್ತಿಗೊಂಡವರು, ಅಂತಹ ಮಹಾನುಭಾವರ ಬೋಧೆಗೊಳಗಾಗಿ ಪ್ರಭುದ್ಧರಾದವರು, ಪ್ರಸಿದ್ಧರಾದವರು ಶ್ರೀರೇವಣಸಿದ್ಧರು. ಪ್ರಸಿದ್ಧ ಪ್ರಸಾದವಂತರು. ತಮಗುಂಟಾದ ಪರಮ ಪ್ರಸಾದಾನುಭವವನ್ನು ತಾವು ರೂಪಿಸಿದ ಆ ಚಂಗಣಗಲ ಮಂಟಪದಲ್ಲಿ ಪ್ರಬೋಧಿಸುತ್ತಿದ್ದರು ಪ್ರತಿನಿತ್ಯ ! ಅಲ್ಲಿ ಭಾಗವಹಿಸುತ್ತಿದ್ದರು ಮರುಳಸಿದ್ಧ, ಏಕೋರಾಮಾರಾಧ್ಯ, ಏಕಾಂತರಾಮಿತಂದೆ, ನಿಜಗುಣಯೋಗಿ, ಶಿವಲೆಂಕ ಮಂಚಣ್ಣ, ಉರಿಲಿಂಗದೇವ ಶಿವಾಚಾರ್ಯ, ಚಂದಿಮರಸ, ಗೋರಕ್ಷ ಮೊದಲಾದ ಶಿವಾಚಾರದವರು. ಮತ್ತು ರಾಯಮ್ಮ, ರೇಕಮ್ಮ, ಶಾಂಭವಿ, ಸೌಂದರದೇವಿ, ಆಗಮಮೋಹಿನಿ, ವೇದಕಂಚುಕಿಗುರುದೇವಿ, ಅಕ್ಕಮ್ಮ, ಕೊಟ್ಟಣದ ಸೋಮಪ್ಪೆ, ಕಾಳವ್ವೆ, ಮಸಣಮ್ಮ, ವೀರಮ್ಮ, ರೇಚವ್ವೆ, ಸಂಕವ್ವೆ ಮೊದಲಾದ ಶಿವಾಚಾರಿಣಿಯರು. ಚಂಗಣಗಲ ಮಂಟಪ ಅದೊಂದು ಶಿವಾಚಾರ್ಯ–ಶಿವಾಚಾರಿಣಿಯರೆಂಬ ಚೆಂಗಣರ ಮಂಟಪ. ಅಂದರೆ ರುದ್ರಗಣ–

ರುದ್ರಕರ್ನಿಕೆಯರ ಮಂಟಪ. ಶಿವಾಚಾರ್ಯ-ಶಿವಾಚಾರಿಣಿಯರ ಸಾಂಸ್ಕೃತಿಕ ಕೇಂದ್ರವಾಗಿ ಖ್ಯಾತಿಗೊಂಡಿತ್ತು. ಶಕ್ತಿಕೇಂದ್ರವಾಗಿ ಶೋಭಿಸಿತ್ತು. ಎಂತವರಿಗೂ ಸತ್ಯಶುದ್ಧ–ನಿಃಸ್ವಾರ್ಥ ಸ್ವಂಬದ್ಧ ಕಾಯಕಬೇಕೆಂದು ಅಲ್ಲಿ ನಿರ್ಧಾರವಾಗಿತ್ತು. ನಿರ್ಧಾರದಂತೆ ರೇವಣಸಿದ್ಧರೇ ನಡೆದುಕೊಂಡರು. ತಮ್ಮ ವೈವಿಧ್ಯಮಯ ಕಾಯಕಗಳಿಂದ ಕಾಯಕ ಕಲೆಗೆ-ತತ್ತ್ವಕ್ಕೆ ಒಂದು ಹೊಸ ತಿರುವನ್ನು ಹರವನ್ನು ತಂದ ಕೀರ್ತಿರೇವಣಸಿದ್ಧ ಶಿವಾಚಾರ್ಯರಿಗೆ ಸೇರಿದ್ದಾಗಿದೆ. ಒಂದೇ ಬಗೆಯ ಕಾಯಕವಿಡಿದು ಒಬ್ಬ ಗುರುವಿಗೋ ಇಲ್ಲವೆ ಜಂಗಮಕ್ಕೋ ನಿತ್ಯಪ್ರಸಾದ ಕೊಡುವ ವಿಧಾನ ಹೆಚ್ಚಾಗಿ ರೂಢಿಯಲ್ಲಿ ಬಂದಿದೆ ; ಅಥವಾ ಬಹುಜನಕ್ಕೆ ಪ್ರಸಾದ ಕೊಟ್ಟವರೂ ಒಬ್ಬಿಬ್ಬರುಂಟು. ಸಾಂಪ್ರದಾಯಿಕವಾಗಿ ಒಂದೇ ಒಂದು ಕಾಯಕವಂತರೇ ಎಲ್ಲರು. ಶ್ರೀರೇವಣಸಿದ್ಧರ ಕಾಯಕ ಒಂದಕ್ಕೆ ಸೀಮಿತವಲ್ಲ. ಬೇಸಾಯಗಾರರಿಗೆ ಬಡವರಿಗೆ ತೊಂದರೆ ತೊಡಕು ಕೊರತೆಗಳಿರುವಲ್ಲೆಲ್ಲ ಅವರವರಿಗೆ ಬೇಕಾದ ಕಾರ್ಯ ಯಾವುದೇ ಇರಲಿ ಅದನ್ನು ಮಾಡುತ್ತಿದ್ದ ಅಪೂರ್ವ ಆದರ್ಶ ರೇ. ಶಿವಾಚಾರ್ಯರದಾಗಿತ್ತು.

## ವೈವಿಧ್ಯಮಯ ವೈಶಿಷ್ಟ್ಯಕ್ರಾಂತಿಕಾಯಕ !

"....ಸಕಲದೇಶಂಗಳೊಳ್ ಸುಖದಂತೆ ಸುಳಿವುತುಂ
ಸುಕರವೆನೆ ಭೂಜನಕ್ಕೆ ಸಖಿನಂತೆ ಸುಳಿವುತುಂ ।
ಧರೆಯೊಳಗಣಂತ ದೃಷ್ಟಾಂತಮಂ ತೋರುತುಂ
ಹರುಷದಿಂ ಪಲವು ಸಾಮರ್ಥ್ಯಮಂ ಬೀರುತುಂ ।
ಬರುತಿದ್ದ ನತ್ತಲಾ ಸಿದ್ಧರೇವಣ ತಂದೆ ॥...."

ಮಂಗಳವಾಡದಲ್ಲಿ ಚಂಗಣಗಲ ಮಂಟಪವೊಂದನ್ನು ತಾನೇ ಬೆಳೆಸಿದ ಚಂಗಣಗಿಲ ಚಂದೋಟದಲ್ಲಿ ರಚಿಸಿದ ರೇವಣಸಿದ್ಧ ಶಿವಾಚಾರ್ಯ ದಿವ್ಯಜ್ಞಾನಿ ಮತ್ತು ಧರ್ಮಮೇರು ತಾವಾದುದರಿಂದ ಅಷ್ಟಕ್ಕೆ ತೃಪ್ತಿ ಪಡದೆ, ಚರಿಸುವ ಚಂಗಣಗಲ ಮಂಟಪವಾಗಿ, ದ್ರಾವಿಡ, ಚೇರ, ಕೇರಳ, ತೆಲುಗು, ಕೊಂಕಣ, ಕರ್ನಾಟ, ಕಾಶ್ಮೀರ, ಕಳಿಂಗ, ವಂಗ, ಬಂಗಾಳ, ನೇಪಾಳ, ಲಾಳ, ಗೌಳ, ಗುಜ್ಜರ, ಮಳೆಯಾಳ ಮೊದಲಾದ ಪ್ರಾಂತ ಪ್ರಾಂತಗಳ ದಿಗ್ದೇಶಾಂತರಗಳಲ್ಲಿ ಸಂಚರಿಸುವರು. ಧೈರ್ಯನಿಧಿ ತ್ರಿಭುವನ ಬಾಂಧವರಾದ ಅವರು ಸುಖವಾಗಿ

ಸುಳಿವರು ; ಸುಕರವಾಗಿ ಸುಳಿದರು. ಸರ್ವಜನ ಸುಖರಾಗಿರುವಂತೆ ಸುಳಿದರು. ಸುರತರುವಾಗಿ ಸುಳಿದರು. ಸತ್ಯನಿಷ್ಠರಾಗಿ ಸುಕೃತಮೂರ್ತಿಯಾಗಿ ಶಾಂತಿ ಮೂರ್ತಿಯಾಗಿ ತಮಗಿರುವ ಸಂಖ್ಯಾತೀತ ಸಾಮರ್ಥ್ಯಗಳಿಂದ ಅನಂತ ದೃಷ್ಟಾಂತಗಳನ್ನು ತೋರುತ್ತ ಬೀರುತ್ತ ಸರ್ವಸಮಯದವರಿಗೆ ಶಿವಭಾವ ಹುಟ್ಟಿಸುತ್ತ, ಶಿವಾನುಭಾವ ಪ್ರಸಂಗವನ್ನು ಸುಮಧುರವಾಗಿ ಪ್ರಸರಿಸುತ್ತ ಶಿವಸ್ವರೂಪರಾಗಿ ದಿಗ್ದೇಶಗಳಿಗೆಲ್ಲ ಸುಳಿದರು. ವೈವಿಧ್ಯಮಯವೂ ವೈಶಿಷ್ಟ್ಯ ಪೂರ್ಣವೂ ಆದ ಸತ್ಕಾಯಕಗಳ ಮುಖಾಂತರ ದೃಷ್ಟಾರ್ಥಗಳನ್ನು ದೃಷ್ಟಾಂತ ಗೊಳಿಸುತ್ತ ಸುಳಿವರು ; ಅಂದರೆ ದೃಷ್ಟಿಗಳಿಗೆ ಗೋಚರಗೊಳಿಸುತ್ತ ಸೊಗಸು ಗೊಳಿಸುತ್ತ ಸಡಗರಿಸಿ ಸಂಚರಿಸುವರು. ಅಲ್ಲಲ್ಲಿ ರಾಜಕನ್ನಿಕೆಯರನ್ನು ಕಾಯಕ ಕಾಣಿಕೆಯಾಗಿ ಪಡೆದ ಪವಾಡ ಅತ್ಯದ್ಭುತ,—ಅಪ್ರತಿಮ. ಸರ್ವಜನೋಪಯುಕ್ತ ಸತ್ಕಾಯಕಗಳು ಕೆರೆಗಳ ಕಟ್ಟುವ ಕಾಯಕವನ್ನು ತಾವೂ ತಮ್ಮ ಕೈವಿಡಿದ ರಾಜ ಪುತ್ರಿಯರೂ ಮಾಡುವರು. ಶಿವಪುರಗಳನ್ನು ಛತ್ರಗಳನ್ನು ತಮ್ಮ ಶಿಷ್ಯರಿಂದ ಸಾರ್ವಜನಿಕರಿಂದ ಮಾಡಿಸುವರು. ಅಲ್ಲದೆ "... ಕುರುಡರ್ಗೆ ಕಣ್ಗಳಂ, ಹೆಳವರ್ಗೆ ಕಾಲ್ಗಳಂ, ಬಂಜೆಯರ್ಗೆ ಮಕ್ಕಳಂ, ಕೆಟ್ಟರಸುಮಕ್ಕಳ್ಗೆ ರಾಜ್ಯಮಂ, ಕಂಡಕಂಡ ಬಡವರ್ಗೆ ಸಂಪದಂಗಳನೀವೃತ್ತಿಂತಿವು ಮೊದಲಾದ ಪುಣ್ಯಲೀಲೆಗಳನಲಂ ಕರಿಸುತ್ತ ಜಗದ್ಧಿತಾರ್ಥಮೂರ್ತಿ ಮಂಗಳವಾಡಕ್ಕೆ ಮರಳಿ ಬರ್ಪಾಗಳ್—ಸಿದ್ಧ ಸಮಯಚಕೋರ ಚಂದ್ರಿಕಾಯಮಾನನೆಂಬ, ಸಿದ್ಧಕುಲ ಚಾತಕ ಸುಧಾವರ್ಷ ನೆಂಬ, ಪರಸಮಯ ಕುಮುದ ಕಮಲಸಖನೆಂಬ, ಸಾಮರ್ಥ್ಯ ಸಾಗರನೆಂಬ, ಶಿವಭಕ್ತಿವನವಸಂತನೆಂಬ, ಶಿವಪೂಜಾರಾಜನೆಂಬ, ಶಿವಯೋಗಿ ಲಲಾಮನೆಂಬ ತನ್ನ ಬಿರುದಿನ ಕಹಳಾರವಂ ದಿಕ್ತಟಮಂದೀಂಕಿಡೆ, ಸರ್ವಸಂಭ್ರಮದೊಳ್ ಬರ್ಪಾಗಳ್—ಮಂಗಳವಾಡದೊಳ್ ಗುಡಿಗಟ್ಟಿ ಸಕಲ ಪರಿಜನಸಹಿತಂ ಬಿಜ್ಜಳರಾಯನಿದಿರ್ಗೊಂಡು ಪ್ರೈಯಿಕ್ಕಿ ಕಾಣಿಕೆಯನಿತ್ತು ಕೈಯ್ಮುಗಿದು ನಿಂದಿರೆ ಪರಸುತ್ತಂ ವಿಭೂತಿಯಂ ಕರುಣಿಸಿ ಕೊಟ್ಟರಮನೆಗೆ ಬಿಜಯಂಗೆಯ್ದು ಸಿಂಹಾಸನಾರೂಢನಾಗಿ ಬಹಿರ್ಭಾವದ ಮಾಯಾ ಸುಖದುಃಖದ ಸಂಭ್ರಮಂ ಶರೀರಕ್ಕಾಗುತ್ತಮಿರೆ ನೋಡುತ್ತಂ ನಿರ್ಲೇಪನಾಗಿ ಸಾಕ್ಷಿಯಾಗಿ ಪರಮಗುರು ನಗುತ್ತನೇಕ ಕಾಲದೊಳುರಗಲೋಕದೊಳ್ ನರಲೋಕದೊಳ್ ಸುರಲೋಕ ದೊಳ್ ಸುಖದೊಳಿರ್ಪ ಜಗದ್ಭರಿತನಪ್ಪ ಸಿದ್ಧರೇವಣದೇವಂ ನೋಡಿದುದೆ

ಜಗತ್ಪಾವನಂ, ಮುಟ್ಟಿದುದೆ ಪರುಷಂ, ಮೆಟ್ಟಿದುದೆ ದಿವ್ಯಕ್ಷೇತ್ರಂ ನಡೆದುದೆ ಪುಣ್ಯಪಥಂ, ನುಡಿದುದೆ ಪರಮತತ್ತ್ವಂ, ಇರ್ದುದೆ ದೇವಸಭೆ, ಸಾರ್ದುದೆ ಸುರತರುವೆನಿಪ್ಪ ನಿರ್ಮಳ ಕೀರ್ತಿಯುಂ ಪಡೆದು ಶಿವಪ್ರತಾಪ ಸಿದ್ಧನವರತಂ ಧರ್ಮತತ್ಪರಂ ಸಂತೋಷದೊಳಿರ್ದೊಂದು ದಿನಂ ;

## ತ್ರಿಪುರಾಂತಕ ಕೆರೆಯ ನಿರ್ಮಾಣ ; ರುದ್ರ ಮುನಿಯ ಜನನ !

ಸುಕೃತ ಲೀಲಾಲೋಲ ಹೃದಯಂ, ಮಂಗಳವಾಡದ ಪೊರಪೊಳ್ಳ ನಂದವನಮಂ ನಿರೀಕ್ಷಿಸುತ್ತ ಬರುತ್ತೊಂದು ನಿರಪಮುವಹ ಸ್ಥಲಮಂ ಕಂಡಲ್ಲಿ ಸಕಲ ಪ್ರಾಣಿಗಳ್ಗೆ ಹಿತಕರ ಮಪ್ಪ ತ್ರಿಪುರಾಂತಕ ತಟಾಕಮಂ ನಿರ್ಮಿಸಲ್ವೇಳ್ಕುಮೆಂದ ಪ್ರತಿಮ ಧರ್ಮಮೂರ್ತಿ ನೆನೆದು ನೋಡಿ ತನ್ನ ಕೆಲಬಲದೊಳಿರ್ದ ಕಲ್ಗಳಂ ಮುಟ್ಟಿ ಹೊನ್ನರಾಶಿಯಾಗೆ ಪುರಜನಮಂ ಬರಿಸಿ ಕನಕಮನಿತ್ತು ತಟಾಕ ಪ್ರಾರಂಭ ಕರ್ತೃತ್ವಂ ತಮ್ಮದಪ್ಪ ಕಾರಣದಿಂ ವಾರಣಚರ್ಮ ವಸನತನುಜಂ ರೇವಣಸಿದ್ಧಂ ಭೂಮಿಯಂ ಶೋಧಿಸಿ ಧರ್ಮಮಂ ಬಿತ್ತುವಂತೆ ಗುದ್ದಲಿಯಂ ಸಿಡಿದಗಿಯಲ್ತೊಡಗಲ್ವೆಂಡಿಗೆರೆಲ್ಲಂ ಪುಣ್ಯದ ಸಿವುಡಂ ಪೊತ್ತು ಪಾಪಮಂ ಪೊರಸೂಸುವಂತೆ ಮಣ್ಣ ಸೂಸುವ ಪಥದೊಳ್ ಪಾಸಿಗೆ ಗಾಸಿಯಪ್ಪ ಚೋಳನಕುಮಾರಿ ಸೌಕುಮಾರ್ಯಮಂ ನಟಿಯಿಸುತ್ತೊಲ್ಲದೆ ಮೂರು ತಿಂಗಳ ಗರ್ಭದ ನೀರೆ ನಿಂದು ದೇವದೇವ ಚೋಳರಾಜೇಂದ್ರನ ಬಸಿರೊಳ್ಬಂದು, ದಿವ್ಯಜ್ಞಾನಿಯಪ್ಪ ನಿಮ್ಮಡಿಗಳ್ಗರಸಿಯಾಗಿಯುಮಿಂತಪ್ಪ ನಿರೋಧಕ್ಕೆ ಪಕ್ಕಾಗಲಾರೆನೆಂಬ ನುಡಿಗೇಳ್ದು, ನಸುನಗುತ್ತಯ್ಯೋ ಹಿಂದೆ ಮಾಡಿದ ಪುಣ್ಯದಿಂದಿನ ಸುಕುಮಾರತೆಯ ನಿತ್ತುದಿಂದಿನ ಪುಣ್ಯವೇನಂ ಮಾಡದು ನೀನಾರಾದೊಡೆಮ್ಮಡವೆಯನೆಮಗೆ ಕೊಟ್ಟು ಪೋಗೆಂದು ನುಡಿಯೆ, ಕುಡುಲುಂ ಬಿಡುಲಂ ಅರಿಯದಿರ್ಪ ಮುಗ್ಧೆಯಂ ಕಂಡು ಕರುಣಿಸಿ, ಸಾಮರ್ಥ್ಯಸುಲಭಂ ಸಕಲಜೀವಗಳುತ್ಪತ್ತಿಕರ್ತನಪ್ಪ ರೇವಣಸಿದ್ಧಂ ತನ್ನ ಕರದಿಂದಾಲಲನೆಯ ಪುಣ್ಯೋದರಮನೊಯ್ಯನೆ ತಡವೆ ಪುಣ್ಯದುರುಳಿ ಬೀಳ್ವಂತೆ ಬಾಲಕಂ ಗರ್ಭದಿಂ ಭೋಂಕನೆ ಬೀಳೆ ಮುಂತಣಿಸಿ ತೆಗೆದು ಶಂಕರನಂ ನೆನೆದು ಸಾರಹೃದಯಂ ಮಾರಾರಿಯಣುಗನೇರಿಯ ಮೇಲಣ ನಿವಾಸಸ್ಥಲದೊಳಾದರದಿಂದಿರಿಸಿ ಭಸಿತಮಂ ಕಾಪಿಟ್ಟು ಶಿವಧ್ಯಾನದಿಂ ಮುಸುಂಕಿಟ್ಟು ಜ್ಞಾನನಿಧಾನಮಂ ಚಿತ್ರಭೂಮಿಯೊಳ್ ಬೈಲೆಡುವಂತೆ ಬೈಚಿಟ್ಟು ಕಾಯ

ಗರ್ಭದಿಂ ನೂರ್ಮಡಿ ರಕ್ಷೆಯಾಗಿರೆ ರೇವಣಸಿದ್ಧಂ ಚೋಳಪುತ್ರಿಯುಂ ದಕ್ಷಿಣ ದೇಶಕ್ಕೆ ಕಳುಪಿ,

ಜ್ಞಾನಸಿಧಿ, ಮಹಿಮಾಂಬುರಾಶಿ, ಧರ್ಮಧ್ವಜಂ, ದಯಾಮೇರು, ಸತ್ಯ ಭೂಷಣನನಾ ನಯುದಿಂದಾರನೆಯ ಮಾಸಕ್ಕೆ ತಟಾಕಂ ಪೂರ್ಣಮಾಗೆ ತತ್ತೆವಾಕ ವೇಳಾಗ್ರದೊಳಿರಿಸಿದ ಬಾಲಗರ್ಭಕ್ಕೆ ನವಮಾಸಂ ತೀವಿತೆಂಬುದನರಿದು ರೇವಣ ಸಿದ್ಧಂ ಪುತ್ರೋತ್ಸಾಹಕ್ಕನುಕೂಲಮೆನಿಪ ಮೃದು ಮೃದಂಗ ಮಂಗಳ ಕಲಶ ದರ್ಪಣಾರತಿ ಸುವಾಸಿನಿ ಜನಂ ಬೆರಸಿ ಪಟ್ಟಣದಿಂ ಪೊರಮಟ್ಟು ಬಂದು ಕೆರೆಯ ಏರಿಯ ಮೇಲೆ ಮುನ್ನಿರಿಸಿದ ಮುಚ್ಚಳಂ ದೆಗೆಯೆ ಭಕ್ತಿಭೂಮಿ ಜ್ಞಾನ ರಸದಿಂ ತೊಯ್ದು ಬೀಗಿ ಬೆಳೆದ ಶಿವಕಳಾಬೀಜದಿಂ ನಳನಳಿಸಿ ಬೆಳದ ಶಿವ ಜ್ಞಾನಾಂಕುರದಂತೆ ತೊಳತೊಳಪ ಬಾಲಕನಂ ಕೈಯುಲೆಡೆಗೊಟ್ಟು ಭೂಮಿ ದೇವಿಯರ್ಕೈಯೊಳೀಸಿಕೊಂಬಂತೆ ತೆಗೆದುಕೊಂಡು ಕೃಪೆಯಿಂ ನೋಡಿ ಮೋಹದಿಂ ಮುಂಡಾಡಿ ಮೂರ್ಧ್ನಿಘ್ರಾಣಮುಂ ಮಾಡಿ ತಾಯಗರ್ಭದಿಂ ಬರ್ವ ನೋವನರಿಯದೆ ದುಃಖಮುಂ ನೀಗಿ ಪುಟ್ಟಿದನಾಗಿ ರುದ್ರಮುನಿದೇವನೆಂಬ ನಾಮಕರಣಮುಂ ಮಾಡಿ ಪುರಕ್ಕೆತಂದು ತಮ್ಮರಸಿಯೊರ್ವಳ್ಪುಣ್ಯ ವನಿತೆಯ ಕೆಯ್ಯೊಳ್ಕೊಡೆ ಬಾಲಚಂದ್ರನಂ ಗಗನಾಂಗನೆ ಸಲಹುವಂತೆ ತರುಣ ತರಣಿಯಂ ಪೂರ್ವದಿಶಾಂಗನೆ ಬೆಳಯಿಸುವಂತೆ ಸಾಗಿಸುತ್ತಿರಲೆಂಟನೆಯ ವರುಷದೊಳ್ ಮಗನಂ ನೋಡಿ ಮಿಗೆ ಸಂತಸಂ ಬಟ್ಟು ವೀರಶೈವೋಪದೇಶಮುಂ ತಾನೇ ಕರುಣಿಸಿ ಕೃಪೆಯಿಂ ನಿರೀಕ್ಷಿಸಿ, ರುದ್ರಮುನಿ ದೇವರ್ಗೆ ಪರಮ ಸ್ವರೂಪಜ್ಞಾನ ಬೋಧೆಯುಂ ಬೆಸಸುತ್ತಂ ಶಿವಯೋಗ ಸಂಪನ್ನನೆನಿಪ ರೇವಣಸಿದ್ಧಂ ಮಂಗಳ ವಾಡದೊಳಿರ್ದನಂತು ಮಲ್ಲದೆಯುಂ"

ಎಂದು ಕವೀಶ್ವರ ಹರಿಹರದೇವನು ನಿರೂಪಿಸಿದ್ದಾನೆ. ವಿಚಾರಿಸಿದರೆ ಇದೊಂದು ಅತ್ಯದ್ಭುತ ಅಸಾಧಾರಣ ಸರ್ವಜನೋಪಯೋಗಿ ಕಾಯಕ: ಸಮರ್ಪಕ ಕಾಯಕ ; ಸ್ವಾರ್ಥರಹಿತ ಅಸೀಮಿತ ಕಾಯಕ. ಕೌಟುಂಬಿಕಕ್ಕೆ ಸ್ವಯ ಸಮಾಜಕ್ಕೆ ಮಾತ್ರ ಸೀಮಿತವಾದುದಲ್ಲ. ಇಂತಹ ವಿಶಾಲ ಮನೋಭಾವದ ಕಾಯಕವಂತರು ವೀರಶೈವೇತಿಹಾಸ ಇವರು ಮತ್ತು ಸೊನ್ನಲಿಗೆಯ ಸಿದ್ದ ರಾಮಶಿವಾಚಾರ್ಯರು (ರೇವಣಸಿದ್ಧ ಶಿವಾಚಾರ್ಯ ಕಾರುಣ್ಯಕಂದರು) ಇಬ್ಬರೇ

ಇಬ್ಬರೆಂದು ಹೇಳಲು ತೆಗೆದು ಹಾಕುವ ಮಾತೇನಲ್ಲ, ರೇವಣಸಿದ್ಧ ಶಿವಾಚಾರ್ಯರು ತಮ್ಮ ಕರವಿಡಿದ ಗುರುದೇವಿ (ಗುರು ಪತ್ನಿ)ಯರನ್ನೆಲ್ಲ ಮಣ್ಣು ಹೊರುವ ಕಾಯಕಕ್ಕೆ ತೊಡಗಿಸಿದ ನಿರ್ಮೋಹದ ನಿರ್ಮಮದ ಉದ್ದೇಶ ಸರ್ವಾದರ್ಶವಾದುದು. ಅವರಿಗೇ ಮೀಸಲಾದ ಸಚ್ಚಾರಿತ್ರ ! ಹೆಂಡಿರನ್ನು ಮನೆಯಲ್ಲಿಯೆ ಕಾಯಕಕ್ಕೆ ಹಚ್ಚಿದವರೊಬ್ಬಿಬ್ಬರುಂಟು. ಆದರೆ ಕೆರೆಗಳನ್ನು ಕಟ್ಟುವಂತಹ ಸಾರ್ವಜನಿಕ ಬಹಿರಂಗದ ಕಾಯಕಕ್ಕೆ ಹಚ್ಚಿದವರಿವರೊಬ್ಬರೆ ! ಅಲ್ಲದೆ ಜಗದ್ಗುರುವಾಗಿ ಅಹಂಕಾರವಿಲ್ಲದೆ ಅಧಿಕಾರ ಅರ್ಥಗಳ ಮಮಕಾರ–ಮೋಹಗಳಿಲ್ಲದೆ ಸಾರ್ವಜನಿಕಕ್ಕಾಗಿ ಸಾಮಾಜಿಕರಿಗಾಗಿ ಸತ್ಯ ಶುದ್ಧರಾಗಿ ಸರ್ವಸ್ವ ತ್ಯಾಗ ಮಾಡಿ ಮಠ ಮಾನ್ಯವೆನ್ನದೆ ಕಾಯಕ ಮಾಡಿದವರು ವಿಶ್ವದಲ್ಲಿ ಇವರೊಬ್ಬರೆ ! ! ಇವರದು ಇನ್ನೊಬ್ಬರಿಂದ ಫಲ ಪಡೆವ ಕಾಯಕವಲ್ಲ ; ಫಲ ಕೊಡುವ ಕಾರಣಿಕತನದ ಕಾಯಕ ! ಈ ದಿಸೆಯಲ್ಲಿ ರೇವಣಸಿದ್ಧ ಶಿವಾಚಾರ್ಯ ಏಕೈಕ ಕಾರಣಿಕ ! ಲೋಕೋತ್ತರ ಕಾರಣಿಕ ! !

ತನ್ನ ನೂರಾರು ಜನ ಹೆಂಡಿರಲ್ಲಿ ಚೋಳ ಪುತ್ರಿಯೊಬ್ಬಳು. ಇವಳು ವೀರಭದ್ರಚೋಳನ ಮಗಳು ; ವೇದ ಮೋಹಿನೀದೇವಿ ಇವಳ ಹೆಸರು. ಮೂರು ತಿಂಗಳ ಗರ್ಭಧಾರಿಣಿ. ದಿನವೆಲ್ಲ ಮಣ್ಣು ಬುಟ್ಟಿ ಹೊರಲು ತುಂಬಾ ಆಯಾಸವಾದುದನ್ನು ದಿವ್ಯಜ್ಞಾನಿಯಾದ ತನ್ನ ಪತಿದೇವ ರೇವಣಸಿದ್ಧರಿಗೆ ಬಿನ್ನವಿಸಿಕೊಳ್ಳುವಳು. ಒಪ್ಪದಾದನು, ಕಾಯಕ ಮಾಡದಿದ್ದರೆ ನಮ್ಮಲ್ಲಿರಲು ಅನುವಿಲ್ಲ. 'ಎಮ್ಮೊಡವೆಯುಂ ಕೊಟ್ಟು ಪೋಪುದೆಂದು' ಹೇಳಲು ಸಂದಿಗ್ಧಾವಸ್ಥೆಯಲ್ಲಿರುವಳು. ಅಷ್ಟರಲ್ಲಿ ರೇವಣಸಿದ್ಧರೇ ಕೈಯಿಂದ ಪತ್ನಿಯ ಸಿಬ್ಬಿನೊಡಲನ್ನು ಹಿಳಿದು ಹೊರತೆಗೆದು, ಕೆರೆ ಕಟ್ಟೆಯೆಂಬ ಪ್ರಕೃತಿದೇವಿಯ ಒಡಲಲ್ಲಿರಿಸಿ ಒಂಬತ್ತು ತಿಂಗಳು ತುಂಬಿದೊಡನೆ ತಮ್ಮ ಕಾಯಕವನ್ನು ಆ ಅವಧಿಯುಲಿಯೇ ಮುಗಿಸಿ ಹೊರದಗೆದು 'ರುದ್ರಮುನಿ'ಯೆಂಬ ಹೆಸರನ್ನಿರಿಸಿ ಕಾಪಾಡಿದ ಪವಾಡ ಅತ್ಯದ್ಭುತ ; ಇಂದಿನ ವಿಜ್ಞಾನಕ್ಕೂ ಮೀರಿದ್ದ ಮಹಿಮೆ. ಇಂದಿನ ಪ್ರಣಾಳಿಕಾ ಶಿಶುವಿನ ವಿಜ್ಞಾನಕ್ಕೆ ಒಂದು ಸಾವಿರ ವರುಷಗಳ ಹಿಂದೆಯೆ ನಾಂದಿ ಹಾಡಿದ ವೈಶಿಷ್ಟ್ಯ ರೇವಣಸಿದ್ಧ ಶಿವಾಚಾರ್ಯರದ್ದಾಗಿದೆ. ಶಿಶುವಿಗೆ ಜನ್ಮದುಃಖಗಳಿಲ್ಲದಿರುವ ಸಂಕೇತಕ್ಕಾಗಿ ರುದ್ರಮುನಿಯೆಂದು ಹೆಸರಿಟ್ಟು

ದೊಂದು ಹಿರಿಮೆಯ ಮಹಿಮೆಯಲ್ಲವೆ ? ಬಲದಾಯಿಂದಿರ ಕೈಯಲ್ಲಿ ಬಾಲ ಚಂದ್ರನಂತೆ ಬೆಳೆಯುವನು. ಎಂಟು ವರುಷ ತುಂಬುವುದು. ಶಿವಸ್ವರೂಪರಾದ ರೇವಣಸಿದ್ಧ ಶಿವಾಚಾರ್ಯರು ರುದ್ರಮುನಿದೇವನಿಗೆ ಶಿವದೀಕ್ಷೆಯನ್ನನುಗ್ರಹಿಸುವರು. ಮತ್ತು ಪರಮ ಸ್ವರೂಪ ಜ್ಞಾನಾನುಭವವನ್ನು ಬೋಧಿಸುವರು. ಅಭಿನವ ರುದ್ರಮುನಿದೇವನಾಗಿ ಅತ್ಯಂತ ಪ್ರಭಾವಶಾಲಿಯಾಗಿ ಪ್ರಕಾಶಕ್ಕೆ ಬರುವನು. ಚಂಗಣಗಲ ಮಂಟಪದಲ್ಲಿ ಪ್ರಾನುಭೂತಿಯಲ್ಲಿ ಪರಿಣತನಾಗುವನು. ಆದರೂ ನಯ ಭಯಗಳಿಂದ ಭಾವವಿಭಾವಗಳಿಂದ ಎಲ್ಲ ಶಿವಾಚಾರ್ಯ-ಶಿವಾಚಾರದವರಿಗೆ ಶಿವಾಚಾರಿಣಿಯರಿಗೆ ಪ್ರಿಯವಾಗಿರುವನು. ಚಂಗಣಗಲ ಮಂಟಪದಲ್ಲಿ ಚಂಗದಿರನಂತೆ ಚೆನ್ನೊಪ್ಪುವನು. ಚಿದೈಶ್ವರ್ಯದಿಂದ ಸರ್ವೋನ್ನತ ಶ್ರೀಮಂತನಾಗುವನು. ಚಿನ್ಮಯಸ್ವರೂಪನಾದ ತನ್ನ ಚಿರಂಜೀವಿಯನ್ನು ಕಂಡು ರೇವಣಸಿದ್ಧ ಶಿವಾಚಾರ್ಯರು ಸಾತಿಶಯವಾಗಿ ಸಂತೋಷಗೊಳ್ಳುವರು. ಮತ್ತೆ ರುದ್ರಮುನಿ ದೇವನೊಡನೆ ದೇಶಾಂತರ ಪ್ರಯಾಣ ಮಾಡುವನು.

## ಹಾವಿನ ಹಾಳಕ್ಕೆ....!

ತಂದೆಗೆ ತಕ್ಕ ಕಂದ : ಕಂದನಿಗೆ ತಕ್ಕ ತಂದೆ. ಇಬ್ಬರು ಸಮಸ್ವರೂಪರಾಗಿ ನಾಡಿನಲ್ಲೆಲ್ಲ ನಲವಿನಿಂದ ಸಂಚರಿಸುವರು. ನಾಡಿಗರಿಗೆ ಕ್ರಿಯಾಶೀಲತೆಯನ್ನು ಜ್ಞಾನಾನುಭೂತಿಗಳನ್ನು ನೀತಿ ರೀತಿಗಳನ್ನು ಸಂಸ್ಕೃತಿಯನ್ನು ಬೋಧಿಸುತ್ತ, ಹಲವರಿಗೆ ವೀರಶೈವ ದೀಕ್ಷೋಪದೇಶವನ್ನೀಯುತ್ತ, ಆ ಆ ಊರುಗಳ ಬಳಿಗಳಲ್ಲಿರುವ ಬೆಟ್ಟ ಗುಟ್ಟಗಳಲ್ಲಿ ತೊರೆ ತೀರಗಳಲ್ಲಿ ಅನುಷ್ಠಾನ ಆಚರಿಸುತ್ತ ಸಂಚರಿಸುವರು. ಮಠ ಮಂದಿರಗಳನ್ನು ಕಟ್ಟುತ್ತ ಕಟ್ಟಿಸುತ್ತ ನಾಡ ಪಯಣ ನಡಿಸಿದರು. ಮಹಾ ಮಾನವತಾವಾದಿಗಳೂ ಮಹತ್ತಮ ಕ್ರಿಯಾಶೀಲರೂ ಆದ ಆದರ್ಶ ತಂದೆ-ಮಗನೂ ಮತ್ತು ಗುರು-ಶಿಷ್ಯರೂ ಆದ ರೇವಣಸಿದ್ಧ ಶಿವಾಚಾರ್ಯರು ರುದ್ರಮುನಿದೇವರು ಮಾಡಿದ ನಾಡಿನ ಪ್ರವಾಸ ನಾಡಿನ ಜನ ಜೀವನಸಾರ್ಥಕ್ಯಪಡಿಸುವ ಪಡಿಸಿದ ಪರಮೋದ್ದೇಶದ್ದಾಗಿತ್ತು. ಮಾನವೀಯ ನೈಜ ಜೀವನದ ನಿಯಮಗಳನ್ನು ಮನಮುಟ್ಟುವಂತೆ ನಿರೂಪಿಸುವುದಾಗಿತ್ತು. ಅಲ್ಲದೆ ಅಸಹಾಯಕರಿಗೆ ಸಹಕಾರ ಸೌಲಭ್ಯಗಳನ್ನೊದಗಿಸುವುದಾಗಿತ್ತು. ನಾಡಿನವರ ಜೀವನವಿಕಾಸಗೊಳಿಸಿ ವಿಶಾಲವೂ ವಿರುದ್ಧವೂ ಆದ ದೃಷ್ಟಿಕೋನವನ್ನು ದಯ

ಪಾಲಿಸುವುದಾಗಿತ್ತು. ಜನರಿಗೆ ಸಂಸ್ಕಾರ ಕರುಣಿಸಿ ಸಂಸ್ಕೃತಿಯಿಂದ ಬಾಳ ಗಲಿಸುವುದಾಗಿತ್ತು ; ಬದುಕಿನ ಮೌಲ್ಯವನ್ನು ಮನದಟ್ಟಾಗಿಸುವುದಾಗಿತ್ತು. ಕಲೆ–ಕಳೆಗಳನ್ನು ಕರುಣಿಸಿ ಕನ್ನಡಿಗರ ಕಣ್ತೆರೆಸುವುದಾಗಿತ್ತು. ಸೀಮಿತ ಜೀವನ ದಿಂದ ಜೀವನದ ವಿಶಾಲದೃಷ್ಟಿ ವಿರಾಟ್ ಮನೋಭಾವಗಳು ಅರ್ಥವಾಗವು. ಒಂದೇ ಬಗೆಯ ಕಾಯಕವನ್ನು ಒಂದೆಡೆಯಲ್ಲಿದ್ದು ಜೀವನಾದ್ಯಂತ ಮಾಡಿದರೆ, ಒಬ್ಬೊಬ್ಬರನ್ನು ನಿತ್ಯ ಸಂತುಷ್ಟಿಗೊಳಿಸಿದರೆ ಕಾಯಕಕ್ಕೆ ಪೂರ್ಣ ಮೌಲ್ಯವಿಲ್ಲ. ಸಾಮಾಜಿಕ ವಿಶಾಲ ಭಾವವಿಲ್ಲ, ಪ್ರಯೋಜನವಿಲ್ಲ. ಒಂದೂರಿನಲ್ಲಿ ಜಂಗಣ ಗಲ ಮಂಟಪವನ್ನು ಕಟ್ಟಿ ಅದರಲ್ಲಿ ಅನುಭವ ಗೋಷ್ಠಿಯನ್ನು ನಡೆಸಿದರೆ ಆಗದು ; ಅದೂ ಸಹ ಸೀಮಿತ. ಅದಾದ ಬಳಿಕ ಅದಕ್ಕೆ ಅಲ್ಲಿದ್ದು ಬಾಳುವವ ರನ್ನು ಅಲ್ಲಿರಿಸಿ, ತಾವು ನಾಡಿನ ಸಂಚಾರೀ ಜಂಗಣಗಲ ಮಂಟಪವಾಗಬೇಕು. ನಾಡೆಲ್ಲ ಜಂಗಣಗಿಲ ಚೆಂದೋಟವಾಗಬೇಕೆಂಬುದೆ ರೇವಣಸಿದ್ಧ–ರುದ್ರಮುನಿ ದೇವರೀರ್ವರ ಜೀವನದ ವಿಶಾಲ ಮನೋಭಾವದ ಮಹದಾಶಯ ! ಮಾನವ ಜೀವನ ಅತ್ಯಮೋಘವಾದದ್ದು. ಇದು ಸುಖದುಃಖದ ಸಂಕೋಲೆಯಲ್ಲಿ ಕೊರತೆ ಕೊರಗುಗಳ ಕೋಳದಲ್ಲಿ, ಮೇಲು ಕೀಳು, ಮಾನಾಪಮಾನ, ಸೋಲು ಗೆಲುವು, ವಾದ–ವಿವಾದ, ರಾಗ ದ್ವೇಷ, ಮದ ಮತ್ಸರ, ಸ್ತುತಿ–ನಿಂದೆ, ಮೊದಲಾದ ಸಂಕುಚಿತತೆಗಳಿಗೆ ಸಿಲುಕಿ ಬಳುಕಿ ಬೀಳಾಗಬಾರದು. ಭದ್ರವಾದ ನೆಲಗಟ್ಟಿನ ಮೇಲೆ ಭವನವನ್ನು ನಿರ್ಮಾಣ ಮಾಡಿದಂತೆ, ಜೀವನ ಭವ್ಯ ಭವನ ವನ್ನು ಮಾನವನು ಮಾಡಿಕೊಂಡು ವಿಶಾಲ ವಿಶುದ್ಧ ಮನೋಭಾವದಿಂದ ಜನ ಬಾಳಬೇಕೆಂಬುದೇ ಅವರಿಬ್ಬರ ಅರ್ಥಪೂರ್ಣ ಪ್ರವಾಸ. ಹೀಗೆ ಅವರಿಬ್ಬ ರಿಂದ ಸಮಾಜಕ್ಕೆ ನಾಡಿಗೆ ಬಹುಮುಖದ ಸೇವೆ ಸಂದಿದೆ. ಬಹು ಜನಕ್ಕೆ ಕಾರುಣ್ಯರಸದ ಪ್ರಸಾದ ಪ್ರಾಪ್ತಿಯಾಗಿದೆ. ಜನಜೀವನಕ್ಕಿರುವ ಹಕ್ಕುಗಳನ್ನು ರಕ್ಷಿಸಿಕೊಂಡು ಒಂದು ಪ್ರಜಾಪ್ರಭುತ್ವದ ಧ್ಯೇಯವನ್ನು ಅಂದೇ ಅವರ ವಿಶಿಷ್ಟ ವ್ಯಕ್ತಿತ್ವದಿಂದ ಸಾರಿದ್ದಾರೆ ; ನಡಿಸಿದ್ದಾರೆ. ಅವರಿಗೆ ದೀನ ದಲಿತರ ಮೇಲೆ. ಜೀವನದ ದುರ್ಭರ ಪ್ರಸಂಗಕ್ಕೆ ಸಿಕ್ಕಿದವರ ಮೇಲೆ ಸಮಸ್ಯೆಗಳ ಸುಳಿ ಯಲ್ಲಿ ಬಿದ್ದವರ ಮೇಲೆ ತುಂಬಾ ಅಂತಃಕರಣವಿಟ್ಟು ಅವರನ್ನೆಲ್ಲ ಎತ್ತಿ ಉದ್ಧರಿ ಸಿದ್ದಾರೆ ; ಪರಿಶುದ್ಧರನ್ನಾಗಿಸಿದ್ದಾರೆ. ಸಂಚರಿಸುತ್ತ ತುಮಕೂರು ಜಿಲ್ಲೆಯಲ್ಲಿ ರುವ ಶಿವಗಂಗೆಯ ಕ್ಷೇತ್ರಕ್ಕೆ ಆಗಮಿಸುವರು. ಅಲ್ಲಿ ಕೆಲ ದಿನಗಳಿದ್ದು ಅಲ್ಲಿಯ

ಜನಗಳ ಮೇಲೆ ತಮ್ಮ ಪ್ರಭಾವವನ್ನು ಬೀರಿ ಅಲ್ಲಿ ಒಂದು ಬೃಹನ್ಮಠವನ್ನು ರೂಪಿಸುತ್ತಾರೆ. ಅನೇಕರಿಗೆ ವೀರಶೈವ ದೀಕ್ಷೆಯನ್ನಿತ್ತರು. ಅಷ್ಟಾವರಣ ನಿಷ್ಠರನ್ನಾಗಿಸಿದರು. ನಾಡಿನ ಅಲ್ಲಲ್ಲಿ ಮಠಮಂದಿರಗಳನ್ನು ನಿರ್ಮಿಸುತ್ತ ವೀರ ಶೈವರನ್ನಾಗಿಸುತ್ತ ಉದ್ಧರಿಸುತ್ತ ಹಾವಿನ ಹಾಳಕ್ಕೆ ಆಗಮಿಸುವರು. ಸಾಮಾಜಿಕ ಸ್ವಾತಂತ್ರ್ಯ, ಜನಜಾಗ್ರತಿ, ಕಾಯಕ ವೈವಿಧ್ಯ ವೈಶಾಲ್ಯಗಳನ್ನು ಅನುಗ್ರಹಿಸು ವುದೇ ಆಗಿತ್ತು ಇಬ್ಬರು ಶಿವಾಚಾರ್ಯರಿಗೆ! ಇಬ್ಬರು ಮಾನವೀಯ ಧರ್ಮದ ಕಾಯಕ ಸಮಾಜ ಕಟ್ಟಲು ಸಾಹಸಮಾಡಿದರು; ಮಾಡಿಕಟ್ಟಿದರು. ಒಂದು ಕಾಯು ಕಕ್ಕೆ ಸೀಮಿತವಾಗಬಾರದು. ಮಾನವೀಯಾನುಭೂತಿಗೆ ಸೀಮಿತವಾಗಬಾರದು ಒಂದೂರಿನ ಚಟುವಟಿಕೆ, ಮಾನವರು ಅಜ್ಞಾನ ಆಚಾರ ದೌರ್ಬಲ್ಯ ದಾರಿದ್ರ್ಯ ಗಳಿಗೆ ಒಳಗಾಗಬಾರದೆಂಬುದೆ ಇಬ್ಬರು ಶಿವಾಚಾರ್ಯರ ಮಣಿಹ ಗುರಿ. ಜೀವನ ಪಯಣ ಪರಿ. ರೇವಣಸಿದ್ಧ ಶಿವಾಚಾರ್ಯರು ಅತ್ಯಂತ ಅನುಕಂಪ ಹೃದಯಿ. ಜೀವನ ವಿಕಾಸಕ್ಕೆ ವಿಶುದ್ಧ ಸಂಸ್ಕಾರಬೇಕು. ಶಿವಾಚಾರ್ಯ ಧರ್ಮ ಶಿವಸಂಸ್ಕಾರಕ್ಕೆ ಶಿವಾಚಾರ ಶಿವವಿಚಾರಕ್ಕೆ ಶಿವಾನುಭೂತಿಗೆ ಪ್ರಾಧಾನ್ಯ ಕೊಟ್ಟದೆ. ಅದೇಕೆ ಅವು ಅವರ ಉಸಿರೇ ಆಗಿದ್ದವು. ಆಗಿದೆ.

ಶಿವಾಚಾರ್ಯ ಸಮಾಜದ ತಂದೆ-ತಾಯಿ! ತಂದೆ ತಾಯಿಗಳು ಮಕ್ಕಳ ಮೇಲೆ ಸರ್ವತೋಮುಖವಾದ ಎಚ್ಚರಿಕೆಯನ್ನು ವಹಿಸುತ್ತಾರೆಯೋ ಗುರು ತಂದೆ ತಾಯಿ ತ್ರಿವೇಣಿ ಸಂಗಮವಾಗಿ ಸಾಮಾಜಿಕ ಶಿಷ್ಯ ಶಿಶುಗಳ ಮೇಲೆ ಎಚ್ಚರಿಕೆ ವಹಿಸುತ್ತಾರೆ-ಶಿವಾಚಾರ್ಯರು! ಅಂತಃಕರಣದಿಂದ ಕಾಣುತ್ತಾರೆ. ಸರ್ವೋದ್ಧಾರಕ್ಕೆ ಪ್ರಯತ್ನಿಸುತ್ತಾರೆ. ದೇವರ ವಿಷಯದಲ್ಲಿ ಒಬ್ಬರ ಹಂಗಿಗೆ ಒಬ್ಬರಿರಬಾರದೆಂಬುದೇ ಅವರ ಧ್ಯೇಯ; ಅದೇ ಶ್ರೇಯ.

ಹೀಗಿರಲು ಒಮ್ಮೆ ಹಾವಿನ ಹಾಳಕ್ಕೆ ಆಗಮಿಸುವರು. ಅಲ್ಲಿನ ಜನರಿಗೆ ಬೋಧಿಸುತ್ತಿರುವರು. ಅಲ್ಲಿ ಒಬ್ಬ ಎದ್ದು ಕಾಣುವನು. ಆತನ ಹೆಸರು ಕಲ್ಲಯ್ಯ, ಅಕ್ಕಸಾಲಿಗ, ಆತನ ಊರ ದೇವರು ಕಲ್ಲಯ್ಯ. ದೇವರ ಹೆಸರೇ ಈತನಿಗೂ ಇಟ್ಟಿದ್ದರು. ಇದರಿಂದಾಗಿಯೋ ಏನೋ ತುಂಬಾ ಭಕ್ತಿವಂತನು. ನಿತ್ಯ ಊರ ದೇವರಿಗೆ ನಡೆದುಕೊಳ್ಳುತ್ತಿದ್ದನು. ದೃಢ ಮನಸ್ಸಿನಿಂದ ಪೂಜಿಸು ತ್ತಿದ್ದನು. ಇದರಿಂದಾಗಿ ಶಾಂತನೂ ಸಾತ್ವಿಕನೂ ಇದ್ದನು. ರೇವಣಸಿದ್ಧ

ಶಿವಾಚಾರ್ಯರ ಪಾದಕ್ಕೆರಗುವನು. ಬಹುದಿನದಿಂದ ವೀರಶೈವ ದೀಕ್ಷೆಯಾಗ ಬೇಕೆಂದಿದ್ದನು. ಈ ದಿನ ಕಲ್ಲಯ್ಯನೇ ಕರುಣಿಸಿ ತಮ್ಮಂತಹ ಮಹಾನುಭಾವ ರನ್ನು ಕರೆತಂದಿರುವನು. ಅನನ್ಯ ಭಕ್ತಿಭಾವದಿಂದ ಬೇಡುವನು. ಶಿವದೀಕ್ಷೆ ಯನ್ನನುಗ್ರಹಿಸಬೇಕೆಂದು ಚರಣಗಳನ್ನು ಗಟ್ಟಿಹಿಡಿಯುವನು. ಆಗ ಶಿವಾ ಚಾರ್ಯರು ಆತನ ಆ ಗಾಢ ಭಕ್ತಿಗೆ ಮೆಚ್ಚಿ ಮೇಲಕ್ಕೆಬ್ಬಿಸಿ ಶಿವದೀಕ್ಷೆಯ ಮಾಡಲು ಶ್ರೀ ರುದ್ರಮುನಿದೇವನಿಗೆ ಅಪ್ಪಣೆಯ ಮಾಡುವರು, ಅದರಂತೆ ರುದ್ರಮುನಿ ದೇವನು ಹಾವಿನ ಹಾಳ ಕಲ್ಲಯ್ಯನನ್ನು ಶಿಷ್ಯನನ್ನಾಗಿ ಪರಿಗ್ರಹಿಸಿ ಶಿವದೀಕ್ಷೆಯನ್ನು ಅನುಗ್ರಹಿಸುವನು. ರುದ್ರಮುನಿ ಶಿವಾಚಾರ್ಯನು ಶಿವದೀಕ್ಷಾ ಸಂಸ್ಕಾರವೇ ಸಾಕಾರವಾಗಿ ಬಂದಂತಿರುವನು. ಕಾರಣ ಮುಂದೆ ಬರಲಿರುವ ೧೨ನೆಯ ಶತಮಾನದಲ್ಲಿ ಬಹುಮಂದಿಗೆ ಶಿವದೀಕ್ಷೆಯನ್ನು ಅನುಗ್ರಹಿಸುತ್ತಾನೆ.

ಹಾವಿನ ಹಾಳದಿಂದ ಸೊನ್ನಲಾಪುರಕ್ಕೆ ಆಗಮಿಸುತ್ತಾರೆ. ಅಲ್ಲಿ ಸುಗ್ಗವ್ವೆ ಮುದ್ದಗೌಡ ಎಂಬ ದಂಪತಿಗಳಿದ್ದರು. ಅವರಲ್ಲಿ ಸುಗ್ಗವ್ವೆ ಕಾರಣಿ ಕಳು. ಅವಳ ಉದರದಲ್ಲಿ ಕಾರಣಿಕ ಶಿಶುವೊಂದು ಜನಿಸುವುದೆಂದು ಆತನನ್ನು ನಮ್ಮಂತೆಯೇ ಭಾವಿಸುವುದೆಂದು ಅಪ್ಪಣೆ ಮಾಡುತ್ತಾರೆ ಶ್ರೀ ರೇವಣಸಿದ್ಧ ಶಿವಾಚಾರ್ಯರು. ಅಲ್ಲದೆ ಆತನ ಯಶಸ್ಸು ದಿಗ್‌ದಿಗಂತವಾಗಿ ಹಬ್ಬುವುದು; ಎಂದು ಹೇಳಿ ಸುಗ್ಗಗೌಡಿಯ ಮನೆಯಲ್ಲಿ ಭಿಕ್ಷವ ಕೈಕೊಂಡು, ಸುಗ್ಗಿಗೌಡಿಗೆ ಹಸ್ತ ಸ್ಪರ್ಶ ಮಾಡಿ ವಿಭೂತಿ ಧಾರಣ ಮಾಡಿ ಕೃಪೆಗೈವರು. ಅಲ್ಲಿಯೇ ಇದ್ದ ಚಾಮಲದೇವಿಯನ್ನು ಅವಳ ಭಕ್ತಿಭಾವಕ್ಕೆ ಮೆಚ್ಚಿ ಶಿವದೀಕ್ಷಾನುಗ್ರಹವನ್ನು ಕರುಣಿಸುವರು.

ರೇವಣಸಿದ್ಧ ಶಿವಾಚಾರ್ಯರು–ಧೈರ್ಯನಿಧಿ, ನಿರುಪಮಸಿದ್ಧ, ತ್ರಿಭುವನ ಬಾಂಧವ, ತ್ರಿಕಾಲಜ್ಞ, ಮುಕ್ಕಣ್ಣಸಿದ್ಧ, ಸಾಮರ್ಥ್ಯಭೂಷಣ, ಮನುಗಳ ಮನೆದೈವ, ಮುನಿಗಳ ಮೂರ್ತಿ ಜ್ಯೋತಿ, ಸಿದ್ಧರ ಸಿದ್ಧರಸ, ದುರಿತ ವಜ್ರ ವಿರುದ್ಧ, ಶಿವಜ್ಞಾನ ಪ್ರಬುದ್ಧ, ಲೋಕ ಪ್ರಸಿದ್ಧ, ಸಮಗ್ರತೇಜೋ ವಿಲಸಿತ; ಸಿದ್ಧಸಮಯ ಚಕೋರ ಚಂದ್ರಿಕಾಯಮಾನ, ಸಿದ್ಧಕುಲ ಚಾತಕ ಸುಧಾವರ್ಷ,ಪರ ಸಮಯ ಕುಮುದ ಕಮಲ ಸಖ, ಸಾಮರ್ಥ್ಯ ಸಾಗರ-ಎಂಬ ತನ್ನ ಬಿರುದುಗಳ

ವಿರುಜಗಳ ಕಹಳಾರವವನ್ನು ದಿಕ್ತಟಗಳಲ್ಲಿ ಢೀಂಕಿಡಿಸುವಂತೆ ಸರ್ವಸಂಭ್ರಮ ದಲ್ಲಿ ಪ್ರಾಂತ ಪ್ರಾಂತಗಳನ್ನು ಪರಮ ಸಂತೋಷದಿಂದ ಸಂಚರಿಸುವರು.

ಹನ್ನೊಂದನೆಯ ಶತಮಾನದ ನಾಡಜನರೆಂಬ ವನಕ್ಕೆ ಜೀವಂತ ವಸಂತ ರಾಗಿ ಸುಳಿದು; ಕ್ರಿಯಾತ್ಮಕ ಹಸುರು ಜ್ಞಾನಾತ್ಮಕ ಭಾವಾನು ಭಾವಾತ್ಮಕ ಮಧುರ ಫಲಗಳನ್ನು ನಾಡವರಿಗೆಲ್ಲ ಕರುಣಿಸಿ ನಲಿನಲಿದಾಡುವಂತೆ ಮಾಡಿದ ಮಹಾಮಹಂತರು-ಶ್ರೀ ರೇವಣಸಿದ್ಧ ಶಿವಾಚಾರ್ಯರು. ಮಂಗಳವಾಡದ ಚಂಗಣಗಲ ಮಂಟಪದ ಸುಮಧುರ ಸೂಳ್ನುಡಿಗಳಿಂದ ಸಹೃದಯರ ಹೃದಯ ಗಳನ್ನು ಅರಳಿಸಿದರು. ಶಿವಾಚಾರ್ಯ ಶಿವಾಚಾರಸ್ಥ ಶಿವಾಚಾರಿಣಿರೆಂಬ ಕೋಗಿಲೆ ಗಳ ಸೂಳ್ನುಡಿ (ನುಡಿಗಡಣ)ವೆಂಬ ಕಲರವದನಿನಾದ ನಾಡನ್ನೆಲ್ಲ ಮೊಳಗಿಸಿ ದ್ದಿತು. ಅದನಾಲಿಸಿದರೆ ಹೃದಯ ಪರಿಸ್ಪಂದನಗೊಳ್ಳುತ್ತಿತ್ತು. ಮೈನವಿ ರೇಳುತ್ತಿತ್ತು-ನಲುಮೆಯಿಂದ ! ಅಂತೆಯೇ, "ಆದ್ಯರ ವಚನ ಪರುಷ ಕಂಡಯ್ಯ" ಎಂದು ಬಸವಣ್ಣನವರಿಂದ ಬಗೆದುಂಬಿ ಬಣ್ಣಿಸಿಕೊಂಡ ಅಂತಹ ಆ ಪರುಷರತ್ನದಂತಹ ನುಡಿಗಡಣ ಅಂದರೆ ಸೂಳ್ನುಡಿಗಳು ಎತ್ತ ಎಲ್ಲಿ ಮಾಯ ವಾದವೋ ? ಹೇಗೆ ಯಾವ ಬಗೆಯಲ್ಲಿ ಮಾಯವಾದವೋ ಆ ಶಿವನಿಗೊಬ್ಬ ನಿಗೆ ಗೊತ್ತು. ಅವಾಗಿವೆ ಆ ಶಿವನ ಸೊತ್ತು. ಚಂಗಣಗಲ ಮಂಟಪದಿಂದ ನೂರಾರು ಜನ ಸೂಳ್ನುಡಿಗಾರರು ಸೂಳ್ನುಡಿಗಾರ್ತಿಯರಾಗಿದ್ದಾರೆ. ಅವರಲ್ಲಿ ಹಲವಾರು ಜನರ ಸೂಳ್ನುಡಿಗಳು ತೀರ ಕಡಿಮೆ ದೊರೆತಿವೆ. (ನಾವು ಸಂಕಲಿಸಿದ "ಸೂಳ್ನುಡಿಗಳ ಹಿನ್ನೆಲೆ-ಮುನ್ನೆಲೆ" ಎಂಬ ಕೃತಿಯನ್ನು ಕಾಣ ಬೇಕು). ಸೂಳ್ನುಡಿ ಗಾರ್ತಿಯರು ವ್ರತ ಮಹಾ ತತ್ತ್ವವನ್ನು ಮಹತ್ತಮವಾಗಿ ಮನಗಂಡು ಮಂಡಿಸಿದ್ದಾರೆ ರೂಪಕೋಪಮೆಗಳಿಂದ : ಅಂದಿನ ಆ ಮರುಳ ಸಿದ್ಧಾದಿ ಶಿವಾಚಾರ್ಯರು ಶಿವಾಚಾರ್ಯರ ಶಿವಾಚಾರದೊಡವೆರಸಿದ ಶಿವದೀಕ್ಷಾ ಸಂಸ್ಕಾರ ತತ್ತ್ವವನ್ನು ಉತ್ತುಂಗ ಶಿಖರಕ್ಕೇರಿಸುವುದರಲ್ಲಿ ಮಗ್ನರಾಗಿದ್ದರು. ಸಾಮಾಜಿಕರಿಗೆ ತಿಳಿಬಾಳಿನ ದಾರಿದೀಪವಾಗಿದ್ದರು; ದಿವ್ಯದೀಪ್ತಿಯಾಗಿದ್ದರು. ನಿರ್ಲಜ್ಜಶಾಂತ ದೇಶಿಕೇಂದ್ರ ಶಿವಾಚಾರ್ಯರ ಪ್ರಭಾವ ನಿರತಿಶಯವಾಗಿದ್ದಿತು.ಹಲ ವಾರು ಜನ (೨೦ಜನ)ಶಿವಾಚಾರಿಣಿಯರು ಇವರ ಪುಣ್ಯಪ್ರದ ನಾಮಾಂಕಿತದಲ್ಲಿ ಸೂಳ್ನುಡಿಗಳನ್ನು ಸೃಜಿಸಿರುವರು. ಚಂಗಣಗಲ ಮಂಟಪದ ಕೇಂದ್ರ ವ್ಯಕ್ತಿಯಾದ

ಶ್ರೀ ರೇವಣಸಿದ್ಧರ ಬಗೆಗೆ ಬಣ್ಣಿಸಲಳವಲ್ಲ. ಮಾಸನೂರಿನ ಸುರಗಿ ಪವಾಡ, ಕಾಂಚಿಪುರದ ವಿಷ್ಣು ವಿಗ್ರಹದ ಶಿರಃಕಂಪನ ನಿಲ್ಲಿಸಿ ಪ್ರತಿಷ್ಠಿಸಿದ ಪ್ರಭಾವ, ವೈಷ್ಣವ ಚೋಳರಾಜನ ಕ್ಷಾತ್ರ ಬಲಕ್ಕೆ ಜಗ್ಗದೆ ಕುಗ್ಗದೆ, ತನ್ನನ್ನು ಎಳೆದಾಡುವ ರಾಜಭಟರ ಹಸ್ತಸ್ತಂಭ, ಜಿಹ್ವಾಬಂಧ, ಚರಣಸ್ತಂಭಗಳ ಮಾಡಿದುದನ್ನು ತಿಳಿದು ಚೋಳರಾಜನು ಗಡಗಡ ನಡುಗಿ ನಿಲ್ಲದೆ ನಡೆದು ಬಂದು ಬಾಗಿ ಚರಣ ಕೆರಗಿ ಪ್ರಾರ್ಥೇಯುತೆಯಿಂದ ಬಿನ್ನವಿಸಿಕೊಳ್ಳಲು ಆತನ ಆ ವಿಷ್ಣು ಗೃಹಕ್ಕೆ ಬಿಜ ಯಂಗೈದ ಸಮತಾಭಾವ ಶ್ರೀ ರೇವಣಸಿದ್ಧ ಶಿವಾಚಾರ್ಯರ ಅಸಮಾನ ಸಿದ್ಧಿಗೆ-ಅನನ್ಯ ದೀಪ್ತಿಗೆ ಹೆಗ್ಗುರುತಲ್ಲವೆ ? ಧೈರ್ಯ ನಿಧಿಯೆಂಬುದಕ್ಕೆ ತ್ರಿಭುವನ ಬಾಂಧವನೆಂಬುದಕ್ಕೆ ಹೆಗ್ಗುರುತಲ್ಲವೆ ? ತೆಲ್ಲಿಗನಾದ ಕಲ್ಯಾಣದ ಕಲ್ಲಿಸೆಟ್ಟಿಯ ಮನೆಗೆ ಸಾಮಾನ್ಯನಂತೆ ಹೋಗಿ ಗಾಣದೆತ್ತನು ಹೊಡೆವ ಕಾಯಕ ಮಾಡಿ ಕೆಲ ದಿನವಿದ್ದು ಸೆಟ್ಟಿಗೂ ಸೆಟ್ಟಿಯ ಹೆಂಡತಿಗೂ ಎಷ್ಟಿಗೂ ಹೋಗಿದ್ದ ಒಂದೊಂದು ಕಣ್ಣುಗಳನ್ನು ಕರುಣಿಸಿದ ಕಾರಣಿಕತೆ ಕಡೆಗಣ್ಣಿನಿಂದ ಕಾಣಬೇಕಾದುದೇನಲ್ಲ. ಅಲ್ಲದೆ ಆ ತೆಲ್ಲಿಗನಿಗೆ ತನ್ನ ತವನಿಧಿಯನಿತ್ತ ರೇವಣಸಿದ್ಧ ಶಿವಾಚಾರ್ಯನ ಈ ಮಹಿಮೆ ಲೋಕೋತ್ತರ. ತಾನು ಶಿವನಿಂದ ಪಡೆದ ತವನಿಧಿ ದಾಸಮಯ್ಯನ ತರುವಾಯ ತಾನೂ ಪಡೆದು-ತನ್ನ ಭಕ್ತನಿಗೂ ತಾನೇ ತವನಿಧಿಯ ಕರುಣಿ ಸುವ ರೇವಣಸಿದ್ಧ ಶಿವಾಚಾರ್ಯನಿಗೆ ಸಾಟಿ ಯಾರು ? ಮತ್ತೊಮ್ಮೆ ಮಂಗಳ ವಾಡ ಬಿಜ್ಜಳನು ಶ್ರೀ ರೇವಣಸಿದ್ಧ ಶಿವಾಚಾರ್ಯರ ಪರೀಕ್ಷಿಸಲು ಅವರ ಆ ಪಾಣಿ ಪಾತ್ರೆಯಲ್ಲಿ ಕುದಿವೋಗರವನಿಕ್ಕಲು, ಅದರೊಳರ್ಧ ಆರೋಗಿಸಿ ಉಳಿ ದರ್ಧವನ್ನು ಬಿಜ್ಜಳನ ಬೃಹದರಮನೆಗೆ ಉಗ್ಗಲು ಉರಿಹತ್ತಿ ಭುಗಿಭುಗಿಲೆಂದು ಸುಡುತ್ತಿರಲು ಭೂಪನು ಬೇಡಿಕೊಳ್ಳುವನು. ಅದಕ್ಕೆ ಶಾಂತನಾದ ಶಿವಾ ಚಾರ್ಯನು ಆತನ ಆ ಅಸಹಾಯಕತೆಯನ್ನು ಕಂಡು ತಂಪಿನ ಸೋನೆ ಮಳೆ ಸುರಿಸಿ ಆರಿಸಿದ ಅಗ್ನಿಕಸಿದ್ಧಿ ಅಸಾಧ್ಯವಲ್ಲವೇನು ? ಅಲ್ಲದೆ ಆ ಮಂಗಳವಾಡ ಮಹಾನಗರದ ಪ್ರಜರೆಲ್ಲರನ್ನು ಉಣಿಸಿ ತಣಿಸೆನ್ನಲು, ನನ್ನಿಂದಾಗದೆಂದುನೃಪನು ಹೇಳುವನು; ಆಗ, ಶಿವಾಚಾರ್ಯರು, ಅಂಜುವೆಯೇಕೆ ಎಲೆ ಅರಸ, ಅಯ್ದು ಮಾನ ಅಕ್ಕಿ ಅಯ್ದು ಸೊಲಗೆ ತುಪ್ಪದಿಂದ ನಗರದ ಜನರೆಲ್ಲರನ್ನು ನೋಡು ನೋಡುತ್ತಿದ್ದಂತೆ ಉಣಿಸಿ ತಣಿಸಿಪ್ರಬುದ್ಧ ಪವಾಡವ ಮೆರೆದುದೇನು ಆ ಮಹಾ

ಮಹಿಮನಿಗೆ ಅಸಾಧ್ಯವೆ ? ಕೋಲ್ಹಾಪುರದ ಗೋರಕ್ಷನಾಥನನ್ನು ಅದೇ ಪಾಣಿ ಪಾತ್ರದ ಪವಾಡದಲ್ಲಿ ಗೆದ್ದು ಗೋರಖನಿಗೆ ಶಿವಾಚಾರ ದೀಕ್ಷೆಯನ್ನಿತ್ತುದನ್ನು, ಹಿರಿಯ ಲಕ್ಕಾದೇವಿಯು ಹರಸಿದುದನ್ನು ನಾಡ ಅರಿಯದೇನು ? ಇನ್ನೊಬ್ಬ ಭಕ್ತಿ ಮಾಯಿದೇವಿಯ ಮೊರೆಯ ಕೇಳಿ, ಕುಹಕ ಕಪ್ಪರನ ಮೇಲೆ ಕನಲಿ, ಮಾಸೂರ ಸುರಗಿಯ ತಂದಿತ್ತು ಹನ್ನೆರಡು ಸಾವಿರ ಹದಿಬದೀಯ ಹುಡುಗಿ ಯರ ಬಲಿದಾನದಿಂದ ಬಿಡಿಸಿದ ಮಹಾಕ್ರಾಂತಿ ಮರ್ತ್ಯಕ್ಕೆ ಮತ್ತೊಂದು ಮಹಾ ಅಚ್ಚರಿಯಲ್ಲವೇನು ? ಈ ತರದ ಮಹಿಳಾಕ್ರಾಂತಿ ಇನ್ನಾರಿಂದ ಸಾಧ್ಯ ? ಜಯಂತಿ ನಗರದರಸ ವಿಕ್ರಮಾದಿತ್ಯನಿಗೆ 'ಉಡುವೊಡೆ ದಿವ್ಯವಸ್ತ್ರ, ತೊಡುವೊಡೆ ದಿವ್ಯಾಭರಣ, ಉಣ್ಬೊಡೆ ಅ ಮೃತಾನ್ನ, ಏರುವೊಡೆ ವಾಹನ, ಕೂಡುವೊಡೆ ದೇವಾಂಗನೆ, ಕಾದುವೊಡೆ ನಿಶಿತಾಯುಧವಾಗುವ ಕಠಾರಿ ಯೊಂದನ್ನು ಕರುಣಿಸುವಿಕೆ ರೇವಣಸಿದ್ಧ ಶಿವಾಚಾರ್ಯರದೇ ಆದ ಅಸಾಧಾರಣ ಸಾಮರ್ಥ್ಯವಲ್ಲವೇನು ! ಹೀಗೆ ಒಬ್ಬ ಜಗದ್ಗುರು ಇಂತಹ ಅನೇಕ ಕಾಯಕ ಗಳನ್ನು ಕೈಗೊಂಡು ನಾಡಿನ ಉದ್ಧಾರ ಮಾಡಲು ಅಹರ್ನಿಶಿ ಪ್ರಯತ್ನಿಸಿ ಮಹಿಹ ಮಾಡಿದುದು ಸರ್ವಾದರ್ಶವಾದುದು. ವೀರಶೈವ ಕ್ರಾಂತಿ ಇತಿಹಾಸ ದಲ್ಲಿ ಅನ್ಯಾದೃಶವಾದುದು. ಇದಲ್ಲದೆ ೧೨ಸಾವಿರ ಷಟ್‌ಸ್ಥಲ ಬ್ರಹ್ಮಗಳನ್ನು ತನ್ನ ಮಂಟಪದಲ್ಲಿ ಸಿದ್ಧರನ್ನಾಗಿಸಿ, ಮತ್ತು ಬೇರೆ ೧೨ ಸಾವಿರ ಹಂಚುಕಂಥೆ ಜನ ಜಂಗಮರಿಗೆ ಗುರುಗಳಾಗಿ ಕರುಣಿಸಿದುದು ಕಾರಣಿಕತನವಲ್ಲವೆ ?

ರೇವಣಸಿದ್ಧ ಶಿವಾಚಾರ್ಯರ ನಾಡಸಂಚಾರ ಜನರ ಮೇಲೆ ಹೆಚ್ಚು ಪ್ರಭಾವ ಬೀರಿತು. ೧೧ನೆಯ ಶತಮಾನ ಜಾಗ್ರತಿ ಮತ್ತು ಪ್ರಗತಿಯುಗ ವೆನಿಸುವಷ್ಟು ಬೆಳೆದು ನಿಂತಿತು. ಪ್ರಾಂತ ಪ್ರಾಂತಗಳನ್ನೆಲ್ಲ ಸುತ್ತಿ ಸುಳಿದರು. ಅಲ್ಲಲ್ಲಿನ ರಾಜಪ್ರಜರನ್ನೆಲ್ಲ ಸಂತೈಸಿದರು. ರೇವಣಸಿದ್ಧ ಶಿವಾಚಾರ್ಯರು ರೈತರ ಕೈವಾರಿ, ರಾಜರ ಉದ್ಧಾರಿ, ಶಿವಾಚಾರ್ಯ ಶಿವಾಚಾರಸ್ಥರ ಶಿವಾಚಾರಿಣಿಯರ ರೂವಾರಿ, ಆದರೂ ಸರ್ವಪ್ರೇರಕ ಶಕ್ತಿ ಸಂಧಾರಿ. ಸಾಮಾಜಿಕ ಅಸಮವಾದ ಸಂಹಾರಿ. ಸಣ್ಣದೊಡ್ಡದೆನ್ನದೆ ಜನೋಪಕಾರಕ ವೈವಿದ್ಯ ಕಾಯಕಕಾರಿ. ತಮಗೆ ಕಾಣಿಕೆಯಾಗಿ ಬಂದ ಗುರುದೇವಿಯರನ್ನೂ ಬಿಡದೆ ಕಾಯಕಕ್ಕೆ ಹಚ್ಚಿದ ಆದರ್ಶ ಚಾರಿತ್ರಧಾರಿ. ಕೆರೆ ಕಾಲುವೆಗಳಿಂದ ಆಹಾರ ಸಮೃದ್ಧಿ ಪರಿಣಾಮ ಕಾರಿಯಾದ ಪ್ರಬೋಧದಿಂದ ಆಚಾರ ವಿಚಾರ ಸಮೃದ್ಧಿ, ನೀತಿ ರೀತಿಗಳ ಮೇಲೆ ತಮ್ಮದೇ ಆದ ಬೆಳಕು ಚೆಲ್ಲಿದರು. ಮನೆ ಮನೆಗೂ ಸುಳಿದರು.

ಶ್ರೀಸಾಮಾನ್ಯನ ಮನಃಪರಿವರ್ತನ ಮಾಡಿದರು. ನವಕ್ರಾಂತಿಕಾರಕ ಪರಿವರ್ತನೆಗೆ ಜನ ಸಾಮಾನ್ಯರನ್ನು ಸಿದ್ಧಪಡಿಸಿದರು. ಅಸಮಾನತೆಯನ್ನು ಅಲ್ಲಗಳೆದರು. ಈ ದಿಸೆಯಲ್ಲಿ ಶ್ರೀಮರುಳಸಿದ್ಧ ಶಿವಾಚಾರ್ಯರ ಕ್ರಾಂತಿ ಎದ್ದು ನಿಲ್ಲುವಂತಹದು. ಮತ್ತು ಶ್ರೀ ಚಂದ್ರಗುಂಡಶಿವಾಚಾರ್ಯರು, ದೇವರ ದಾಸಮಯ್ಯ, ಶಂಕರದಾಸಮಯ್ಯ, ರೇವಣಸಿದ್ಧ ಶಿವಾಚಾರ್ಯ ಮರುಳಸಿದ್ಧ ಶಿವಾಚಾರ್ಯ, ನಿರ್ಲಜ್ಜಶಾಂತ ದೇಶಿಕರು, ಶಿವಯೋಗಿ ಶಾಂತಮಯ್ಯ, ಕೊಂಡ ಗುಳಿಕೇಶಿರಾಜ, ಉರಿಲಿಂಗದೇವ, ಕರಿಬಸವೇಂದ್ರಶಿವಾಚಾರ್ಯ ಇವರೇ ಮೊದಲಾದವರು ವಿಖ್ಯಾತಕ್ರಾಂತಿ ಶಿಲ್ಪಿಗಳು. ನಾಡಿನ ಅಂದಿನ ಸರ್ವಾಂಗೀಣ ಉನ್ನತಿಗಾಗಿ, ನಾಡಿಗರೆಲ್ಲರ ಉದ್ಧಾರಕ್ಕಾಗಿ ಪರಿಶ್ರಮಿಸಿ ಪ್ರಬುದ್ಧ ಪ್ರತಿಭಾ ಜ್ಯೋತಿಯಿಂದ ಬೆಳಗಿದ ಶಿವಾಚಾರ್ಯರ ಚಾರಿತ್ರ ಬಗೆಗೆ ಅದೆಷ್ಟು ಉದಾಶೀನ, ಅದೆಷ್ಟು ನಿರ್ಲಕ್ಷ್ಯತನ ? ವೀರಶೈವ ಸಂಸ್ಕೃತಿಗೆ ಶಿವಾಚಾರ್ಯರು ಕೊಟ್ಟ ಕೊಡುಗೆ ಅಸಾಧಾರಣ !

## ೯. ಕರಿನಾಡ

## ಕರಿಬಸವೇಂದ್ರರು ;

### ಕಾರಣಿಕ ಕ್ರಾಂತಿಕಾರರು.

ಶ್ರೀಶೈಲ ಸೂರ್ಯಸಿಂಹಾಸನದ ಜಗದ್ಗುರು ಚಂದ್ರಗುಂಡಶಿವಾಚಾರ್ಯರ ಬಳಿಕ ಅದೇ ಪೀಠದ ಮೇಲೆ ಬಂದ ಮೂವತ್ತು ಜನರಲ್ಲಿ ಕರಿಬಸವೇಂದ್ರರೆಂಬ ಪುಣ್ಯನಾಮವುಳ್ಳವರೇ ಇಪ್ಪತ್ತಯ್ದು ಜನ ಸನ್ನಿಧಿಯವರಿರುವರು. ಇವರು ಗಳು ಪಂಚವಿಂಶತಿ ಲೀಲಾಮೂರ್ತಿಗಳೆಂದೇ ಹೇಳಬೇಕು. ಇವರು ಕನ್ನಡ ನಾಡಿನ ಕಾರಣಿಕ ಕ್ರಾಂತಿಕಾರರು. ಸಾವಿರಾರು ಮಠಮಾನ್ಯಗಳನ್ನು ಮಾಡಿದ ರಾದರೂ ಅವುಗಳಿಗೆ ಅಂಟಿಕೊಂಡವರಲ್ಲ. ಸಾಮಾಜಿಕ ಧರ್ಮಗಳಿಗೆ ಸಾಮಾಜಿಕರ ಕ್ಷೇಮಾಭ್ಯುದಯಗಳಿಗೆ ಮಾತ್ರ ಸೀಮಿತರಾದವರಲ್ಲ ೫-೬ನೆ ಯವರಾದ ವಿರೂಪಾಕ್ಷ ದೇಶಿಕೇಂದ್ರ ಶಿವಾಚಾರ್ಯರು ಮತ್ತು ಚಂದ್ರಗುಂಡಶಿವಾಚಾರ್ಯರು ಇವರಿಬ್ಬರಂತೆ ಹೊಲೆ ಹದಿನೆಂಟು ಜಾತಿಗಳ ಜನರ ಉದ್ಧಾರಕ್ಕಾಗಿ ಮೀಸಲಾದವರು, ನಾಡಿನಾದ್ಯಂತ ಸುತ್ತಿ ಸುಳಿದವರು. ಕರ್ನಾಟಕ ಆಂಧ್ರ

ತಮಿಳು ಮೊದಲಾದ ಪ್ರಾಂತಗಳಲ್ಲಿ ಸಂಚರಿಸಿ ಅಲ್ಲಲ್ಲಿ ಶಾಖೋಪಶಾಖಾ ಮಠಗಳನ್ನು ಸ್ಥಾಪಿಸಿದರು. ಭೂಮಾನ್ಯಗಳನ್ನು ಸಂಪಾದಿಸಿದವರು. ಬಲಿಜ, ಕಾಪು, ಕುರುಬ, ಬೆಸ್ತ, ಈಡಿಗ, ಗಾಣಿಗ, ಶೊಗಟ, ದೇವಾಂಗ, ತಂಬಳ, ಮೇದರ, ಮುಷ್ಟಿ ಮತ್ತು ಮೊಂಡಿವಾಂಡ್ಲು, ಕಾಟಿಪಾಪರು, ಅಗಸರು, ಕ್ಷೌರಿಕರು, ಒಡ್ಡರು, ಎರಿಕೆ-ಯಾನಾದಿಗಳು, ಜೋಗಿ-ಜಂಗಾಲರು, ಅಕ್ಕ ಸಾಲಿಗರು, ದೊಂಬರು, ಜೇನಗಿರಿಯುವರು, ಭೋಗದವರು, ಗಂಧೋಡಿಗರು, ಬಳೆಯುವರು ಉಪ್ಪರರು, ವೀರಮುಷ್ಟಿಯುವರು, ಬುಡಬುಡಿಕರು, ಮಾದಿಗರು, ಡೋಹರರು ಮೊದಲಾದವರನ್ನು ಸಂಸ್ಕಾರಗಳಿಂದ ಎತ್ತಿ ಉದ್ಧರಿಸಿದ ಮಹಾ ಮಹಿಮರು. ಮಿಗಿಲಾಗಿ ಜಗದ್ಗುರು ಚಂದ್ರಗುಂಡಶಿವಾಚಾರ್ಯರು ಚಾರಿತ್ರಿಕ ಮಹಾ ಪುರುಷನೂ ವೀರಶೈವ ಪ್ರವರ್ತಕನೂ ಆದ ವೀರಭದ್ರದೇವನ ಮೂರ್ತಿ ಪ್ರತಿಷ್ಠಾಪನ ಕ್ರಾಂತಿಯನ್ನು ಮುಂದುವರಿಸಿ ನಾಡಿನ ಬಹುಭಾಗಗಳಲ್ಲಿ ವೀರೇಶ ಮೂರ್ತಿಗಳನ್ನು ಪ್ರತಿಷ್ಠಿಸಿರುವರು. ಶ್ರೀಶೈಲ, ಗೂಳೂರು, ನಿಡುಮಾಮಿಡಿ ಹಂಪಿ, ಲೇಪಾಕ್ಷಿ, ರಾಚೋಟಿ, ಕೊತ್ತಚರುವು, ಚಿತ್ತವಾಡಿಗಿ, ಗೊಡಚಿ, ಹೊಸೂರು ಇವು ಮುಖ್ಯವಾದ ಸ್ಥಳಗಳು. ಅಲ್ಲದೆ ಶಾಖಾ ಮಠಗಳಲ್ಲೆಲ್ಲ ಪ್ರತಿಷ್ಠಾಪಿಸಿರುವರು, ಕಾಶ್ಮೀರ ಶಿವದೇವರಸ, ಕಾಶೀರಾಜ, ರಾಜೇಂದ್ರ ಚೋಳ, ಕೃಷ್ಣದೇವರಾಯ, ಅಚ್ಯುತರಾಯ, ಬಲ್ಲಾಳ, ಪಾಂಡ್ಯರಾಜ, ಪವಾಡಭೂಪ, ವಿಜಾಪುರ ನವಾಬು, ಮುಕ್ಕಬಾದುಷಾ, ಆದಿಲ್‌ಷಾ, ನಂದಿ ಭೂಪತಿ, ಗುಮ್ಮಿನಾಯಕ, ಕೋನೇಟಿ, ಭೂಪತಿ, ಕಂಚಿರಾಜ, ಪುಂಗನೂರು ರಾಜ, ಮೈಸೂರು ಕಂಠೀರವ ಒಡೆಯರ್, ಮೈಸೂರು ಮುಮ್ಮಡಿ ಕೃಷ್ಣ ಭೂಪತಿ, ಶ್ರೀರಂಗ ಪಟ್ಟಣ ಹೈದರಲ್ಲೀಖಾನ್, ಕೊಡಗಿನ ವೀರರಾಜ ಮೊದಲಾದ ರಾಜರುಗಳು ಸತ್ಕರಿಸಿ ಗೌರವಿಸಿರುವರು. ನಾಡಿನಾದ್ಯಂತ ಜನಪ್ರಿಯತೆಯನ್ನು ಪಡೆದರು. ಜನರಲ್ಲಿ ಬೆರೆದು ಅವರ ಆಗು ಹೋಗುಗಳನ್ನು ವಿಚಾರಿಸುತ್ತಿದ್ದರು. ಅವರವರ ಹೃದಯೇಂಗಿತಗಳನ್ನು ತಿಳಿದು ಅವರವರ ಕಷ್ಟನಷ್ಟಗಳನ್ನು ಪರಿಹರಿಸುತ್ತಿದ್ದರು. ಆಶೆ ಆಕಾಂಕ್ಷೆಗಳನ್ನು ಈಡೇರಿಸು ತ್ತಿದ್ದರು. ಅನಾಚಾರ ಭ್ರಷ್ಟಾಚಾರಗಳನ್ನು ಬಿಡಿಸುತ್ತಿದ್ದರು. ಬಾಳು ಬದುಕಿನಲ್ಲಿ ಸೋತವರಿಗೆ ಸ್ಥೈರ್ಯ ಧೈರ್ಯಗಳನ್ನು ತುಂಬುತ್ತಿದ್ದರು. ಹಗರಣ ಗಳನ್ನು ಹರಿಸಿ ಹದುಳತೆಯನ್ನುಂಟು ಮಾಡುತ್ತಿದ್ದರು.

ಕಲ್ಯಾಣಕಾರಕ ಕ್ರಿಯಾಶೀಲರನ್ನಾಗಿಸುತ್ತಿದ್ದರು. ಅವರಿವರನ್ನದೆ ಎಲ್ಲರನ್ನೂ ಮಾನವತಾ ದೃಷ್ಟಿಯಿಂದ ಕರುಣಿಸುತ್ತಿದ್ದರು. ಅಲ್ಲಲ್ಲಿ ಶೋಷಣೆ ನಡೆಯುತ್ತಿದ್ದರೆ ಅದನ್ನು ನಿಲ್ಲಿಸುವ ನವಕ್ರಾಂತಿಯನ್ನೆಸಗುತ್ತಿದ್ದರು. ಎಲ್ಲರೂ ದೃಕ್ಕ್ರಿಯಾಶೀಲರಾಗಿದ್ದರು. ತಪೋಬಲವುಳ್ಳವರಾಗಿದ್ದರು.

ಇಪ್ಪತ್ತಯ್ದು ಜನ ಕಂಬಸವೇಂದ್ರರಲ್ಲಿ ನರೇಂದ್ರ, ತೇರದಾಳ,ಕಲ್ಯಾಣ, ಕೂಡಲ ಸಂಗಮ, ನಿಡುಮಾಮಿಡಿ, ಕಂಚಿ, ಗದಗ, ಉಕ್ಕಡಗಾತ್ರಿ, ಭಾವಿಹಳ್ಳಿ, ಬಂಕಾಪುರ,ಪುಲಿಗಿರಿ(ಲಕ್ಷ್ಮೇಶ್ವರ),ಚಿತ್ತವಾಡಿಗಿ ಕಲ್ಮಟ್ಟೇಶ್ವರ, ಕುಷ್ಟಗಿ, ಪುಂಗನೂರು,ಹೊಸಕೆರೆ, ಧರ್ಮವರಂ ಈ ಊರುಗಳಲ್ಲಿ ಐಕ್ಯರಾಗಿ ಗದ್ದುಗೆಗಳಿರುವ ಹದಿನಾಲ್ಕುಜನರು ಪ್ರಮುಖರು ಇವರಲ್ಲಿ ನರೇಂದ್ರ, ತೇರದಾಳ, ಕೂಡಲ ಸಂಗಮ, ಕಲ್ಯಾಣ, ನಿಡುಮಾಮಿಡಿ, ಕಂಚಿ, ಕೊತ್ತ ಚರುವು (ಹೊಸಕೆರೆ) ಈ ಸಪ್ತ ಕರಿಬಸವಶಿವಾಚಾರ್ಯರು ಪರಿಣತರು; ಪ್ರಭಾವಶಾಲಿಗಳು.

ಆಧುನಿಕ ವೀರಶೈವೇತಿಹಾಸದಲ್ಲಿ ಶ್ರೀಶೈಲ ನಿಡುಮಾಮಿಡಿ ಪೀಠದ ಐತಿಹಾಸಿಕ ಚಾರಿತ್ರ ಎಂತವರೂ ಹೆಮ್ಮೆ ಪಡತಕ್ಕಂತಹದಾಗಿದೆ. ಸರ್ವಾದರ್ಶವೂ ಆಗಿದೆ. ಪ್ರಾಚೀನತೆಯಲ್ಲಿ ಸಾಮಾಜಿಕ ವಿಸ್ತರಣೆಯಲ್ಲಿ, ಸಾಂಸ್ಕೃತಿಕ ಪ್ರಸರಣ ಕಾರ್ಯದಲ್ಲಿ, ಸಾಹಿತ್ಯ (ಸೂಳ್ನುಡಿ) ಸೃಜನತೆಯಲ್ಲಿ, ಅನುಭಾವ ಮಂಟಪ ರಚನೆಯಲ್ಲಿ, ಕ್ರಾಂತಿಪಥದಲ್ಲಿ, ಪ್ರಾಂತ ಸಂಚಾರದಲ್ಲಿ, ಲೋಕಕಲ್ಯಾಣ ಪಥದಲ್ಲಿ ತ್ಯಾಗ ಯೋಗ ಪಥದಲ್ಲಿ ಈ ಏಳು ಜನ ಕರಿಬಸವೇಂದ್ರರು ಕಳಾತ್ಮಕ ಕೀರ್ತಿಶಾಲಿಗಳು. ವಿಶಿಷ್ಟಚಾರಿತ್ರ ನಿರ್ಮಾಪಕರು. ಇವರುಗಳಿಗಿರುವ ಶಿಷ್ಯಕೋಟಿ ಅಪಾರ ! ಅನ್ಯಾದೃಶ !!

## ೧. ಕಾರಣಿಕ ಕರಿವೃಷಭೇಂದ್ರ ಶಿವಾಚಾರ್ಯ

ಇವರು ಶ್ರೀಶೈಲ ನಿಡುಮಾಮಿಡಿ ಪೀಠದ ಏಳನೆಯವರು. ಶ್ರೀ ಜಗದ್ಗುರು ಚಂದ್ರಗುಂಡ ಶಿವಾಚಾರ್ಯರ ಕರಕಂಜ ಸಂಜಾತರು; ಉತ್ತರಾಧಿಕಾರಿಗಳು. ಶ್ರೀಶೈಲ ಪೀಠದಲ್ಲಿದ್ದ ಪ್ರಥಮ ಅನುಭವ ಮಂಪಟದಲ್ಲಿದ್ದು ಪ್ರಾನುಭೂತಿಯನ್ನು ಪಡೆದವರು. ಪರಿಣತರು, ವೀರತ್ಯಾಗಿಗಳು. ಇವರು ಉತ್ತರ ಕನ್ನಡಿಗರೆಂದು ತಿಳಿದುಬರುತ್ತದೆ. ೧೧ನೆಯ ಶತಮಾನದ ಉತ್ತರಾರ್ಧ ಇವರ ಕಾಲ. ಕ್ರಿ. ಶ. ೧೦೬೦ ರಿಂದ ೧೨೦೪ ಎಂದಾಗುತ್ತದೆ. ಇವರ ಗುರು

ಗಳು ದಕ್ಷಿಣ ಕನ್ನಡನಾಡಿನಲ್ಲಿ ಸಂಚರಿಸಿವರು. ಇವರಿಗೆ ಉತ್ತರ ಕನ್ನಡ ನಾಡಾದ ವಿಜಾಪುರ ಧಾರವಾಡ ಬೆಳಗಾವಿಗಳ ಭಾಗದಲ್ಲಿ ಸಂಚರಿಸಲು ಸಾಮಾಜಿಕರ ಸಮಸ್ಯೆಗಳನ್ನು ಪರಿಹರಿಸಲು ಜಗದ್ಗುರುಗಳು ಅಪ್ಪಣೆ ಮಾಡಿರುತ್ತಾರೆ. ಅಪ್ಪಣೆಯಂತೆ ಆ ಭಾಗದಲ್ಲಿ ತ್ಯಾಗಜೀವಿಗಳಾಗಿ ಸಂಚರಿಸಿ ವೀರಶೈವ ಧರ್ಮದ ಹಬ್ಬುಗೆಯ ಮಣಿಹವನ್ನು ಮಾಡುತ್ತಾರೆ. ಸತತ ಪ್ರಯತ್ನದಿಂದ ಸಮಾಜ ಜೀವನವನ್ನು ಸಕ್ರಮಗೊಳಿಸುತ್ತಾರೆ. ಪರಮತಾನು ಕರಣಾಚರಣೆಗಳು ಅತಿಯಾಗಿದ್ದವು. ವೀರಶೈವರು ಅವುಗಳಿಗೆ ಆಕರ್ಷಿತರಾಗಿದ್ದರು. ಸ್ವಧರ್ಮಾಭಿಮಾನ ಶೂನ್ಯರಾಗಿದ್ದರು. ಶಿವಾಚಾರ-ವಿಚಾರ ವಿರಹಿತರಾಗಿದ್ದರು. ಅವನ್ನೆಲ್ಲ ಬಿಡಿಸಿ ವೀರಶೈವ ಜೀವಾಳವಾದ ಶಿವಾಚಾರದಲ್ಲಿ ಶ್ರದ್ಧೆ ಹುಟ್ಟುವಂತೆ ಮಾಡುವರು. ಪೀಠದ ಪ್ರಭಾವವನ್ನು ನಾಡಿನಲ್ಲಿ ಹೆಚ್ಚಿಸುವರು.

ಸಾಮಾಜಿಕ ಸಮುತ್ತರಣ ಮಣಿಹದಲ್ಲಿ ಉಳಿದ ವೀರಶೈವ ಧರ್ಮಪೀಠಗಳಿಗಿಂತ ಯಾವ ದೃಷ್ಟಿಯಲ್ಲಿ ಶ್ರೀಶೈಲ ಪೀಠವು ಹಿಂದೆ ಬಿದ್ದಿಲ್ಲ. ಅಷ್ಟು ಮಾತ್ರವಲ್ಲ ಒಂದು ಹೆಜ್ಜೆ ಮುಂದೆ ಇದೆ. ಮನ್ನಣೆಗೆ ಪಾತ್ರವಾಗಿದೆ. ಶ್ರೀಕರಿ ವೃಷಬೇಂದ್ರ ಶಿವಾಚಾರ್ಯರದು ವಿಶಿಷ್ಟಚಾರಿತ್ರ; ವಿಶಿಷ್ಟ ಪ್ರಗತಿ, ಗತಿ ವೀರಪಥದ್ದಾದರೂ ಸ್ಥಿತಿ ಶಾಂತಿಮತದ್ದು. ತಮ್ಮದೇ ಆದ ಸ್ಥಾನಮಾನ ಗಳಿಸಿ ಪೀಠದ ಇತಿಹಾಸದಲ್ಲಿ ಒಂದು ಹೊಸ ತಿರುವನ್ನು ತಂದಿದಾರೆ. ಹೊಸ ಹರವನ್ನೇ ಪ್ರತಿಷ್ಠಾಪಿಸಿದ್ದಾರೆ. ಅವರ ಗುರು ಸಾರ್ವಭೌಮರಾದ ಶ್ರೀ ಜಗದ್ಗುರು ಚಂದ್ರಗುಂಡ ಶಿವಾಚಾರ್ಯರ ನಿರ್ದೇಶನ; ಇವರ ಸತತ ಸಾಧನ ಕ್ಷಾತ್ರಬಲದೊಡನೆ ಹೋರಾಡಿ ಬ್ರಹ್ಮಬಲವನ್ನು ಬೆಳಸಿ ಬೆಳಗಿಸಿದ್ದಾರೆ. ಒಂದೆಡೆಗಿದ್ದು ಸೀಮಿತ ಪ್ರಗತಿ ಸಾಧಿಸುವುದಕ್ಕಿಂತ ನಾಡಿನುದ್ದಕ್ಕೂ ಸಂಚರಿಸಿ ಸ್ವಾತ್ಮ ಪ್ರಭಾವದಿಂದ ಅಸೀಮಿತ ಪ್ರಗತಿ ಸಾಧಿಸುವುದೇ ಅವರ ಧ್ಯೇಯವಾಗಿತ್ತು. ಅದರಂತೆ ನಡೆದು ಆದರ್ಶರಾಗಿರುವರು. ಅವರಲ್ಲಿ ಅಂತಹ ಅಪೂರ್ವ ಆಕರ್ಷಕ ಶಕ್ತಿಯಿದ್ದಿತು. ಅದರಿಂದ ಶ್ರೀಶೈಲ ಪೀಠದ ಎದ್ದು ಕಾಣುವ ವ್ಯಕ್ತಿಗಳಲ್ಲಿ ಅವರೂ ಒಬ್ಬರಾಗಿರುವರು. ಅವರು ಕರ್ತೃತ್ವಶಕ್ತಿ ಕೀರ್ತಿ ತರುವಂತಹದಾಗಿತ್ತು; ತಂದಿದೆ.

ವಿಜಾಪುರ ಜಿಲ್ಲೆಯ ತಡ್ಲಗಿ ಗ್ರಾಮದಲ್ಲಿ ಶಿಷ್ಯರನ್ನು ಸಂಪಾದಿಸಿ ಅಲ್ಲಿ ಒಂದು ಸಂಸ್ಥಾನಕ್ಕೆ ಶಾಖಾಮಠವನ್ನು ರೂಪಿಸಿದ್ದಾರೆ. ಅದಕ್ಕೊಬ್ಬ ಅಧಿಕಾರಿ

ಗಳನ್ನು ಮಾಡಿ, ಆ ಭಾಗದಲ್ಲಿ ತಾವು ಅಲ್ಲಲ್ಲಿ ಆರ್ಜಿಸಿದ ೩೬೦ ಮಠಗಳ ಒಡೆತನವನ್ನು ಅದೇ ತುಡ್ಲಿಗಿ ಶಾಖಾ ಮಠದ ಅಧಿಕಾರಿಗೆ ವಹಿಸಿಕೊಟ್ಟಿದ್ದಾರೆಂದರೆ ಆ ಭಾಗದ ವೀರಶೈವರನ್ನು ಅದೆಷ್ಟು ಸಂಸ್ಕರಿಸಿ ಬೆಳೆಸಿರಬೇಕೆಂಬುದನ್ನು ಊಹಿಸಲೂ ಸಾಧ್ಯವಾಗುತ್ತಿಲ್ಲ, ಅದೇ ವಿಜಾಪುರ ಜಿಲ್ಲೆಯ ಇಂಚಗಿರಿ ಊರಿನಲ್ಲಿ ಒಂದು, ವಿಜಾಪುರ ನಗರದಲ್ಲಿ ಇನ್ನೊಂದು ಶಾಖಾ ಮಠಗಳನ್ನು ಸ್ಥಾಪಿಸಿದ್ದಾರೆ. ವಿಜಾಪುರ ಮಠ ಅದು ರಾಜದತ್ತಿಯದು. ಅಲ್ಲಿನ ರಾಜರಿಗೂ ಸನ್ನಿಧಿಯವರಿಗೂ ಸ್ಪರ್ಧೆ ಏರ್ಪಟ್ಟು ಅದರಲ್ಲಿ ಸನ್ನಿಧಿಯವರು ಜಯಗಳಿಸಿದ ಫಲವಾಗಿ ಆ ನಗರದಲ್ಲಿಯೇ ಒಂದು ಶಾಖಾಮಠವನ್ನು ಕಟ್ಟಿಸಿ ಕೊಟ್ಟಿದ್ದಲ್ಲದೆ ಇಪ್ಪತ್ತು ಹಳ್ಳಿಗಳನ್ನೊಳಗೊಂಡ ಮುಮ್ಮಿಗಟ್ಟಿ ದೇಶಗತಿಯನ್ನು ಕಾಣಿಕೆಯಾಗಿ (ಇನಾಮಾಗಿ) ಹಾಕಿಕೊಡುವನು ವಿಜಾಪುರ ರಾಜನು. ತೆಗೆದುಕೊಳ್ಳುವರು ಗುರುವರ್ಯರು. ತೆಗುದುಕೊಂಡುದನ್ನು ತಮಗಾಗಿ ಇರಿಸಿಕೊಳ್ಳಲಿಲ್ಲ. ಇರಿಸಿಕೊಂಡಿದ್ದರೆ ಅದುವೇ ಆಸೆಯಾಗುತ್ತಿತ್ತು; ಮಮಕಾರವೆನಿಸುತ್ತಿತ್ತು; ಮೋಹವೆನಿಸುತ್ತಿತ್ತು. ಪ್ರವೃತ್ತಿಯೆನಿಸುತ್ತಿತ್ತು. ಹಾಗೆ ಮಾಡದೆ ಪರಿಶೀಲಿಸಿ ನಿರೀಕ್ಷಿಸಿ ಬೇಡದೆ ಬಂದಿದ್ದರೂ ತಮ್ಮ ಲಿಂಗಭೋಗಕ್ಕಾದರೂ ಹೆಚ್ಚಿನದೇಕೆಂದು ಚಿಂತನ ಮಾಡಿ ಸನ್ನಿಧಿಯವರು ತಮಗೇಕೆಂದು ತಿಳಿದು, ಇದನಿರಿಸಿಕೊಂಡರೆ ಇದೊಂದು ದೊಡ್ಡ ವ್ಯವಹಾರ ದೊಡ್ಡ ಸಂಸಾರವಾಗುವುದೆಂದು ಬಗೆದು ತಮ್ಮ ಆನೆ ಕಾವಲು ಮಾಡುತ್ತಿದ್ದ ಬೊಂಮಪ್ಪನಿಗೆ ಕರುಣಿಸುವರು. ಬಳಿಕ ಆತನಿಗೆ ಶಿವದೀಕ್ಷಾನುಗ್ರಹವನ್ನು ಮಾಡಿ ವೀರಶೈವನನ್ನಾಗಿಸಿ ಬೊಂಮಲಿಂಗಪ್ಪ ದೇಸಾಯಿ ಎಂದು ನಾಮಕರಣ ಮಾಡುವರು. ಈ ದೇಶಗತಿಯನ್ನು ಕೇವಲ ವೈಯಕ್ತಿಕವಾಗಿಯಾಗಲಿ ಕೌಟುಂಬಿಕವಾಗಿಯಾಗಲಿ ಉಪಯೋಗಿಸಿಕೊಳ್ಳದೆ ಸಾಮಾಜಿಕರಿಗೆ ಸಾರ್ವಜನಿಕರಿಗೆ ಸಂಸ್ಕೃತಿಗೆ ಧಾರ್ಮಿಕಕ್ಕೆ ಉಪಯೋಗಿಸಿಕೊಳ್ಳಬೇಕೆಂದು ಸೂಕ್ತ ಹಿತೋಪದೇಶ ಮಾಡುವರು. ಇದುವೆ ಕರಿವೃಷಭೇಂದ್ರ ಶಿವಾಚಾಚಾರ್ಯರ ಕಾರಣಿಕತನದ ಕ್ರಾಂತಿ, ಕಾರಣಿಕತನದ ದಾಂತಿ.

ಬೊಂಮಲಿಂಗಪ್ಪ ದೇಸಾಯಿಗೆ ಎಷ್ಟೊ ವಿದ್ಯೆಯಿಲ್ಲದ್ದರಿಂದ ಆತನ ಮಾರ್ಗದರ್ಶನಕ್ಕಾಗಿ ತಾವೂ ತಮ್ಮ ಸಂಸ್ಥಾನ ಪೀಠವನ್ನುಳಿದು ಅಲ್ಲಿಯೇ ದೇಶಗತಿಯ ಪಕ್ಕದಲ್ಲಿಯೇ ಇರುವ ನರೇಂದ್ರ ಊರಿನಲ್ಲಿಯೇ ಇದ್ದು ಬಿಡುವರು. ಇಲ್ಲಿದೆ ಸನ್ನಿಧಿಯವರ ತ್ಯಾಗದ ತೀವ್ರತೆ, ತಾತ್ತ್ವಿಕತೆ ! ತಾವಿತ್ತ ದೇಶಗತಿಯ ದೇಶ (ಪ್ರದೇಶ)ದಲ್ಲಿದ್ದರೆ ದತ್ತಾಪಹರಣವಾಗಿ ಧರ್ಮಕ್ಕೆ ಚ್ಯುತಿ ಬರುವುದೆಂದು

ಭಾವಿಸಿ ಪರಿಪೂರ್ಣ ಪರಿತ್ಯಾಗವನ್ನು ಮಾಡುವರು. ಇದು ಸನ್ನಿಧಿಯವರ ಪೂರ್ಣ ಪರಿಶೀಲನದ ಕಾರಣಿಕ ಕಳಾದೃಷ್ಟಿ ! ಒಂದು ದೃಷ್ಟಿಯಲ್ಲಿ ವಿಶ್ವಜಿತ್ ಯಾಗದೃಷ್ಟಿ ! ವಿಶ್ವಕುಟುಂಬಭಾವ ! ವಿಶ್ವೋದ್ಧರಣ ಭಾವ ! ಒಬ್ಬ ವ್ಯಕ್ತಿಯ ಮುಖದಲ್ಲಿ ಸಾಮಾಜಿಕ ಮನೋಭಾವ ! ತ್ಯಾಗ ಮನೋಭಾವ ! ತಮ್ಮ ಪ್ರಾಮಾಣಿಕತನದ ಪ್ರಾಭವ ಕರ್ತೃತ್ವ ಶಕ್ತಿಯಿಂದ ನರೇಂದ್ರದಲ್ಲಿಯೇ ಒಂದು ಬೃಹನ್ಮಠವನ್ನೂ ಭೂಮಿಯನ್ನೂ ಸಂಪಾದಿಸುವರು. ಬೃಹತ್ತಾಗಿ ಧರ್ಮದಾಸೋಹವನ್ನು ತಮ್ಮ ಮಠದಲ್ಲಿಯೂ ನಡೆಸುವರು. ಶಿಷ್ಯಸಂಪತ್ತನ್ನು ಹೆಚ್ಚಿಸಿಕೊಳ್ಳುವರು. ಇಂದು ಧಾರವಾಡದ ಅಗ್ರಿಕಲ್ಚರ್ (ಭೂವ್ಯವಸಾಯ) ಕಾಲೇಜು (ಅತ್ಯಂತ ಪ್ರೌಢಶಾಲೆ) ಇರುವ ಜಮೀನಿನಲ್ಲಿ ಸುಮಾರು ೩೦-೪೦ ಎಕರೆ ಭೂಮಿ ನರೇಂದ್ರದ ನಮ್ಮ ಶಾಖಾಮಠದ್ದೇ ಆಗಿರುತ್ತದೆ. ಅಂದು ಆ ಭೂಮಿಯಿಂದ ಅನ್ನದಾಸೋಹ ನಡೆಯುತ್ತಿದ್ದರೆ ಇಂದು ಅನ್ನೋತ್ಪಾದನ ಜ್ಞಾನದಾಸೋಹ ನಡೆಯುತ್ತಿದೆ. ಇದಲ್ಲವೇ ಆ ಸನ್ನಿಧಿಯವರ ಸತ್ಯಸಂಕಲ್ಪದ ಸತ್ಯಸಂಕೇತ ! ಅಂತೆಯೇ ಏನೋ ಊರಲ್ಲಿದ್ದ ಮಠ ಗದ್ದುಗೆ ಬಿದ್ದು ಹಾಳಾಗಿದ್ದವು. ಗುರುತು ಸಿಕ್ಕದಂತಾಗಿದ್ದವು. ಸಂಶೋಧಿಸಿ ಗುರುತಿಸಿ ಮರಳಿ ಆ ಕರಿವೃಷಭೇಂದ್ರ ಸನ್ನಿಧಿಯವರ ಗದ್ದುಗೆಯನ್ನು ಜೊತೆಗೆ ಅಧ್ಯಯನ ಪೀಠವೊಂದನ್ನು ಕಟ್ಟಿಸುತ್ತಿರೋಣವಾಗಿದೆ. ಮುಕ್ತಾಯದ ಹಂತದಲ್ಲಿದೆ. ಇದು ಅವರ ಕಾರಣಿಕತನದ ಕ್ರಿಯಾತ್ಮಕ ಪ್ರಭಾವವಲ್ಲವೆ ?

ಶ್ರೀ ಕರಿವೃಷಭೇಂದ್ರ ಶಿವಾಚಾರ್ಯರ ಕಾಲ ಶಾ. ಶ. ೧೧೨೬ ಎಂದು ಸವದತ್ತಿ ತಾಲೂಕಿನ (ತರಂ) ಕಾರಲಕಟ್ಟಿ ಊರಿನ ಹಳವರು ಅಂದರೆ ಹೇಳು ವವರು ಆದ ಎಲ್ಲಪ್ಪನ ತಂದೆ ಹುಚ್ಚೆಲ್ಲಪ್ಪ ಚೆನ್ನಾಬತ್ತಿ ಎಂಬವರ ಹಳೆ ರಿಕಾರ್ಡ್ ಅಂದರೆ ಕಾಗದ ಪತ್ರಗಳಿಂದ ತಿಳಿದು ಬಂದಿದೆ. ಈ ಹಳಬರು ನರೇಂದ್ರ ದೇಸಾಯರ ಮನೆತನಕ್ಕೆ ಮೀಸಲಾದವರು. ಅಂದರೆ ಪೂರ್ವ ಪರಂಪರೆಯಿಂದ ಈ ದೇಸಾಯಿ ಮನೆತನದ (ವಂಶದ) ದಾಖಲೆಯನ್ನಿಟ್ಟುಕೊಂಡು ವರುಷ ಕ್ಕೊಮ್ಮೆ ಮನೆಗೆ ಬಂದು ಹೇಳುತ್ತ ಪ್ರತಿಫಲವನ್ನು ಪಡೆಯುತ್ತ ಬಂದವರು. ಈಗಲೂ ಈ ಕಾಯಕವನ್ನು ಅವರು ಮಾಡುತ್ತಲೇ ಇದ್ದಾರೆ. ಸಂಶೋಧನೆ ಗಾಗಿ ನಾವಲ್ಲಿದ್ದಾಗ ಈ ಹಳಬರು ಅಲ್ಲಿಗೆ ಬಂದು ಹೇಳಿದ್ದನ್ನು ಸಂಗ್ರಹಿಸಿ ಕೊಳ್ಳಲಾಗಿದೆ.

ಕಾರಣಿಕ ಶ್ರೀ ಕರಿವೃಷಭೇಂದ್ರ ಶಿವಾಚಾರ್ಯರು, ತವನಿಧಿಯ ದೇವರ ದಾಸಮಯ್ಯನವರು ಶ್ರೀಶೈಲದ ಅನುಭಾವ ಮಂಟಪದಲ್ಲಿ ಕೂಡಿಕೊಂಡಿದ್ದು ಅಧ್ಯಯನ ಮಾಡಿದ ವಾತ್ಸಲ್ಯಭಾವ ಅಭಿವ್ಯಕ್ತವಾಗಿ ದೇವರ ದಾಸಮಯ್ಯನವರು ತಮ್ಮ ಶಿಷ್ಯರಾದ ಜಯಸಿಂಹ-ಸುಗ್ಗಳೆಯರೊಡನೆ ವಿಚಾರ ವಿನಿಮಯ ಮಾಡಿಕೊಂಡು ಶ್ರೀಕರಿವೃಷಭೇಂದ್ರ ಶಿವಾಚಾರ್ಯರನ್ನು ರಾಜ ವೈಭವದೊಡನೆ ಪೊಟ್ಟಲಕೆರೆ-ಮೂದನೂರುಗಳಿಗೆ ಆಗಮಿಸಿಕೊಳ್ಳುವರು. ಎಲ್ಲಿಲ್ಲದ ಉತ್ಸಾಹ ; ಎಂದಿಲ್ಲದ ಉಲ್ಲಾಸ. ಏರುಗಡೆಯ ಏರ್ಪಾಡು. ಎಲ್ಲರ ಏಳ್ಗೆಗಾಗಿ ಅಲ್ಲಲ್ಲಿ ಸಾಂಸ್ಕೃತಿಕ ಸಮಾರಂಭ : ಸಂಭ್ರಮ. ಉನ್ಮಿಷಿತ ಉಪದೇಶ. ಭಾವ ಪೂರ್ಣ ಆದೇಶ. ಇದರಿಂದ ಸುಗ್ಗಳೆ-ದುಗ್ಗಳೆಯರಿಗೆ ಅತ್ಯಂತ ಆನಂದ. ಅತ್ಯಂತ ಭಕ್ತಿಭಾವ !! ಆತ್ಮೀಯ ಭಾವ !! ಅವರ ಸೇವೆ ಸಾತಿಶಯ. ಇದಕ್ಕೆ ಕಾರಣ ದುಗ್ಗಳೆಗೆ ತನ್ನ ಪತಿದೇವನೊಡನೆ ಶ್ರೀಶೈಲ ಅನುಭವ ಮಂಟಪದಲ್ಲಿ ಓದಿದ ಗುರುದೇವನೆಂಬುದು ; ಸುಗ್ಗಳೆಗೆ ತನ್ನ ಗುರುದೇವ ನೊಡನೆ ಇದ್ದು ಅಧ್ಯಯನ ಮಾಡಿದ ಮಹಾಗುರುದೇವನೆಂಬುದು. ಇಬ್ಬರಿಗೂ ಸಡಗರದ ಮೇಲೆ ಸಡಗರ ! ಪೂಜೆಯ ಮೇಲೆ ಪೂಜೆ ; ಪ್ರವಚನದ ಮೇಲೆ ಪ್ರವಚನ. ಆದರಾಭಿಮಾನ. ಸಾಧ್ಯವಿದ್ದವರನ್ನೆಲ್ಲ ಕರೆತಂದು ಸನ್ನಿಧಿಯವರಿಂದ ಶಿವದೀಕ್ಷೆಯನ್ನು ಕರುಣಿಸುವಂತೆ ಶಿಷ್ಯ ಸಂಪತ್ತು ಹೆಚ್ಚುವಂತೆ ಮಾಡುವಿಕೆ ! ಮಾಡಿದಂತೆ ಹೆಮ್ಮೆ ಹೊಮ್ಮುವಂತೆಸಗುವಿಕೆ ! ಇಷ್ಟಾದ ಬಳಿಕ ಶ್ರೀಗಿರಿಗೆ ಶ್ರೀಗುರುವಿನೊಡನೆ ಯಾತ್ರೆ ಮಾಡಿದಲ್ಲಿ ಮಹಾಫಲ ಪ್ರದವೆಂಬುದನ್ನು ಆಲಿಸಿದಂತೆ ಗುರುಸ್ಥಲ ಯಾತ್ರೆಗೆ ಅನುವಾದರು. ಜಯಸಿಂಹ ರಾಜನು ವಾಹನಗಳನ್ನು ಸಜ್ಜುಗೊಳಿಸಲು ಮಂತ್ರಿಗೆ ಆದೇಶ ಮಾಡುವನು. ಅರಮನೆ ಗುರುಮನೆ ವಾಹನಗಳು ಸಜ್ಜಾಗುವವು. ಎಲ್ಲರೂ ಹೊರಡುವರು -ಜಯಕಾರದೊಡನೆ ! ಗುರುವಿನೊಡನೆ ಗುರುಸ್ಥಲಕ್ಕೆ ಪ್ರಯಾಣ ! ಶ್ರೀಗಿರಿಯ ಸೇರಲು ಹಲವಾರು ದಿವಸಗಳಾದವು. ತಂಗುತ್ತಿರುವಲ್ಲೆಲ್ಲ ಪೂಜೆ ಪ್ರವಚನಗಳು. ಪ್ರವಚನಗಳಲ್ಲಿ ಬರೆದ ದೇವರ ದಾಸಮಯ್ಯನವರ ಸೊಳ್ನುಡಿಗಳಿವು;

"ಗುರು ಕರುಣಿಸಲು, ಸಂಸಾರ ವಿಷಯ ಕೆಟ್ಟಿತ್ತು ;
ಮಾಯಾ ಪ್ರಪಂಚು ಬಿಟ್ಟಿತ್ತು ; ಹುಟ್ಟರಿತು ಹೋಯಿತ್ತು.
ನೆಟ್ಟಗೆ ಗುರುಪಾದವ ಮುಟ್ಟಿ ಭವಗೆಟ್ಟೆನು ಕಾಣಾ ರಾಮನಾಥಾ ।

ಉರಿವ ಕೆಂಡದ ಮೇಲೆ ತೃಣವ ತಂದಿರಿಸಿದರೆ
ಆ ತೃಣವನಾ ಕೆಂಡ ನುಂಗಿದಂತೆ. ಗುರು ಚರಣದ ಮೇಲೆ
ತನುವೆಂಬ ತೃಣವ ತಂದಿರಿಸಿದರೆ,
ಆತನ ಸರ್ವಾಂಗವೆಲ್ಲ ಲಿಂಗ ಕಾಣಾ ರಾಮನಾಥಾ ।

ಘಟಗಳೊಳಗೆ ತೋರುವ ಸೂರ್ಯನಂತೆ
ಸರ್ವರಲಿ ಶಿವನ ಚೈತನ್ಯವಿಪ್ಪುದು. ಇದ್ದರೇನು ?
ಸರ್ವರಿಗೆ ಸಾಧ್ಯವಲ್ಲ. ಮುಟ್ಟ ಮುಟ್ಟದು, ಅದಕೂಡುವರೆ,
ಗುರುವಿನಿಂದಲ್ಲದಾಗದು ಕಾಣಾ ರಾಮನಾಥಾ ।

ತೊಟ್ಟ ಬಟ್ಟೆಯ ಕೊಳೆ ಕಳೆಯುಲು ನೀರು ಹೇಗೆ ಅನಿವಾರ್ಯವೋ ಈ ಸಂಸಾರ ವಿಷಯ ದೋಷವನ್ನು ವಿಸರ್ಜನಗೊಳಿಸಲು ಗುರು ಕರುಣರಸ ಹಾಗೆ ಅನಿವಾರ್ಯ. ಮಾಯಾ ಪ್ರಪಂಚ ವಿಶ್ವ ವಿಸ್ತಾರ ! ಅದು ಬಗೆ ಬಗೆಯಲ್ಲಿ ಜೀವಾತ್ಮನನ್ನು ಬಂಧಿಸಿರುತ್ತದೆ. ಅದೆಲ್ಲವೂ ಗುರು ಕರುಣದಿಂದಲೇ ಬಿಟ್ಟೋಡುತ್ತದೆ. ಹುಟ್ಟು ಬಿತ್ತು ಹುರುಪಳಿಸಿ ಹೋಗುತ್ತದೆ. ಸರಳ ಹೃದಯದಿಂದ ನಿಡಿದಾಗಿ ಗಟ್ಟಿಯಾಗಿ ಗುರುಚರಣವ ಮನಮುಟ್ಟಿ ಭಜಿಸಲು ಭವಗೆಟ್ಟು ಹೋಗುವುದು.

ಗುರು ಹೃದಯ ರಸವಾದರೆ, ಗುರುಜ್ಞಾನ ತೇಜಸ್ಸು. ಗುರು ಚರಣ ದಲ್ಲಿ ಚಿತ್ಕಳೆ ಚಿಮ್ಮುತ್ತಿರುತ್ತದೆ. ಅದರ ಮೇಲೆ ಶಿಷ್ಯನು ತನುವೆಂಬ ತೃಣವ ತಂದೆರಿಸಿದರೆ ಚಿತ್ಕಳಾತ್ಮಕ ಲಿಂಗವೇ ಆಗುತ್ತದೆ-ಕೆಂಡದ ಮೇಲೆ ಹುಲ್ಲು ಕಡ್ಡಿಯನಿರಿಸಿದರೆ ಆ ಕಡ್ಡಿ ಕೆಂಡವೆ ಆಗುವಂತೆ !

ನೂರಾರು ಮಣ್ಣಿನ ಕೊಡಗಳೊಳಗೆ ನೇಸರನು ತೋರುತ್ತಾನೆ. ಆದರೆ ಮಣ್ಣೊಡಲ ನೇಸರನು ಸಿಕ್ಕನು. ಸರ್ವರ ಶರೀರಗಳೊಳಗೆ ಶಿವನ ಚೈತನ್ಯವೇನೋ ಇರುತ್ತದೆ. ಆದರೆ ಅದು ಎಲ್ಲರಿಗೆ ಶರೀರ ಹೋಗಿ ಅಂಗ

ವಾಗದಿದ್ದರೆ ಸಾಧ್ಯವಾಗದು. ಅದು ಹೊದ್ದಿಯೂ ಹೊದ್ದದಂತಿರುತ್ತದೆ. ಅದು ಸಾಕ್ಷಾತ್ಕಾರವಾಗಬೇಕಾದರೆ ಗುರು ಕಾರಣ್ಯ ಬೇಕೇ ಬೇಕು. ಗುರು ಕಾರಣ್ಯದಿಂದ ಜಡತನು ಅಜಡ ಅಂಗವಾಗುತ್ತದೆ. ಆತ್ಮನ ಜೀವಭಾವ ಹೋಗಿ ಜ್ಯೋತಿರ್ಮಯ ಲಿಂಗಭಾವ ಸಂಗಡಿಸುತ್ತದೆ. ಕರಸ್ಥಲದ ಕುರುಹಾಗಿ ಕಾಣಿಸಿಕೊಳ್ಳುತ್ತದೆ. ಅಂದರೆ ಸಾಕ್ಷಾತ್ಕಾರವಾಗುತ್ತದೆ. ಅರ್ಚನ ಅರ್ಪಣ ಅನುಭವಗಳಿಗೆ ಸಾಧನವಾಗುತ್ತದೆ.

"ಸತಿಯುರ ಸಂಗವನು. ಅತಿಶಯದ ಗ್ರಾಸವನು.
ಪೃಥ್ವಿಗೀಶ್ವರನ ಪೂಜೆಯನ್ನು-ಅರಿವುಳ್ಳಡೆ
ಹೆರರ ಕೈಯಿಂದ ಮಾಡಿಸುವರೆ ರಾಮನಾಥ ?
ವಿಷಯದ ಪಿತ್ತ ತಲೆಗೇರಿದಲ್ಲಿ ವಿವೇಕವೆಂಬ ದೃಷ್ಟಿ
ನಷ್ಟವಾಗಿ. ಪಶುಪತಿಯ ನೆನಹು ಕೆಟ್ಟು ಮತಿಮಂದವಾದಲ್ಲಿ
ಮಂತ್ರದ ನೆನಹುಂಟೆ ಹೇಳಾ ರಾಮನಾಥಾ ?

ಲಿಂಗ ಪೂಜಾ ಸ್ವಾತಂತ್ರ್ಯವನ್ನು ವಿಶುದ್ಧಿಯಾಗಿ ಲಿಂಗಪೂಜೆ ಮಾಡುವುದನ್ನು ಈ ಎರಡು ಸೂಳ್ನುಡಿಗಳಲ್ಲಿ ಸಾರಲಾಗಿದೆ. ವಿಷಯದಾಸೆ ಹೃದಯವನ್ನು ಹಸಗೆಡಿಸುತ್ತದೆ ; ವೈಚಾರಿಕ ದೃಷ್ಟಿಯಿಲ್ಲದಾಗುತ್ತದೆ. ಪಶು ಸಹಜ ಭಾವದ ಜೀವನ ಸ್ಥಿತಿಯುಂಟಾಗುತ್ತದೆ. ಪಶುತ್ವವನ್ನು ಪರಿಹರಿಸುವ ಪತಿಯ (ರುದ್ರದೇವನ) ನೆನಹು ನಿಂತು ಹೋಗುತ್ತದೆ. ಮಂತ್ರಮೂರ್ತಿಯ ನೆನಹಿಲ್ಲದ ಬಳಿಕ ಮಂತ್ರದ ನೆನಹಿನ್ನೆಲ್ಲಿ ? ಎಂದು ಮುಂತಾಗಿ ಹಲವು ಹತ್ತು ವಿಚಾರ ಪ್ರಚಾರವನ್ನು ಪ್ರವಚನಗಳ ಮುಖಾಂತರ ದಾರಿಯುದ್ದಕ್ಕೂ ಅಲ್ಲಲ್ಲಿ ನೆರವೇರಿಸುತ್ತ ಶ್ರೀಗಿರಿಯ ಸೇರುವರು. ಶ್ರೀ ಗಿರಿಯನೇರಿದುದೇ ಒಂದು ಸೊಗಸು. ಬಾನೆತ್ತರಕ್ಕೆ ಬೆಳೆದು ನಿಂತ ಹೆಮ್ಮರಗಳ ಹೆಂಪು, ಹಚ್ಚ ಹಸುರ್ಮರಿದ ಕಾರಣ ಹಸುರುಡಿಗೆ ಉಟ್ಟು ಚಲುವಾಂತು ನಿಂತ ಪ್ರಕೃತಿ ದೇವಿಯ ಪೆಂಪು. ತರುಲತೆಗಳ ತಲೆಯ ಮೇಲೆ ಅರಳಿದ ತರತರದ ಹೂಗಳ ಕಂಪು. ಸಾಕ್ಷಾತ್ ಪ್ರಕೃತಿ ದೇವಿಯೇ ಪೋಣಿಸಿ ಹಾರ ಮಾಡಿ ಮುಡಿಯಲ್ಲಿ ಸೂಡಿದ ಸೊಂಪು. ಮುಂತಾದ ಪ್ರಕೃತಿಯ ಸೊಗಸಿನ ಸುಗ್ಗಿಯನ್ನು ಅನುಭವಿಸುವ ದುಗ್ಗಳೆ-ಸುಗ್ಗಳೆಯರ ಸಡಗರವೇ ಸಡಗರ. ವನ್ಯ ಮೃಗಗಳ ಹರಿದಾಟ ಹೋರಾಟ ಚಿನ್ನಾಟ ಚಲ್ಲಾಟಗಳನ್ನು ಕಣ್ಣಾರೆ ಕಾಣುವುದೇ

ಒಂದು ಕಣ್ಣಿಗೆ ಹಬ್ಬ ! ಶ್ರೀ ಜಗದ್ಗುರು ಕರಿವೃಷಭೇಂದ್ರ ಶಿವಾಚಾರ್ಯರಿಗೆ ಮತ್ತು ತವನಿಧಿಯ ದೇವರ ದಾಸಮಾರ್ಯರಿಗೆ ಅಲ್ಲಿದ್ದು ಹೋದವರಾದ್ದರಿಂದ ಅಷ್ಟೊಂದು ಅಚ್ಚರಿಯೆನಿಸಿರಲಿಕ್ಕಿಲ್ಲ. ಆದರೆ ಇದೇ ಹೊಚ್ಚ ಹೊಸದಾಗಿ ಬಂದ ಜಯಸಿಂಹರಾಜನಿಗೆ ಮತ್ತು ಆತನ ಪರಿವಾರದವರಿಗೆ ಅಚ್ಚರಿಯ ಮೇಲೆ ಅಚ್ಚರಿ. ಓ. ಓs ; ಇಲ್ಲಿ ಶ್ರೀಶೈಲದಲ್ಲಿರುವ ಸೂರ್ಯ ಸಿಂಹಾಸನಾಧೀಶ್ವರನಾದ ಜಗದ್ಗುರು ಚಂದ್ರಗುಂಡ ಶಿವಾಚಾರ್ಯರ ಅಪ್ರತಿಮ ಪ್ರಭಾವವೇ ಇದಕ್ಕೆಲ್ಲ ಕಾರಣವಿರಬೇಕು – ಎಂದಂದುಕೊಳ್ಳುವಷ್ಟರಲ್ಲಿ ಶ್ರೀಶೈಲ ಸೂರ್ಯ ಸಿಂಹಾಸನ ಪೀಠವೇ ಕಾಣ ಬರುವುದು. ನೋಡಿ ಎಲ್ಲರಿಗೂ ಎಲ್ಲಿಲ್ಲದ ಉತ್ಸಾಹ ಉಲ್ಲಾಸಗಳು ಉಕ್ಕಿ ಬರುವವು. ವೇಗ ವೇಗದಲ್ಲಿ ಮುನ್ನಡೆದು ಮಠಕ್ಕೆ ಬಂದು ಮುಟ್ಟುವರು. ಜಗದ್ಗುರುಗಳ ಜ್ಯೋತಿರ್ಮಯ ದಿವ್ಯ ದರ್ಶನ ಪಡೆವರು : ತಮ್ಮ ಉತ್ತರಾಧಿಕಾರಿ ಕರಿವೃಷಭೇಂದ್ರ ಶಿವಾಚಾರ್ಯರು, ಪ್ರೌಢ ಶಿಷ್ಯ ದೇವರ ದಾಸಮಯ್ಯನವರು, ಪ್ರಶಿಷ್ಯರು ಜಯಸಿಂಹರಾಜ ಮತ್ತು ದುಗ್ಗಳೆ–ಸುಗ್ಗಳೆಯರು ಹಾಗೂ ಪರಿವಾರದವರು ತಮ್ಮ ಸನ್ನಿಧಿಗೆ ಬಂದುದನ್ನು ಕಂಡು ಕಡು ಸಂತೋಷಿಸುವರು. ಚೆನ್ನಿರುವಿರಾ ? ಏನು ಬಂದಿರಿ ? ಎಂದು ಅಪ್ಪಣೆಯನೀಯುವರು. ಅದಕ್ಕೆ ದೇವರ ದಾಸಿಮಯ್ಯ ನವರು,

> "ದರುಶನ ತಪ್ಪುಕ ಪ್ರಥಮ ಪಾತಕಿ ಸ್ಪರ್ಶನ ತಪ್ಪುಕ ದ್ವಿತೀಯ ಪಾತಕಿ ;
> ಗುರು ತಪ್ಪುಕ ತೃತೀಯ ಪಾತಕೆ........ರಾಮನಾಥ !"
>
> "ಕುಲಸ್ವಾಮಿ ನಿಮ್ಮುವನರಿದಾತನ ಕಂಡಹೆ
> ತಲೆವಾಗುವೆ–ಕಾತೆ ಕಳವೆಯಂತೆ !
> ಕುಲಜ ನಾನೆಂದು (ನಿಮಗೆ) ತಲೆವಾಗದಿದ್ದಡೆ
> ತಲೆಶೂಲದ ತಲೆಯಯ್ಯ ರಾಮನಾಥ !"

ಈ ಸೊಳ್ನುಡಿಗಳು ದಾಸಮಯ್ಯನಲ್ಲಿ ತನ್ನ ಗುರುವರ್ಯರಲ್ಲಿರುವ ಗಾಢ ಭಕ್ತಿಯನ್ನು ಪ್ರದರ್ಶಿಸುತ್ತದೆ. ವಿಶಾಲ ಹೃದಯರೂ ಮಾನವ ಮೌಲ್ಯವನ್ನರಿತು ಎಲ್ಲ ಮಾನವರನ್ನು ಸಂಸ್ಕರಿಸಿ ಉದ್ಧರಿಸಿದವರೂ ಆದ ಶ್ರೀ ಚಂದ್ರಗುಂಡ ಶಿವಾಚಾರ್ಯರ ಘನ ವ್ಯಕ್ತಿತ್ವಕ್ಕೆ ತಲೆಬಾಗದವರಾರು? ದರ್ಶನ ಸ್ಪರ್ಶನಾದಿಗಳಿಗೆ

ವಂಚಿತರಾಗುವವರಾರು ? ಕುಲಸ್ವಾಮಿ ಪದ ಗಮನಾರ್ಹ ! (ದೇವಾಂಗ) ಕುಲಸ್ವಾಮಿ ಚಂದ್ರಗುಂಡ ಶಿವಾಚಾರ್ಯರಲ್ಲದೆ ಇನ್ನಾರಿಲ್ಲ. 'ಜಾಡ ಕುಲ ತಿಲಕ'ನಾದುದು, ಮತ್ತು ಧರೆ ಕೊಂಡಾಡುವ ದಾಸಮಯ್ಯನಾದುದು ಅಪ್ರತಿಮ ಪ್ರಭಾವಶಾಲಿಯಾದ ನಿಮ್ಮ ವರ್ಗದ ಉದ್ಧಾರಕರಾದ ' ಶ್ರೀ ಚಂದ್ರಗುಂಡ ಶಿವಾಚಾರ್ಯರಿಂದ ! ಕಾರಣ ತನ್ನ ಆತ್ಮ ಗುರು ದೇವನಲ್ಲಿ ಅಷ್ಟೊಂದು ಭಕ್ತಿ ; ಅಷ್ಟೊಂದು ಹೃದಯಾಸಕ್ತಿ. ಹದಿನೆಂಟು ಕುಲಕ್ಕೆಲ್ಲ ಕರುಣಿಸಿ ಕಾಪಿಟ್ಟ ಕಳಾಗುರುವ ನಿಮ್ಮ ಶ್ರೀಚರಣಕ್ಕೆ ಶಿರಬಾಗುವೆ । ಎಂದೆನ್ನು ತ್ತಾನೆ ದಾಸಮಯ್ಯ. ಇನ್ನೂ ಬೆಳ್ಳಂಬೆಳಗು ಓ ದಾಸಮಯ್ಯನೆ ಎಂದು ಹರ ಸುತ್ತಾರೆ ಗುರುದೇವರು.

ಇನ್ನು ನೂತನವಾಗಿ ವೀರಶೈವನಾದ 'ಜಗದೇಕ ಮಲ್ಲ' ಜಯಸಿಂಹ ಮಹಾರಾಜನು ಎದ್ದು ನಿಂತು, ಮುಪ್ಪಾದರೂ ಮೂವತ್ತು ವರುಷದ ಒಪ್ಪುಳ್ಳ, ಮುಪ್ಪಿನ ವಿಕಾರಗಳೇನೂ ಇಲ್ಲದ, ರುದ್ರಭದ್ರರು ಒಂದಾಗಿ ಬಂದ ತಿರುವ. ದೇಶಕ್ಕೆಲ್ಲ ಹೆಸರಾದ ದಾಸಮಾರ್ಯ ಗುರುವರ್ಯರಂತವರನ್ನು ಕರುಣಿಸಿ ಕಾರರಣಿಕರಾದ ಓ ಗುರುವಿನ ಗುರುವೆ ಮಹಾಗುರುವೆ ಕಲ್ಪತರುವೆ ತಮ್ಮ ತಳಿರುಡಿಗೆ ತಲೆವಾಗುವೆನು ಎಂದು ತುಳಿಲ್ಗೈವನು. ಏಳು ಮಹಾರಾಜಾ, ನೀನು ಚನ್ನಿಗ, ಚನ್ನತನವ ಮಾಡಿರುವೆ, ತನ್ನತನಕೆ ಅಂಟಿಕೊಂಡು ಭೌತಿಕ ರಾಜ್ಯದೊಡನೆ ಆತ್ಮಿಕ ರಾಜ್ಯದೊಡೆಯನಾಗುವ ಯೋಗ ನಮ್ಮ ಶಿಷ್ಯಾ ಗ್ರಣಿಯಿಂದೊದಗಿಸಿಕೊಂಡ ಜಾಣರ ಜಾಣನಾದ ನಿನಗೆ ಚಿರಾಯುವಾಗಲಿ ಎಂದು ಹರಸೋಣವಾಗಿದೆ.

ಮೂರನೆಯದಾಗಿ ದಾಸೋಹ ಶೀಲೆ ದುಗ್ಗಳೆ ಎದ್ದು, ಸ್ತ್ರೀಜನೋದ್ಧಾರ ಕರೆ, ಸತಿಪತಿ ಸಮ ಜೀವನ ದರ್ಶನವನ್ನು ಪ್ರಥಮದಲ್ಲಿ ಪ್ರತಿಬೋಧಿಸಿದ ಪ್ರತಿಭಾಶಾಲಿಗಳೆ, ನಿಮ್ಮ ಪಾದ ಪಂಕಜಗಳಿಗೆ ಪೊಡಮಡುವೆ ಗುರುವೆ ?

ಓ ದಾನ ಧರ್ಮ ಧುರೀಣೆ, ನಮ್ಮ ಆದೇಶದಂತೆ ನೀವಿಬ್ಬರೂ ಒಂದಾಗಿ ಕಾಯಕ ಮಾಡಿ ತಪನಿಧಿಯ ಪಡೆದು, ಸಮಾಜ ಸೇವೆಗೆ ಸಲ್ಲಿಸುತ್ತಿರುವವಳೆ, ಸಂಸ್ಕೃತಿಯ ಸಂವರ್ಧಿಸುತ್ತಿರುವವಳೆ ನಿನಗೆ ಶುಭಾಶೀರ್ವಾದಗಳು, ಸನಾತನ ಶಿವಾಚಾರಿಣಿಯರಂತೆ ಸತ್ಕೀರ್ತಿ ಶಾಲಿನಿಯಾಗು ।

ನಾಲ್ಕನೆಯದಾಗಿ, ವಿಶ್ವವಿಶಾಲವಾದ ವೀರಶೈವಧರ್ಮಕ್ಕೊಲಿದು ದಾಸಮಯ್ಯಗಳಿಂದ ದೀಕ್ಷೆಪಡೆದ ಸುಶೀಲೆ ಸುಗ್ಗಳೆಯು ಎದ್ದು ನಿಂತು, ನನ್ನ ಗುರುವಿನ ಗುರುವೆ ಘನಕ್ಕೆ ಘನರಾದ ಮಹಾಗುರುವೆ ಕಲ್ಪತರುವೆ, ನಿಮ್ಮ ಚಿಂತಾಮಣಿಯಂತಿರುವ ಚರಣಗಳಿಗೆ ಶರಣು ಶರಣಾರ್ಥಿ !

ಓ ಸರ್ವಾದರ್ಶ ಜೀವಿಯೆ, ವಿಶಿಷ್ಟ ವೀರಶೈವಧರ್ಮಕ್ಕೆ ವಿಶಾಲ ಶಿವಾದ್ವೈತ ಸಿದ್ಧಾಂತಕ್ಕೆ, ವಿಶ್ವವಿಕಾಸ ಲಿಂಗವಂತಿಕೆಗೆ, ಶಿವಾಗಮಾನುಭವಸಂಪನ್ನ ಸೂಳ್ನುಡಿಗಳಿಗೆ ಮನ ಮಾರುಹೋಗಿ, ನಿಷ್ಠೆಗಟ್ಟಿಗೊಂಡು. ದುರ್ಧರವೂ ದುರ್ದಮ್ಯವೂ ಆದ ಸ್ಪರ್ಧಾತ್ಮಕ ಪರೀಕ್ಷೆಗೆ ಜಗ್ಗದೆ ಕುಗ್ಗದೆ ಗುರುಬಲದಿಂದ ಸರ್ವತೋಮುಖವಾದ ಪರಮಾರ್ಥ–ಪರಮಾನುಭೂತಿ–ದೀಪ್ತ ದೃಕ್ಕ್ರಿಯಾ ಸಾರಾಯಸಂಪತ್ತಿ ಮತ್ತು ಪ್ರಪತ್ತಿ ಇವುಗಳುಳ್ಳ ದೇವರದಾಸಯ್ಯನವರ ಕರಕಂಜಾತೆಯಾಗಿ ರಾಜ ಪ್ರಜರನ್ನೆಲ್ಲ ವೀರಶೈವದೀಕ್ಷೆಗೆ ಒಳಗಾಗಿಸಿದ ಓ ಸುಗ್ಗಳೆ, ನಿನ್ನ ಈ ಮಹಾಮಣಿಹ ಸರ್ವಾದರ್ಶವಾದುದು ; ಕ್ರಾಂತಿಕಾರಕ ವಾದುದು ; ಅಚ್ಚಳಿಯದ ಸಚ್ಚಾರಿತ್ರವುಳ್ಳದು. ಅಗ್ಗಳಿಕೆಯುಳ್ಳದು. ನಮ್ಮ ಪ್ರಶಿಷ್ಯೆಯಾಗಿ ಪ್ರಖ್ಯಾತಳಾಗಿರುವೆ-ಪತಿ ಜಯಸಿಂಹರಾಜನೊಡನೆ ! ಇಪ್ಪತ್ತುಸಾವಿರ ಜೈನರು ವೀರಶೈವರಾಗಿರುವ ಜೊತೆಗೆ ಏಳುನೂರು ಬಸದಿ ಗಳು ವೀರಶೈವ ಮಠಗಳಾಗಿ ಪರಿವರ್ತನಗೊಂಡುದು ನಮ್ಮೀ ಶ್ರೀಶೈಲ ಅನುಭವ ಮಂಟಪಕ್ಕೆ ಅಪೂರ್ವವೂ ಅಪಾರವೂ ಆದ ಯಶಸ್ಸು ತೇಜಸ್ಸುಗಳನ್ನು ತಂದಿದೆ ; ತರುತ್ತದೆ. ನಿನ್ನ ದಿಟ್ಟತನದ ವೀರಶೈವಧರ್ಮನಿಷ್ಠೆ ದಿಟಕ್ಕೂ ಮೆಚ್ಚತಕ್ಕುದು. ನೀನು ಶಿವಾಚಾರಿಣಿಯರಲ್ಲಿ ಅನನ್ಯ ಅಗ್ರಣಿ ; ಅಣಿಯರದ ದರ್ಶಿನಿ. ಪರಾಶಕ್ತಿ ಸ್ವರೂಪಿಣಿ. ಶಿವಾಚಾರ ಸಂಧಾರಿಣಿ ಶಿವಭವಾನಿ ಶ್ರೀಶೈಲ ಸೂರ್ಯ ಪೀಠದ ಶಿಷ್ಯೋತ್ತಮಾಗ್ರಣಿ ನೀಧನ್ಯೆ, ನೀಧನ್ಯೆ ; ಸರ್ವಮಾನ್ಯೆ, ಮಲ್ಲಿಕಾರ್ಜುನ ಮಲ್ಲಯ್ಯನ ಚೆನ್ನಕನ್ನೆ—ಠನ್ನೆ ! ನೀನು ನಿಜಕ್ಕೂ ವಿಶ್ವಾಧಿಕ (ಪ) ರುದ್ರಕನ್ನೆ ! ನೀನು ನಿಡುಗಾಲ ಬಾಳುವೆ ಬೆಳಗುವೆ ಹೊಯ್‌ಕೆಯ್ ಇಲ್ಲದೆ ಇಹ ಪರಗಳಲ್ಲಿ ! ಅದೋಹೊತ್ತಾಯ್ತು ; ಪ್ರಸಾದಕ್ಕೆ ನೀವೆಲ್ಲ ಅಣಿಯಾಗಿರಿ ಎಂದು ಹರಸುವರು. ಪರಮಪ್ರಸಾದದಿಂದ ಪರಿತೃಪ್ತಿಯನ್ನು ಪರಿಸ್ಫೂರ್ತಿಯನ್ನು ಪಡೆದು ಕಾಯವಾಙ್ಮನಗಳಿಂದ ಪಲವಾರುದಿನ ಪರಿಸೇವಿಸುವರು.

ಬಳಿಕ ಕರಿವೃಷಭೇಂದ್ರಶಿವಾಚಾರ್ಯರು ತಮ್ಮೊಡನೆ ಬಂದ ಎಲ್ಲರನ್ನು ಧಾರಪಾಡದ ಬಳಿ ನರೇಂದ್ರದಲ್ಲಿರುವ ತಮ್ಮ ಬೃಹತ್ ಸಂಸ್ಥಾನ ಮಠಕ್ಕೆ ಕರೆತರುವರು. ಅಲ್ಲಿ ಕೆಲದಿನ ಶಿವಾನುಭಾವಗೋಷ್ಠಿಯೊಡನಿದ್ದು ಬಳಿಕ ತಮ್ಮ ಪೊಟ್ಟಲಕೆರೆಗೆ ಬರುವರು.

ಕರಿವೃಷಭೇಂದ್ರ ಶಿವಾಚಾರ್ಯರ ತರುವಾಯ ಪೀಠಾಧಿಕಾರಕ್ಕೆ ಬಂದವರು ಕರಿಬಸವೇಂದ್ರರು. ಇವರು ಕ್ರಿ.ಶ. ೧೨ನೆಯ ಶತಮಾನದ ಶಿವಶರಣರ ಸಮಕಾಲೀನರು, ಅನೇಕ ಪ್ರಮುಖ ಶಿವಶರಣರಿಗೆಲ್ಲ ಶಿವದೀಕ್ಷೆ ಕರುಣಿಸಿದವರು. ಇವರಲ್ಲಿ ಮಡಿವಾಳ ಮಾಚಿತಂದೆ, ಹಡಪದಪ್ಪಣ್ಣ, ಕುಂಬಾರ ಗುಂಡಣ್ಣ, ಮೊದಲಾದವರು ಶೀರಪ್ರಮುಖರು. ಇವರು ಕಲ್ಯಾಣದ ಕ್ರಾಂತಿಗೆ ಪ್ರಾಣದಂತಿರುವರು ; ಪ್ರಭಾವಶಾಲಿಗಳಾಗಿರುವರು. ಭಕ್ತಿಭಂಡಾರಿ ಬಸವಣ್ಣ, ಶಿವಾಚಾರ್ಯ ಚನ್ನಬಸವಣ್ಣ, ಜಂಗಮಪುಂಗವ ಅಲ್ಲಮಪ್ರಭು ಮೊದಲಾದವರಿಗೆಲ್ಲ ಚೈತನ್ಯಪ್ರಾಯವಾಗಿದ್ದರು. ಪ್ರಧಾನವಾದವುಗಳು ಇವರ ಪಾತ್ರಗಳು. ಕರಿಬಸವೇಂದ್ರ ಶಿವಾಚಾರ್ಯರು ಪ್ರಭುದೇವರೊಡನಿದ್ದು ತೇರದಾಳದಲ್ಲಿ ಪ್ರಭುದೇವರ ಗದ್ದುಗೆಯ ಪಕ್ಕದಲ್ಲಿ ಗದ್ದುಗೆಯಾಗಿದೆ. ಪ್ರಭುದೇವರ ಅನುಮತಿಯಂತೆ ಇವರು ಶಿವೈಕ್ಯ ಬುದ್ಧಯ್ಯ ಪುರಾಣಿಕರ ಅಂದಿನ ಮನೆತನದವರಲ್ಲಿ ಬಾಂಧವ್ಯ ಬೆಳಸಿದಂತಿದೆ. ಆ ಮನೆತನದವರೇ ಆ ಗದ್ದುಗೆಯ ಪೂಜೆಯನ್ನು ಇಂದಿಗೂ ನಿತ್ಯನೆರವೇರಿಸುತ್ತಿದ್ದಾರೆ. ಇಲ್ಲಿ ಕರಿಬಸವೇಂದ್ರರು ಆಸ್ತಿಯನ್ನು ಸಂಪಾದಿಸಿದಂತೆ ತಿಳಿದುಬರುತ್ತದೆ. ಅಲ್ಲಿ ಸಾಮಾಜಿಕ ಕ್ರಾಂತಿಯನ್ನು ನೆರವೇರಿಸಿ ಕೀರ್ತಿಶಾಲಿಗಳಾಗಿದ್ದರೂ ಶಿವದೀಕ್ಷಾ ಸಂಸ್ಕಾರವನ್ನು ಸಾಮಾಜಿಕರಿಗೆ ಕರುಣಿಸುವಲ್ಲಿ ಅವರ ಪಾತ್ರಪ್ರಧಾನವಾಗಿದ್ದಿತು. ವೀರಶೈವ ಸಮಾಜವನ್ನು ವಿಸ್ತರಿಸಿದರು. ಶ್ರೀಶೈಲ ಸಂಸ್ಥಾನದ ಮೋಹ ಮಮಕಾರಗಳನ್ನು ಬಿಟ್ಟು ನಾಡಿನ ಹಳ್ಳಿಹಳ್ಳಿಗಳಲ್ಲಿ ಶರಚ್ಚಂದ್ರನಂತೆ ಸಂಚರಿಸಿ ಶಿವ (ಲಿಂಗ) ಸಂಸ್ಕೃತಿಗೆ ಜನರನ್ನು ಪರಿವರ್ತಿಸಿದರು. ಕ್ರಿಯಾಶೀಲತೆಗೆ ಮೌಲ್ಯವನ್ನಿತ್ತರು ಶಿವಜ್ಞಾನ ಶಿವಾನುಭವಗಳ ಪ್ರಸಾರ ಮಾಡಿದರು. ಸಾಮಾಜಿಕ ತತ್ತ್ವಗಳ ಮೌಲ್ಯವನ್ನು ಜನತೆಗೆ ಮನದಟ್ಟಾಗಿಸಲು ಸತತ ಪ್ರಯತ್ನಿಸಿದರು. ವಿಜಾಪುರ ಜಿಲ್ಲೆಯ ಇಂಡಿತರ ಆಕಳವಾಡಿಯಲ್ಲಿ ಶ್ರೀ ಜ ಕಂಬಸವೇಂದ್ರ ಶಿವಾಚಾರ್ಯರು ಸತ್ತ ಆಕಳವನ್ನು ಬದುಕಿಸಿ ತಮ್ಮ

ಪ್ರಭಾವವನ್ನು ಬೀರಿದ್ದಕ್ಕೆ ಅಲ್ಲಿನ ಆ ಆಕಳದವರು ಸನ್ನಿಧಿಗೆ ಭೂಮಿಯನ್ನು ದಾನವಾಗಿ ಅರ್ಪಿಸಿರುವರು. ಜಮುಖಂಡಿ ಹತ್ತಿರ ಕೊಣ್ಣೂರಿನಲ್ಲಿ ಒಂದು ಶಾಖಾ ಮಠ ಮತ್ತು ಭೂಮಿಗಳಿವೆ. ಹಿರಿಯ ಪಡಸಲಿಗಿಯಲ್ಲಿ ಶಾಖಾಮಠ ವಿದೆ, ಜಮುಖಂಡಿಯಲ್ಲಿಯೂ ಮುತ್ತಿನ ಕಂಥೆ ಮಠವಿದೆ. ಅಥಣಿ ಹತ್ತಿರ ಸಂತೆ (ಸತ್ತಿ) ಊರಿನಲ್ಲಿ ಪೀಠದ ಶಿಷ್ಯರು, ಮಠ ಪತಿಗಳು ಇರುವರು.

ಇವರ ಬಳಿಕ ಪೀಠದ ಒಡೆತನಕ್ಕೆ ಬಂದವರು ಇಮ್ಮಡಿ ಕರಿಬಸವೇಂದ್ರರು. ಇವರು ಕೂಡಲಸಂಗಮ ಪರಿಸರದಲ್ಲಿ ವೀರಶೈವ ಕ್ರಾಂತಿಯನ್ನೆಸಗಿ, ಸಂಗಮ ದಲ್ಲಿ ಒಂದು ಶಾಖಾ ಮಠವನ್ನು ಸ್ಥಾಪಿಸಿ ಅಲ್ಲಿಯೇ ನೆಲೆ ನಿಂತರು. ಇವರು ಅಲ್ಲಿನ ಜಾತವೇದಮುನಿ ಶಿವಾಚಾರ್ಯರ ಸಮಕಾಲೀನರು. ಕೂಡಲಸಂಗಮದ ಪಾಟೀಲ (ಗೌಡ) ಮನೆತನದವರನ್ನೆಲ್ಲ ದೀಕ್ಷಾನುಗ್ರಹದಿಂದ ಪಾವನಗೊಳಿಸಿ ವೀರಶೈವರನ್ನಾಗಿಸಿ ಉದ್ಧರಿಸಿದವರು. ಆ ವಂಶ ಗುರುವಾಗಿ ಗೌರವ ಪಡೆದರು. ಇವರು ಕಾಲಕ್ರಮದಿಂದ ಆ ಭಾಗದಲ್ಲಿ ಸಂಚರಿಸಿ ಜನರಿಗೆ ವೀರಶೈವ ಸಂಸ್ಕಾರ ಸಂಸ್ಕೃತಿಗಳನ್ನು ಪ್ರಬೋಧಿಸಿ ಭಕ್ತರೆಲ್ಲರ ಕಣ್ಮಣಿ ಯಾಗಿದ್ದರು. ವೀರಶೈವದ ಏಳ್ಗೆಗೆ ಶಾಂತಿದಾಂತಿಗಳಿಗೆ ಕಾರಣರಾಗಿದ್ದರು. ಜನತೆಯ ಕಲ್ಯಾಣಕ್ಕಾಗಿ ತಮ್ಮ ಅಮೋಘ ಜೀವನವನ್ನು ಮುಡುಪಿಟ್ಟರು. ಅವರ ಆ ಧೀರೋದಾತ್ತ ವ್ಯಕ್ತಿತ್ವ, ವಿಶುದ್ಧ ಹೃದಯ, ಪವಿತ್ರದೃಷ್ಟಿ, ಅಮೃತಮಯಹಸ್ತ, ಭವ್ಯಭಾವ, ಭಾವಜ್ಞತೆ, ಭಾವಪ್ರಸನ್ನತೆ, ನಿರ್ಮಳ ನಿಲವು, ನಿರ್ಹೇತುಕ ನಿವೃತ್ತಿ, ನಿಷ್ಕಲಂಕ ಪ್ರವೃತ್ತಿ, ನಿಶ್ಚಂಚಲಮನ, ಪ್ರಕರ್ಷ ಪ್ರಕಾಶ, ಕ್ರಿಯಾಶೀಲ ಪ್ರವರ್ಧನ ಪರತೆ, ಪ್ರವರ್ತನ ಶೀಲತೆ, ಪ್ರಸನ್ನ ಪ್ರಶಾಂತ ಮುಖಮುದ್ರೆ, ಪ್ರಾಭವ ಪ್ರಾಬಲ್ಯ, ಪ್ರೌಢವಾಣಿ, ಪ್ರೌಢ ಪರಿವರ್ತನ, ಶಿವರುದ್ರಾಗಮ ನಿರತತೆ, ಒಂದೊಂದೂ ಅನುಪಮ, ಅಖಿಲಾದರ್ಶ. ಅವರ ನೆನಪು, ಅವರ ಸಂಸ್ಮರಣೆ ಅದೆಂತವರಿಗೂ ಅದೊಂದು ಬಗೆಯ ಹುರುಪು ; ಅಂತರಂಗದ ಹೊಳಪು. ಹಾರ್ದಿಕದ ಹೆಮ್ಮೆ. ಅವರು ಅಷ್ಟೊಂದು ಜನಪ್ರಿಯ ರಾಗಿದ್ದರು. ಪೀಠದ ಪ್ರಭಾವ ಹೆಚ್ಚಿಸಿದರು. ಅವರ ಜೀವನ ಶ್ರೀಶೈಲ ಪೀಠದ ಎತ್ತರದ ಜೀವಂತ ಕಲಾವಂತ ಕೇತನ. ಯೋಗ ತ್ಯಾಗಗಳಿಂದ ಅರ್ಜಿಸ ಅನುಭವಗಳಿಂದ ಬೋಧ ಪ್ರಬೋಧಗಳಿಂದ ಜನತೆಯ ಕಲ್ಯಾಣಕ್ಕಾಗಿ ಕ್ರಿಯಾ

ಶೀಲತೆಗಾಗಿ. ಅವರು ಪಟ್ಟ ಪರಿಶ್ರಮ ಅನುಪಮ. ಇಂದಿಗೂ ಸ್ಫೂರ್ತಿಪ್ರದ ; ಸ್ತುತ್ಯಾಸ್ಪದ.

ಶ್ರೀಶೈಲ ಪೀಠವೆಲ್ಲಿ, ಕೂಡಲಸಂಗಮವೆಲ್ಲಿ ? ಪ್ರಯಾಣ ಸೌಕರ್ಯ ವಿಲ್ಲದ ಅಂದಿನ ಕಾಲದಲ್ಲಿ ಕನ್ನಡನಾಡಿನ ವಿಜಾಪುರ ಜಿಲ್ಲೆಯಲ್ಲಿ ಸಂಚರಿಸಿ ಶಿಷ್ಯ ಸಂಪತ್ತನ್ನು ಹೆಚ್ಚಿಸಿ, ಜಾತಿಭೇದವಿಲ್ಲದೆ ಜನತೆಯನ್ನು ಜಾಗ್ರತತೆಯು ಜನಿಸುವಂತೆಸಗಿದ ಮಹಿಹ ಮನನೀಯ. ಆದರಿಂದ ಅಲ್ಲಿನ ಜಾತವೇದ ಮುನಿ ಶಿವಾಚಾರ್ಯರು ಕೈಕೊಂಡ ಗುರುಕುಲಕ್ಕೆ ಹೆಚ್ಚಿನ ಕಳೆಯೇರುವುದು. ಗುರುಕುಲದ ಪ್ರಗತಿಗಾಗಿ ಜಾತವೇದ ಮುನಿಗಳೊಡನೆ ಸಹಕರಿಸಿ ಕೆಲಸ ಮಾಡುವರು. ಸಂಗಮೇಶ್ವರ ದೇವಸ್ಥಾನದಲ್ಲಿರುವ ಜಾತವೇದ ಮುನಿ ಶಿವಾಚಾರ್ಯರ ಸಾರಂಗ ಮಠದಲ್ಲಿ ಅವರ ಸಮಾಧಿ (ಗದ್ದುಗೆ)ಯಿದೆ. ಸಾರಂಗ ಮಠದ ಪಕ್ಕದಲ್ಲಿ ಕರಿಬಸವೇಂದ್ರ ಶಿವಾಚಾರ್ಯರ ಮಠವೊಂದಿತ್ತೆಂದು ತಿಳಿದು ಬರುತ್ತದೆ. ಮಠ ಪೂರ್ತಿ ಬಿದ್ದುಹೋಗಿದೆ. ಊರಲ್ಲಿರುವ ಮಠದಲ್ಲಿ ಎರಡು ಗದ್ದುಗೆಗಳಿರುತ್ತವೆ. ಮಠಸಿಥಿಲವಾಗಿದೆ. ಬೇರೆ ಬೇರೆ ಜನರು ಮಠದ ಆವರಣದಲ್ಲಿರುವ ಓವರಿಗಳಲ್ಲಿ ವಾಸವಾಗಿದ್ದಾರೆ. ಇರುವ ಭೂಮಿ ಅನ್ಯಾಕ್ರಾಂತವಾಗಿದೆ. ಹಿಂದುಳಿದವರ ಉದ್ಧಾರಕ್ಕಾಗಿ ನಿರಂತರ ಪರಿಶ್ರಮಿಸುವ ಪಥದಲ್ಲಿ ಪ್ರಯಾಣಿಸಿದ ಮತ್ತು ಪರಿಶ್ರಮಿಸಿದ ಶ್ರೀಶೈಲ ಸನ್ನಿಧಿಯವರು ತಮ್ಮ ಮೂಲ ಮಹಾ ಪೀಠವನ್ನೆ ಮರೆತರು. ಆಧುನಿಕ ವೀರಶೈವ ಸಂಸ್ಕಾರ ಸಂವರ್ಧನ ಮಹಿಹದಲ್ಲಿ ಮಹತ್ತರ ಪಾತ್ರ ಇವರದಾಗಿದೆ. ಎಲ್ಲೆಲ್ಲಿಯೂ ಇವರ ಶಿಷ್ಯರಿರುವರು ನಾಡಿನಲ್ಲಿ ! ಇವರ ಪರಂಪರೆಯಲ್ಲಿ ಬಂದ ಮುಮ್ಮಡಿ ಕರಿಬಸವೇಂದ್ರರು ಮರಿಕರಿಬಸವೇಂದ್ರರು, ವೀರಶೈವ ಸಮಾಜಾಭಿವೃದ್ಧಿಗೆ ತಮ್ಮನೇ ಮೀಸಲಿರಿಸಿದ್ದರು. ಬಾಳಿನುದ್ದಕ್ಕೂ ಬಿತ್ತರದ ನಾಡನ್ನು ಸಂಚರಿಸಿ ಪಾವನಗೊಳಿಸಿದರು. ನಾಡಿಗರನ್ನು ಉದ್ಧರಿಸಿದರು. ವಿಜಯನಗರದ ಸಂಗಮ ವಂಶಕ್ಕೆ ಕುಲಗುರುಗಳಾದ ಕಾಶೀವಿಲಾಸಕ್ರಿಯಾಶಕ್ತಿ ಒಡೆಯರು, ಚಂದ್ರಭೂಷಣ ಒಡೆಯರು ನಿಡುಮಾಮಿಡಿ ಶ್ರೀಶೈಲ ಪೀಠದವರು : ೧೩-೧೪ನೆಯ ಶತಮಾನದವರು. ವಿಜಯನಗರ ಸಾಮ್ರಾಜ್ಯ ಸ್ಥಾಪನಕರ್ತರು. ಕ್ರಿಯಾಶಕ್ತಿ ಒಡೆಯರು ಹುಕ್ಕಬುಕ್ಕರನ್ನು ಆಶೀರ್ವದಿಸುವರು.

## ದಲಿತೋದ್ಧಾರ ಕ್ರಾಂತಿವೀರ
## ೧೦ ಗುರು ಉರಿಲಿಂಗದೇವ ಶಿವಾಚಾರ್ಯ ;
## ಶಿಷ್ಯ ಉರಿಲಿಂಗಪೆದ್ದಿ ಶಿವಾಚಾರ್ಯ.

ಶಿವಾಚಾರ್ಯರು ಮಾತ್ರವಲ್ಲ ಶಿವಶರಣರೂ ಸಹ ಹೆರೆಹಿಂಗದ ಹೆಮ್ಮೆ ಪಡುವಂತಹ ನಿಮ್ನ ವರ್ಗವನ್ನು ಎತ್ತರಿಸಿ ಉದ್ಧರಿಸುವ ಉತ್ಕ್ರಾಂತಿಯನ್ನು ಅಥವಾ ಗುರು ಕ್ರಾಂತಿಯನ್ನು ಮಾಡಿದ ಏಕೈಕ ವಿಭೂತಿ ಪುರುಷ ಗುರುಲಿಂಗ ದೇವ ಶಿವಾಚಾರ್ಯರು. ಇವರು ದಿಟವಾಗಿ ಮಾನವತಾವಾದಿ ; ಶಿವಾಚಾರ್ಯ ಸಂವಿಧಾನ ಮತ್ತು ಸಂಸ್ಕರಣ ಶಿಲ್ಪಿ. ದೀನ ದಲಿತರ ಉದ್ಧಾರ ಮಾಡಿದ ಉದಾರ ಚರಿತರು. ಗುರುಧರ್ಮವನ್ನು ಶ್ರೀ ಸಾಮಾನ್ಯರೆಲ್ಲರಲ್ಲಿಯೂ ವಿಸ್ತರಣ ಗೊಳಿಸಿ ವಿಶೋಧಿಸಿ ಸಂಸ್ಕಾರ ಸಂಸ್ಕೃತಿಗಳೆಂಬ ಒಳ್ಸಸಿಗಳನ್ನು ಬೆಳೆಯಿಸಿದ ಧಾರ್ಮಿಕ ತಾತ್ತ್ವಿಕ ಕೃಷಿಗಾರರು. ೧೧ನೆಯ ಶತಮಾನದ ಶ್ರೀಶೈಲ ಚಂದ್ರ ಗುಂಡ ಶಿವಾಚಾರ್ಯರು, ಶಿಷ್ಯ ದೇ. ದಾಸಮಯ್ಯನವರು, ಜನವನವಸಂತ ರೇವಣಸಿದ್ಧ ಶಿವಾಚಾರ್ಯರು ಮರುಳಸಿದ್ಧ ಶಿವಾಚಾರ್ಯರು, ವೃಷಭರಾಜೇಂದ್ರ ಶಿವಾಚಾರ್ಯರು ಕೈಕೊಂಡ ಸಾಮಾಜಿಕ ಕ್ರಾಂತಿಯನ್ನು ಆ ಶತಮಾನದ ಕೊನೆ ಯದಾಗಿ ಉಜ್ವಲವಾಗಿ ಉಪಯೋಗಿಸಿದ ಉದಾತ್ತ ಹೃದಯರು. ಕುಲ ಪಂಥ ಪಂಗಡಗಳೆಂಬ ಕೃತಕ ಭೇದಗಳನ್ನು ತೆಗೆದು ಹಾಕಲು ವಿಶ್ವ ಸಾಹಸ ಮಾಡಿದವರು. ಎಲ್ಲರೂ ಕೂಡಿ ಬಾಳುವ ಯೋಜನೆಗಳನ್ನು ಹಮ್ಮಿಕೊಂಡ ವರು. ಇದರ ಪ್ರತೀಕಕ್ಕಾಗಿ ನಿಮ್ನ ವರ್ಗದ ಪೆದ್ದಿಯೆಂಬುವನನ್ನು ತಮ್ಮ ಪ್ರಭಾವದಿಂದ ಪರಿಶುದ್ಧಿಸಿ ಪ್ರಬುದ್ಧನನ್ನಾಗಿಸಿ ತಮ್ಮ ಗುರುಪೀಠದ ಉತ್ತ ರಾಧಿಕಾರಿಯನ್ನಾಗಿಸಿಕೊಂಡುದು ಹನ್ನೊಂದನೆಯ ಶತಮಾನದ ಸಾಮಾಜಿಕ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿರಿಸಬೇಕಾದ ಅಪೂರ್ವ ಕ್ರಾಂತಿ ।

ಮಹಾರಾಷ್ಟ್ರ ಪ್ರಾಂತದ ನಾಂದೇಡ ಜಿಲ್ಲೆಯ ಆವಸೆಕಂಧಾರ ಎಂಬು ದೊಂದೂರು. ಅಲ್ಲಿನ ನಲ್ಲೂರಿ ಮಠದ ಅಧಿಪತಿ–ಉರಿಲಿಂಗದೇವ ಶಿವಾ ಚಾರ್ಯರು. ಇವರ ಸಾಮಾಜಿಕ ಸಾಂಸ್ಕೃತಿಕ ಸಾಹಿತ್ಯಕ ಕ್ರಾಂತಿಗಳು ಅವರಿಂದೀ ಚಿನ ಕವಿ ಸಾಹಿತಿಗಳನ್ನು ತುಂಬಾ ಆಕರ್ಷಿಸಿವೆ. ಆಗಮಿಕ ಅಂಗಸತಿ–ಲಿಂಗಪತಿ

ಎಂಬ ತತ್ತ್ವವನ್ನು ಮುಮ್ಮೊದಲು ಎತ್ತಿ ಹಿಡಿದು, ಈ ಬಗೆಗೆ ಸೊಲ್ನುಡಿಗಳನ್ನು ಸೃಜಿಸಿರುವರು.

ಒಮ್ಮೆ ನಂದವಾಡ ಊರಿನ ಸೂರಯ್ಯನೆಂಬ ಶಿಷ್ಯನು ಆಚಾರ್ಯ ಉರಿಲಿಂಗದೇವನ ಉಪದೇಶವನ್ನು ತನ್ನ ಮನೆಯಲ್ಲಿ ಪಡೆಯುತ್ತಿದ್ದನು. ಅದೇ ಸಮಯದಲ್ಲಿ ಪೆದ್ದಿ ಕಳ್ಳತನಕ್ಕಾಗಿ ಆ ಮನೆಗೆ ಬಂದು ಮಾಳಿಗೆಯ ಮೇಲೇರಿ ಬೆಳಕಿಂಡಿಯಿಂದ ನೋಡತೊಡಗುವನು. ಅತ್ಯಂತ ಸಡಗರದಿಂದ ನಡೆಯುತ್ತಿದ್ದ ಲಿಂಗದೀಕ್ಷೆಯನ್ನು ನೋಡತೊಡಗಿ ಮನ ಮಾರುಹೋಗಿ ಬಂದ ತನ್ನ ಕಳ್ಳತನದ ಕೆಲಸವನ್ನೆ ಮರೆತುಬಿಡುವನು. ಆ ಶಿವಸಂಸ್ಕಾರದ ಸೊಬಗಿನ ದೃಶ್ಯ ಆತನ ಕಣ್ಮನ ಭಾವಗಳಲ್ಲಿ ತುಂಬಿ ಹೋಯಿತು. ಅಂದಿನಿಂದ ಗುರು ಕೃಪೆಗೆ ಪಾತ್ರನಾಗಬೇಕೆಂಬ ಹಂಬಲ ಹೆಚ್ಚುವುದು. ಸೇವೆ ಸಲ್ಲಿಸಿ ಪಡೆವ ಆಸೆಯಿಂದ ನಿತ್ಯ ಕಟ್ಟಿಗೆಯ ಹೊರೆಯೊಂದನ್ನು ಮುಂಜಾವಿನಲ್ಲಿಯೇ ಮಠದ ಮುಂಬಾಗಿಲಲ್ಲಿ ಹಾಕಿ ಹೋಗಹತ್ತಿದನು. ಶಿವಾಚಾರ್ಯರು ಉಚಿತವಾಗಿ ಕಟ್ಟಿಗೆ ಹೊರೆ ಹಾಕಿ ಹೋಗುವವರು ಯಾರಿರಬಹುದೆಂದು ಹೊಂಚಿ ನೋಡಿದರು. ಆಗ ಪೆದ್ದಿ ಸಿಕ್ಕುವನು. ಏನಯ್ಯ ಇದು ? ಹೀಗೆಲ್ಲ ಮಾಡಿದರೆ ಬಡವನಾದ ನಿನ್ನ ಬಾಳಿನ ಗತಿಯೇನು ? ಇಲ್ಲಿಯವರೆಗೆ ಹಾಕಿದ ಕಟ್ಟಿಗೆ ಹೊರೆಗಳ ಬೆಲೆ ತೆಗೆದುಕೋ ಎಂದು ಅಪ್ಪಣೆ ಮಾಡುವರು. ಆಗ ಪೆದ್ದಿಯು ನನಗೆ ಹಣ ಬೇಡ : ನಿಮ್ಮ ಕರುಣೆ ಬೇಕು. ಅಂದು ಆ ನಂದವಾಡ ಸೂರಯ್ಯನಿಗೆ ಅನುಗ್ರಹಿಸಿದಂತೆ ನನಗೂ ಲಿಂಗದೀಕ್ಷೆಯನ್ನು ಕರುಣಿಸಬೇಕು ಎಂಡು ಬಿನ್ನವಿಸಿಕೊಳ್ಳುವನು. ಒತ್ತಾಸೆಗೆ ಕಲ್ಲೊಂದನ್ನು 'ಘೇದಗಡಿ ಜಾ' ಎಂದು ಎಸೆಯಲು ಅದನ್ನೆ ಅತ್ಯಂತ ಆಸಕ್ತಿಯಿಂದ ಸ್ವೀಕರಿಸಿ ಮನೆಗೆ ಬಂದು ಭಾವ ತುಂಬಿ ಅದನ್ನೆ ಆರಾಧಿಸತೊಡಗುವನು. ಗುರುವಾಣಿಯಿಂದ ಬಂದ 'ಘೇದಗಡಿ ಜಾ' ಎಂಬುದೇ ಪಂಚಾಕ್ಷರ ಮಂತ್ರವಾಗಿ ನಿತ್ಯ ಜಪಿಸುವನು. ಪಡೆದು ಶಿಲೆ ಕರದ ಕುರುಹಾಗಿ ನೇರುಮನ ಭಾವಗಳಲ್ಲಿ ಕರಿಗೊಳ್ಳುವುದು ಹೀಗಿರಲೊಮ್ಮೆ ಸತ್ವ ಪರೀಕ್ಷೆಯ ಕಾಲ ಸನ್ನಿಹಿತವಾಗುವುದು. ಬರಗಾಲ ಬರುವುದು ಮಳೆ ಬೆಳೆಗಳಿಲ್ಲದೆ ನಾಂದೇಡ ನಗರದ ನಂದರಾಜನು ನೀರಿಗಾಗಿ ಕೆರೆಯೊಂದನು ಕಟ್ಟಿಸಲು ಮೊದಲ್ಮಾಡುವನು. ಒಂದು ದೊಡ್ಡ ಬಂಡೆ ಬಿದ್ದು ನೀರು ಬಾರ

ದಾಯಿತು. ಆ ಬಂಡೆಯನ್ನು ಕೀಳಲು ಯಾರಿಂದಲೂ ಆಗದಾಯಿತು. ಆಗ ಉರಿಲಿಂಗದೇವ ಶಿವಾಚಾರ್ಯರಿಗೆ ಕರೆ ಬಂದು, ತಮ್ಮ ಶಿಷ್ಯ ಪೆದ್ದಿಯೊಡನೆ ಅಲ್ಲಿಗೆ ಆಗಮಿಸುವರು. ಶಿಷ್ಯನಿಗೆ ತೆಗೆಯಲಪ್ಪಣೆ ಮಾಡುವರು. ಮಾಡಿ ದೊಡನೆ ತನ್ನ ಉರದಲ್ಲಿರುವ ಗುರು ಕರುಣಿಸಿದ ಲಿಂಗವನ್ನು ಕಳಿಸಿ ಕಲ್ಲು ಬಂಡೆಯನ್ನು ಕೀಳಿಸಲು ಅಪಾರ ನೀರು ಉಕ್ಕಿ ಹೊರಹೊಮ್ಮುವುದು. ಇದನ್ನು ನೋಡಿ ರಾಜ ರೈತರಿಗೆ ಆದ ಆನಂದ ಅಷ್ಟಿಷ್ಟಲ್ಲ. ಅದಕ್ಕಿಂತ ಅತಿಯಾದ ಆನಂದ ಉರಿಲಿಂಗದೇವ ಶಿವಾಚಾರ್ಯರಿಗಾಗಿ ಶಿಷ್ಯನನ್ನು ಗುರು ಮಠಕ್ಕೆ ಕರೆ ದೊಯ್ದು ಶಿವಾಗಮಿಕ ಶಿವದೀಕ್ಷಾ ಸಂಸ್ಕಾರವನ್ನಿತ್ತು ತಮ್ಮ ಗುರುಪೀಠಾಧಿ ಕಾರವನ್ನು ಕರುಣಿಸಿ ಲೋಕೋತ್ತರ ಕ್ರಾಂತಿಯನ್ನೆಸಗುವರು. ಸಂಪ್ರದಾಯ ದವರ ವಿರೋಧವನ್ನು ತಮ್ಮದೇ ಆದ ಪ್ರಭಾವದಿಂದ ಪರಿಹರಿಸುವರು. ಮತ್ತು ಉರಿಲಿಂಗಪೆದ್ದಿ ಶಿವಾಚಾರ್ಯರ ಪೂರ್ವಾಶ್ರಮದ ಪತ್ನಿ ಕಾಳವ್ವೆಯನ್ನು ಕರೆಯಿಸಿಕೊಂಡು ಅವಳಿಗೂ ದೀಕ್ಷಾ ಸಂಸ್ಕಾರವನ್ನಿತ್ತು, ಆಚಾರ-ವಿಚಾರಾನು ಭವಗಳಲ್ಲಿ ಪಳಗಿಸಿ ಶಿವಾಚಾರಿಣಿಯನ್ನಾಗಿಸಿ, ಸೂಳ್ನುಡಿಕಾರ್ತಿಯನ್ನಾಗಿಸಿದ ಪವಾಡ ಸರ್ವಾದರ್ಶವಾದುದು. ಕೊಡುಗೆ ಅಸಾಧಾರಣವಾದುದು.

ವೇದಾಗಮೋಪನಿಷತ್ಪುರಾಣಾದಿಗಳನ್ನು ಚನ್ನಾಗಿ ಅಧ್ಯಯನ ಮಾಡಿ, ಅನುಭವಕ್ಕೆ ತಂದುಕೊಂಡು ಎರಕಗೊಳಿಸಿ ಸೂಳ್ನುಡಿಗಳ ಸೃಜಿಸಿ ಹಿರಿಗನ್ನಡ ಸಾಹಿತ್ಯಕ್ಕೆ ಸೇವೆ ಸಲ್ಲಿಸಿದ ಶ್ರೇಷ್ಠ ಶಿವಾಚಾರ್ಯರಿಬ್ಬರು ಮತ್ತು ಶಿವಾಚಾರಿಣಿ ಯೊಬ್ಬರು ಈ ಮೂವರನ್ನು ಹನ್ನೆರಡನೆಯ ಶರಣರಲ್ಲಿ ಸೇರಿಸುತ್ತಿರುವು ದಕ್ಕಿಂತ ಅನುಚಿತ ಕೃತ್ಯ ಮತ್ತೊಂದಿರಲಿಕ್ಕಿಲ್ಲ. ಅಸ್ಪೃಶ್ಯರ ದಲಿತರ ದೀನರ ಉದ್ಧಾರಕಾರಕ ಕ್ರಾಂತಿಯನ್ನು ಹನ್ನೊಂದನೆಯ ಶತಮಾನದ ಆಯ್ದಾರು ಜನ ಆಚಾರ್ಯರು ಪ್ರಬಲವಾಗಿ ವಿಶಾಲ (ವಿಪುಲ)ವಾಗಿ ಮಾಡಿದುದನ್ನು ಮುಚ್ಚಿಹಾಕಿ ಮುಂದಿನ ಶತಮಾನದವರಿಗೆ ಅನ್ವಯಿಸುತ್ತಿರುವ ಅನ್ಯಾಯಕ್ಕಿಂತ ಇನ್ನೊಂದಿಲ್ಲವೆಂದೆ ಹೇಳಬೇಕು. ಎಂಟನೆಯ ಶತಮಾನದ ಶಿವಯೋಗಿ ಶಿವಾ ಚಾರ್ಯರ ಮಹಾಮಾನವತಾವಾದವನ್ನು ಹನ್ನೊಂದನೆಯ ಶತಮಾನದ ಶಿವಾ ಚಾರ್ಯರು ಉಜ್ವಲವಾಗಿ ಮಾಡಿದ ಉತ್ಕ್ರಾಂತಿಯನ್ನು ಪರಿಶೋಧಕ ಇತಿ ಹಾಸಜ್ಞರ ಗಮನಕ್ಕೆ ತರಬಯಸಲಾಗಿದೆ.

ಉರಿಲಿಂಗದೇವ ಉರಿಲಿಂಗ ಪೆದ್ದಿ ಮತ್ತು ಶಿವಾಚಾರಿಣಿ ಕಾಳವ್ವೆ ಈ ಮೂವರ ಕ್ರಾಂತಿಮಯ ಸರ್ವಾದರ್ಶ ಜೀವನವೇ ಶಿವಾಚಾರ್ಯರ ಸಾಂಸ್ಕೃತಿಕ ಕ್ರಾಂತಿಕಾರಕ ಇತಿಹಾಸಕ್ಕೆ ಅಪೂರ್ವ ಬೆಳಕನ್ನು ಬೀರುವಂತಹದು. ಉರಿಲಿಂಗ ಪೆದ್ದಿ-ಕಾಳವ್ವೆಯರು ಕೆಳವರ್ಗದಲ್ಲಿದ್ದು ಸಾಮಾನ್ಯರಿಗಿಂತ ಸಾಮಾನ್ಯರಾಗಿ ಅಲ್ಪರಿಗಿಂತ ಅಲ್ಪರಾಗಿ ಬಾಳುತ್ತಿದ್ದವರು ಗುರು ಉರಿಲಿಂಗದೇವನ ಪ್ರಭಾವ ಪೂರ್ಣ ಕಾರುಣ್ಯದಿಂದಾಗಿ ಬಾಳಿನ ಹಿರಿದಾದ ತಿರುವನ್ನು ಹರವನ್ನು ಪಡೆದ ಪ್ರಸಂಗ ವೀರಶೈವೇತಿಹಾಸದಲ್ಲಿ ಅಪ್ರತಿಮವಾದುದು.

ಶಿವಾಚಾರ್ಯರ ಶಿವದೀಕ್ಷಾ ಸಂಸ್ಕಾರಕ್ಕೆ ಪಂಥ ಪಂಗಡ ಭೇದವಿಲ್ಲ. ಮೇಲು ಕೀಳು ಎಂಬ ಬಿರುಕಿಲ್ಲ. ಯಾರನ್ನಾದರೂ ಮಾಡಬಹುದು ; ಮಾಡುತ್ತ ಬಂದಿದಾರೆ ಶಿವಾಚಾರ್ಯರು-ಸಹಜವಾಗಿ ! ಇದಕ್ಕಾಗಿ ಬೇರೆ ರಾಜಕೀಯ ಅಧಿಕಾರವಾಗಲಿ ಕ್ರಾಂತಿಯಾಗಲಿ ಬೇಕಿಲ್ಲ. ಶಿವಾಚಾರ್ಯರಿಗೆ ಸಹಜವಾದುದು ಬಸವಾದಿ ಶರಣರಿಗೆ ದುಸ್ಸಾಧ್ಯವಾಗಿ ಪರಿಣಮಿಸಿದೆ. ವಿಫಲ ವಾಗಿ ಹೋಗಿದೆ.

ಉರಿಲಿಂಗಪೆದ್ದಿ ಮತ್ತು ಕಾಳವ್ವೆಯರ ಸಾಧನ ತೀವ್ರತರವಾದುದು. ಅತ್ಯಲ್ಪ ಕಾಲದಲ್ಲಿಯೇ ಅತ್ಯುಚ್ಚವಾದ ಅನುಭೂತಿಯನ್ನು ಸಾಧಿಸಿದ್ದಾರೆ. ಶಿವಾಚಾರ್ಯ-ಶಿವಾಚಾರಿಣಿಯರಾಗಿ ಸಿದ್ಧರಾಗಿದ್ದಾರೆ. ಉಚ್ಚವರ್ಣದವರು ವೀರಶೈವಕ್ಕೆ ಮತಾಂತರವಾಗಿ ಮೇಲು ಮಟ್ಟಕ್ಕೆ ನಿಲುಕುವುದೇ ಕರಕಷ್ಟವಾಗಿ ರುವಾಗ ಅತ್ಯಂತ ನೀಚ (ನಿಮ್ನ) ವೃತ್ತಿಯಲ್ಲಿರುವ ಇವರು ಅತ್ಯಂತ ಉಚ್ಚ ಮಟ್ಟದವರಾದ ಸಾಧನ ತೀವ್ರತೆ, ಅವರ ಆ ಗುರುದೇವನ ಪ್ರಭಾವ ತೀವ್ರತೆ ಗಳನ್ನು ಊಹಿಸುವುದೇ ಅಗಾಧ ಕೆಲಸ.

ಉರಿಲಿಂಗದೇವ-ಉರಿಲಿಂಗಪೆದ್ದಿಗಳ ಮೇಲೆ ಸಂಸ್ಕೃತ ಶಿವಾಗಮ ವಾಙ್ಮಯದ ಪ್ರಭಾವ ವಿಶೇಷವಾಗಿರುವುದು ಶಿವಾಚಾರ್ಯರಾದ ಅವರಿಗೆ ಅಸಹಜವೇನಲ್ಲ. ಸಂಸ್ಕೃತ ವಾಙ್ಮಯವನ್ನು ಬಯ್ಯುವ ವಚನಕಾರರ ಮೇಲೆ ಆಗಮ ಪ್ರಭಾವ ಅನಿವಾರ್ಯವಾಗಿರುವಾಗ ಬೇರೆ ಹೇಳಬೇಕಾದುದೇ ಇಲ್ಲ.

ಹನ್ನೊಂದನೆಯ ಶತಮಾನದ ಚಂದ್ರಗುಂಡಶಿವಾಚಾರ್ಯ, ರೇವಣಸಿದ್ಧ

ಶಿವಾಚಾರ್ಯ, ಮರುಳಸಿದ್ಧ ಶಿವಾಚಾರ್ಯ, ಸಕಲಾಗಮಾಚಾರ್ಯ, ಕೇದಾರಗುರು, ಏಕೋರಾಮಾರಾಧ್ಯ ಮೊದಲಾದ ಊರ್ಜಿತ ಉತ್ಕ್ರಾಂತಿಕಾರಕ ಶಿವಾಚಾರ್ಯರಲ್ಲಿ ಉರಿಲಿಂಗದೇವ ಶಿವಾಚಾರ್ಯರೂ ಒಬ್ಬರು. ಒಬ್ಬರು ಮಾತ್ರವಲ್ಲ ವಿಶಿಷ್ಟ ಪ್ರಭಾವವುಳ್ಳ ಅಸ್ಪೃಶ್ಯೋದ್ಧಾರ ಮಹಾಮಣಿಹವುಳ್ಳ ಮಹಾಶಿವಾಚಾರ್ಯರು.

ಚಂದ್ರಗುಂಡ ಶಿವಾಚಾರ್ಯರು ದೇವರ (ದೇವಾಂಗ) ದಾಸಮಯ್ಯನನ್ನು, ರೇವಣಸಿದ್ಧ ಶಿವಾಚಾರ್ಯರು ಶಿವಯೋಗಿ ಸಿದ್ಧರಾಮ, ಹಾವಿನಹಾಳ ಕಲ್ಲಯ್ಯ, ಶಾಂಭವಿಯವರನ್ನು, ಮರುಳಸಿದ್ಧ ಶಿವಾಚಾರ್ಯರು ೬೮ ಸಾವಿರ ವಚನಗಳನ್ನು ಬರೆದು ಚಂಗಣಗಿಲ ಮಂಟಪವನ್ನು ಕೇದಾರಗುರು ಶಿವಯೋಗಿ ಸಿದ್ಧರಾಮ ಹಾವಿನಹಾಳ ಕಲ್ಲಯ್ಯರನ್ನು, ಏಕೋರಾಮಾರಾಧ್ಯ ಅಯೋಧ್ಯೆಯ ವ್ಯಾಸ ದೀಕ್ಷಿತನನ್ನು ವೀರಗಣಾಧೀಶನನ್ನು ವಾಸ(ವ)ನನ್ನು ಮಾಂಧಾತ ಚಕ್ರವರ್ತಿಯನ್ನು ಉಷಾದೇವಿ ಕಾಮುಕಾದೇವಿಯರನ್ನು-ಉದ್ಧಾರ ಮಾಡಿದಂತೆ ಉದಾತ್ತರನ್ನಾಗಿಸಿದಂತೆ ಉರಿಲಿಂಗದೇವ ಶಿವಾಚಾರ್ಯನು ನಂದವಾಡದ ಶ್ರೀಮಂತ ಸೂರಯ್ಯನನ್ನು ಮತ್ತು ವಂಶದಿಂದ ವೃತ್ತಿಯಿಂದ ಕೀಳ್ಮಟ್ಟದಲ್ಲಿದ್ದ ಪೆದ್ದಿ-ಕಾಳವ್ವೆಯರನ್ನು ವೀರಶೈವರನ್ನಾಗಿಸಿ ಉದ್ಧಾರ ಮಾಡಿ, ಪೆದ್ದಿಯನ್ನು ತಮ್ಮ ಗುರುಪೀಠಾಧಿಕಾರಿಯನ್ನಾಗಿಸಿ ಉರಿಲಿಂಗಪೆದ್ದಿಯನ್ನಾಗಿಸಿ ಪ್ರಸಿದ್ಧ ಕ್ರಾಂತಿಯನ್ನೆಸಗಿದ ಶಿವಾಚಾರ್ಯನು, ಹನ್ನೊಂದನೆಯ ಶತಮಾನದ ಅಸ್ಪೃಶ್ಯೋದ್ಧಾರ ಕ್ರಾಂತಿಗೆ ಕಳಶಪ್ರಾಯನಾದವನು. ಅಸ್ಪೃಶ್ಯನೊಬ್ಬನನ್ನು ಗುರುಪೀಠಾಧಿಕಾರಿಯನ್ನಾಗಿಸಿ ಅನನ್ಯವಾಗಿ ಆದರ್ಶನಾದಾತನು.

ಅದೃಶ್ಯಕವಿಯು ತನ್ನ ಪ್ರೌಢರಾಯನ ಕಾವ್ಯದಲ್ಲಿ ಉರಿಲಿಂಗದೇವ ಶಿವಾಚಾರ್ಯರನ್ನು ಹೀಗೆ ಹೊಗಳಿದ್ದಾನೆ :

"ಶಿವಭಕ್ತವದನ ತಾಮರಸ ಪ್ರಭಾಕರಂ
ಶಿವರೂಪನುರುಲಿಂಗದೇವನೆಂಬಾಚಾರ್ಯ
ನವನೆ ಕಂದಾರಪುರದಲ್ಲಿ ಬಹುಮಾನದಿಂ ಜಸವಡೆದು ರಾಜಿಸುತ್ತ-
ಭವಭಕ್ತವೃಂದಕ್ಕೆ ವೀರಶೈವೋಪದೇ
ಶವನೀವುದಕ್ಕೆ ತಾನೆ ಗುರುಗಳಾಗಿರುತ
ಭವದ ಬೇರಂಕಿತ್ತು ಧರಣಿಯೊಳ್ ಮೆರೆವುತ್ತ ಭಕ್ತರಂ ಪೊರೆವುತಿರಲು."

ಉರಿಲಿಂಗದೇವಾಚಾರ್ಯನು ಶಿವಭಕ್ತರಿಗೆ ಸಂತೋಷವನ್ನುಂಟುಮಾಡುವ ಪ್ರಭಾವಪೂರ್ಣನಾಗಿದ್ದನು. ಅಂತೆಯೇ ಕವಿ 'ಶಿವಭಕ್ತಮುಖಕಮಲರವಿ' ಯಾಗಿದ್ದಾನೆಂದು ತನ್ನ ಕಾವ್ಯವಾಣಿಯಲ್ಲಿ ಕಮನೀಯವಾಗಿ ಬಣ್ಣಿಸಿದ್ದಾನೆ. ರವಿಗುಣಗಳೆರಡು : ಒಂದು ಬೆಳಗುವಿಕೆ, ಇನ್ನೊಂದು ಅರಳಿಸುವಿಕೆ ಅಂದರೆ ವಿಕಾಸಗೊಳಿಸುವಿಕೆ ! ಉರಿಲಿಂಗದೇವಾಚಾರ್ಯರಿಂದ ಕಂದಾರಪುರದ ಶಿವ ಭಕ್ತರು ದೃಕ್ಕ್ರಿಯಾ ಪ್ರಭಾನ್ವಿತರಾಗಿದ್ದರು ; ವಿಶಾಲ ಹೃದಯರಾಗಿದ್ದರು, ಹಸನ್ಮುಖಿಗಳಾಗಿದ್ದರು. ಅಂದರೆ ಸತ್‌ಚಿತ್ ಆನಂದಗಳನ್ನು ಕರುಣಿಸಲು ಸರ್ವ ಸಮರ್ಥನಾಗಿದ್ದನು, ಸರ್ವರ ಹೃದಯಾಕಾಶದ ಚಿದ್ಭಾನುವಾಗಿ ಬೆಳಗುತ್ತಿದ್ದನು. ಅಂತೆಯೆ ಆಚಾರ್ಯನನ್ನು 'ಪ್ರಭಾಕರಂ' ಎಂದು ಅರ್ಥವತ್ತಾಗಿ ಭಾವಧ್ವನಿಯುಕ್ತವಾಗಿ ವಿಶೇಷಣವನ್ನಿತ್ತಿದ್ದಾನೆ ಅದೃಶ್ಯ ಕವಿ । ಸಾಲದ್ದಕ್ಕೆ ಭವದಲ್ಲಿ ಬಿದ್ದ ಭವಿಗಳನ್ನು ವೀರಶೈವ ದೀಕ್ಷೋಪದೇಶದಿಂದ ಭಕ್ತರನ್ನಾಗಿಸಿ ಉದ್ಧರಿಸುತ್ತಿದ್ದನು. ಭವದ ಬೇರನ್ನು ಬಗೆದು ಹಾಕುತ್ತಿದ್ದನು. ಇದರಿಂದಾಗಿ ಕಂದಾರ ಊರಲ್ಲಿ ಮಾತ್ರವಲ್ಲ, ಧರಣಿಯಲ್ಲಿ ಯಶೋವಂತನಾಗಿ ತೇಜೋವಂತನಾಗಿ ಮೆರೆದನು : ಮೆರಗುವಡೆದನು ಉರಿಲಿಂಗದೇವನ ವೀರ ಶೈವಾಭಿವೃದ್ಧಿಯ ವಿಶಾಲ ಕ್ರಾಂತಿ ಈ ಪದ್ಯದಲ್ಲಿ ವಿನ್ಯಾಸಗೊಂಡಿದೆ. ಮಹಾರಾಷ್ಟ್ರದಲ್ಲಿ ಆತನ ವೀರಶೈವ ಕ್ರಾಂತಿ ಅತ್ಯಂತ ಜಾಗ್ರತವಾಗಿದ್ದಿತು. ಕಂದಾರ ಪುರದ ಆಚಾರ್ಯ ಪೀಠದಲ್ಲಿದ್ದು ಗುರು ಧರ್ಮದ ಗುರುತರ ಕರ್ತವ್ಯವನ್ನು ವೀರ ಶೈವ ಉತ್ಕ್ರಾಂತಿ ಮೂಲಕ ಸರ್ವಸಮರ್ಥತೆಯಿಂದ ಸಾಧಿಸುತ್ತಾನೆ. ಆಚಾರ್ಯನ ಲಿಂಗನಿಷ್ಠೆ ಲಿಂಗಶಕ್ತಿ ಲಿಂಗಾನುಭೂತಿ ಅಸಾಧಾರಣ. ಆತನ ಹೆಸರೇ ಇದಕ್ಕೆ ಸತ್ಯ ಸಾಕ್ಷಿ । ಉರಿಲಿಂಗದೇವ ಎಂತಲೂ ಹೇಳುವುದುಂಟು. ಇಷ್ಟ ಪ್ರಾಣ ಭಾವಲಿಂಗಗಳ ನೆಲೆಕಲೆಗಳನ್ನು ಚೆನ್ನಾಗಿ ಅಳವಡಿಸಿಕೊಂಡು ಲಿಂಗನಿಜ ಸ್ಥಲಿಯಾಗಿದ್ದನು.

"ಲಿಂಗ ಕರಸ್ಥಳಕ್ಕೆ ಬಂದು ಮತ್ತೆ ಕಂಗಳು ತುಂಬಿ ಕಳೆಗೊಂಡು ಒರೆಯದಿರ್ದಡೆ ಆ ಲಿಂಗ ಪೂಜೆಯೇಕೆ ? ಲಿಂಗವ ಜಿಹ್ವೆಯಲ್ಲಿ ನೆನೆವಾಗ ಅಂಗವ ಮರೆಯದಿರ್ದಡೆ ಆ ಲಿಂಗದ ನೆನಹುದೇಕೆ ? ಲಿಂಗವಾರ್ತೆಯ ಕಿವಿ ತುಂಬಿ ಕೇಳಿ ಸರ್ವಾಂಗ ಝುಂಪಿಸಿ ಮನ ಮಗ್ನವಾಗಿರದಿರ್ದಡೆ ಉರಿಲಿಂಗ ತಂದೆಯ ಸಿರಿಯ ನೆನೆಯಲೇಕೆ ?"

ಇಲ್ಲಿ ಆಚಾರ್ಯನ ಲಿಂಗನಿಷ್ಠೆ ಲಿಂಗಾವಧಾನ ಲಿಂಗಧ್ಯಾನ ಧಾರಣ ಲಿಂಗ ಸಾಮರಸ್ಯಭಾವಗಳನ್ನು ಮನಗಾಣಬೇಕು. ಆತನು ಇವನ್ನೆಲ್ಲ ಅನುಭಾವ ದಿಂದ ಅಭಿವ್ಯಕ್ತ ಮಾಡಿದ್ದಾನೆ. ನಿಜಕ್ಕೂ ಲಿಂಗದ ನಿಜವನ್ನು ಅರಿತ ಅರಿವ ಅನುಭವಿಸುವ ಆತ್ಮಾಸಕ್ತಿಯ ಆವಿಷ್ಕಾರ ಈ ವಚನದಲ್ಲಿದೆ.

ತಾನೊಬ್ಬ ಲಿಂಗಕಲೆ ಕಳೆಗಳಲ್ಲಿ ಅನುಭವ ಆನಂದಗಳಲ್ಲಿ ಪರಿಣತನಾದರೆ ಸಾಲದು. ತನ್ನಂತೆ ಎಲ್ಲರೂ ಆಗಬೇಕು. ಬೆನ್ನಿಗೆ ಬಿದ್ದ ಭವಭೂತದಿಂದ ಬಿಡುಗಡೆಯನ್ನು ಪಡೆಯಬೇಕು. ಲೋಕೋತ್ತರ ಜೀವನವನ್ನು ಜೀವಿಸ ಬೇಕೆಂದು ಭಾವಿಸಿ ಅಸಂಖ್ಯರಿಗೆ ತ್ರಿವಿಧ ದೀಕ್ಷೆಗಳನ್ನಿತ್ತು ಲಿಂಗಗಳನ್ನು ಕರು ಣಿಸುತ್ತಿದ್ದರು. ಲಿಂಗಪರಿಣಾಮಿಗಳನ್ನಾಗಿಸುತ್ತಿದ್ದರು. ಅವರು ಆ ಸಂಸ್ಕಾರ ದಲ್ಲಿ ಅಗಾಧ ಪ್ರಭಾವವಿರುತ್ತಿದ್ದಿತು. ಅದು ಅನೇಕರನ್ನು ಆಕರ್ಷಿಸಿತ್ತು. ಅದರಿಂದ ಆಚಾರ್ಯನ ವಾಸ್ತವ ವರ್ಚಸ್ಸು ಎಲ್ಲೆಲ್ಲಿಯೂ ಹರಡಿತ್ತು. ಅನೇಕ ಗ್ರಾಮಗಳಲ್ಲಿ ಆತನ ಶಿಷ್ಯರು ಮಠಗಳನ್ನು ಕಟ್ಟಿಸಿಕೊಟ್ಟಿದ್ದರು. ಅವರಿಗೆ ಅವರಿವರೆಂಬ ಭೇದವಿರಲಿಲ್ಲ ಬಡವ ಬಲ್ಲಿದರೆಂಬ ಭಾವವಿರಲಿಲ್ಲ.ಎಲ್ಲರಲ್ಲಿ ಸಮ ದರ್ಶಿಯಾಗಿದ್ದರು. ಧನವಂತ ಸೂರಯ್ಯನನ್ನು, ದಟ್ಟ ದರಿದ್ರ ಪೆದ್ದಿಯನ್ನು ಸರಿ ಬರಿಯಾಗಿ ಕಂಡು ಕರುಣಿಸಿದ ಕರುಣಾಳು ಅವರು. ವರ್ಣಭೇದ ಇದ್ದದ್ದೂ ಇರ ಲಿಲ್ಲ.ಶೂದ್ರನು ಕ್ಷುದ್ರನೂ ಆದ ಪೆದ್ದಿಯನ್ನು ತಮ್ಮ ಗುರು ಪೀಠಾಧಿಕಾರಿಯನ್ನು ಮಾಡಿ ಸುಸಂಸ್ಕೃತನನ್ನಾಗಿಸಿ, ತಮ್ಮಂತೆ ವಚನಕಾರನನ್ನಾಗಿಸಿದ ಕ್ರಾಂತಕೀರ್ತಿ ಅವರದಾಗಿದೆ. ಆಚಾರ್ಯರ ಕಾರುಣ್ಯದಿಂದ ಗುರುಸದೃಶ ಧರ್ಮಿಯಾಗುವನು. ಉರಿಲಿಂಗಪೆದ್ದಿಯೆಂದು ಹೆಸರಾಗುವನು. ಆತನ ಹೆಂಡತಿ ಕಾಳವ್ವೆ ಅತ್ಯಂತ ಅಲ್ಪಳಾಗಿದ್ದಳು. ಆಚಾರ ವಿಚಾರ ವಿಚಾರವಿರಲಿಲ್ಲ ; ನೀತಿ ರೀತಿಗಳಿರಲಿಲ್ಲ. ಮಾನವಳಾಗಿ ಬಾಳುತ್ತಿರಲಿಲ್ಲ. ಅಂಥವಳನ್ನು ಕರುಣಿಸಿ ಅಸಾಧಾರಣ ಶಿವಾ ಚಾರಿಣಿಯನ್ನಾಗಿಸುವರು. ವಚನಕಾರ್ತಿಯನ್ನಾಗಿಸುವರು. ಗೃಹಸ್ಥರಾದರೇನು? ಗುರುಧರ್ಮಿಗಳಾಗಬಹುದೆಂಬುದನ್ನು ಘನವಾಗಿ ಪ್ರಯೋಗಿಸಿ ತೋರಿದರು.

೧೧ನೆಯ ಶತಮಾನದ ಉತ್ತರಾರ್ಧದಲ್ಲಿ ತರ್ದೆವಾಡಿ ಪ್ರಾಂತದಲ್ಲಿ ರೇವಣ ಸಿದ್ಧ ಶಿವಾಚಾರ್ಯರು ಧರ್ಮಪ್ರಸಾರದಲ್ಲಿ ಪ್ರಸಿದ್ಧರಾದಂತೆ, ಕನ್ನಡ ತೆಲುಗು, ಮರಾಠಿ ಭಾಷಾತ್ರಯಗಳ ಸಂಗಮಸ್ಥಳವಾದ ಗೋದಾವರಿ ತೀರದ ಪರಿಸರ

ದಲ್ಲಿ ಧಾರ್ಮಿಕಸಾಂಸ್ಕೃತಿಕ ಉತ್ಕ್ರಾಂತಿಯಿಂದ ಉರಿಲಿಂಗದೇವರು ಪ್ರಸಿದ್ಧ ರಾಗಿದ್ದರು. ವೇದಶಾಸ್ತ್ರ ಆಗಮ ಉಪನಿಷತ್ ಪುರಾಣಾದಿಗಳನ್ನು ಬಲ್ಲವರಾಗಿ ದ್ದರು. ಕನ್ನಡದಲ್ಲಿ ಶರಣಸತಿ ಲಿಂಗಪತಿಭಾವದ ವಚನಗಳನ್ನು ರಚಿಸುವ ಸಾಮರ್ಥ್ಯವುಳ್ಳವರಾಗಿದ್ದರು. ಅವರ ವಚನಗಳು ಪರಿಣಾಮಕಾರಿಯಾಗಿವೆ. ವಚನರಚನೆ ೧೧ನೆಯ ಶತಮಾನದಲ್ಲಿ ಶಿವಾಚಾರ್ಯರಿಂದ ಸಾಕಷ್ಟು ಸಾಗಿ ಬಂದಿದೆ. ಅವೆಲ್ಲ ಸಿಕ್ಕದಂತಾಗಿರುವುದು ದುರದೃಷ್ಟಕರ. ಅಂತೆಯೆ ಉರಿಲಿಂಗ ದೇವ ಶಿವಾಚಾರ್ಯರಿಂದ ಶಿವಾಚಾರಕ್ರಾಂತಿ ಅಸದೃಶವಾಗಿ ಅಸೀಮವಾಗಿ ಸಾಗಿದೆ. ಅಲ್ಲದೆ ೧೧ನೆಯ ಶತಮಾನದ ಶಿವಾಚಾರ್ಯ ತಿಂಥಿಣಿಯ ವೀರಶೈವ ಉತ್ಕ್ರಾಂತಿಗೆ ಉನ್ನತ ಕಲಶವನ್ನಿಟ್ಟಂತಾಗಿತ್ತು. ಇವರನ್ನು ೧೨ನೆಯ ಶತ ಮಾನದವರೆಂದು ಹಲವರು ಹಟಸಾಧಿಸಿ ಹೇಳಿ ಇತಿಹಾಸಕ್ಕೆ ಅಪಚಾರವೆಸಗಿ ದ್ದಾರೆ. ಇದು ಅರಿಯದವರ ಮಾತಲ್ಲದೆ ಅರಿತವರ ಮಾತಲ್ಲ ; ನಿಲ್ಲುವ ಮಾತಲ್ಲ.

ಲಿಂಗಸಂಸ್ಕೃತಿಯಲ್ಲಿ ಲಿಂಗಾನುಭೂತಿಯಲ್ಲಿ ಉರಿಲಿಂಗ ಶಿವಾಚಾರ್ಯ ರನ್ನು ಬಿಟ್ಟರೆ ಇನ್ನಿಲ್ಲ. ಅಸಂಸ್ಕಾರಿಯಾದ ಪೆದ್ದಿ ಆಕರ್ಷಿತನಾಗಬೇಕಾದರೆ ಆತನ ಆ ಲಿಂಗಾರ್ಚನ ಪ್ರಭಾವ ಲಿಂಗದೀಕ್ಷಾವಿಧಾನವೈಭವ ಎಂತಹದೆಂಬುದನ್ನು ಆಲೋಚಿಸಬೇಕು. ನಂದವಾಡದ ಶ್ರೀಮಂತ ಸೂರಯ್ಯನಂಥವರು ಸಾವಿರ ಸಾವಿರ ಜನರು ಅವರಿಂದ ಶಿವದೀಕ್ಷಾಸಂಸ್ಕಾರ ಪಡೆದು ವೀರಶೈವರಾಗಬೇಕಾ ದರೆ ಆತನ ಆ ಆಚಾರ್ಯನ ಪ್ರಭಾವ ಸಣ್ಣದೆಂದು ಹೇಳಲು ಸಾಧ್ಯವಿಲ್ಲ. ಅದು ಮೂರು ಪ್ರಾಂತಗಳಿಗೂ ಹಬ್ಬಿತ್ತು ; ಹರವಾಗಿತ್ತು. ಕಳ್ಳರು ಕಾಕರು ಲಿಂಗ ಸಂಸ್ಕೃತಿಗೆ ಮನ ಮಾರುಹೋದರು. ಲಿಂಗವಂತಿಕೆಯನ್ನು ಅಂಗವಿಸಿಕೊಂಡರು. ಕಳವು ಕೊಲೆ ಸುಲಿಗೆಗಳನ್ನು ಬಿಟ್ಟು ಸರ್ವಾದರ್ಶಜೀವನವನ್ನು ಸಾಗಿಸಿ ಯಶಸ್ವಿ ಗಳಾದರು. ಸಾರ್ಥಕ ಜೀವಿಗಳಾದರು. ಶಾಶ್ವತ ಚಾರಿತ್ರರಾದರು. ಸರ್ವಾ ದರ್ಶರೂ ಆದರು.

'ಫೇದಗಡಿ ಜಾ' ಎಂಬುದೇ ಮಂತ್ರವಾಗಿ, ಕೊಟ್ಟ ಕಲ್ಲೇ ಸಲ್ಲಿಂಗ ವಾಗಿ ಪರಿಣಮಿಸಬೇಕಾದರೆ, ದಿಟಕ್ಕು ಉರಿಲಿಂಗಾಚಾರ್ಯರು ಉಪದೇಶಿಸಿದ ಮಂತ್ರದಲ್ಲಿ. ಕರುಣಿಸಿದ ಕರದಿಷ್ಟದಲ್ಲಿ ಅದೆಂತಹ ಶಕ್ತಿಯಿರಬೇಕೆಂಬುದನ್ನು

ಊಹಿಸಲೂ ಸಹ ಅಸಾಧ್ಯ, ತಾನೆ ? ಕನ್ನು ಜ್ಯೋತಿರ್ಲಿಂಗವನ್ನಾಗಿಸಿದ ಪರಮ ಪ್ರಭಾವ ಗುರು–ಶಿಷ್ಯರಿಬ್ಬರದೂ ಆಗಿದೆ. ಗುರು ಧರ್ಮಪ್ರಭಾವಿಯಾದ. ಅಜ್ಞಾನಿ ಅನಾಚಾರಿ ಶಿಷ್ಯ ಜ್ಞಾನಿ ಸದಾಚಾರಿಯಾದ. ಅದೇಕೆ ಶ್ರೇಷ್ಠ ಗುರುವೇ ಆದ. ಜಗಕ್ಕೆ ಅಚ್ಚರಿಯಾದ ಉತ್ಕ್ರಾಂತಿಯಿದು.

"ಸೃಷ್ಟಿಗಚ್ಚರಿಯ ತೋರಿಸಿ ಮೆರೆದ ಗುರುಭಕ್ತ
ಶಿಷ್ಯ ಶಿವನೊಂದಾದುದು ಮಹತ್ತು ಕಲ್ಲು ತಾ-
ನಿಷ್ಟಲಿಂಗವಾಗಿ ತೋರುತಿಹುದೆಂದು ಮಿಗೆ ಉಪದೇಶಗಳ ಮಾಡುತ
ಅಷ್ಟವೈಭವದಿ ಸ್ವಾಚಾರ್ಯ ಸಿಂಹಾಸನಕೆ
ಶ್ರೇಷ್ಠಶಿವನುರಿಲಿಂಗದೇವ ಮೈಸಿರಿದನುತ-
ಧೀಷ್ಟಿಯಿಂ ಮೆರೆದನು ಭಕ್ತಿಯಿಂ ನಿಜಶಿಷ್ಯಲಿಂಗದೊಳು ಬೆರೆದ ॥

—ಪ್ರೌಢರಾಯನ ಕಾವ್ಯ.

ಅಪ್ರತ್ಯಕವಿ ಕವಿಸಿದಂತೆ ಪೆದ್ದಿ ಉರಿಲಿಂಗ (ಜ್ಯೋತಿರ್ಲಿಂಗ ಗುರು ನಾಮ) ಪೆದ್ದಯ್ಯನನ್ನಾಗಿ ತನ್ನ ಆಚಾರ್ಯ ಸಿಂಹಾಸನವನ್ನೇರಿ ಶಿವಾಚಾರ್ಯ ಶ್ರೇಣಿಯಲ್ಲಿ ಶ್ರೇಷ್ಠ ಸ್ಥಾನ ಮಾನ ಲಭ್ಯವಾಗಿವೆ. ೧೧ನೆಯ ಶತಮಾನದ ಶಿವಾಚಾರ್ಯರಲ್ಲೊಬ್ಬನಾಗಿ ವೀರಶೈವ ಉತ್ಕ್ರಾಂತಿಯನ್ನೆಸಗಿದ್ದಾನೆ. ಗುರು–ಶಿಷ್ಯರ ವೀರಶೈವ ಉತ್ಕ್ರಾಂತಿ ಉನ್ನತೋನ್ನತ ! ಅನನ್ಯಾದೃಶ !! ಜನತೆಯ ಜೀವನದಲ್ಲಿ ಆಳವಾಗಿ ಊರಿದ್ದ ಭವದ ಬೇರನ್ನು ಕಿತ್ತೆಸೆದು ಶಿವಸಂಸ್ಕಾರವನ್ನು ಶಿವಸೌಂದರ್ಯವನ್ನು ತುಂಬಿ, ಹೃದಯ ಮಾಧುರ್ಯವನ್ನು ಹರಿಯಿಸಿ, ಮಾನವೀಯ ಮೌಲ್ಯವನ್ನು ಉಳಿಸಿ ಬೆಳೆಸಿ ಬೆಳಗಿಸುವಲ್ಲಿ ಉರಿಲಿಂಗದೇವ ಶಿವಾಚಾರ್ಯರ ಪಾತ್ರ ಪರಮಾದರ್ಶವಾದುದು. ಉತ್ಕ್ರಾಂತಿ ಉತ್ತುಂಗ ಶಿಖರವನ್ನೇರಿ ಶೋಭಿಸುವಂಥದು. ಈ ದಿಸೆಯಲ್ಲಿ ಅವರ ಉತ್ಕ್ರಾಂತಿ ಮಹಾಸ ಮಹತ್ತರವಾದುದು. ವಿಶ್ವಮಾನ್ಯವಾದುದು. ಅದನ್ನು ಗುರುತಿಸುವ ಕಣ್ಣು ನಮಗಿಲ್ಲ. ವರ್ಣಭೇದವನ್ನು ಸುಟ್ಟು ಬೂದಿ ಮಾಡುವಲ್ಲಿ ಉರಿಲಿಂಗದೇವ ಶಿವಾಚಾರ್ಯನು ದಿಟಕ್ಕೂ ಜೀವಂತ ಜ್ಯೋತಿರ್ಲಿಂಗವಾಗಿ ಪ್ರಜ್ವಲಿಸಿದ್ದಾನೆ. ಪೆದ್ದಿಯನ್ನು ಗುರುವನ್ನಾಗಿಸಿದ ಕ್ರಾಂತಿ ಉತ್ಕ್ರಾಂತಿಯಲ್ಲದೆ ಮತ್ತೇನು ? ಧೀರೋದಾತ್ತತೆಯಲ್ಲದೆ ಇನ್ನೇನು ? ೧೧ನೆಯ ಶತಮಾನದ

ಸರ್ವೋನ್ನತ ಕ್ರಾಂತಿಯಾಗಿ ಮಾತ್ರ ಉಳಿಯಲಿಲ್ಲ ; ಇಂದಿಗೂ ಉತ್ಕ್ರಾಂತಿಯಾಗಿಯೆ ಉಳಿದಿದೆ ; ಉಳಿಯುತ್ತದೆ.

ಗುರುದೇವನ ಆ ಕಾರುಣ್ಯವನ್ನು ಉಳಿಸಿ ಬೆಳೆಸಿ ಕಳಾತ್ಮವನ್ನಾಗಿಸಿದ ಉರಿಲಿಂಗಪೆದ್ದಿಯ ಶಕ್ತಿಯೂ ಸಣ್ಣದೇನಲ್ಲ. ಆಚಾರ್ಯನ ಆ ಮಹಾಕಳಾಚೈತನ್ಯವೇ ಆತನಲ್ಲಿ ಅವತರಣಗೊಂಡಿತು; ಆದರ್ಶತೆಗೇರಿಸಿತು. ಅವರಿಬ್ಬರೂ ಆ ಯುಗದ ಆ ಮಣಿಹದ ಮಹಾಚೈತನ್ಯಗಳು.

> "ಕಕ್ಷೆ ಕರಸ್ಥಲ ಉತ್ತಮಾಂಗ ಉರಸ್ಥಲ ಮೊದಲಾದ ಸ್ಥಾನಂಗಳಂ
> ಶುದ್ಧವಂ ಮಾಡಿ, 'ಯಾ ತೇ ರುದ್ರ ಶಿವಾ ತನೂರಘೋರಾಽ
> ಪಾಪಕಾಶಿನೀ' ಎಂಬ ಶಿವಲಿಂಗ ಮೂರ್ತಿಯಂ ಸ್ಥಾಪಿಸಿ
> ತತ್ ಶಿಷ್ಯನ ಶರೀರವೆನದೆ ಶಿವಾಲಯವೆಂಬಂತೆ
> ಶ್ರೀಗುರು ಪಾವನವ ಮಾಡಿ ತೋರಿದನಾಗಿ,
> ಅಂಗದ ಮೇಲೆ ಲಿಂಗವುಳ್ಳವರ ಕಂಡು ಮರಳಿ ಮಾನವರೆಂದರೆ
> ನಾಯಕ ನರಕ ತಪ್ಪದಯ್ಯಾ, ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ !"

ಜ್ಯೋತಿರ್ಲಿಂಗಸ್ವರೂಪನಾದ ಉರಿಲಿಂಗ ಶಿವಾಚಾರ್ಯರ ಕಾರುಣ್ಯಕಳೆಯಿಂದ ಪ್ರೇರಿತನಾದ ಉರಿಲಿಂಗಪೆದ್ದಿ ಶಿವಾಚಾರ್ಯನ ವಚನಗೀತವಿದು. ದೀಕ್ಷಾಸಂಸ್ಕಾರ ಮಹಾ ಮೌಲ್ಯವಿದು. ಆ ಮೌಲ್ಯಕ್ಕೆ ಒರೆಗಲ್ಲು ಇಲ್ಲಿದೆ :

"ವೇದ ವಾಕ್ಯವಿಚಾರಕ್ಕೆ ಬೀಜ. ಶಾಸ್ತ್ರ, ವಾಕ್ಯ ಸಂದೇಹಕ್ಕೆ ಬೀಜ. ಪುರಾಣ, ವಾಕ್ಯಪುಣ್ಯಕ್ಕೆ ಬೀಜ. ಭಕ್ತಿಫಲ ಭವಮುಕ್ತಿಗೆ ಬೀಜ. ಏಕೋಭಾವದ ನಿಷ್ಠೆ ಸಮ್ಯಕ್‌ಜ್ಞಾನಕ್ಕೆ ಬೀಜ. ಸಮ್ಯಕ್‌ಜ್ಞಾನ, ಅದ್ವೈತಕ್ಕೆ ಬೀಜ. ಅದ್ವೈತ, ಅರಿವಿಂಗೆ ಬೀಜ. ಅರಿವನಾರಡಿಗೊಂಡು ಕುರುಹಿಲ್ಲದ ಲಿಂಗದಲ್ಲಿ ತೆರೆಹಿಲ್ಲದಿಪ್ಪಂದಪನರಿಯಾ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ !"

ಇಲ್ಲಿ ವೇದಶಾಸ್ತ್ರ ಪುರಾಣಗಳ ಫಲಮೀಮಾಂಸೆ ಮನನೀಯ ; ಭಕ್ತಿ ಏಕೋಭಾವ ಸಮ್ಯಕ್‌ಜ್ಞಾನ ಶಿವಾದ್ವೈತಗಳ ಫಲಮೀಮಾಂಸೆ ಆನುಭಾವಿಕ. ಮುಂದುವರಿದ ಕುರುಹಿಲ್ಲದ ಲಿಂಗ (ಜ್ಯೋತಿರ್ಲಿಂಗ)ದಲ್ಲಿ ತೆರಹಿಲ್ಲದ ಅಂದದ ಅಖಂಡಾನುಭೂತಿಯ ಸಿದ್ಧಿ ಅನನ್ಯಸಾಧಾರಣವಾದುದು. ಉರಿಲಿಂಗಪೆದ್ದಿಯ

ಉತ್ಕಟಸಾಧನದ ಮತ್ತು ಗುರುದೇವನ ಕಾರುಣ್ಯಪ್ರಭಾವದ ಪ್ರತೀಕವಾದುದು. ವೇದಶಾಸ್ತ್ರಪುರಾಣಾದಿಗಳನ್ನು ಮೀರಿದ ಭಕ್ತಿ ಭಾವ ಸಮ್ಯಕ್ ಜ್ಞಾನಗಳನ್ನು ಮೀರಿದ ಸ್ವಯ ಪರಿಣಾಮದ ಪೂರ್ಣತೆಯಿಂದ ಪರಿಣಾಮದ ಪರಿಭಾವನೆಯನ್ನು ಆತನ ಈ ಸಿದ್ಧತೆ ತಂದು ಕೊಡುತ್ತದೆ. ಆತನ ಅದ್ಭುತ ಶಕ್ತಿಯು ಅಗಾಧ ಅನುಭವದ ಅವಿರಳ ಪರಿಣಾಮದ ಪರಿಚಯವುಂಟಾಗುತ್ತದೆ. ಉರಿ (ಜ್ಯೋತಿ) ಲಿಂಗವೇ ಆಗಿದ್ದನೆನ್ನುವುದು ಸಂದೇಹವಿರದು. ಗುರುದೇವನ ಸತ್‌ಸಂಸ್ಕಾರ ಪ್ರಭಾವ ಆತನಿಗೆ ಅದೆಷ್ಟಾಗಿರಬೇಕೆಂಬುದನ್ನು ಆಳವಾಗಿ ಚಿಂತನ ಮಾಡ ಹಚ್ಚುತ್ತದೆ. 'ತೆರಹಿಲ್ಲದಿಪ್ಪಂದವನರಿಯಾ' ಎಂಬೀ ಮಾತಿನ ಮನೋಬಲ ಮಹತ್ತರವಾದುದು. ಮಾತಿಗೆ ನಿಲುಕದ್ದು. ಅಂತೆಯೇ ಆತನ ಗುರುವಿನ ಅದ್ಭುತಶಕ್ತಿಗೂ ಸಾಂಸ್ಕಾರಿಕ ದೀಪ್ತಿಗೂ ಮಾನವೀಯ ಮನೋಭಾವಕ್ಕೂ ತೆರಹಿಲ್ಲ. ವೀರಶೈವ ಸಿದ್ಧಾಂತವನ್ನು ವರ್ಣರಹಿತ ವಿಚಾರವನ್ನು ಪ್ರಯೋಗಕ್ಕೆ ತಂದ ಪರಮಾದರ್ಶ ಶಿವಾಚಾರ್ಯ ಆದಿರೇಣುಕರ ತರುವಾಯ ಆ ಶಕ್ತಿಯನ್ನು ಆ ದೀಪ್ತಿಯನ್ನು ಉರಿಲಿಂಗದೇವ ಶಿವಾಚಾರ್ಯನಲ್ಲಿ ಸಂದರ್ಶಿಸುತ್ತೇವೆ. ಏಟಕ್ಕೂ ಆತನದು ಅವಿಸ್ಮರಣೀಯ ಉತ್ಕ್ರಾಂತಿ! ಊರ್ಜಿತ ದೀಪ್ತಿ! ಆತನೊಬ್ಬ ವಿಶಾಲ ಮನೋಭಾವದ ವಿಭೂತಿ! ಯಾವ ಒಂದು ಮುಂದಿನ ಮಂಟಪಗಳೂ ವ್ಯಕ್ತಿಗಳೂ ಕಾಣದ ಮಹಾದಾನಿಯವನು! ಲಿಂಗಮುಟ್ಟಿ ಲಿಂಗವಾಗುವ ಕ್ರಾಂತಿ ಮಾತ್ರ ವೀರಶೈವವಲ್ಲ. ಗುರುಮುಟ್ಟಿ ಗುರುವಾಗುವ ಉತ್ಕ್ರಾಂತಿ ವೀರಶೈವವೆಂದು ಚಿತ್ರಿಸಾರಿದ ಉತ್ಕ್ರಾಂತಿ ಉರಿಲಿಂಗದೇವ ಶಿವಾಚಾರ್ಯರದು. ವ್ಯಕ್ತಿತ್ವಕ್ಕೆ ಹುಟ್ಟು ಮುಟ್ಟು ಹೆಸರು ರೂಹು ಮುಖ್ಯವಲ್ಲ. ಗುಣಕ್ರಿಯೆಗಳು ಮುಖ್ಯವೆಂಬುದನ್ನು ಸ್ವಂತ ಪ್ರಯೋಗದಲ್ಲಿ ತಂದುತೋರಿದ ಮಹಾನುಭಾವ ಉರಿಲಿಂಗದೇವ! ಯಾವ ಗುಣಕ್ರಿಯೆಗಳಿಲ್ಲದ ಪೆದ್ದಿಯನ್ನು ಮುಟ್ಟಿ ಉರಿಲಿಂಗ (ಜ್ಯೋತಿರ್ಲಿಂಗ) ಅಥವಾ ತನ್ನಂತೆ ಮಾಡಿಕೊಂಡ ವಿಭೂತಿ ಪುರುಷ ಉರಿಲಿಂಗದೇವ!

## ಚಂಗಳಗಿಲ ಮಂಟಪದ ಮಹಾಚಾರ್ಯ
## ಮರುಳಸಿದ್ಧ ಶಿವಾಚಾರ್ಯ!

ಇವರದು ಹನ್ನೊಂದನೆಯ ಶತಮಾನದ ಉತ್ತರ ಭಾಗ. ಇವರ

ಗುರುವಾದ ರೇವಣಸಿದ್ಧರು ರಚಿಸಿದ ಚಂಗಣಗಿಲ ಮಂಟಪ ಇವರ ಕಾರ್ಯ ಕ್ಷೇತ್ರ. ಅರುವತ್ತೆಂಟು ಸಾವಿರ ವಚನಗಳನ್ನು ರಚಿಸಿ ಕನ್ನಡ ಸಾಹಿತ್ಯ ಸೇವೆಯನ್ನು ವೀರಶೈವ ಸಾಂಸ್ಕೃತಿಕ ಸೇವೆಯನ್ನು ಅಸಾಮಾನ್ಯವಾಗಿ ನೆರವೇರಿಸಿರುವರು. ವೀರಶೈವ ಧರ್ಮೋನ್ನತಿಗಾಗಿಯೂ ದುಡಿದವರು. ಸೊನ್ನಲಿಗೆಯ ಸಿದ್ಧರಾಮೇಶ್ವರರು ತಮ್ಮ ವಚನವೊಂದರಲ್ಲಿ ಮರುಳಸಿದ್ಧ ಶಿವಾಚಾರ್ಯರನ್ನು ನೆನೆದುದಲ್ಲದೆ ೬೮ ಸಾವಿರ ವಚನ ರಚನೆಯನ್ನು ಉಲ್ಲೇಖಿಸಿರುವರು. ಅಲ್ಲದೆ ಆದಯ್ಯ ಶಿವಶರಣನು "ಮರುಳಸಿದ್ಧಯ್ಯ ದೇವರ ಅದೃಷ್ಟಪ್ರಸಾದ ನಿಷ್ಠೆ" ಎಂದು ಹೇಳಿ ಮರುಳಸಿದ್ಧರ ಅದೃಷ್ಟ ಪ್ರಸಾದ ನಿಷ್ಠೆಯನ್ನು ನೆನೆದಿದ್ದಾನೆ.

"ಆಲಿ ಆಲಯದಲ್ಲಿ ಕರಿಗೊಳಲು
ಆಲಿಸುವ ಶ್ರವಣವು ಮೇಲಿಪ್ಪ ಆಕಾಶವನಡರಲು
ಉಲುಹು ನಿರ್ಭೂತ ಚಿತ್ತಸಮಾಧಾನವನೆಯ್ದಲು
ಕಾಲ ಕರ್ಮ ಭವಂಗಳ ಗೆಲುವುದಿದೇನು ಸೋಜಿಗವು ಹೇಳಾ
ರೇವಣಪ್ರಭುವೇ ?

ರೂಪ ಶಬ್ದಗಳು ಪೂರ್ವಾಶ್ರಯ ಭೂತತ್ವವನ್ನು ನಿರಸನಗೊಳಿಸಲು ಆ ಲಿಂಗಾರ್ಪಿತವಾಗಿ ಪ್ರಸಾದವಾಗಲು ಕಾಲ ಕರ್ಮ ಭವಗಳನ್ನು ಗೆಲ್ಲುವುದೊಂದು ಆಚ್ಚರಿಯಲ್ಲೆಂದು ಮರುಳಸಿದ್ಧ ಶಿವಾಚಾರ್ಯನು ತನ್ನ ಗುರು ರೇವಣ ಪ್ರಭುವಿನಲ್ಲಿ ಬಿನ್ನವಿಸಿಕೊಂಡಿದ್ದಾನೆ. ಅದರಂತೆ ಆತನು ಪ್ರಾಸಾದಿಕತೆಯನ್ನು ಪಡೆದಿರಬೇಕು. ಅಂತೆಯೇ ಆತನು ಕೊಲ್ಲಾಪುರದ ಕರಟಾಸುರ ಕುಮಾರಿ ಯಾದ ಮಾಯೆಯನ್ನು ಗೆಲ್ಲಲು ಸಮರ್ಥನಾಗುತ್ತಾನೆ. ೧೧ನೇ ಶತಮಾನದ ಮರುಳಸಿದ್ಧ ಶಿವಾಚಾರ್ಯನು ಮಹಾಮಹಿಮನು, ಪವಾಡ ಪುರುಷನು. ನಾಡನ್ನೆಲ್ಲ ಸಂಚರಿಸಿ ವೀರಶೈವ ಸಂಸ್ಕೃತಿಯನ್ನು ಪ್ರಸಾರ ಮಾಡುವನು. ನವನಾಥಸಿದ್ಧನನ್ನು ವಾದದಲ್ಲಿ ಸೋಲಿಸುವನು. ಯಜ್ಞಯಾಗಗಳಲ್ಲಿ ನಡೆವ ಪ್ರಾಣಿವಧೆಯನ್ನು ತಪ್ಪಿಸಲು ಪ್ರಯತ್ನಿಸುವನು. ದಾರುಕರ ಅಪರಾವತಾರಿ ಯೆಂದು ಹೆಸರಾಂತಿರುವನು. ಈತನು ಈಚಿನವನೆಂದು ಹೇಳಲು ಯಾವ ದೃಷ್ಟಿಯಿಂದಲೂ ಸಾಧ್ಯವಿಲ್ಲ.

'ದಿ ಇಂಡಿಯನ್ ರಿವ್ಯೂ' ಮಾಸಪತ್ರಿಕೆ ೧೯೧೦ರ ಮೇ ಸಂಚಿಕೆಯಲ್ಲಿ ಮದ್ರಾಸಿನ ಶ್ರೀ ಟಿ.ಎನ್. ನಾರಾಯಣಶಾಸ್ತ್ರಿಗಳೆಂಬುವರು ಶ್ರೀಕರ ಭಾಷ್ಯಕಾರರಾದ ಶ್ರೀಪತಿ ಪಂಡಿತರು ತಮ್ಮ ಭಾಷ್ಯದ ಪ್ರಾರಂಭ ಮಾಡಿಕೆಯಲ್ಲಿ.

"ಶ್ರೀಮದ್ ರೇವಣದೇಶಿಕೇಂದ್ರ ವಿಭವಂ ಲಿಂಗಾವಧಾನೋಜ್ಜ್ವಲಂ ।
ಸಿದ್ಧಾರ್ಯಂ ಮರುಳಪ್ರಭುಂ ಬುಧನುತಂ ತಂ ಮನ್ಮಹೇ ಶ್ರೇಯಸೇ ॥"

ಎಂದು ಪ್ರಾರ್ಥಿಸುವ ಮೂಲಕ ಮರುಳಸಿದ್ಧಪ್ರಭು ಎಂದು ಹೇಳಿ ಗೌರವಿಸಿರುವನು. ಇದರಿಂದಾಗಿ ಮರುಳಸಿದ್ಧ ಶಿವಾಚಾರ್ಯನು ೧೧ನೆಯ ಶತಮಾನದವನು. ವೀರಶೈವ ಉತ್ಕ್ರಾಂತಿಗೆ ರೇವಣಸಿದ್ಧರೊಡನೆ ಒಂದಾಗಿ ಹೋರಾಡಿರುವನು. ಬುಧನುತನಾಗಿದ್ದನು. ೧೨ನೇ ಶತಮಾನದ ವಚನಕಾರರಿಂದಲೂ ನುತನಾಗಿರುವನು.

ಮರುಳಸಿದ್ಧ ಶಿವಾಚಾರ್ಯನು ೧೨ನೆಯ ಶತಮಾನದವನೆಂದು ಹೇಳುವುದು ಎಷ್ಟಕ್ಕೂ ಸರಿಯಲ್ಲ. ೧೨ನೆಯ ಶತಕದ ಶರಣರು ಈತನ ಯಾವ ಕ್ರಾಂತಿಯನ್ನು ಉಲ್ಲೇಖಿಸಿಲ್ಲ. ಸಮಕಾಲೀನನೆಂದು ಹೇಳಿಕೊಂಡಿಲ್ಲ. ವೃದ್ಧನಾಗಿ ೧೨ನೆಯ ಶತಕದಲ್ಲಿರಬಹುದೇನೊ ? ಆದರೆ ಆತನ ಕ್ರಾಂತಿ ೧೧ನೆಯ ಶತಕಕ್ಕೆ ಸೇರಿದುದೆಂದು ಆತನ ಐತಿಹಾಸಿಕ ಅವಶೇಷಗಳಿಂದ ಅವಗತವಾಗುತ್ತದೆ. ಆತನು ರೇವಣಸಿದ್ಧ ಶಿವಾಚಾರ್ಯರಲ್ಲಿ ದೀಕ್ಷಾಸಂಸ್ಕಾರ ಪಡೆದಿರುವಿಕೆ. 'ರೇವಣಪ್ರಭು' ಅಂಕಿತದಲ್ಲಿ ವಚನ ರಚಿಸುವಿಕೆ ರೇವಣಸಿದ್ಧ-ಮರುಳಸಿದ್ಧ-ಏಕೋರಾಮ-ಪಂಡಿತಾರಾಧ್ಯ ಎಂಬ ಪಂಕ್ತಿಯಲ್ಲಿ ಎಣಿಸುವಿಕೆ ಹನ್ನೊಂದನೆಯ ಶತಮಾನಕ್ಕೆ ಒಯ್ಯುವ ಕುರುಹುಗಳಾಗಿವೆ. ೧೧ ಮತ್ತು ೧೨ನೆಯ ಶತಕಗಳ ತುಲನಾತ್ಮಕ ಅಧ್ಯಯನ ಅದೆಷ್ಟಾದರೂ ಅಗತ್ಯ ! ಸಾಮಾಜಿಕ ಸಮನ್ವಯ ಸನ್ನಿಹಿತ !

## ಹಾವಿನಹಾಳ ಕಲ್ಲಯ್ಯ
(ಜಂಗಣಾಗಿಲ ಮಂಟಪದ ಮತ್ತೊಂದು ಕ್ರಾಂತಿಚೈತನ್ಯ)

ಈತನು ಹಾವಿನಹಾಳ ಊರಿನವನು. ೧೨ನೆಯ ಶತಮಾನದವನು.

ಐತಿಹಾಸಿಕ ಪುರುಷ ರೇವಣಸಿದ್ಧರ ಪುತ್ರ ರುದ್ರಮುನಿಯ ಮುಖ್ಯ ಶಿಷ್ಯ : ದೀಕ್ಷೆ ಪಡೆದಾತ. ಕೇದಾರ ಗುರುವಿನಲ್ಲಿ ಶಿವಾನುಭವದಲ್ಲಿ ಪಳಗಿದಾತ. ಅಕ್ಕ ಸಾಲಿಗನಾದರೂ ರುದ್ರಮುನಿಯ ಪ್ರಭಾವದಿಂದ ವೀರಶೈವ ಉತ್ಕ್ರಾಂತಿಗೆ ಉತ್ತೇಜನವನ್ನಿತ್ತವನು. ಇವನ ತಂದೆ ಶಿವನಯ್ಯ. ಮಂಗಳವಾಡದ ಮಂಡಲಾಧೀಶ್ವರ ಮೊದಲನೆಯ ಬಿಜ್ಜಳನ ಅಭಿಮಾನಕ್ಕೆ ಪಾತ್ರ. ಮಂಗಳವಾಡಕ್ಕೆ ಹತ್ತಿರ ಹಾವಿನಹಾಳ ಊರು. ಕಲ್ಲಯ್ಯನು ಗುರುಭಕ್ತಾಗ್ರಣಿ ; ಗುರುಪ್ರಾಣಿ. ರುದ್ರಮುನಿ ಗುರುವಿಗೆ ಮೆಚ್ಚಿ ತಂದೆಯುನ್ನು ಕಡೆಗಣ್ಣಿನಿಂದ ಕಂಡಾತ. ಅಷ್ಟೇ ಅಲ್ಲ ತನ್ನ ಗುರುಭಕ್ತಿಗೆ ಅಡ್ಡಬಂದ ತನ್ನ ತಂದೆ ಶಿವನಯ್ಯನನ್ನು ಕೈಬಿಟ್ಟ ಘನವಾದ ಗಣಾಚಾರಿ ! ಪೂರ್ವಾಶ್ರಯ ಪೂರ್ವಾಶ್ರಮ ನಿರಸಕ ! ಕರ್ಮಠರನ್ನು ವೇದಜಡರನ್ನು ವಾದದಲ್ಲಿ ಗೆದ್ದು ಸಾಧಿಸಿದಾತನು. ಈ ದಿಸೆಯಲ್ಲಿ ಈತನದು ಅದ್ಭುತ ಉತ್ಕ್ರಾಂತಿ ! ಅತ್ಯಂತ ಹೆಮ್ಮೆಯ ಉತ್ಕ್ರಾಂತಿ ! ರೇವಣಸಿದ್ಧರಿಂದ ಬಂದಿತ್ತು ಆತನಿಗೆ ಆ ವೈಚಾರಿಕ ವೀರ ಸಂಪತ್ತಿ, ವೀರಪ್ರಪತ್ತಿ ! ಆತ ವೀರ ಶಿವಜ್ಞಾನಿ, ವೀರ ಶಿವಾನುಭಾವಿ. ಲೋಕಾಯತ, ಬೌದ್ಧ, ಚಾರ್ವಾಕ, ವಿಪ್ರರನ್ನು ಶಾಸ್ತ್ರೀಯ ಪ್ರಜ್ಞೆಯಿಂದ ಜಯಿಸಬಲ್ಲ ಶಕ್ತಿಯುನ್ನು ಸಂಪಾದಿಸಿದ್ದ ರೇವಣಸಿದ್ಧ ರುದ್ರಮುನಿ ಕೇದಾರ ಗುರುಗಳಿಂದ ! ಇದರಿಂದಾತನಾಗಿದ್ದ ಲೋಕಪ್ರಸಿದ್ಧ । ತನ್ನ ಕರುಳನ್ನು ಕತ್ತಿಯಿಂದ ಇರಿದು ಹೊರತೆಗೆದರೂ ಅಸುನೀಗದೆ ಬದುಕಿದಾತ ; ಮತ್ತು ಹಾವು ಕಚ್ಚಿದರೂ ಸಾಯದೆ ನೋಯದೆ, ಸತ್ತ ಹಾವನ್ನೇ ಮರಳಿ ತನ್ನ ಮಂತ್ರಶಕ್ತಿಯಿಂದ ಬದುಕಿಸಿದ ಮಂತ್ರಸಿದ್ಧ.

ಅಂತಹ ಅಗಾಧ ಶಕ್ತಿಯುನ್ನು ತನ್ನ ಗುರುದೇವನಿಂದ ಪಡೆದ ಪುಣ್ಯಾತ್ಮ ! ಆತನೊಬ್ಬ ಗೃಹಸ್ಥ. ಆತ ಪುರಾತನರ ಸ್ತುತಿಯಲ್ಲಿ ಪ್ರಾನುಭೂತಿಯಲ್ಲಿ ಪ್ರವೀಣಳಾದವಳನ್ನು ಮದುವೆಯಾಗಿದ್ದ । ಆತನ ಗೃಹಸ್ಥಧರ್ಮ ಆದರ್ಶ ! ಆತನದು ಸತಿಪತಿಗಳೊಂದಾದ ಜೀವನಕ್ರಮ ! ಇದು ಆತನ ಗುರುವಿನ ಗುರುವಾದ ರೇವಣಸಿದ್ಧರಿಂದ ಬಂದ ಕಾರುಣ್ಯಸಂದೇಶ ! ಆತನ ಧರ್ಮಪತ್ನಿಯ ಹೆಸರು ತಿಳಿದು ಬಂದಿಲ್ಲ ಆತನಿಗೊಬ್ಬ ಮಗಳು, ಅವಳ ಹೆಸರು ಕಲ್ಲವ್ವೆ ! ಮಗಳು ಮಹಾ ಭಕ್ತಿವಂತೆ ; ಭಾವವಂತೆ ! ಅಚ್ಚ ಶೀಲವಂತೆ !

ಒಮ್ಮೆ ಆತನ ಬಾಳಿನಲ್ಲಿ ಶೀಲಾಚಾರದ ಬಗೆಗೆ ಅತೀಂದ್ರಿಯ ಶಕ್ತಿಯ ಬಗೆಗೆ ವಿಪ್ರರೊಡನೆ ವಾದವೊದಗುವುದು. ಆಗ ತನ್ನ ನಾಯಿಯ ಬಾಯಿಯಿಂದ ಯಜುರ್ವೇದವನ್ನು ಪಠಿಸುವಂತೆ ಮಾಡಿ, ತನಗಿರುವ ಅಗಾಧ ಸಾಮರ್ಥ್ಯ ಪ್ರಭಾವವನ್ನು ಪ್ರದರ್ಶಿಸುವನು. ಆತನ ಮನೆಯ ನಾಯಿಗೂ ಆ ಬಗೆಯ ಸಂಸ್ಕಾರ! ಆ ಬಗೆಯ ಸಂಸ್ಕೃತ ಪ್ರಜ್ಞೆ! ವಾಕ್‌ಶಕ್ತಿಯ ಆವಿಷ್ಕಾರ! ಸಂಸ್ಕೃತದಂತೆ ಕನ್ನಡದಲ್ಲಿಯೂ ಪಳಗಿದಾತ! ಚಂಗಣಗಿಲ ಮಂಟಪ ಪ್ರಭಾವದಿಂದ ವಚನಗಳನ್ನು ರಚಿಸಿರುವನು. ಮುಂದಿನ ಶತಮಾನದವರು ಆತನ ವಚನಗಳನ್ನು ಮನ್ನಿಸುತ್ತಾರೆ; ಅನುಕರಿಸುತ್ತಾರೆ. "ಹರವಸ" ಪಾರಿಭಾಷಿಕ ಪದ ಆತನ ಕೊಡುಗೆ! ಮಹಾಲಿಂಗವೇ ಆತನ ಅಂಕಿತದ ಉಪಾಸನೆಯ ಕಲ್ಲಯ್ಯ! ಆತನ ಆ ಮಹಾಲಿಂಗದ ಮುಂದೆ ಉಪನಿಷದ್ವಾಕ್ಯ ಅಮುಖ್ಯ. ಆತನ ಆ ಮಹಾಜ್ಞಾನುಭಾವಸಿದ್ಧಿಗೆ ತನ್ನ ಗುರುವಾಕ್ಯವೇ ವಚನವೇ ಮಂತ್ರವೇ ಮುಖ್ಯ! ಸಮತೆ ಸಮಾಧಾನಗಳಿಲ್ಲದ ಯೋಗ ಅದಾವುದೇ ಆಗಲಿ ಅದು ಯೋಗ್ಯವಲ್ಲ. ಅದಕ್ಕೆ ಅರ್ಥವಿಲ್ಲ. ಅವಿಲ್ಲದವರು ಅವರು ಎಂತಹ ಜ್ಞಾನಿಗಳಾದರೂ ಅಜ್ಞಾನಿಗಳು. "......ಅಷ್ಟಾಶೀತಿ ಸಹಸ್ರ ಋಷಿಯರು ಸಮತೆ ಸಮಾಧಾನ ನೆಲೆಗೊಳ್ಳದೆ ನಾನಾ ಯೋನಿಯಲ್ಲಿ ಬಂದರು: ಮಹಾಲಿಂಗ ಕಲ್ಲೇಶ್ವರದೇವಾ, ಸಮತೆ ಸಮಾಧಾನ ಸಹಜವಾದುದೇ ಮುಕ್ತಿಕ್ಷೇತ್ರ" ಎನ್ನುತ್ತಾನೆ, ಸಮತಾವಾದಿ ಕಲ್ಲಯ್ಯ! ಆತನ ಆ ಸಮತಾವಾದದ ಕ್ರಾಂತಿ ಆದರ್ಶ! ಹುಟ್ಟು ಸಾವಿನ ಸಮಸ್ಯೆಯನ್ನು ಆತನು ಅನುಪಮವಾಗಿ ಬಿಡಿಸಿದ್ದಾನೆ. ದಾನಿ, ಧೀರ, ಧನವಂತ(ವೀರ)ರ ಲಕ್ಷಣ ಪರೀಕ್ಷೆಯಲ್ಲಿ ಪ್ರವೀಣ. ಬಿನ್ನಾಣಿಗ ಬಿನ್ನಾಣಿ. ಆತನ ಮಹಾಲಿಂಗ ಕಲ್ಲೇಶ್ವರ! "ಕರ್ಪುರದುರಿಯ ಸಂಗದಂತೆ ಗುರುಪಾದ ಸೋಂಕು" "ಜ್ಞಾನವಾದ ಬಳಿಕ ಜಡಕರ್ಮವಿಹುದೆ?" "ಜಡಬುದ್ಧಿಗಳೆದು ಜಾಣನಾಗಿ ಶಿವಭಕ್ತರ ಕೂಡೆ ಸಲ್ಲದು." "ಹಮ್ಮು ಬಿಮ್ಮು ಸೊಮ್ಮಳಿದು ಮಹಾಲಿಂಗ ಕಲ್ಲೇಶ್ವರ ತಾನಾದ ಬಳಿಕ ಏನೆಂದೆನಲುಂಟು" ಈ ನುಡಿಗಳಲ್ಲಿ ಕಲ್ಲಯ್ಯನ ಸ್ವಾನುಭಾವದ ಮಿಂಚನ್ನು ಕಾಣಬೇಕು.

"ಅತ್ಯಾಶೆಯೆಂಬುದೇ ಪಾಪ; ಬೇರೆ ಪಾಪವೆಂಬುದಿಲ್ಲ ಕಂಡಿರೇ

ಅಯ್ಯಾ ! ಪರಿಣಾಮವೆಂಬುದೇ ಪರಮಾನಂದ ; ಬೇರೆ ಪರಮಾನಂದವಿಲ್ಲ ಕಂಡಿರೇ ಅಯ್ಯ ! ಇಹಪರದಾಶೆಯಿಲ್ಲದಿಹುದೇ ಶಿವಯೋಗ, ಬೇರೆ ಶಿವ ಯೋಗವಿಲ್ಲ ಕಂಡಿರೇ ಅಯ್ಯ–ಮಹಾಲಿಂಗ ಕಲ್ಲೇಶ್ವರ ಬಲ್ಲ." ಈ ವಚನದಲ್ಲಿ ಪಾಪ, ಆನಂದ, ಶಿವಯೋಗಗಳ ನಿಶ್ಚಯ ಪ್ರಜ್ಞೆಯನ್ನು ಪ್ರದರ್ಶಿಸುತ್ತೇವೆ. ಜೊತೆಗೆ ರೇವಣಸಿದ್ಧ ರುದ್ರಮುನಿಗಳಿಂದ ಶಿವಯೋಗದ ನಿಲವನ್ನು ಕಂಡು ಕೊಂಡುದನ್ನು ಕಾಣುತ್ತೇವೆ. ಅತನ ಆ ಸ್ವಾನುಭಾವದ ಪರಿಪಕ್ವತೆಗೆ ಈ ವಚನವೂ ಸತ್ಯಸಾಕ್ಷಿಯನ್ನೀಯುತ್ತದೆ. ಆ ವಚನವಿದು :

"ಉದಕದ ತಂಪುವ ತಾವರೆಯಲ್ಲದೆ ಹೊರಗಣ ಕೊರಡೆತ್ತಬಲ್ಲುದೊ ?
ಹೂವಿನ ಪರಿಮಳವ ತುಂಬಿಯಲ್ಲದೆ ಹೊರಗಣ ನೊಣವೆತ್ತಬಲ್ಲುದೋ ?
ಕ್ಷೀರದ ರುಚಿಯ ಹಂಸೆಯಲ್ಲದೆ ಕೆಲದಲ್ಲಿದ್ದ ಬಕನೆತ್ತಬಲ್ಲುದೋ ?
ಮಾವಿನ ಹಣ್ಣಿನ ರುಚಿಯನು ಅರಗಿಳಿಗಳು ಬಲ್ಲವಲ್ಲದೆ ಹೊರಗಣ
ಕೋಳಿಗಳೆತ್ತಬಲ್ಲವೋ ?
ಊಟದ ರುಚಿಯನು ನಾಲಗೆಯಲ್ಲದೆ ಕಲಸುವ ಕೈ ತಾನೆತ್ತಬಲ್ಲದೋ ?
ಕೂಟದ ಸುಖವನು ಯೌವನೆಯಲ್ಲದೆ ಬಾಲೆ ತಾನೆತ್ತ ಬಲ್ಲಳೋ ?
ಚಂದ್ರ ಸೂರ್ಯರ ಅಂತರರ ಖೇಚರರು ಬಲ್ಲವಲ್ಲದೆ ಗಗನದೊಳಗಾಡುವ
ಹದ್ದುಗಳು ತಾವೆತ್ತ ಬಲ್ಲವೋ ?
ಎಲೆ ಮಹಾಲಿಂಗಕಲ್ಲೇಶ್ವರಯ್ಯಾ, ನಿಮ್ಮ ನಿತ್ಯನಿಜೈಕ್ಯರ ನಿಲವನು
ಮಹಾನುಭಾವಿಗಳು ಬಲ್ಲರಲ್ಲದೆ
ಲೋಕದ ಜಡಜೀವಿಗಳೆನಿಸುವ ಮಾನವರೆತ್ತಬಲ್ಲರೋ ?"

ಲೋಕಾನುಭವದಿಂದ ಅಲೌಕಿಕಾನುಭವ ಸಾಮರ್ಥ್ಯವನ್ನು ಸಮರ್ಥಿಸುವ ವಾಕ್‌ಶಕ್ತಿ ಪರಿಣಾಮಕಾರಿಯಾಗಿದೆ. ಸರಳ ಸಹಜ ಶೈಲಿಯ ಸೌಂದರ್ಯ ದಿಂದ ಮಾಧುರ್ಯದಿಂದ ಕೂಡಿದೆ. ರೇವಣಸಿದ್ಧರ ಚಗಣಗಿಲ ಮಂಟಪದಲ್ಲಿ ನಿತ್ಯ ನಿಜೈಕ್ಯರಿದ್ದರೆಂಬುದು ಸ್ಫುಟವಾಗುತ್ತದೆ ಮತ್ತು ಮಹಾನುಭಾವಿಗಳೂ ಇದ್ದರೆಂಬುದು ಸಿದ್ಧವಾಗುತ್ತದೆ. ಅಂತಹ ಮಹಾನುಭಾವಿನಗಳಲ್ಲಿ ಹಾವಿನ ಹಾಳ ಕಲ್ಲಯ್ಯಗಳೂ ಒಬ್ಬರು. ಇದನ್ನು ಇನ್ನೂ ಸಮರ್ಥಿಸುತ್ತದೆ ಪ್ರಸಾದಾ ರ್ಪಣ ವೈಚಾರಿಕ ಕ್ರಾಂತಿ ವಚನವಿದು :

"ಜಂಗಮದ ಪಾದೋದಕವ ಲಿಂಗಮಜ್ಜನಕ್ಕೆರೆದು ಆ ಜಂಗಮದ

ಪ್ರಸಾದವನೇ ಲಿಂಗಕ್ಕೆ ಅರ್ಪಿಸುವ ಅವಿವೇಕಿಗಳು ನೀವು ಕೇಳಿರೇ ! ಅಟ್ಟೋಗರವ ನಟ್ಟಿಹೆನೆಂಬ. ಕಾಷ್ಠವ ಸುಟ್ಟು ಬೂದಿಯ ಮಾಡಿ ಮರಳಿ ಸುಟ್ಟಿಹೆನೆಂಬ ಭ್ರಮಿತರು ನೀವು ಕೇಳಿರೇ ! ಪದಾರ್ಥಪ್ರಸಾದವಾದುದು ಇಷ್ಟಲಿಂಗದ ಮುಖ ದಿಂದ. ಆ ಇಷ್ಟಲಿಂಗವ ಸೋಂಕಿ ಬಂದ ಆದಿಪ್ರಸಾದವೇ ಪ್ರಾಣಲಿಂಗಕ್ಕೆ ಅಂತ್ಯ ಪ್ರಸಾದ. ಆ ಪ್ರಾಣಲಿಂಗಮುಖದಲೊದಗಿದ ಅಂತ್ಯಪ್ರಸಾದವೇ ಭಾವಲಿಂಗಕ್ಕೆ ತೃಪ್ತಿಮುಖದಲ್ಲಿ ಸೇವ್ಯಪ್ರಸಾದ. ಇಂತೀ ಆದಿಪ್ರಸಾದ, ಅಂತ್ಯ ಪ್ರಸಾದ, ಸೇವ್ಯಪ್ರಸಾದಗ್ರಾಹಕವೇ ಜಂಗಮ. ಇಷ್ಟಲಿಂಗವಿಡಿದು ಗುರು, ಇಷ್ಟಲಿಂಗವಿಡಿದು ಭಕ್ತ, ಇಷ್ಟಲಿಂಗವಿಡಿದು ಜಂಗಮ. ಇಷ್ಟಲಿಂಗಕ್ಕೆ ಅಷ್ಟ ವಿಧಾರ್ಚನೆ ಷೋಡಶೋಪಚಾರವ ಮಾಡಿ ಪ್ರಸನ್ನಪ್ರಸಾದವ ಪಡೆದು ಅಷ್ಟ ಭೋಗವ ಭೋಗಿಸುವಾತನೇ ಗುರು. ಇಂತೀ ಆದಿಕುಳ ಮಹಾನಂದ ಪ್ರಸಾ ದದ ನಿಜಾನುಭಾವಿಯೇ ಜಂಗಮ. ಇಂತೀ ಗುರು ಲಿಂಗ ಜಂಗಮದಲ್ಲಿ ಭಕ್ತಿ ನೆಲೆಗೊಂಡ ನಿರುಪಾಧಿಕನೇ ಭಕ್ತ. ಆ ಭಕ್ತನು ಲಿಂಗಮುಖದಲ್ಲಿ ಶುದ್ಧಪ್ರಸಾದ ಪಡೆದು ಭೋಗಿಸುವುದು. ಜಂಗಮ ಮುಖದಲ್ಲಿ ಸಿದ್ಧಪ್ರಸಾದವ ಪಡೆದು ಭೋಗಿಸುವುದು. ಗುರುಮುಖದಲ್ಲಿ ಪ್ರಸಿದ್ಧ ಪ್ರಸಾದವ ಪಡೆದು ಭೋಗಿಸು ವುದು.

ಸ್ವಚ್ಛಂದಲಲಿತಭೈರವದಲ್ಲಿ :

"ಲಿಂಗಾರ್ಪಿತಪ್ರಸಾದಂ ಚ ನ ದದ್ಯಾತ್ ಜಂಗಮಾದಿಷು ।
ಜಂಗಮಸ್ಯ ಪ್ರಸಾದಂ ಚ ನ ದದ್ಯಾತ್ ಲಿಂಗಮೂರ್ತಿಷು ।
ಜಂಗಮಸ್ಯ ಪ್ರಸಾದಂ ಚ ಸ್ವೇಷ್ಟಲಿಂಗೇನ ಚಾರ್ಪಯೇತ್ ।
ಪ್ರಸಾದಾದರ್ಪಯೇದ್ಯೋಽಪಿ ಪ್ರಸಾದೋ ನಿಷ್ಫಲೋ ಭವೇತ್ ॥

ಇಂತೆಂದುದಾಗಿ ಅಂದಾದಿ ಇಂದಾದಿಯಾಗಿ ಎಂದೆಂದೂ ಇದೇ ಪ್ರಸಾದದ ಆದಿಕುಳ. ಈ ಆದಿಕುಳವರಿವುವಿಡಿದು ಪ್ರಸಾದವಿಡಿವ ಮಹಾಪ್ರಸಾದ ಸಾಧ್ಯ ಗ್ರಾಹಕರಿಗೆ ನಮೋ ನಮೋ ಎಂಬೆ. ಉಳಿದ ಉದ್ದೇಶಿಗಳೆನಿಸುವ ಭ್ರಾಂತರಪ ಹಾತ್ಯಂಧಕರಿಗೆ ನಾನಂಜುವೆನಯ್ಯ ಮಹಾಲಿಂಗ ಕಲ್ಲೇಶ್ವರಾ !"

ಕಲ್ಲಯ್ಯನ ಈ ವಚನದ ಅನುಭಾವಿಕ ಔನ್ನತ್ಯವನ್ನು ಅವಲೋಕಿಸಬೇಕು ಮತ್ತು ಇಷ್ಟಲಿಂಗ ಗುರು ಜಂಗಮ ಪ್ರಸಾದತ್ರಯಗಳನ್ನು ಲಕ್ಷಿಸುವ

ಪ್ರಕೃಷ್ಟ ಪ್ರಜ್ಞೆಯನ್ನು ಪರಿಭಾವಿಸಬೇಕು. ಹಾಗಿಲಾಗಿ ಇಲ್ಲಿ ಉದ್ಧರಿಸಿದ 'ಸ್ವಚ್ಛಂದ ಲಲಿತ ಭೈರವಿ' ಗ್ರಂಥವನ್ನು ತನ್ನ ಉಚ್ಚಮಟ್ಟದ ಪ್ರಾಸಾದಿಕ ಅನುಭವಕ್ಕೆ ಪ್ರಮಾಣವನ್ನಾಗಿ ಸ್ವೀಕರಿಸಿರುವುದು ತುಂಬಾ ಗಮನಾರ್ಹ ವಾದುದು. ವೀರಶೈವದ ಅದರಲ್ಲೂ ಇಷ್ಟಲಿಂಗದ ಪ್ರಾಚೀನತೆಗೆ ಪ್ರಮಾಣ ವಾಗಿದೆ. ಇಷ್ಟಲಿಂಗ ಇತ್ತೀಚಿನದೆಂಬ ಭ್ರಾಂತವಾದಿಗಳು ಭ್ರಾಂತಿಯನ್ನು ಬಿಡಲು ಇದು ತಕ್ಕ ಮದ್ದಾಗಿದೆ. ಹನ್ನೊಂದನೆಯ ಶತಮಾನದಲ್ಲಿ ಮತ್ತು ಅದಕ್ಕೂ ಹಿಂದೆಯೇ ಶಿವಾಗಮಿಕ ಇಷ್ಟಲಿಂಗ ಧಾರಣವಿತ್ತೆಂದು ಸುಸ್ಪಷ್ಟ ವಾಗುತ್ತದೆ. ಪಾದೋದಕ ಪ್ರಸಾದಗಳ ಅರ್ಪಣ ವಿಧಾನ ವಿಷಯದಲ್ಲಿ ರೂಢ ಮೂಲವಾದುದನ್ನು ತನ್ನ ಪರಮಾನುಭೂತಿಯಿಂದ ಪ್ರೌಢಿಮೆಯಿಂದ ನವ್ಯ ರೀತಿಯಲ್ಲಿ ನಿರೂಪಿಸಿದುದು ನಿಜಕ್ಕೂ ಅಚ್ಚರಿಯನ್ನುಂಟು ಮಾಡುತ್ತದೆ. ಆದಿಪ್ರಸಾದ ಅಂತ್ಯಪ್ರಸಾದ ಸೇವ್ಯಪ್ರಸಾದಗಳ ವಿಶ್ಲೇಷಣೆ, ಗುರುತ್ವ ಭಕ್ತತ್ವ ಜಂಗಮತ್ವಗಳಿಗೆ ಮೂಲಕಾರಣ. ಇಷ್ಟಲಿಂಗವೆಂಬ ವಿವೇಚನೆ, ಪ್ರಸನ್ನ ಪ್ರಸಾದ ಭೋಗವಿಧಾನ, ಆದಿಕುಳ ಮಹಾನಂದ ಪ್ರಸಾದದ ನಿಜಾನು ಭಾವವುಳ್ಳವನೇ ಜಂಗಮವೆಂಬ ಜಂಗಮಲಕ್ಷಣ ಸಂವಿಧಾನ, 'ಗುರು ಲಿಂಗಜಂಗಮದಲ್ಲಿ ಭಕ್ತಿ ನೆಲೆಗೊಂಡ ನಿರುಪಾಧಿಕನೇ ಭಕ್ತ' ಎಂದು ನಿರೂಪಿ ಸಿದ ಭಕ್ತಲಕ್ಷಣ ಇವು ಕಲ್ಲಯ್ಯನ ಆಳವಾದ ಅನುಭಾವಕ್ಕೆ ಒರೆಗಲ್ಲಾಗಿ ನಿಂತಿವೆ. ಆತನು ತನ್ನ ಗುರು ದೇವನಲ್ಲಿ ಮತ್ತು ಸ್ವಯಾಚರಣೆಯಲ್ಲಿ ಪಡೆದ ಪ್ರಾನುಭೂತಿಯ ಪರಿಣತತೆಯನ್ನು ಪ್ರಕಾಶಿಸುತ್ತವೆ. ಈತನು ಎತ್ತಿ ಉದ್ಧರಿ ಸಿದ ಸ್ವಚ್ಛಂದ ಲಲಿತಭೈರವಿ ಕೃತಿಯು ಬಳಸಿದ 'ಸ್ವೇಷ್ಟಲಿಂಗ' ಪದ ಇಷ್ಟ ಲಿಂಗ ಇತ್ತೀಚಿನದೆಂಬ ದುರ್ವಾದವನ್ನು ದೂರೀಕರಿಸಿದೆ. ಮತ್ತು ಪ್ರಸಾದಾ ರ್ಪಣ ವಿಧಾನ ವೈಶಿಷ್ಟ್ಯವನ್ನು ಆ ಕೃತಿಯು ಆ ರೀತಿಯಲ್ಲಿ ಪ್ರತಿಪಾದಿಸ ಬೇಕಾದರೆ ಅದರ ಕಾಲದಲ್ಲಿಯೇ ಪ್ರಾಸಾದಿಕಾನುಭೂತಿ ಎಷ್ಟೊಂದು ಪರಿಣತ ಸ್ಥಿತಿಯಲ್ಲಿತ್ತೆಂಬುದು ಅರಿಕೆಗೆ ಬರುತ್ತದೆ. ಎಲ್ಲಕ್ಕೂ 'ಅಂದಾದಿ ಇಂದಾದಿ ಯಾಗಿ' ಎಂಬ ಪ್ರಯೋಗ ಪರಿಭಾವನಾರ್ಹವಾಗಿದೆ. ಇಷ್ಟಲಿಂಗ ಗುರು ಭಕ್ತ ಜಂಗಮ ಪ್ರಸಾದ ಈ ಅಯ್ದರ ಅನುಭಾವಿಕ ಉತ್ಕ್ರಾಂತಿ ಹನ್ನೆರಡನೆಯ ಶತಮಾನಕ್ಕೆ ಹಿಂದಿನದೆಂಬುದನ್ನು ಅರಿಯಲು ಹೆಚ್ಚು ಬುದ್ಧಿವಂತಿಕೆ ಬೇಕಾಗು ವುದಿಲ್ಲ.

ಇನ್ನು ಶ್ರುತಿ ಆಧಾರವಾಗಿರುವ ನಿಃಕಲ ಪರತತ್ತ್ವವೇ ಮಹಾಲಿಂಗಕ್ಷೇತ್ರ. ಆ ಕ್ಷೇತ್ರದಲ್ಲಿ ನಿಕ್ಷೇಪವಾಗಿದ್ದ ಘನಚೈತನ್ಯವೇ ಷಟ್‌ಸ್ಥಲಲಿಂಗ : ಅದರ ಮೂಲ ಅಂಕುರವೇ ಪರಮಕಳೆ. ಆ ಪರಮ ಕಳೆಯೇ ಪರಬ್ರಹ್ಮ, ಪರಂಜ್ಯೋತಿ ಪರಾತ್ಪರ ಪರತತ್ತ್ವ, ಪರಮಾತ್ಮ, ಪರಮಜ್ಞಾನ, ಪರಮಚೈತನ್ಯ, ನಿಃಕಲ ಚರ ಎನಿಸುವ ಪರವಸ್ತು ಎಂದು ನಿರ್ಧರಿಸಿದ್ದಾನೆ ಕಲ್ಲಯ್ಯ.
ಆತನು ಉದ್ಧರಿಸಿದ ಶ್ರುತಿಯಿದು :

"ವರ್ಣಾತೀತಂ ಮನೋಽತೀತಂ ಭಾವಾತೀತಂ ಚ ತತ್ಪರಂ
ಜ್ಞಾನಾತೀತಂ ನಿರಂಜನಂ ತತ್ಕಲಾ ಸೂಕ್ಷ್ಮಭಾವತಃ ।"

ಈ ಶ್ರುತಿಯು ಕಲ್ಲಯ್ಯನವರ ಮಹಾಲಿಂಗಕ್ಷೇತ್ರದ ಮತ್ತು ಷಟ್‌ಸ್ಥಲಲಿಂಗ ಕಳೆಯು, ಪರಬ್ರಹ್ಮ ಪರಂಜ್ಯೋತಿ ಮೊದಲಾದ ನಿಃಕಲಚರದ ಮಹಾನುಭೂತಿಗೆ ಮೂಲ ಆಕರವಾಗಿದೆಯೆಂಬುದನ್ನು ಆಧುನಿಕವಾದಿಗಳು ಅರಳಿದ ಅಕ್ಷಿಯಿಂದ ಅವಲೋಕಿಸಬೇಕು : ಅನುಮೋದಿಸಬೇಕು.

ತನ್ನ ಅನುಭಾವಿಕ ವಚನಗಳಿಗೆ ಆಕರವನ್ನಾಗಿರಿಸಿಕೊಂಡುದು ಇದೊಂದನ್ನೇ ಅಲ್ಲ. ಇನ್ನೂ ಇವೆ. ಕೇಳಿ-ಕಾಣಿ :

"ಏಕ ಏವ ರುದ್ರೋ ನ ದ್ವಿತೀಯಃ" ಎಂಬ ಶ್ರುತಿ. ಲಿಂಗಭಕ್ತನೇ ದೇವನೆಂದಿತ್ತು. 'ಅಪಿ ವಾ ಯಶ್ಚಂಡಾಲಃ' ಎಂಬ ಶ್ರುತಿ, ಲಿಂಗಭಕ್ತನೇ ಕುಲಜನೆಂದಿತ್ತು. 'ಭಾತ್ರಂ ಜಿಘ್ರಂತಿ' ಎಂಬ ಶ್ರುತಿ, ಲಿಂಗಪ್ರಸಾದವೇ ಪರವೆಂದಿತ್ತು. ಇದನೋದಿ ಬರುದೊರೆವೋದಿರಿ ; ಶ್ರುತಿಬಾಹ್ಯರಾದಿರಿ. ಶಿವಭಕ್ತಿಯಿಲ್ಲದೆ ಹೋದಿರಿ. ಗುರುಲಿಂಗಜಂಗಮದ ಪಾದೋದಕ ಪ್ರಸಾದವ ಧರಿಸುವವನೇ ಭುಜಿಸುವವನೇ ಕುಲಜನೆಂದು ಶ್ರುತಿ ಸಾರುತ್ತಿದೆ : ಇದು ಕಾರಣ ಮಹಾಲಿಂಗ ಕಲ್ಲೇಶ್ವರಾ, ನಿಮ್ಮ ಶರಣಂಗೆ ಮಿಗೆ ಮಿಗೆ ಶರಣೆಂಬೆ."

ಅನಾದಿ ರುದ್ರ ಲಿಂಗಭಕ್ತನಾಗಿ ಲಿಂಗವಾದನು. ಚಂಡಾಲನೊಬ್ಬ ಲಿಂಗಭಕ್ತನಾಗಿ ಕುಲಜನಾದನು. ಲಿಂಗಸ್ವರೂಪನಾದ ರುದ್ರನು ಆರೋಗಿಸಿ ಉಳಿದ ಶೇಷವು ಪ್ರಸಾದವೆನಿಸಿತು : ಪರವೆನಿಸಿತು. ಇವಕ್ಕೆಲ್ಲ ಶ್ರುತಿಗಳ ಆಧಾರಗಳು. ರುದ್ರದೇವನೇ ಆಧಾರನು.

ಇವೆಲ್ಲಕ್ಕಿಂತಲೂ ಹಾವಿನಹಾಳ ಕಲ್ಲಯ್ಯನ ವರ್ಣ ಕುಲ ಪಂಥಗಳ ಬಗೆಗಿನ ಉತ್ಕ್ರಾಂತಿ ವಚನಗಳೆರಡನ್ನು ಕೊನೆಯದಾಗಿ ಕಾಣೋಣ !

"ಕ್ಷೇತ್ರವಿಶೇಷವೋ ಬೀಜವಿಶೇಷವೊ ?-ಬಲ್ಲವರು ನೀವು ಹೇಳಿರೇ ? ಕ್ಷೇತ್ರವಿಶೇಷವೆಂದರೆ ಕುಲದಲಧಿಕ ಸದ್ಬ್ರಾಹ್ಮಣನ ಸತಿ ಜಾರೆಯಾಗಿ ಶ್ವಪಚನ ನಮಿಸಲು, ಗರ್ಭಿಣಿಯಾಗಿ ಜನಿಸಿದ ಸುತನಂತೆ, ಬ್ರಾಹ್ಮಣ ಕರ್ಮದಿಂದ ಉಪನಯನ, ಬ್ರಹ್ಮಚರ್ಯ, ವೇದಾಧ್ಯಯನ, ಅಗ್ನಿಹೋತ್ರ ಯಜ್ಞ ಯಜನ, ಯಾಜನಕ್ಕೆ ಯೋಗ್ಯವಾಗನೇ ಆ ಸುತನು ? ಬೀಜವಿಶೇಷವೆಂದಡೆ ಕುಲದಲಧಿಕ ಬ್ರಾಹ್ಮಣನು ಚಾಂಡಾಲ ಸತಿಯ ರಮಿಸಲು ಆ ಬೀಜ ಗರ್ಭವಾಗಿ ಜನಿಸಿದ ಸುತಂಗೆ ವಿಪ್ರಕರ್ಮವಿಲ್ಲದೆ ಹೋಗದೇ ! ಇದು ದೃಷ್ಟ. ಇದನತಿಗಳೆದ ವೇದಾದಿ ವಿದ್ಯಂಗಳ ಬಲ್ಲ ತರ್ಕಿ, ಕವಿ, ವಿದ್ವಾಂಸರು ತಿಳಿದು ನೋಡಿ ಹೇಳಿರೇ ! ಶ್ರುತಿ:

"ಜನ್ಮನಾ ಜಾಯತೇ ಶೂದ್ರಃ ಕರ್ಮಣಾ ದ್ವಿಜ ಉಚ್ಯತೇ
ವೇದಾಧ್ಯಾಯೀ ಭವೇದ್ವಿಪ್ರೋ ಬ್ರಹ್ಮಂ ಚರತಿ ಬ್ರಾಹ್ಮಣಃ ।
ವರ್ಣೇನ ಜಾಯತೇ ಶೂದ್ರಸ್ತ್ರೀ ಶೂದ್ರಾಚ್ಚ ಚ ಕಾರಣಾತ್
ಉತ್ಪತ್ತಿಃ ಶೂದ್ರಪುತ್ರಶ್ಚ ವಿಪ್ರಃ ಶೂದ್ರಾನ್ನ ಭುಂಜಯೇತ್ ॥"

ಇಂತೆಂದುದಾಗಿ. ಇದು ಕಾರಣ, ಗುರು ಸದ್ಭಾವದಲುದಯಿಸಿದ ಶಿವಜ್ಞಾನ ಬೀಜ ಸದ್ಭಕ್ತಿನಿಂಬುಗೊಂಡ ಶಿಷ್ಯನ ಹೃದಯ ಮನಃಕರಣವೆಂಬ ಸುಕ್ಷೇತ್ರವು ಕುಲಹೀನಸ್ತ್ರೀ-ಕುಲಯುಕ್ತ ಪುರುಷ, ಕುಲಹೀನ ಪುರುಷ-ಕುಲಯುಕ್ತಸ್ತ್ರೀ ಈ ಎರಡರ ದೋಷ ಪಿಂಡದಂತಲ್ಲ. ಎನ್ನ ಮಹಾಲಿಂಗ ಕಲ್ಲೇಶ್ವರನ ಶರಣರೇ ಆಚಾತರೆಂದಿಕ್ಕಿದೆ ಮುಂಡಿಗೆಯ, ನಾಕವಾದಿಗಳೆತ್ತಿಕೊಳ್ಳಿರೋ" "ಅಯ್ಯಾ ವಿಪ್ರರೆಂಬುವರು ಮಾತಂಗಿಯ ಮಕ್ಕಳೆಂಬುದಕ್ಕೆ ಇದೇ ದೃಷ್ಟ. ಮತ್ತೆ ವಿಚಾರಿಸಿ ಕೇಳಿದಡೆ ಹೇಳುವೆನು ; ಬಡಗಿ-ಮಾಚಲದೇವಿಯ ಕುಲಜೆಯ ಮಾಡಿಹೆವೆಂದು ಕಡಿದು ಹಂಚಿ ತಿಂದರಂದು ಗೋಮಾಂಸವ ಬಿಡದೆ. ಅತ್ಯಂತ ಯಜ್ಞ ಕ್ರಮವೆಂದು ಹೋತನನೇ ಕೊಂದು ಚಿಕ್ಕ ಚಿಕ್ಕವಾಗಿ ಕಡಿದು ಭಕ್ಷಿಸಿದುದ ಕಂಡು ಮಿಕ್ಕ ಹದಿನೇಳು ಜಾತಿ, ವಿಪ್ರರ ಕೈಯಲನುಗ್ರಹವ ಪಡೆದು ಶಿವಕಲಿತರಯ್ಯ ಶ್ಲೋಕ :

"ಶ್ವಪಚೋಽಪಿ ಪರೋ ವಿಪ್ರಃ ಶಿವಭಕ್ತೋ ನ ಚಾನ್ಯಥಾ
ಅಶಿವಭಕ್ತ್ಯುಪದೇಶೀನಾಂ ವರ್ಣಾನಾಂ ಬ್ರಾಹ್ಮಣೋ ಗುರುಃ !"

ಎಂದುದಾಗಿ ಕಿರಿಕರಿದ ತಿಂದ ದ್ವಿಜರು ನೆರೆದು ವೈಕುಂಠಕ್ಕೆ ಹೋದರೆ ಬೇರೆ (ನರಿ)ಯೊಂದ ತಿಂದ ವ್ಯಾಧ ದ್ವಿಜರಿಂದಧಿಕ. 'ಭರ್ಗೋ ದೇವಸ್ಯ ಧೀಮಹಿ' ಎಂಬ ವಿಪ್ರಮಂತ್ರವನೋದಿ ನಿರ್ಬುದ್ಧಿಯಾದಿರಿ, ಇದು ಕಾರಣ ಮಹಾಲಿಂಗ ಕಲ್ಲೇಶ್ವರಾ, ನಿಮ್ಮ ಶರಣಂಗೆ ಸರಿಯೇ ಜಗದವಾಯುಗಳು. ಇಡವೇ ಕೋಗಿಲೆಗಳು ಕಾಗೆಯ ತತ್ತಿಯಲ್ಲಿ ? ಸಾಕವೇ ತನ್ನ ಶಿಶುವೆಂದು ಮನ ಬುದ್ಧಿಯಿಂದ ? ಇಕ್ಕದಡೇನೋ ದೇವ ಪಿಂಡವ ತಂದು ಮಾನವ ಯೋನಿಯಲಿ ? ಹುಟ್ಟದಡೇನೋ ಲಿಂಗ ಶರಣನು ನರನ ಯೋನಿಯಲ್ಲಿ ? ಬಾರದೇ ಪಕ್ಷಿಯ ಬಸುರಲ್ಲಿ ಅಶ್ವತ್ಥ ವೃಕ್ಷವು ? ಇದು ಕಾರಣ ಮಹಾಲಿಂಗ ಕಲ್ಲೇಶ್ವರಾ ಕಾಗೆಗೆ ಪಿಕ ಶಿಶುವೇ."

ಹನ್ನೊಂದನೆಯ ಶತಮಾನದ ರೇವಣಸಿದ್ಧರ ಶಿಷ್ಯನಾದ ಹಾವಿನಹಾಳ ಕಲ್ಲಯ್ಯನ ಈ ವರ್ಣಭೇದ ನಿವಾರಣಕ್ರಾಂತಿ ಅತ್ಯದ್ಭುತ! ಭೂಮಿ-ಬೀಜ-ಸಂಸ್ಕಾರಗಳ ವಿವೇಚನೆ, ಸಂಸ್ಕಾರ ಮೌಲ್ಯ ಮನನೀಯವಾಗಿವೆ : ಅನನ್ಯವಾಗಿವೆ.

ಬಸವಣ್ಣನವರಿಗಿಂತಲೂ ಪೂರ್ವದಲ್ಲಿದ್ದಾತ ಹಾವಿನಹಾಳ ಕಲ್ಲಯ್ಯ! ಇದರಲ್ಲಿ ಇನ್ನಾವ ಇನ್ನಾರ ಸಂಶಯಕ್ಕಾಸ್ಪದವಿಲ್ಲ. ರೇವಣಸಿದ್ಧ, ರುದ್ರಮುನಿ, ಕೇದಾರ ಗುರುಗಳಲ್ಲಿ ತನ್ನ ಸಾಂಸ್ಕಾರಿಕ ಶಕ್ತಿಯನ್ನು, ಸ್ವಾನುಭೂತಿಯನ್ನು, ಕರ್ತೃತ್ವನ್ನು ಜಯಿಸುವ 'ಕ್ರಾಂತಶಕ್ತಿಯನ್ನು, ಅಪ್ರತಿಮ ಶಿವಜ್ಞಾನವನ್ನು ಕ್ರಿಯಾಶೀಲತೆಯನ್ನು ಪಡೆಯುವನು. ಹನ್ನೊಂದನೆಯ ಶತಮಾನದಲ್ಲಿ ತನಗೆ ಪೂರ್ವದಲ್ಲಿದ್ದ ದೇವರ ದಾಸಿಮಯ್ಯನವರೇ ಮೊದಲಾದವರ ಕ್ರಾಂತಿದರ್ಶಕ ವಚನಗಳ ಅಭ್ಯಾಸವನ್ನು ಮಾಡಿ ಉತ್ಕ್ರಾಂತ ಮಾರ್ಗದಲ್ಲಿ ಮುಂದುವರಿಯುವನು. ಲೋಕಾಯುತರನ್ನು ಬೌದ್ಧರನ್ನು ಚಾರ್ವಾಕರನ್ನು ವಿಪ್ರರನ್ನು ಎದೆಗಾರಿಕೆಯಿಂದ ಎದುರಿಸುವನು. ತನ್ನ ತೋಳಬಿಗೆ ತರುವನು. ಈ ದಿಸೆಯಲ್ಲಿ ಆತನ ಕಾರ್ಯಬಾಹುಳ್ಯ ಕ್ಷೇತ್ರ ಬಾಹುಳ್ಯವಾಗಿತ್ತು. ಪ್ರಸಿದ್ಧಿಯು ಪ್ರಭೂತವಾಗಿತ್ತು.

ಆತನ ಸತ್‌ಸಂಕಲ್ಪಸಿದ್ಧಿ ಸೀಮಾತೀತವಾಗಿತ್ತು. ಸತ್ತ ಹಾವನ್ನು ಬದುಕಿಸು ವಷ್ಟು ಬಲವುಳ್ಳುದಾಗಿತ್ತು. ಈ ದಿಸೆಯಲ್ಲಿ ದಾಸಮಯ್ಯನ ಬಳಿಕ ಹೇಳಿ ಕೊಳ್ಳಬೇಕಾದ ದಿವ್ಯಶಕ್ತಿಯುಳ್ಳ ವ್ಯಕ್ತಿ ಹಾವಿನಹಾಳ ಕಲ್ಲಯ್ಯ! ತನ್ನ ಮನೆಯ ನಾಯಿಯಿಂದ ಸ್ವರಲೋಪವಿಲ್ಲದೆ ವೇದ ಮಂತ್ರಗಳನ್ನು ಪಠಿಸುವಂತೆ ಮಾಡಿದ ಮಣಿಹ ಅನನ್ಯ, ಅಸಾಮಾನ್ಯ ! ಸಂಸ್ಕೃತ ವಾಙ್ಮಯದಲ್ಲಿ ಅಪ್ರತಿಮ ಪಂಡಿತ ! ವೇದಜ್ಞ, ವಚನರಚನಾತಜ್ಞ. ಸೊನ್ನಲಿಗೆಯ ಸಿದ್ಧರಾಮನ ಶಿವಯೋಗಶಕ್ತಿಯನ್ನು ಸರಿಯಾಗಿ ಬಲ್ಲಾತ ಕಲ್ಲಯ್ಯ ! ಅಂತೆಯೇ ಆತನಲ್ಲಿ ಅಪಾರ ಆದರಾಭಿಮಾನ. ಆದರಿಂದಾಗಿ ಆತನ ಕಾರ್ಯಕ್ಷೇತ್ರವಾದ ಸೊನ್ನಲಿಗಿಗೆ ಕೊನೆಯಲ್ಲಿ ಬಂದಿದ್ದು ಅಲ್ಲಿಯೇ ಲಿಂಗೈಕ್ಯನಾಗುವನು. ಆತ ಘನ ಗುರುಭಕ್ತ ! ಘನಕ್ರಾಂತದರ್ಶಿ !

ಸೊನ್ನಲಿಗೆಯ ಶಿವಯೋಗಿ ಸಿದ್ಧರಾಮನು ಆಚಾರ್ಯರೇವಣಸಿದ್ಧರ ವರಪುತ್ರನೆಂದು ತಿಳಿದು ಆತನಲ್ಲಿ ಅತ್ಯಂತ ಆಸಕ್ತಿಯುಳ್ಳವನಾಗಿದ್ದನು. ಅಲ್ಲದೆ ತನ್ನ ಆತ್ಮೀಯ ಗುರು ರೇವಣಸಿದ್ಧರು ಸೊನ್ನಲಗಿ ಮಂಗಳವಾಡ ಇಂಗಳೇಶ್ವರ ಹಾವಿನ ಹಾಳ ಮೊದಲಾದ ನಾಡಿನ ಹಲವಾರು ಊರುಗಳಲ್ಲಿ ಮಾಡಿದ ಧಾರ್ಮಿಕ ಸಾಮಾಜಿಕ ಉತ್ಕ್ರಾಂತಿಗಳು ಆತನ ಮನಸ್ಸನ್ನು ಮತ್ತಷ್ಟು ಆಕರ್ಷಿಸಿದ್ದವು. "ಬಸವೇಶ್ವರನಿಗಿಂತಲೂ ಮೊದಲು ಇಂಗಳೇಶ್ವರ, ಮಂಗಳ ವಾಡ, ಸೊನ್ನಲಿಗೆ, ಕಲ್ಯಾಣಗಳಲ್ಲಿ ರೇವಣನು ಮಾಡಿದ ಧರ್ಮಕ್ರಾಂತಿ ಸಾಮಾನ್ಯವಾದುದಲ್ಲ." ಎಂದು ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು 'ಬಸ ವೇಶ್ವರರ ಸಮಕಾಲೀನರು' ಎಂಬ ಗ್ರಂಥದ ಪುಟ ೩೦೩ರಲ್ಲಿ ಉಲ್ಲೇಖಿಸಿರು ವರು. ರೇವಣಸಿದ್ಧ; ರುದ್ರಮುನಿ ಇವರುಗಳಿಂದ ಹಾವಿನಹಾಳ ಕಲ್ಲಯ್ಯ ಹೆಸರಾಂತ ಕ್ರಾಂತದರ್ಶಿಯಾಗುತ್ತಾನೆ.

## ಆಚಾರ್ಯ ಏಕೋರಾಮ

ಈತನು ವೀರಶೈವ ಪಂಚಪೀಠಗಳಲ್ಲಿ ಒಂದಾದ ಕೇದಾರ ವೈರಾಗ್ಯ ಸಿಂಹಾಸನದ ಅಧೀಶ್ವರನೆಂದು ಹೆಸರಾಗಿದ್ದಾನೆ. ಅಂತೆಯೇ ರೇವಣಸಿದ್ಧ ಮರುಳಸಿದ್ಧ ಶಿವಾಚಾರ್ಯರ ಜೊತೆ ಜೊತೆಗೆ ಉದಾಹೃತನಾಗಿದ್ದಾನೆ. ಇದ

ರಿಂದಾಗಿ ಇವನು ಇವರ ಸಮಕಾಲೀನನೆನಿಸುವನು. ವೀರಶೈವಧರ್ಮ ಪ್ರಸಾರಕಾರ್ಯವನ್ನು ಕೈಗೊಂಡು ನೆರವೇರಿಸಿದಾತನು. ಈತನ ಮಠ ಇದ್ದುದಂತೆ ಕಾಣುವುದಿಲ್ಲ. ಆದರೂ ಕನ್ನಡಿಗನು. ಈತನು ಊರು ದೇವರ ದಾಸಿಮಯ್ಯನ ಹುಟ್ಟೂರಾದ ಮುದೇನೂರು. ಈತನ ತಂದೆಯ ಹೆಸರು ರಾಮರುದ್ರನು. ದೂರ್ವಾಸದೇವನ ಪರಂಪರೆಯವನೆಂದು ಹೇಳಲಾಗುತ್ತದೆ. ದೇವರದಾಸಿಮಯ್ಯನಂತೆ ಆಚಾರ್ಯ ಏಕೋರಾಮನೂ ರಾಮನಾಥನ ಭಕ್ತನು: ಅಂದರೆ ಉಪಾಸಕನು. ಈತನ ದೀಕ್ಷಾಗುರು ಶಂಕುಕರ್ಣಗಣಾಧೀಶನು. ವಾದದಲ್ಲಿ ವೈಷ್ಣವರನ್ನು ಜಯಿಸಿ ಶಿವಾಧಿಕ್ಯವನ್ನು ಸಾರುವನು. ಅಯೋಧ್ಯೆಯ ವ್ಯಾಸದೀಕ್ಷಿತನೆಂಬ ವಿದ್ವಾಂಸನನ್ನು ಸೋಲಿಸಿ ವೀರಶೈವದೀಕ್ಷೆಯನ್ನು ಆತನಿಗೆ ಕರುಣಿಸಿದ ಕಾರಣಿಕನು 'ಪಂಚಬ್ರಹ್ಮೋದಯ ಭಾಷ'ದಲ್ಲಿ ಸಾಸಲಿ ಚಿಕ್ಕಣಾರಾಧ್ಯನು ಆಚಾರ್ಯ ಏಕೋರಾಮನ ವಿಚಾರವನ್ನು ಪ್ರಸ್ತಾಪ ಮಾಡಿರುವನು. ಸಿದ್ಧನಂಜೇಶನು ತನ್ನ 'ಗುರುರಾಜ ಚಾರಿತ್ರ'ದಲ್ಲಿ ಈತನ ಬಗೆಗೆ ಪ್ರಸ್ತಾಪಿಸಿದ್ದಾನೆ. ದೇವರದಾಸಿಮಯ್ಯನು ತನ್ನೊಬ್ಬ ಮಗನಿಗೆ ಈತನ ಹೆಸರನ್ನೇ ಇರಿಸಿದ್ದನು.

"ದ್ರಾಕ್ಷಾರಾಮೇ ರಾಮನಾಥಲಿಂಗೇ ಯುಗಚತುಷ್ಟಯೇ
ಏಕೋ ರಾಮಸ್ಯ ಜನನಂ ಆವಾಸ ಚ ಹಿಮಾಲಯೇ !"

ಎಂದು ಸ್ವಯಂಭು ಆಗಮ ನಿರೂಪಿಸಿದೆ. ಹರದನ ಹಳ್ಳಿಯ ನಂಜಾಚಾರ್ಯನು ಏಕೋರಾಮೇಶ್ವರ ಪುರಾಣವೊಂದನ್ನು ಬರೆದಂತೆ ತಿಳಿಯುತ್ತದೆ. ಪರ್ವತೇಶ್ವರನು ಬರೆದ ಚತುರಾಚಾರ್ಯ ಪುರಾಣದಲ್ಲಿಯೂ ಆಚಾರ್ಯ ಏಕೋರಾಮನ ಚರಿತ್ರವಿದೆ. ಈತನು ಹಲವಾರು ಜನ ಜೈನರು. ಬ್ರಾಹ್ಮಣರು ಮೊದಲಾದವರಿಗೆ ವೀರಶೈವ ದೀಕ್ಷೆಯನ್ನು ಕರುಣಿಸಿರುವನು. ತಮ್ಮಲ್ಲಿಗೆ ಬಂದ ವ್ಯಾಸನೆಂಬ ವಿದ್ವಾಂಸನನ್ನು ವಾದದಲ್ಲಿ ಸೋಲಿಸಿ ಲಿಂಗದೀಕ್ಷೆಯನ್ನಿತ್ತು ವೀರಶೈವನನ್ನಾಗಿಸುವನು. ವೀರಶೈವ ವಿಕಾಸಕ್ಕೆ ಹೆಚ್ಚು ಶ್ರಮಿಸುವನು.

ಈತನ ಕಾಲದಲ್ಲಿ ಏಕಾಂತ ರಾಮಯ್ಯನೆಂಬ ಮಹಿಮನೊಬ್ಬನಿದ್ದನು. ಈತನು ಕಲಬುರ್ಗಿ ಜಿಲ್ಲೆಯ ಆಲಂದ ಎಂಬ ಊರಿನ ಪುರುಷೋತ್ತಮ ಭಟ್ಟನ

ಮಗನು ಆ ಊರಿನ ಸೋಮನಾಥ ದೇವರ ಕೃಪೆಯಿಂದ ಜನಿಸಿದಾತನು ವೀರಶೈವ ದೀಕ್ಷೆಯನ್ನು ಪಡೆದು, ವೀರಶೈವ ಧರ್ಮ ಪ್ರಚಾರಕ್ಕಾಗಿ ನಾಡಿನ ಬಹು ಭಾಗಗಳಲ್ಲಿ ಸಂಚರಿಸಿದಾತನು. ಈತನು ಅಬಲೂರಿನಲ್ಲಿ ಶಿವಾಧಿಕ್ಯಕ್ಕಾಗಿ ತನ್ನ ತಲೆಯನ್ನು ಕತ್ತರಿಸಿಕೊಂಡು ಏಳು ದಿನಗಳ ಬಳಿಕ ತನ್ನ ಶಿವಯೋಗ ಶಕ್ತಿಯಿಂದ ಬದುಕುವನು. ಈತನ ಈ ಕ್ರಾಂತಿ ಅಬಲೂರಿನ ಶಾಸನೋಕ್ತ ವಾಗಿದೆ. ಈತನ ವಿಷಯದಲ್ಲಿ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು 'ಬಸವೇಶ್ವರರ ಸಮಕಾಲೀನರು' ಎಂಬ ಗ್ರಂಥದಲ್ಲಿ (೩೩೭ ಪುಟ) ಹೀಗೆ ಬರೆದಿರುವರು :

"ಏಕಾಂತರಾಮಯ್ಯನ ಪವಾಡವನ್ನು ಕಂಡು ಮೆಚ್ಚಿ ಮಾಂಡಲಿಕ ಬಿಜ್ಜಳರಾಜ, ಅರಸ ಸೋಮೇಶ್ವರ, ದೇವಗಿರಿಯ ಭಿಲ್ಲಮ, ಕದಂಬ ಕಾಮ ದೇವ-ಮೊದಲಾದ ರಾಜರು-ಅಬಲೂರು, ಮಳವಳ್ಳಿ ಮೊದಲಾದ ಗ್ರಾಮ ಗಳನ್ನು ರಾಮಯ್ಯನಿಗೆ ಉಂಬಳಿಯಾಗಿ ಕೊಟ್ಟಿದ್ದಾರೆ. ದಂಡನಾಯಕ ಕೇಶಿರಾಜನು ಅಬಲೂರಿಗೆ ಬಂದ 'ಶರಣ' ಎಂಬವನಿಂದ ಶಿಲಾಶಾಸನ ಹಾಕಿಸಿದನು.

ಏಕಾಂತರಾಮಯ್ಯನಿಗಿಂತ ಪೂರ್ವದಲ್ಲಿ ಶಿವಶರಣರಿದ್ದುದು ಶಾಸನ ಗಳಲ್ಲಿ ಸಿಕ್ಕಿದೆ. ಇದರಿಂದ ಬಸವಣ್ಣನಿಗಿಂತ ಹಿಂದೆ ಶಿವಶರಣರಿದ್ದುದು ಸ್ಪಷ್ಟವಾಗಿದೆ. ಏಕಾಂತರಾಮಯ್ಯನು ಹೆಸರು ಪಾಲ್ಕುರಿಕೆ ಸೋಮನಾಥನ 'ಗಣಸಹಸ್ರ'ದಲ್ಲಿದೆ.......ಬಸವ ಪುರಾಣಗಳು. ಭೈರವೇಶ್ವರ ಕಾವ್ಯಕಥಾ ಸೂಗ್ರಿ ರತ್ನಾಕರಗಳಲ್ಲಿ ಏಕಾಂತರಾಮಯ್ಯನು ಪವಾಡ ಮಾಡಿದ್ದು ಕಲ್ಯಾಣ ವೆಂದು ಹೇಳಿರುವುದು ಸರಿಯಲ್ಲ ಚರಿತ್ರ ಸಮ್ಮತವಲ್ಲ. ನಮಗೆ ತಿಳಿದಿರು ವಂತೆ ಏಕಾಂತ ರಾಮಯ್ಯ ಕಲ್ಯಾಣಕ್ಕೆ ಬಂದಿರಲಿಲ್ಲ. ಬರುವ ಕಾರಣವೂ ಇರಲಿಲ್ಲ. ಅವನ ಮಹಿಮೆ ನಡೆದುದು ಅಬಲೂರಿನಲ್ಲಿ ಬಸವಣ್ಣನವರು ಮಂತ್ರಿಯಾಗುವ ಮೊದಲು ಎಂಬುದು ಸತ್ಯಸಂಗತಿ. ವೀರಶೈವ ಮತೋ ದ್ಧಾರಕರಲ್ಲಿ ಏಕಾಂತರಾಮಯ್ಯನ ಹೆಸರು ಪ್ರಮುಖವಾದುದು." (ಪು-೩೪೦ ಎಂದು ಸ್ಪಷ್ಟವಾಗಿ ಹೇಳಿರುವರು. ಇದಲ್ಲದೆ ಇವರು ಮುಂದುವರಿದು, ಮತ್ತೆ ಹೀಗೆ ಹೇಳಿದ್ದಾರೆ.

"ಏಕಾಂತರಾಮಯ್ಯನು ೧೧೬೦ಕ್ಕೂ ಮೊದಲು ಪ್ರಖ್ಯಾತನಾಗಿ ೧೧–೫೦ ವರ್ಷ ಬಾಳಿದ್ದಾನೆ. ಅಗ್ಗಳ ಹೊನ್ನಯ್ಯ ಮತ್ತು ಅಗ್ಗಳೆಯ ದೇವರಸರು ಏಕಾಂತರಾಮಯ್ಯನ ದಿಗ್ವಿಜಯ ಕಾಲದಲ್ಲಿ ಅವನಿಗೆ ನೆರವಾಗಿದ್ದುದು ಸ್ಮರಣಾರ್ಹವಾಗಿದೆ. ಏಕಾಂತರಾಮಯ್ಯನ ಮಹತ್ವಕ್ಕೆ ಅಬ್ಬಲೂರು ಶಾಸನ ಮತ್ತು ಹರಿಹರನ ಏಕಾಂತರಾಮಯ್ಯನ ರಗಳೆ ನಿದರ್ಶನವಾಗಿವೆ."

ಏಕಾಂತರಾಮಯ್ಯನು ವಚನಗಳನ್ನು ರಚಿಸಿ ಕನ್ನಡಕ್ಕೆ ವೀರಶೈವ ವಿಚಾರಕ್ಕೆ ಸೇವೆ ಸಲ್ಲಿಸಿದ್ದಾನೆ.

"ಗುರುಭಕ್ತನಾದಲ್ಲಿ ಘಟಧರ್ಮವಾದು,
ಲಿಂಗಭಕ್ತನಾದಲ್ಲಿ ಸಂಚಲ ನಿಂದು.
ಜಂಗಮ ಭಕ್ತನಾದಲ್ಲಿ ತ್ರಿವಿಧಾಂಗ ಸವೆಸಂದು
ಇಂತೀ ತ್ರಿವಿಧ ಭಕ್ತಿಯಲ್ಲಿ ತ್ರಿಕರಣಶುದ್ಧನಾದ ಆತ್ಮಂಗೆ
ಮರ್ತ್ಯ ಕೈಲಾಸವೆಂಬ ಠಾವು ಮಾತಿಲ್ಲ
ಆತ ನಿತ್ಯಮುಕ್ತ ಎನ್ನಯ್ಯ ಚನ್ನರಾಮನಾಗಿ !"

'ಸರ್ವ ಪುರಾತನರ ವಚನ' ಕಟ್ಟಿನಲ್ಲಿ ಈತನ ಆರು ವಚನಗಳಿವೆ. ಅವುಗಳಲ್ಲಿ ಈ ಒಂದು ವಚನ ಸಾಕು ಆತನ ವೀರಶೈವ ವಿಚಾರಾನುಭೂತಿಗಳ ಪ್ರತಿಭೆಗೆ ! "ಶಿರಸಪವಾಡ (ಗಂಡಗತ್ತರಿ).ಕೌತುಕದ ಅದ್ಭುತವನ್ನು ಪ್ರದರ್ಶಿಸಿ ಜೈನರನ್ನು ಗೆದ್ದು ವೀರಶೈವರನ್ನು ಹಬ್ಬಿಸಿದ ಏಕಾಂತರಾಮಯ್ಯನ ಸುಪ್ರಸಿದ್ಧ ಶಿಲಾಶಾಸನವು (ಕ್ರಿ. ಶ. ೧೧೮೦) ಅಬ್ಬಲೂರು ಬ್ರಹ್ಮೇಶ್ವರಲಿಂಗ ದೇಗುಲದಲ್ಲಿದೆ. ಈ ಶಿಲಾಶಾಸನದಲ್ಲಿ ದಾಸಮಯ್ಯ ಚನ್ನಯ್ಯಾದಿಗಳು ಉದಾಹರಿಸಲ್ಪಟ್ಟಿದ್ದಾರೆ...." ಎಂದು 'ವಿಭೂತಿ' ಸಂಪುಟದಲ್ಲಿ ಬರೆದ 'ಶಾಸನೋಕ್ತ ವೀರಶೈವರು' ಎಂಬ ಬರೆಹ (ಪುಟ ೨೭೭ರಲ್ಲಿ) ಡಾ॥ ಬಿ.ಎಸ್. ಗದ್ದಗಿಮಠ ಅವರು ಹೇಳಿದ್ದಾರೆ.

## ಮಲ್ಲಿಕಾರ್ಜುನ ಪಂಡಿತಾರಾಧ್ಯ

ಈತನು ಪಂಡಿತತ್ರಯರಲ್ಲಿ ಒಬ್ಬನು ಕರ್ನಾಟಕ ಕವಿ ಚರಿತೆಯು

ಶ್ರೀ ಆರ್. ನರಸಿಂಹಾಚಾರ್ಯರು ಈತನ ಕಾಲವನ್ನು ಕ್ರಿ. ಶ. ೧೧೬೦ ಎಂದು ಹೇಳಿದ್ದಾರೆ. ಈತನು ವಚನಗಳನ್ನು ರಚಿಸಿದ್ದಾನೆ. ಆಂಧ್ರ ಪ್ರದೇಶದಲ್ಲಿ ವೀರಶೈವ ಧರ್ಮವನ್ನು ಪ್ರಚಾರಪಡಿಸುವನು. ಈತನು ಪಂಚಾಚಾರ್ಯರಲ್ಲಿ ಒಬ್ಬರಾದ ಪಂಡಿತಾರಾಧ್ಯ ಜಗದ್ಗುರುವೆಂದು ಹಲವರು ಹೇಳುವರು. ಇದು ಎಷ್ಟಕ್ಕೂ ಸರಿಯಲ್ಲ. ಹೆಸರಿನ ಹಿಂದೆ ಯಾವ ವಿಶೇಷಣವಿಲ್ಲದ ಪಂಡಿತಾರಾಧ್ಯರೊಬ್ಬರು ಬೇರೆ ಇದ್ದಾರೆ. ಇವರೂ ವಚನಕಾರರು. ಇವರದು ಒಂದೇ ಒಂದು ವಚನ ಸಿಕ್ಕಿದೆ. 'ಗುರುಸಿದ್ಧಮಲ್ಲು' ಎಂದು ಇವರ ವಚನಾಂಕಿತವಿದೆ' ಗುರುಸಿದ್ಧಮಲ್ಲ ಶಿವಾಚಾರ್ಯರು ಶ್ರೀಶೈಲ ನಿಡು ಮಾಮಿಡಿ ಪೀಠದ ಪರಂಪರೆಯಲ್ಲಿ ಮೂರನೆಯವರು. ಇವರ ಅನಂತರದವ ರಾಗಿರಬೇಕು–ಈ ವಚನಕರ್ತರು. ಇವರನ್ನು ಇಮ್ಮಡಿ ಪಂಡಿತಾರಾಧ್ಯ ಎಂದು ಕರೆಯಲಾಗುತ್ತದೆ. ಇವರ ಕಾಲ ಏಳು ಅಥವಾ ಎಂಟನೆಯ ಶತ ಮಾನಕ್ಕೆ ಹೋಗುತ್ತದೆ. ಇವರ ಹಿಂದೆ ಎರಡು ತಲೆಮಾರುಗಳ ಪೂರ್ವದಲ್ಲಿ ಮೂಲ ಪಂಡಿತಾರಾಧ್ಯರಿದ್ದರು. ಇವೆಲ್ಲ ಕಾರಣಗಳಿಂದ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಪಂಚಾಚಾರ್ಯರಲ್ಲಿ ಒಬ್ಬರಲ್ಲವೆಂಬುದು ಸ್ಪಷ್ಟವಾಗುತ್ತದೆ.

ಎರಡನೆಯದಾಗಿ 'ಅಮರಗುಂಡದ ಮಲ್ಲಿಕಾರ್ಜುನ ತಂದೆ' ಎಂಬ ಹೆಸರಿನವರೊಬ್ಬರಿರುವರು. ಇವರೂ ವಚನಕಾರರು ಸೋಮನಾಥನ ಗಣ ಸಹಸ್ರದಲ್ಲಿ ಇವರ ಹೆಸರು ಬರುತ್ತದೆ. ಇವರು ಮೂಲಪಂಡಿತಾರಾಧ್ಯರಿಗೂ ಮಲ್ಲಿಕಾರ್ಜುನ ಪಂಡಿತಾರಾಧ್ಯರಿಗೂ ಭಿನ್ನರು.

ಇವರಿಬ್ಬರಿಗೂ ಹೊರತಾದ ಮಲ್ಲಿಕಾರ್ಜುನ ಪಂಡಿತಾರಾಧ್ಯರು, ವಿಶೇಷ ವಿದ್ವಾಂಸರಾಗಿದ್ದರು ; ಶಿವಾನುಭಾವಸಂಪನ್ನರಾಗಿದ್ದರು. ಅಂತೆಯೇ ಅವರು ರುದ್ರ ಮಹಿಮಾಶತಕ, ಮಾಯಾಮೋಚನಸ್ತವ. ನೀರಾಜನ ಪದ ಆನಂದಪದ, ಅಮರೇಶ್ವರಾಷ್ಟಕ, ಶಿವತತ್ತ್ವಸಾರ. ಗಣಸಹಸ್ರನಾಮಾವಳಿ ಮೊದಲಾದ ಗ್ರಂಥಗಳನ್ನು ಲಿಖಿಸಿದ್ದಾರೆ. ವಚನಗಳನ್ನು ರಚಿಸಿದ್ದಾರೆ. ಇವರ ಪುತ್ರನಾದ ಕೇದಾರ ಗುರು ಎಂಬವರೊಬ್ಬರಿದ್ದರು. ಇವರು ಸಿದ್ಧ ರಾಮೇಶ್ವರರ ಸಮಕಾಲೀನರು. ಪ್ರಭಾವಶಾಲಿಗಳು.

ಮಲ್ಲಿಕಾರ್ಜುನ ಪಂಡಿತಾರಾಧ್ಯರು ೧೧–೧೨ ಶತಮಾನಗಳನ್ನು ಸಂಧಿಸುವ ವಯೋಮಾನವುಳ್ಳವರು. ವೀರಶೈವ ಧರ್ಮಧುರೀಣರು. ಪ್ರಸಾರಕಾರ್ಯನಿರತರು ತಮ್ಮ ಕೊನೆಯ ವಯಸ್ಸಿನಲ್ಲಿ ಕಲ್ಯಾಣಕ್ರಾಂತಿಗೆ ಮನ ಮಾರುಹೋದವರು. ಇವರು ಪಂಚಾಚಾರ್ಯರಲ್ಲಿ ಒಬ್ಬರೆಂದು ಹೇಳುವುದು ಎಷ್ಟು ಮಾತ್ರಕ್ಕೂ ಸರಿಯಲ್ಲ. ಈತನ ಬಗೆಗೆ ತೆಲುಗು, ಸಂಸ್ಕೃತ ಕನ್ನಡದಲ್ಲಿ ಚಾರಿತ್ರಿಕ ಗ್ರಂಥಗಳು ರಚಿತವಾಗಿವೆ. ಆಂಧ್ರದ ದ್ರಾಕ್ಷಾರಾಮ ಈತನ ಕ್ರಾಂತಿಕ್ಷೇತ್ರ. ಭೀಮನ ಪಂಡಿತನ ಪುತ್ರ. ತಾಯಿ ಗೌರಾಂಬಿಕೆ. ಕೋಟಿಪಲ್ಲಾರಾಧ್ಯರ ಶಿಷ್ಯ. ಅವರಿಂದ ವೀರಶೈವ ದೀಕ್ಷೆಯನ್ನು ಪಡೆದವನು. ರೇವಣಸಿದ್ಧ ಶಿವಾಚಾರ್ಯರೊಡನೆ ಸಂಬಂಧವಿದ್ದಿತು–ಧಾರ್ಮಿಕ ಪ್ರಸಾರ ಕಾರ್ಯದಲ್ಲಿ! ವೆಲ್ಲಾಳಚೋಳನ ಸಭೆಯಲ್ಲಿ ಜೈನರನ್ನು, ಬೌದ್ಧರನ್ನು ಗೆದ್ದು ಶಿವಸಿದ್ಧಾಂತವನ್ನು ಸ್ಥಾಪಿಸಿದ ಕೀರ್ತಿವಂತರು ವೆಲ್ಲಾಳಚೋಳನು ಇವರ ಕಣ್ಣುಗಳನ್ನು ಕೀಳಿಸುವನು. ಶಿವಗಣಸಹಸ್ರನಾಮ ಪಠನನಿಷ್ಠೆಯಿಂದ ಮರಳಿ ಕಣ್ಣುಗಳನ್ನು ಪಡೆದ ಪ್ರಭಾವಶಾಲಿಯು. ಈತನ ಆಪ್ತಶಿಷ್ಯ ದೋನವಾರ್ಯನೆಂಬುವನಿದ್ದನು. ಈತನು ತನ್ನ ಗುರುವಿನ ಧರ್ಮ ಕ್ರಾಂತಿಗೆ ನೆರವಾಗಿದ್ದನು.

## ವೀರಶೈವ ಪ್ರಥಮ ಕವಿ, ಪ್ರಥಮ ದಣ್ಣಾಯಕ ಮತ್ತು ಲಿಂಗಾವಧಾನಿ ಕೊಂಡಗುಳಿ ಕೇಶಿರಾಜ!

ಕಲಬುರ್ಗಿ ಜಿಲ್ಲೆಯ ಒಂದು ಊರು ಕೊಂಡಗುಳಿ! ಇದು ಜೇವರ್ಗಿ ತಾಲೂಕಿನಲ್ಲಿದೆ. ಇದು ಈತನ ಹುಟ್ಟೂರು. ಈತನ ಕಾಲ ಕ್ರಿ.ಶ. ೧೦೭೬–೧೧೨೬. ಕೇಶಿರಾಜನ ಪತ್ನಿ ಗಂಗಾದೇವಿ. ಗುರು ವಿರೂಪಾಕ್ಷ. ಮನೆದೇವತೆ ಸೋಮನಾಥ. ತನ್ನ ಊರಿನಲ್ಲಿ ಸೋಮನಾಥ ದೇವಾಲಯವೊಂದನ್ನು ಕಟ್ಟಿಸಿರುವನು. ಇವನು ವಾಸವಾಗಿದ್ದುದು ಕಲ್ಯಾಣದ ಬಳಿ ಇರುವ ಶಿವಪುರದಲ್ಲಿ! ನಿತ್ಯ ಲಿಂಗಾರ್ಚನ ನಿರತ ಜಂಗಮದಾಸೋಹಿ, ಶಿವಾನುಭಾವಿ; ಶಿವಕವಿ ಕಂದ ತ್ರಿವಿಧಿ ರಗಳೆ ದಂಡಕ ಅಷ್ಟಕ ವಚನಗಳನ್ನು ರಚಿಸುತ್ತಿದ್ದನು. 'ಷಡಕ್ಷರ ಕಂದ' ಎಂಬ ಕೃತಿಯನ್ನು ರಚಿಸಿದ್ದಾನೆ. ಮಂತ್ರಮಹಿಮೆ ಇದರ ವಸ್ತು. ಗಣಸಹಸ್ರದಲ್ಲಿ ಈತನ ಹೆಸರು ಉಲ್ಲೇಖಿತವಾಗಿದೆ. ಈತನ ವಿದ್ವತ್ತನ್ನು ವಿಶಿಷ್ಟ ಪ್ರಭಾವವನ್ನು ತಿಳಿದ ತ್ರಿಭುವನಮಲ್ಲ ಪೆರ್ಮಾಡಿದೇವನು

ಕೇಶಿರಾಜನನ್ನು ದಂಡನಾಯಕನನ್ನಾಗಿ ನಿಯಮಿಸಿಕೊಳ್ಳುವನು. ಇದನ್ನು ನೈಜವಾಗಿ ನಿರ್ವಹಿಸಲು ಸರ್ವಸಮರ್ಥನಾಗಿದ್ದರೂ ಲೌಕಿಕ ಪ್ರವೃತ್ತಿಯಿಲ್ಲದವನಾಗಿ ಲಿಂಗಾರ್ಚನ ಲಿಂಗಾರ್ಪಣ ಲಿಂಗಾನುಭವಾಸಕ್ತಿ ಯುಳ್ಳವನಾಗುವನು. ಲಿಂಗನಿಷ್ಠೆ ಆತನ ಅಂಗಾಂಗಗಳಲ್ಲಿ ಸಂಗಮಿಸುವುದು. ಮಂತ್ರಾನುಷ್ಠಾನಕ್ಕೆ ಮಿತಿಯಿಲ್ಲವಾಗುವುದು. ಇದರಿಂದಾಗಿ ದಣ್ಣಾಯಕತ್ವಕ್ಕೆ ವಂಚಿತನಾಗುವನು. ಅದು ತಪ್ಪಿದುದೇ ಆತನಿಗೆ ಇನ್ನಷ್ಟು ಮತ್ತಷ್ಟು ಲೇಸಾಗುವುದು. ಸಾತಿಶಯವಾಗಿ ಸಂತೋಷಚಿತ್ತನಾಗುವನು ಪ್ರಧಾನಿಪಟ್ಟ ಹೋಯಿತೆಂದು ಹಳಹಳಿಸಲಿಲ ಆತನು ಭವಿ ಯಾರೇ ಇರಲಿ ಅವರಿಗೆ ಬಾಗುತ್ತಿರಲಿಲ್ಲ. ಅಂತೆಯೇ ತ್ರಿಭುವನ ಮಲ್ಲನೆಂದು ಹೆಸರಾದ ಪೆರ್ಮಾಡಿರಾಜನಿಗೂ ತಲೆಬಾಗದೆ ಹೋದ ಸ್ಥೈರ್ಯ ಆತನದು. ರಾಜ್ಯಭಾರವನ್ನು ಚನ್ನಾಗಿ ನಡೆಸಿ ರಾಜ ಗೌರವಕ್ಕೆ ಪಾತ್ರನಾಗಿದ್ದರೂ ಈ ಒಂದು ಛಲದಿಂದ ಅಧಿಕಾರವನ್ನು ತ್ಯಜಿಸುವನು. ಶಿವಧರ್ಮದ ಅಂದರೆ ವೀರಶೈವ ಮತ ಧರ್ಮದ ಪ್ರಸಾರ ಕಾರ್ಯವನ್ನು ವಿಶೇಷವಾಗಿ ನೆರವೇರಿಸುವನು. ಇದಕ್ಕಾಗಿ ಆತನ ವಿರೋಧಿಗಳು ಕರುಬ ತೊಡಗುವರು. ಆದರೂ ಅದಕ್ಕೆ ಜಂಕದೆ ತನ್ನ ಸತ್ಯ ನಿಷ್ಠ ಕಾರ್ಯವನ್ನು ಮುಂದುವರಿಸಿ ಮತ್ತೆ ರಾಜನ ಮನಸ್ಸನ್ನು ಗೆಲ್ಲುವನು. ಮರಳಿ ಆತ ಕೊಡಬಯಿಸಿದ ಪ್ರಧಾನಿ ಪಟ್ಟಕ್ಕೆ ಅಂದರೆ ದಂಡನಾಯಕತ್ವಕ್ಕೆ ಆಶಿಸದೆ ಅಂಗೀಕರಿಸದೆ ಹೋಗುವನು.

ಕೇಶಿರಾಜನ ಬಗೆಗೆ ಹರಿಹರ ಕವಿಯು ಒಂದು ರಗಳೆಯನ್ನು ಬರೆದಿರುವನು. ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರದಲ್ಲಿ ವರ್ಣಿತನಾಗಿದ್ದಾನೆ. ಈತನು ಸರ್ವಾದರ್ಶವಾಗಿ ವೀರಶೈವಧರ್ಮ ಕ್ರಾಂತಿಯನ್ನೆಸಗುವನು. ವಸ್ತುಕ ವರ್ಣಕಗಳೆರಡರಲ್ಲಿಯೂ ಕಾವ್ಯ ಬರೆದ ಶಕ್ತಿವಂತನಾಗಿದ್ದನು. ಆತನು ಉತ್ತಮ ರಾಜಕಾರಣಿ, ಉತ್ತಮ ಲಿಂಗಧರ್ಮಾವಧಾನಿ, ಸಾಹಿತ್ಯಸುಯ್ಯಾದನಿ ಆಗಿದ್ದನು.

ಕೇಶಿರಾಜನ ಬಗೆಗೆ ಶಾಸನಗಳುಂಟು. ಈತನ ತಂದೆ ತಾಯಿಗಳು ಹೊಳಲ ಮರಸ-ದುರ್ಗಾದೇವಿ ಎಂದು ಶಿಕಾರಿಪುರ ಶಾಸನದಿಂದ ತಿಳಿದು ಬರುತ್ತದೆ. ಬಸವಣ್ಣನವರಿಗಿಂತಲೂ ಪೂರ್ವದಲ್ಲಿ ಈತನು ಬಿಜ್ಜಳರಾಜನ ದಂಡನಾಯಕನಾಗಿ ಬನವಾಸಿಯ ಪನ್ನಿರ್ಛಾಸಿರವನ್ನು ಆಳುತ್ತ ಬಲಿಪುರದಲ್ಲಿದ್ದ

ನೆಂದೂ ತಿಳಿದು ಬರುತ್ತದೆ. ಡಾ. ಫ. ಗು. ಹಳಕಟ್ಟಿಯವರು ತಮ್ಮ ಶಿವಶರಣ ಚರಿತೆಯಲ್ಲಿ (ಭಾಗ ೨) ಈತನ ಚರಿತ್ರೆಯನ್ನು ಉಲ್ಲೇಖಿಸಿರುವರು "ನಿತ್ಯ ಲಿಂಗಾರ್ಚನೆ ಮತ್ತು ಜಂಗಮ ದಾಸೋಹದಲ್ಲಿ ನಿರತನಾಗಿ ಶಿವಾನುಭವಿಯೆನಿಸಿದ್ದನು. ಅವನ ಕೀರ್ತಿ ಎಲ್ಲ ಕಡೆಗೂ ಹಬ್ಬಿತ್ತು....ಬುದ್ಧಿವಂತನಾದ ಕೇಶಿರಾಜನು ರಾಜ್ಯಭಾರವನ್ನು ಚನ್ನಾಗಿ ನಡೆಯಿಸಿ ರಾಜನ ಪ್ರೀತಿ ಗೌರವಗಳಿಗೆ ಪಾತ್ರನಾದನು. ತನ್ನ ಅಧಿಕಾರ ಶಕ್ತಿಯಿಂದ ಶಿವಧರ್ಮದ ಪ್ರಸಾರ ಕಾರ್ಯವನ್ನು ನಡೆಸಿದನು. ವಿರೋಧಿಗಳು ದೂರು ಹೇಳಿದ ಕಾರಣ ಅಧಿಕಾರ ತ್ಯಜಿಸಿ ತನ್ನ ಊರಿಗೆ ಹೋಗುವನು. ದಾರಿಯಲ್ಲಿ ಭೀಮಾ ನದಿಯಲ್ಲಿ ಬಿದ್ದು ಹೋದ ತನ್ನ ಇಷ್ಟಲಿಂಗವನ್ನು ಪಡೆದು ಪವಾಡವನ್ನು ಮೆರೆದನು. ಕೇಶಿರಾಜನ ಸಮಾಧಿ ಕೊಂಡಗುಳಿಯಲ್ಲಿದೆ....ಕೇಶಿರಾಜನು ಬಸವೇಶ್ವರರಿಗಿಂತ ೬೦-೭೦ ವರ್ಷ ಹಿಂದಿನವನಾಗುತ್ತಾನೆ. ಕೇಶಿರಾಜನ ಚರಿತ್ರೆಯಲ್ಲಿ ಬಸವೇಶ್ವರನ ಉಲ್ಲೇಖವಿಲ್ಲ ಎಂಬುದು ಗಮನಾರ್ಹ. ಕೇಶಿರಾಜನೊಬ್ಬ ಶ್ರೇಷ್ಠಕವಿ." ಎಂದು ಮುಂತಾಗಿ ಹೇಳಿರುವರು ಅದಲ್ಲದೆ ಪದ್ಮಶ್ರೀ ಡಿ. ಶಿವಮೂರ್ತಿ ಶಾಸ್ತ್ರಿಗಳವರು 'ಬಸವೇಶ್ವರರ ಸಮಕಾಲೀನರು' ಎಂಬ ಕೃತಿಯಲ್ಲಿ

"ಬಸವಣ್ಣನವರಿಗಿಂತ ಹಿಂದೆ ವೀರಶೈವ ಧರ್ಮಪ್ರಸಾರಕ್ಕಾಗಿ ಶ್ರಮಿಸಿದ ಮಹಾ ಪುರುಷರು ದೇವರ ದಾಸಿಮಯ್ಯ (ಕಿ ಶ. ೧೦೪೦), ಏಕಾಂತದ ರಾಮಯ್ಯ, ಮೆರೆ ಮಿಂಡದೇವ, ನಿಜಗುಣದೇವ, ಡೋಹರ ಕಕ್ಕಯ್ಯಗಳು ಬಸವಣ್ಣನವರಿಗಿಂತ ಹಿಂದಿನವರೆಂದು ಕಾಣುತ್ತದೆ. ವಚನಕಾರರಲ್ಲಿ ದೇವರ ದಾಸಿಮಯ್ಯನೂ ಕವಿಗಳಲ್ಲಿ ಕೊಂಡಗುಳಿ ಕೇಶಿರಾಜನೂ ಆಚಾರ್ಯರಲ್ಲಿ ರೇವಣ ಸಿದ್ಧನೂ ಕರ್ನಾಟಕದಲ್ಲಿ ಪ್ರಾಚೀನ ವೀರಶೈವರೆಂದು ಈಗ ನಿಚ್ಚಳವಾಗಿ ಹೇಳಬಹುದು. (ಪುಟ ೭೨೨) ಮತ್ತು

ಇತ್ತೀಚೆಗೆ ಬೆಳಕಿಗೆ ಬಂದ ಕೊಂಡಗುಳಿ ಶಾಸನದಲ್ಲಿ ಕೇಶಿರಾಜನ ಬಗೆಗೆ ಕೆಲವು ಹೊಸ ಸಂಗತಿಗಳು ಕಾಣಸಿಕೊಂಡಿವೆ.(South Indian Inscriptions, Bombay Karnatak Inscriptions (Vol. XX No. 79, Ed. by G.S. Gai) ಆ ಶಾಸನದಲ್ಲಿ "ದಂಡನಾಯಕಂ ಕೇಶಿರಾಜಯ್ಯನವರು ಶ್ರೀ ಚಾಲುಕ್ಯ ವಿಕ್ರಮ ವರುಷದ ೩೩ನೆಯ ಸರ್ವಜಿತ್ ಸಂವತ್ಸರದ ಮಾರ್ಗಶಿರದ ಅಮಾವಾಸ್ಯೆ

ಸೋಮವಾರದ ದಿನ ಸೂರ್ಯಗ್ರಹಣಪರ್ವ ನಿಮಿತ್ತದಲು ತಾವು ಮಾಡಿಸಿದ ಶಿವಾಲಯದ ಮೂಲಸ್ಥಾನದ ಶ್ರೀ ಸೋಮೇಶ್ವರದೇವರ್ಗೆ" ಎಂದೂ "ಕೊಂಡಗುಳಿಯಲು ಶ್ರೀ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾ ಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕ ದುಷ್ಟವಿದೃಷ್ಟ ವಿಧೇಯ ಕವಾಜಿಕುಲಾರ್ಣವಪಾರಿಜಾತ ಸುಕವಿಶುಕಚೂತ ಬಂಧು ವನವಸಂತ ವಚಶ್ರೀ ವಧೂಶಾಂತ ಸಾಹಿತ್ಯ ಸರೋರುಹ ಮಧುಬ್ರತ, ಸತ್ಯಬ್ರತ ಹರಚರಣ ರಜೋರಂಜಿತೋತ್ತಮಾಂಗನ್ ಸಂಧಿವಿಗ್ರಹಿ....ಕೇಶಿರಾಜರಸರು" ಎಂದೂ ನಿರೂಪಿತವಾಗಿದೆ.

ಮೇಲಿಕಂಡ ಈ ಶಾಸನದಲ್ಲಿ ಕಲ್ಯಾಣದಲ್ಲಿ ಕ್ರಿ.ಶ. ೧೦೭೬ ರಿಂದ ೧೧೨೬ ರವರೆಗೆ ೫೦ ವರ್ಷಗಳ ಕಾಲ ಅಖಂಡವಾಗಿ ರಾಜ್ಯಭಾರ ಮಾಡಿದ ತ್ರಿಭುವನ ಮಲ್ಲ ವಿಕ್ರಮಾದಿತ್ಯ ಪೆರ್ಮಾಡಿ ದೇವರಾಯನ ಕಾಲದಲ್ಲಿ ಅವನ ಮಂತ್ರಿಯೂ ದಂಡನಾಯಕನೂ ಆಗಿದ್ದ ಕೊಂಡಗುಳಿ ಕೇಶಿರಾಜನ ವಿಷಯವು ನಿರೂಪಿತ ವಾಗಿದೆ.," ಎಂದು ಹೇಳಿದ್ದಾರೆ ಅಲ್ಲದೆ ಅವರು ಮುಂದುವರಿದು, ಮತ್ತೆ "ಕೊಂಡಗುಳಿ ಶಾಸನವು ಬೆಳಕಿಗೆ ಬಂದುದರಿಂದ ಕೇಶಿರಾಜನ ಚರಿತ್ರೆಯ ಮೇಲೆ ಬೆಳಕು ಬಿದ್ದಿದೆ. ಕವಿಚರಿತ್ರಕಾರರು ಕೇಶಿರಾಜನ ಕಾಲ ಕ್ರಿ.ಶ. ೧೧೬೦ ಎಂದೂ ನಿರ್ಣಯಿಸಿದುದು ಈಗ ತಪ್ಪಾಗಿದೆ. ಕೆಲವು ವೀರಶೈವ ಗ್ರಂಥಕಾರರು ಕೊಂಡಗುಳಿ ಕೇಶಿರಾಜನು ಬಸವೇಶ್ವರನು ಕೂಡಲಸಂಗಮಕ್ಕೆ ಹೋದನೆಂದು ಹೇಳಿದುದು ಭ್ರಾಂತಿಜನ್ಯವಾಗಿದೆ. ಷಿಕಾರಿಪುರದ ಶಾಸನದಲ್ಲಿ ಅಭಿವರ್ಣಿತ ನಾಗಿರುವ ಕೊಳಲಮರಸ-ದುರ್ಗಾಂಬಿಕಾ ಪುತ್ರ. ಲಕುಮಿದೇವಿಯ ಮನೋವಲ್ಲಭ ಕೇಶಿರಾಜನ, ರಾಯಮುರಾರಿ ಸೋಯಿದೇವನ ಕಾಲದವನು. (೧೧೬೭-೧೧೭೬) ಇವನು ಕೊಂಡಗುಳಿ ಕೇಶಿರಾಜನಿಗಿಂತ ಭಿನ್ನನು ಮತ್ತು ಈಚಿನವನು ಎಂಬುದು ಈಗ ಸ್ಪಷ್ಟವಾಗಿದೆ.. .....ಇದುವರೆಗೆ ನಾವು ಮಾಡಿದ ಚರ್ಚೆಯಿಂದ ಕೊಂಡಗುಳಿ ಕೇಶಿರಾಜನ ಬಗೆಗೆ ಕವಿಚರಿತ್ರೆಕಾರರ ಊಹೆ ತಪ್ಪಾಗಿಯೂ ಡಾ॥ ಫ. ಗು. ಹಳಕಟ್ಟಿಯವರ ತರ್ಕ ಬಹುಮಟ್ಟಿಗೆ ಸಾಧು ವಾಗಿಯೂ ಇದೆಯೆಂದು ಹೇಳಬಹುದು." ಎಂದು ಅಭಿಪ್ರಾಯ ಪಟ್ಟಿದ್ದಾರೆ.

ನಾವೂ ಇದನ್ನೇ ಸಮರ್ಥಿಸುತ್ತೇವೆ. ಕೇಶಿರಾಜರು ಹಲವರಿದ್ದಂತೆ ತೋರುತ್ತದೆ. ಹಳಕಟ್ಟಿಯವರು ಸಂಪಾದಿಸಿ ಹೊರಗೆ ಹಾಕಿದ ಗೂಳೂರ ಶೂನ್ಯ ಸಂಪಾದನೆಯು ಉಡುತಡಿ ಮಹಾದೇವಿಯಕ್ಕನ ಸಂಪಾದನೆಯು ಟೀಕಾ ಗದ್ಯದಲ್ಲಿ—ಮೊಗವಾಡದ ಕೇಶಿರಾಜದೇವರು. ಸಿಂದೆಯದ ಕೇಶಿರಾಜದೇವರು ಎಂಬ ಇಬ್ಬರ ಹೆಸರುಗಳು ಬಂದಿವೆ. ಇವರು ಯಾರೆಂಬುದು ತಿಳಿಯದು. ಮತ್ತು ಓಲಗದ ಕೇಶಿರಾಜನೊಬ್ಬನಿದ್ದಂತೆ ತಿಳಿಯುತ್ತದೆ. ಇವರೆಲ್ಲ ಈಚಿನವರಿರುವರು.

ಕೊಂಡಗುಳಿ ಕೇಶಿರಾಜನ 'ಷಡಕ್ಷರಕಂದ' ಪದ್ಯಗಳು ಆತನ ಅನಂತರ ಬಂದ ಬಸವಣ್ಣನವರ ಮೇಲೆ ಹೆಚ್ಚು ಪ್ರಭಾವವನ್ನು ಬೀರಿರುವುದನ್ನು ಯಾರೂ ಮರೆಯುವಂತಿಲ್ಲ. ಅಂತೆಯೇ ದೇವರ ದಾಸಿಮಯ್ಯನ ವಚನ ಪ್ರಭಾವವೂ ಬಸವಣ್ಣನವರ ಮೇಲಾಗಿದೆ.

## ಕೂಡಲಸಂಗಮ ಶಿವಾಚಾರ್ಯರ ಕ್ರಾಂತಿಕ್ಷೇತ್ರ;
## ಮತ್ತು
## ಸಾಂಸ್ಕೃತಿಕ ಶಾಂತಿ-ಕೇಂದ್ರ !

ಸುಮಾರು ಕ್ರಿ. ಶ. ೧೦೮೦ರಲ್ಲಿ ಜಾತವೇದಮುನಿ ಶಿವಾಚಾರ್ಯರ ಜನನ ಕೂಡಲ ಸಂಗಮ ಕ್ಷೇತ್ರದ ವೀರಶೈವ ಶಿವಾಚಾರ್ಯ ಪರಂಪರೆಗೆ ಸೇರಿದ ಸಾರಂಗ ಮಠಸ್ಥ ಗೃಹಸ್ಥರಲ್ಲಿ ! ಅಂತೆಯೇ ಆತನಿಗೆ "ಸಂಗಮದೇವ ಅಥವಾ ಸಂಗಮೇಶ್ವರ" ಎಂಬ ನಾಮಕರಣವನ್ನು ಮಾಡಲಾಯಿತು. ಆಯ್ದಾರು ವರುಷದ ಬಾಲಕನಿರುವಾಗಲೆ ವೇದಾಗಮ ಮಂತ್ರಗಳನ್ನು ಸ್ಪಷ್ಟವಾಗಿ ಹೇಳುತ್ತಿದ್ದರಿಂದ ಸಂಗಮದೇವ ಬಾಲಕನನ್ನು ಅನ್ವರ್ಥವಾಗಿ ಜಾತವೇದಿಯೆಂದು ಆತನ ಗುರುಗಳು ಕರೆವರು. ಅದನ್ನೆ ಜನಗಳೂ ಕರೆಯತೊಡಗಿದರು. ರೂಢಿಯಲ್ಲಿ ಅದೇ ಹೆಸರು ಹೆಚ್ಚಾಗಿ ಬಳಕೆಗೆ ಬರುವುದು. ಅದರಂತೆ ವೇದಾಗಮಗಳ ಅಧ್ಯಯನ ಮಾಡಿ ವಿಶೇಷವಾಗಿ ಪ್ರವೀಣನಾಗುವನು. ಸಾರಂಗಮಠದ ಅಧಿಪತಿಯಾಗಿ ಶಿವಾಚಾರ್ಯನೆನಿಸುವನು. ಕೂಡಲ ಸಂಗಮೇಶ್ವರ ದೇವಸ್ಥಾನದ ಅಧಿಪತಿಯಾಗಿ ಕ್ಷೇತ್ರಾಧಿಪತಿಯೆಂದು ಹೆಸರಾಗುವನು. ಒಂದು 'ಗುರುಕುಲ'

ವನ್ನು ಸ್ಥಾಪಿಸಿ ಕುಲಪತಿಯಾಗುವನು. 'ಲಿಂಗಾರ್ಚನ ಮಂಟಪ'ವೊಂದನ್ನು ಸಂಸ್ಥಾಪಿಸುವನು. ಬಸವಣ್ಣ ಹುಟ್ಟಿದಾಗ ಕಣ್ಣು ಬಾಯ್ ಬಿಡದಂತಿರುವಾಗ ಅಲ್ಲಿಗೆ ಆಗಮಿಸಿ ಭಸ್ಮ-ಲಿಂಗಗಳ ಧಾರಣ ಮಾಡಿ ಕಣ್ ಬಾಯ್ ಬಿಡುವಂತೆ ಮಾಡುವನು. ಹಾಲು ಕುಡಿವಂತೆ ಮಾಡಿ ಬದುಕಿಸುವನು. ಒಮ್ಮೆ ಹಾರವರ ಹುಡುಗನನ್ನು ಕೊಂದನೆಂದು ಅಪವಾದ ಹೊರಿಸಿ ಕೊಲ್ಲಬೇಕೆಂದು ಅಟ್ಟಿಸಿ ಬಂದಾಗ ಜಾತವೇದಿಗಳು ಬಸವಣ್ಣನನ್ನು ಉಳಿಸಿ ಬೆಳಸಿದರು. ಗುರುಕುಲದಲ್ಲಿ ಅಧ್ಯಯನ ಮಾಡಿಸಿ, ಲಿಂಗಾರ್ಚನ ಮಂಟಪದಲ್ಲಿ ಲಿಂಗಪೂಜಾ ವಿಧಾನವನ್ನು ಕಲಿಸುವರು. ಬಸವಣ್ಣನೊಡನೆ ಬಂದ ಅಕ್ಕ ನಾಗಾಯಿಗೆ ದೀಕ್ಷೆಮಾಡಿ ತಮ್ಮ ಸಂಬಂಧಿಯಾದ ಸಾರಂಗ ಮಠಸ್ಥನಾದ ಶಿವಸ್ವಾಮಿಗೆ ಕೊಟ್ಟು ಮದುವೆ ಮಾಡುವರು. ಶಿವಸ್ವಾಮಿಗೆ ಹುಟ್ಟಿದ ಚನ್ನಬಸವಣ್ಣ, ಸಾರಂಗಮಠಸ್ಥನು; ಮತ್ತು ಶಿವಾಚಾರ್ಯನು. ಸರ್ವಶರಣ ಸನ್ಮಾನ್ಯ ಶಿವಾಚಾರ್ಯನು. ಷಟ್‌ಸ್ಥಲ ಚಕ್ರವರ್ತಿ.

ಜ್ಯೋತಿರ್ಮಯರಾದ ಜಾತವೇದ ಮುನಿ ಶಿವಾಚಾರ್ಯರ ಸಮಕಾಲೀನರು ನಿಡುಮಾಮಿಡಿ ಶ್ರೀ ಶ್ರೀಶೈಲಪೀಠದ ಸೂರ್ಯಸಿಂಹಾಸನಾಧೀಶ್ವರ ಇಮ್ಮಡಿ ಕರಿಬಸವೇಂದ್ರ ಶಿವಾಚಾರ್ಯರು. ಇವರು ಇಲ್ಲಿನ ಗುರುಕುಲದ ಕ್ರಾಂತಿಯಲ್ಲಿ ಭಾಗವಹಿಸಿ ಕೆಲಸ ಮಾಡಿದವರು. ಸಾಮಾಜಿಕ ಸಾಂಸ್ಕೃತಿಕ ಅಭಿವೃದ್ಧಿಯನ್ನು ಆದರ್ಶವಾಗಿ ಮಾಡಿದವರು. ಬಹು ಜನಕ್ಕೆ ವೀರಶೈವ ದೀಕ್ಷೆಯನ್ನಿತ್ತು ವೀರ ಶೈವ ಸಮಾಜವನ್ನು ಹೆಚ್ಚಿಸಿದವರು. ಮತ್ತು ಉಳಿದ ಜನಗಳಿಗೆ ಧರ್ಮ ನೀತಿ ಸಂಸ್ಕೃತಿಗಳನ್ನು ಬೋಧಿಸಿದರು. ಕೂಡಲಸಂಗಮ, ತಂಗಡಿಗಿ, ಮುದ್ದೇಬಿ ಹಾಳ ಮೊದಲಾದ ಊರುಗಳಲ್ಲೆಲ್ಲ ಇವರಿಗೆ ಶಿಷ್ಯರುಂಟು. ಅದೇಕೆ ಕನ್ನಡ ನಾಡಿನಲ್ಲಿಯೇ ಉಂಟು. ಕರಿನಾಡ ಬಸವ ಎಂದಿರುವುದು ಹೋಗಿ ಮಧ್ಯಮ ನಾಡಪದ ಲೋಪವಾಗಿ ಕರಿಬಸವ ಎಂದಾಗಿದೆ. ಹೀಗೆ ಕೂಡಲಸಂಗಮ ಶಿವಾಚಾರ್ಯದ್ವಯರ ಕ್ರಾಂತಿಕೇಂದ್ರ, ಸಾಂಸ್ಕೃತಿಕ ಕ್ಷೇತ್ರವಾಗಿ ಪರಿಣಮಿಸಿದೆ. ಇದನ್ನು ಅಳಿಸಿಹಾಕಲು ಶ್ರೀ ಮಹಾದೇವಿಯವರು ಮತ್ತು ಶ್ರೀ ಲಿಂಗಾನಂದರು ವೀರಶೈವಮೇಳ ಎಂದು ಕರೆಯದೆ 'ಶರಣ ಮೇಳ' ಎಂದು ಕರೆದು ಶರಣಕ್ಷೇತ್ರ (ಕೇಂದ್ರ) ಎಂದು ಅಪಪ್ರಚಾರ ಮಾಡುತ್ತಿರುವರು. ಸುಳ್ಳು ಸಾಧನೆಗೆ ತೊಡಗಿರುವರು. ಇದನ್ನು ಸಾಮಾಜಿಕರು ಗಮನಿಸಬೇಕು.

## ನೂರು ಜನ ವೀರಶೈವಾಚಾರ್ಯರಿಂದೊಡಗೂಡಿದ

# ವಿಶ್ವೇಶ್ವರ ಶಿವಾಚಾರ್ಯ ರಾಜಗುರು !

ವಿಶ್ವೇಶ್ವರ ಶಿವಾಚಾರ್ಯನು ವೀರಶೈವ ಉತ್ಕ್ರಾಂತಿಕಾರರಲ್ಲಿ ಒಬ್ಬನು. ಅತ್ಯಂತ ಪ್ರಭಾವಾನ್ವಿತನು. 'ವೀರಶೈವಾಚಾರ್ಯಶತೈರ್ವೃತಃ' ಎಂದು ಪ್ರಖ್ಯಾತನಾಗಿದ್ದಾನೆ. ಈತನು ಆಂಧ್ರದಲ್ಲಿ 'ವಿದ್ಯಾಮಂಟಪ'ವೊಂದನ್ನು ಸ್ಥಾಪಿಸಿ, ಅದರಲ್ಲಿ ನೂರಾರು ಜನ ವೀರಶೈವ ಶಿವಾಚಾರ್ಯರನ್ನಿರಿಸಿದ್ದನು. ವೀರಶೈವ ಪ್ರಚಾರವನ್ನು ಪ್ರಭೂತವಾಗಿ ಮಾಡಿಸುತ್ತಿದ್ದನು. ಶ್ರೀ ಸಾಮಾನ್ಯರನ್ನು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ದೀಕ್ಷಾ ಸಂಸ್ಕಾರದಿಂದ ವೀರಶೈವರನ್ನಾಗಿಸಿದ್ದನು. ಜೈನರಾಗಿದ್ದ ಕಾಕತೀಯ ರಾಜರನ್ನು ವೀರಶೈವರನ್ನಾಗಿಸಿದ ವಿಶಿಷ್ಟಕೀರ್ತಿ ವಿಶ್ವೇಶ್ವರ ಶಿವಾಚಾರ್ಯರದು. ಇವರು ಕಲಚುರಿ ಅರಸರ ಗುರುಗಳೂ ಆಗಿದ್ದರು. ಇದನ್ನು ಮಲ್ಲಿಕಾಪುರ ಶಾಸನವು ಹೀಗೆ ಉಲ್ಲೇಖಿಸಿದೆ :

> "ಶ್ರೀ ಶೈವಾಗಮಾಂಭೋನಿಧಿಃ ಶ್ರೀ ವಿಶ್ವೇಶ್ವರದೇಶಿಕಃ
> ಕಲಚುರಿ ಕ್ಷಮಾಪಾಲ ದೀಕ್ಷಾಗುರುಃ !...."
> ಎಂದು ಹೇಳಿದೆಯಲ್ಲದೆ, ಅದು ಮುಂದುವರಿದು
> ವಿದ್ಯಾಮಂಟಪವರ್ತಿನಂ ಗಣಪತಿ ಕ್ಷಮಾಪಾಲ ದೀಕ್ಷಾಗುರುಃ"

ಎಂದೂ ಉಲ್ಲೇಖಿಸಿದೆ. ಇದರಿಂದ ವಿಶ್ವೇಶ್ವರ ಶಿವಾಚಾರ್ಯರು ವಿದ್ಯಾಮಂಟಪ ವೊಂದನ್ನು ಸ್ಥಾಪಿಸಿದ್ದರೆಂದು, ಕಾಕತೀಯ ವಂಶದ ಚಕ್ರವರ್ತಿಯಾದ ಗಣಪತಿ ಭೂಪತಿಗೆ ದೀಕ್ಷಾಗುರುಗಳಾದ್ದರೆಂದು ಸುಸ್ಪಷ್ಟವಾಗುತ್ತದೆ. 'ವೀರಶೈವಾ ಚಾರ್ಯಶತೈರ್ವೃತಃ' ಎಂಬುದಾಗಿ ಅದೇ ಮಲ್ಲಿಕಾಪುರ ಶಾಸನವು ಉಲ್ಲೇಖಿಸಿದೆ ಇದರಿಂದ ವಿಶ್ವೇಶ್ವರ ಶಿವಾಚಾರ್ಯನು ವೀರಶೈವ ಮತೋದ್ಧಾರಕ್ಕಾಗಿ ವಿಸ್ತಾರಕ್ಕಾಗಿ ನೂರಾರು ಜನ ಶಿವಾಚಾರ್ಯರನ್ನು ಉಪಯೋಗಿಸಿಕೊಳ್ಳುತ್ತಿದ್ದನೆಂಬುದು ವಿಸ್ಫುಟವಾಗಿ ವಿದಿತವಾಗುತ್ತದೆ. ಆಂಧ್ರದ ವೀರಶೈವ ಮತ ಚರಿತ್ರೆಯಲ್ಲಿ ಶ್ರೀ ವಿಶ್ವೇಶ್ವರ ಶಿವಾಚಾರ್ಯರ ವ್ಯಕ್ತಿತ್ವ ವಿಶಿಷ್ಟತಮವಾಗಿದೆ. ಆಂಧ್ರದ ಅನೇಕ ಶಿವಾಚಾರ್ಯರೆಂಬ ನಕ್ಷತ್ರರಾಶಿಯಲ್ಲಿ ಪೂರ್ಣಚಂದ್ರನಂತಿದ್ದರು. 'ಶೈವಾ ಗಮಾಂಭೋನಿಧಿ' ಎಂದು ಶಾಸನದಿಂದ ವರ್ಣಿತನಾಗಿದ್ದಾನೆ. ವೀರಶೈವ

ಸಂಸ್ಕೃತಿಗೆ ಸುವರ್ಣ ಯುಗವನ್ನು ತಂದ ಯಶೋವಂತನು. ಪ್ರಸಾದ ವಿನಿಯೋಗದಲ್ಲಿ ಈತನನ್ನು ಮೀರಿದವರಿಲ್ಲ. ಇದನ್ನೂ ಅದೇ ಶಾಸನವು ಹೀಗೆ ಹೊಗಳಿದೆ :

> "ಉಪೇಯುಷಾಂ ಶೈವತಪೋಧನಾನಾಂ ಕಾಲಾನನಾಂ ಶಿವಶಾಸನಾನಾಂ ।
> ವಿದ್ಯಾರ್ಥಿನಾಂ ಪಾಶುಪತ ವ್ರತಾನಾಮುಪ್ಯನ್ನ ವಸ್ತ್ರಾದಿ ಸಮರ್ಪಣಾಯ ।
> ಆರಭ್ಯ ವಿಪ್ರಾನನಿವಾದಿತಾನಾಂ ಚಂಡಾಲ ಪರ್ಯಂತಮುಪಾಗತಾನಾಂ ।
> ಅನ್ನಪ್ರದಾನಾಯ ಚ ಸರ್ವಕಾಲಮಕಲ್ಪಯನ್ ರಾಜಗುರುರ್ಮಹಾತ್ಮಾ ॥"

ಇದು ರಾಜಗುರು ವಿಶ್ವೇಶ್ವರ ಶಿವಾಚಾರ್ಯರ ವೈಶಿಷ್ಟ್ಯ ಪೂರ್ಣ ವಿಶಾಲ ಸಮಾಜವಾದಕ್ಕೆ ಪ್ರಸಾದ ವಿನಿಯೋಗಕ್ಕೆ ಸತ್ಯಸಾಕ್ಷಿ. ನಿರುಪಮ ನಿದರ್ಶನ ! ಆತನ ಆ ರಾಜಗುರುತ್ವಕ್ಕೆ ಭೂಷಣ ! ಆತನ ಮಾನವೀಯ ದೃಷ್ಟಿಯ ಮೌಲ್ಯ ಮಾಪನ ! ಈ ದಿಸೆಯಲ್ಲಿ ಆತನದು ಎಲ್ಲರಿಗಿಂತ ಎತ್ತರದ ನಿಲವು; ಬಿತ್ತರದ ಒಲವು. ಆತನ ಆಶ್ರಯದಲ್ಲಿ ಶೈವತಪೋಧನರು,ಕಾಲಾನಲರು ಅಂದರೆ ಉಗ್ರವಾದಿಗಳು ಶಿವ ಶಾಸನರು ಅಂದರೆ ಶಾಂತವಾದಿಗಳು ಅಥವಾ ಭದ್ರಶಾಸನರು, ವಿದ್ಯಾರ್ಥಿಗಳು, ಪಾಶುಪತರು ಇದ್ದರು. ಇವರಿಗೆಲ್ಲ ಅನ್ನ ವಸ್ತ್ರಗಳನ್ನೀಯುತ್ತಿದ್ದನು. ಅಲ್ಲದೆ ಇವರನ್ನೆಲ್ಲಾ ಕಾಯಕನಿರತರನ್ನಾಗಿಸಿದ್ದನು. ಇಷ್ಟೇ ಅಲ್ಲದೆ, ಎಲ್ಲ ಕಾಲದಲ್ಲಿ ವಿಪ್ರರಾದಿಯಾಗಿ ಚಂಡಾಲರವರೆವಿಗೂ ಇರುವ ಎಲ್ಲ ಕೋಮಿನವರಿಗೆ ಜಾತಿಭೇದವಿಲ್ಲದೆ ಅನ್ನದಾಸೋಹವನ್ನು ಏರ್ಪಡಿಸಿದ್ದನು. ರಾಜಗುರುವಾಗಿದ್ದಂತೆ ಜಗದ್ಗುರು ಅಂದರೆ ಜನತಾ ಗುರುವೂ ಆಗಿದ್ದನು. ಎಲ್ಲ ಕೋಮಿನವರಿಗೂ ವಂದ್ಯನಾಗಿದ್ದನು; ಪೋಷಕನಾಗಿ ಪೂಜ್ಯನಾಗಿದ್ದನು. ಇಷ್ಟೇ ಅಲ್ಲ, ಸ್ತ್ರೀಯರನ್ನೂ ಪುರುಷಸಮಾನರನ್ನಾಗಿ ಕಾಣುತ್ತಿದ್ದನು. ಸ್ತ್ರೀಸ್ವಾತಂತ್ರ್ಯವನ್ನು ಎತ್ತಿ ಹಿಡಿದಿದ್ದನು. ಇದಕ್ಕೆ ನಿದರ್ಶನವಿದು : ಈತನ ಆಪ್ತ ಶಿಷ್ಯನು ಗಣಪತಿರಾಜನು. ಈತನಿಗೆ ಗಂಡುಮಕ್ಕಳಿರಲಿಲ್ಲ. ಮುಂದಿನ ರಾಜ್ಯಭಾರಕ್ಕೆ ಯಾರು ?–ಎಂಬ ಪ್ರಶ್ನೆಯೆದ್ದು ಕಾಡುತ್ತಿತ್ತು. ಆಗ ವೈದಿಕ ವಿದ್ವಾಂಸರು ಮುಂದಿನ ರಾಜ್ಯಪಟ್ಟಕ್ಕೆ ಗಂಡುಮಗನೆ ಆಗಬೇಕೆಂದು ವಾದಿಸುವರು. ಗಣಪತಿ ರಾಜನಿಗೆ ದಿಕ್ಕು ತೋಚದಾಗುವುದು. ಆಗ ರಾಜಗುರು ವಿಶ್ವೇಶ್ವರ ಶಿವಾಚಾರ್ಯರು ಸ್ತ್ರೀಗೂ ಪುರುಷನಷ್ಟೇ ಹಕ್ಕಿದೆ. ನಿನ್ನ ಹಿರಿಯ ಮಗಳಾದ ರುದ್ರಮ್ಮನಿಗೆ ರಾಜ್ಯಾಭಿಷೇಕವಾಗಲಿ ಎಂದು ಹೇಳಿ ಪ್ರೋತ್ಸಾಹಿಸುವನು. ಆಗ ಗಣಪತಿ

ದೇವನು ಶಿವಾಚಾರ್ಯರ ಸಲಹೆಯಂತೆ ತನ್ನ ಹಿರಿಯ ಮಗಳಾದ ರುದ್ರಾಂಬೆಗೆ 'ಪ್ರತಾಪರುದ್ರ'ನೆಂದು ಹೆಸರಿಟ್ಟು ರಾಜ್ಯ ಪಟ್ಟಕ್ಕೆ ಕೂರಿಸುವನು. ಅವಳು ತನ್ನ ಆಗಾಧ ಜನಹಿತ ಕಾರ್ಯಗಳಿಂದ ಗೌರವಾನ್ವಿತಳಾಗುವಳು; ಘನವಾದ ಚಾರಿತ್ರವುಳ್ಳವಳಾಗುವಳು. ತನ್ನ ರಾಜಗುರುವಿಗೂ, ಹೆತ್ತ ತಂದೆಗೂ ಕೈ ಹಿಡಿದ ಪತಿಗೂ ಕೀರ್ತಿ ತರುವಳು. ಕಾಕತೀಯ ವಂಶಕ್ಕೂ ವೀರಶೈವ ಮತಕ್ಕೂ ಗೌರವವನ್ನುಂಟು ಮಾಡುವಳು. ಅನಾದಿ ಕಾಲದಲ್ಲಿ ರುದ್ರದೇವನು 'ಪಶುಪತಿರುದ್ರ'ನೆಂದು ಪ್ರಖ್ಯಾತನಾದರೆ, ರುದ್ರಮ್ಮರಾಣಿಯು 'ಪ್ರತಾಪ ರುದ್ರ'ನೆಂದು ಪ್ರಖ್ಯಾತಳಾಗುವಳು. ರುದ್ರಪರಂಪರೆಯಲ್ಲಿ ರುದ್ರಾಂಬೆ ಒಂದು ಮಹಾ ಮೈಲುಗಲ್ಲಾಗಿ ಮೆರೆದಳು. ರುದ್ರಗಣ ಚಾರಿತ್ರದಲ್ಲಿ ! ಹೀಗೆ ಸ್ತ್ರೀ ಪುರುಷ ಸಾಮ್ಯವನ್ನು ಅಸಾಮಾನ್ಯವಾಗಿ ಸಾರಿದ ಕೀರ್ತಿ ಶ್ರೀವಿಶ್ವೇಶ್ವರ ಶಿವಾಚಾರ್ಯರದು. ರುದ್ರಮ್ಮ ರಾಣಿಗೆ ರುದ್ರಬಲವನ್ನು ಕರುಣಿಸಿದಾತನು ವಿಶ್ವೇಶ್ವರ ಶಿವಾಚಾರ್ಯನು. ೧೧ನೆಯ ಶತಮಾನದ ಶಿವಾಚಾರ್ಯರ ಉತ್ಕ್ರಾಂತಿ ಯನ್ನು ೧೨-೧೩ ಶತಮಾನಗಳಲ್ಲಿ ಮುಂದುವರಿಸಿದ ಮಹಾಕೀರ್ತಿ ವಿಶ್ವೇಶ್ವರ ಶಿವಾಚಾರ್ಯರದು.

ಇವರ ಮುಖ್ಯಶಿಷ್ಯನಾದ ಕಾಕತೀಯ ಗಣಪತಿರಾಜನು ಕ್ರಿ. ಶ. ೧೦೭೦ರ ಸುಮಾರಿನಲ್ಲಿದ್ದನೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. (ಶ್ರೀ ಮರುಳಸಿದ್ಧಾಂತ ಪುಟ ೫೦). ಇದು ನಿಜವಾಗುವುದಾದರೆ ಓರಂಗಲ್ಲಿನ ಶಿವಾಚಾರ್ಯರ ಇತಿಹಾಸವೂ ೧೧ನೆಯ ಶತಕಕ್ಕೆ ಸೇರುವಂತಾಗುತ್ತದೆ. ಆದರೆ ಇದು ಇನ್ನೂ ಸಂಶೋಧನೀಯ ಸಂಗತಿಯಾಗಿದೆ.

ಓರಂಗಲ್ಲ ವಿಶ್ವೇಶ್ವರ ಶಿವಾಚಾರ್ಯರ ವ್ಯಕ್ತಿತ್ವ, ಆತನು ಸ್ಥಾಪಿಸಿದ ವಿದ್ಯಾ ಮಂಟಪ ಕಾರ್ಯವ್ಯಾಪ್ತಿ-ಕ್ರಾಂತಿ, ವೀರಶೈವಾಚಾರ್ಯಶತರ ತಿಂಥಿಣಿ, ಯಾವ ಭೇದ ಭಾವವಿಲ್ಲದೆ ಎಲ್ಲ ಮಾನವರಿಗೆ ಏರ್ಪಡಿಸಿದ ದಾಸೋಹ ಮಣಿಹ ಮರೆಯದಂತಹವು. ಎಲ್ಲಕ್ಕೂ ಮಿಗಿಲಾಗಿ ಕಾಕತೀಯ ಗಣಪತಿರಾಜನ ಮಗಳು ರುದ್ರಮ್ಮನನ್ನು 'ಪ್ರತಾಪರುದ್ರ'ನೆಂದು ಹೆಸರಿಸಿ ರೂಪಿಸಿ ಸಾಮಾಜಿಕ ಧಾರ್ಮಿಕ ಗಳಂತೆ ರಾಜಕಿಯ ತೇಜವನ್ನು ಬೆಳಸಿ ಬೆಳಸಿರುವಿಕೆ ಅತ್ಯದ್ಭುತವಾದುದು. ಐತಿಹಾಸಿಕ ಸಾಂಸ್ಕೃತಿಕ ಸತ್ಯವಾದುದು. ವಿಶ್ವೇಶ್ವರ ಶಿವಾಚಾರ್ಯರು ಅನ್ವರ್ಥಕ

ವಾಗಿಯೂ ವಿಶ್ವೇಶ್ವರರಾದರು. ಅವರ ಕಾರ್ಯವ್ಯಾಪ್ತಿಗಿಂತ ಅವರ ಉದಾರವೂ, ವಿಶಾಲವೂ ಆದ ಮನೋದೃಷ್ಟಿ ಭಾವಗಳು ವಿಶ್ವವಿಶಾಲವಾದವುಗಳು. ಅವರ ದಾಸೋಹದಲ್ಲಿ ಎಲ್ಲ ವರ್ಣದವರಿಗೂ ಅವಕಾಶ ! ಅವರ ವಿದ್ಯಾಮಂಟಪದಲ್ಲಿ ಎಲ್ಲರಿಗೂ ಅವಕಾಶ ಶತ ಸಂಖ್ಯೆಯ ಶಿವಾಚಾರ್ಯರ ಕ್ರಾಂತಿ ಚಟುವಟಿಕೆಯ ಕ್ಷೇತ್ರ ವಿದ್ಯಾಮಂಟಪ ! ಅದೊಂದು ವಿಶ್ವವಿದ್ಯಾನಿಲಯ ! ಅವರೊಬ್ಬ ದೇವಮಾನವಕುಲಪತಿ ! ಯಾವ ಪಕ್ಷಪಾತವಿಲ್ಲದ ಕ್ರಾಂತಿ !

## ಶಾಸನೋಕ್ತ ವಿಶ್ವೇಶ್ವರ ಶಿವಾಚಾರ್ಯರು ; ವಾರಂಗಲ್ಲು ಕಾಕತೀಯ ಅರಸರು.

ವೀರಶೈವ ಇತಿಹಾಸದಲ್ಲಿ ವಾರಂಗಲ್ಲು ಕಾಕತೀಯರ ಸಾಮಾಜಿಕ ಸಾಂಸ್ಕೃತಿಕ ಕ್ರಾಂತಿಯಿಂದ ಕೂಡಿದ ವೈಭವಕಾಲ. ಸುವರ್ಣಾಕ್ಷರಗಳಿಂದ ಬರೆಯಬೇಕಾದ ಪ್ರಭಾವಪೂರ್ಣ ಯುಗ ! ೧೨ನೆಯ ಶತಮಾನಕ್ಕಿಂತ ಪೂರ್ವ ದಿಂದ ನಡೆದು ಬಂದವರು ಕಾಕತೀಯ ಅರಸರು. ೧೨ನೆಯ ಶತಮಾನದಲ್ಲಿ ಕಾಕತೀಯ ವೀರಭದ್ರ ಮಹಾರಾಜರಿದ್ದರು. ಆತನ ರಾಜಧಾನಿ ಕಲ್ಲುಬರಗವು ಕರ್ನಾಟಕದ ರಾಜಧಾನಿಯೆಂದು ಹೆಸರಾಗಿದ್ದಿತೆಂದು ಶ್ರೀ ಮಾಧವನಾ ಮಹಿಷಿ ಎಂಬವರು ಸಂಯುಕ್ತ ಕರ್ನಾಟಕದ ದಿನಾಂಕ ೧-೧೧-೧೯೮೭ರ ಭಾನುವಾರ ಸಂಚಿಕೆಯಲ್ಲಿ "ಬದಲಾಗುತ್ತಲೇ ಬಂದ ಕರ್ನಾಟಕದ ಗಡಿ" ಎಂಬ ತಮ್ಮ ಲೇಖನದಲ್ಲಿ ಉಲ್ಲೇಖಿಸಿದ್ದಾರೆ. ೨ನೆ ಚೇತರಾಜನು ವೀರಮಾಹೇಶ್ವರ ದೀಕ್ಷೆ ಯನ್ನು ಪಡೆದಿದ್ದನು. ಈತನ ಕಾಲ ಹನ್ನೊಂದನೆಯ ಶತಮಾನ. ಈ ಸಂಪ್ರ ದಾಯವನ್ನು ಮುಂದೆ ಚಕ್ಕಿ ೨ನೆಯ ಪ್ರೋಲರಾಜನು, ಈತನ ಮಗ ರುದ್ರ ದೇವನು, (ಈತನದು ೧೨ನೆ ಶತಮಾನ) ಮಹಾದೇವರಾಜನು ಕೈ ಬಿಡದೆ ನಡಿಸಿಕೊಂಡು ಬರುವರು. ಬಳಿಕ ೧೩ನೆಯ ಶತಮಾನದ ಕಾಕತೀಯ ಗಣಪತಿ ಭೂಪತಿ ಮತ್ತು ಈತನ ಮಗಳು ಪ್ರತಾಪ ರುದ್ರನೆಂದು ಹೆಸರಾದ ರುದ್ರಾಂಬೆ ಯರು ಶ್ರೀ ವಿಶ್ವೇಶ್ವರ ಶಿವಾಚಾರ್ಯರ ಅಪಾರ ಪ್ರಭಾವಕ್ಕೆ ಒಳಗಾಗಿ ಅವ ರಿಂದ ಕಾರುಣ್ಯವನ್ನು ಪಡೆವರು. ವಿಶ್ವೇಶ್ವರ ಶಿವಾಚಾರ್ಯರು ಘನವಿದ್ವಾಂಸರು, ಕಳಾಮಯ ಕಾರಣಿಕರು, ಅವರ ಕಾಲದಲ್ಲಿ ಜೈನ ಬೌದ್ಧ ಮತದವರ ಹಾವಳಿ ಅತಿಯಾಗಿತ್ತು. ಅದನ್ನು ಪರಿಪೂರ್ಣವಾಗಿ ತಮ್ಮ ಶಕ್ತಿ ಸಾಮರ್ಥ್ಯದಿಂದ ಅಡಗಿ

ಸಿದರು. ಅವರ ಈ ಮಹಾ ಮಣಿಹದಿಂದ ಆಂಧ್ರದಲ್ಲಿ ಅಂದಿನಿಂದ ಅವರ ಬಲ ತಗ್ಗಿದೆ. ಅವರಲ್ಲಿ ಅನೇಕರು ವಿಶ್ವೇಶ್ವರ ಶಿವಾಚಾರ್ಯರ ಪ್ರಭಾವಕ್ಕೊಳಗಾಗಿ ವೀರಶೈವ ಧರ್ಮ ದೀಕ್ಷೆಯನ್ನು ಪಡೆದರು. ಜೈನರ ಬಸದಿಗಳು ವೀರಶೈವ ಶಿವಾಲಯಗಳಾಗಿ ಮಾರ್ಪುಗೊಂಡವು. ತೆಲಂಗಾಣದಲ್ಲಿರುವ ವೇಮುಲವಾಡ, ಜೋಗಿಪೇಟ, ಕೊಲನುಪಾಕ, ಮೊದಲಾದ ಪ್ರದೇಶಗಳಲ್ಲಿರುವ ಜೈನ ಮಂದಿರಗಳು ಶಿವಾಲಯಗಳಾಗಿರುವುದೇ ಸಾಕ್ಷಿಯಾಗಿದೆ. ವೀರಶೈವಧರ್ಮವು ಅಂದು ವಿಶ್ವೇಶ್ವರ ಶಿವಾಚಾರ್ಯರ ಮತ್ತು ಕಾಕತೀಯ ಪ್ರತಾಪರುದ್ರನ ಸಾಹಸದಿಂದ ವಿಶೇಷವಾಗಿ ವ್ಯಾಪಿಸುವಂತಾಯಿತು. ಮತ್ತು ಹಿಂದುಗಳಲ್ಲಿರುವ ವರ್ಣಭೇದವನ್ನು ಖಂಡಿಸಿ ಕಡಿಮೆ ಮಾಡಿದರು. ಜಾತಿ ಕುಲ ಪಂಥ ಭೇದಗಳನ್ನು ಹೋಗಲಾಡಿಸುವ ಕ್ರಾಂತಿಯೂ ಅಂದು ಜರಗಿತು. ಎಲ್ಲರೂ ಕೂಡಿ ಊಟ ಉಪಚಾರಗಳನ್ನು ಜರಗಿಸಿದರು. ವಿಶ್ವೇಶ್ವರ ಶಿವಾಚಾರ್ಯರು ರಾಜಾಶ್ರಯದಿಂದ ಸಂಸ್ಕೃತ ಆಂಧ್ರ ಕನ್ನಡ ಭಾಷಾಭಿವೃದ್ಧಿಯನ್ನು ಉತ್ತಮ ಗ್ರಂಥಗಳ ರಚನೆಯ ಮಾಧ್ಯಮದಲ್ಲಿ ಮುಂದುವರಿಸಿದರು. ಕಾಕತೀಯ ಅರಸರೇ ಸ್ವತಃ ವಿದ್ವಾಂಸರಾಗಿದ್ದರು. ವಿದ್ವಾಂಸರನ್ನು ಆದರಿಸುತ್ತಿದ್ದರು. ರಾಜರೂ ಗ್ರಂಥರಚನೆಗಳನ್ನು ಮಾಡಿರುವರೆಂದು ತಿಳಿದುಬರುತ್ತದೆ.

ಕಾಕತೀಯರ ಕಾಲದಲ್ಲಿ ವೀರಶೈವ ಕವಿಗಳು ದೇಶೀಯ ಭಾಷೆಯಲ್ಲಿ ಕೃತಿಗಳ ರಚಿಸಲು ಕಾಕತೀಯರ ಆ ಕಾಲದಲ್ಲಿ ಪ್ರೋತ್ಸಾಹಗೊಂಡಿದ್ದಾರೆ. ಸಾಮಾನ್ಯರಿಗೆ ಅರ್ಥವಾಗುವ ಜಾಣುದೆಲುಗು, ಅಚ್ಚ ಕನ್ನಡಗಳಲ್ಲಿಯೂ ಸಾಹಿತ್ಯ ನಿರ್ಮಾಣವಾಯಿತು. ೨ನೆಯ ಪ್ರೋಲರಾಜನ ಮತ್ತು ರುದ್ರದೇವನ (೧೧-೧೨ ಶತಮಾನ) ಕಾಲದಲ್ಲಿದ್ದ ಮಲ್ಲಿಕಾರ್ಜುನ ಪಂಡಿತನು ಶಿವಲೀಲೆಗಳನ್ನು, ಶಿವಭಕ್ತರ ಕಥೆಗಳನ್ನು ಒಳಗೊಂಡ ಶಿವತತ್ತ್ವಸಾರ ಗ್ರಂಥವನ್ನು ಕಾಕತೀಯ ಪ್ರೋಲರಾಜನ ಪ್ರೋತ್ಸಾಹದಿಂದ ರಚಿಸಿರುವನು. ಅಲ್ಲದೆ ಶತಕಾದಿ ಲಘು ಕೃತಿಗಳನ್ನೂ ರಚಿಸಿರುವನು. ತೆಲುಗಿನಲ್ಲಿ ಸರ್ವಜ್ಞನೆಂದು ಹೆಸರಾದ ಪಾಲ್ಕುರಿಕಿ ಸೋಮನಾಥ ಕವಿಯು ರುದ್ರಾಂಬೆಯ ಪ್ರೋತ್ಸಾಹದಿಂದ ಬಸವ ಪುರಾಣವನ್ನು ತೆಲುಗು ದ್ವಿಪದದಲ್ಲಿ ಬರೆದು ಪ್ರಖ್ಯಾತನಾಗಿದ್ದಾನೆ. ಆತನ ಆ ಪುರಾಣಕೃತಿ ಆಂಧ್ರಭಾಷೆಯಲ್ಲಿ ಕಮನೀಯ ಕಾವ್ಯವಾಗಿ ಕೀರ್ತಿ

ಗಳಿಸಿದೆ. ಕವಿಬ್ರಹ್ಮ ಎಂದು ಹೆಸರಾದ ತಿಕ್ಕನ ಸೋಮಯಾಜಿಯ ಶಿಷ್ಯನಾದ ಮಾರನ ಎಂಬುವವನು ಮಾರ್ಕಂಡೇಯ ಪುರಾಣವನ್ನು ತೆಲುಗಿನಲ್ಲಿ ಬರೆದಿದ್ದಾನೆ. ಕಾಕತೀಯ ಪ್ರತಾಪರುದ್ರನ ಮನ್ನಣೆಗೆ ಪಾತ್ರನಾಗಿದ್ದಾನೆ. ಇವರಿಗೆಲ್ಲ ರಾಜಗುರು ಶ್ರೀ ವಿಶ್ವೇಶ್ವರ ಶಿವಾಚಾರ್ಯರ ಬಲವಾದ ಬೆಂಬಲವಿದ್ದಿತು. ಹೀಗೆ ಸಾಹಿತ್ಯ ಸಂಸ್ಕೃತಿಗಳ ಪ್ರಚಾರಕ್ಕೆ ವಿಶ್ವೇಶ್ವರ ಶಿವಾಚಾರ್ಯರು ಹಿರಿಯ ಚೇತನರಾಗಿದ್ದರು. ಸಾಹಿತ್ಯ ಸಂಸ್ಕೃತಿಗಳ ಕೇತನರಾಗಿದ್ದರು. ಕರ್ನಾಟಕದಲ್ಲಿ ಶ್ರೀಶೈಲಚಂದ್ರಗುಂಡ ಶಿವಾಚಾರ್ಯರು, ರೇವಣಸಿದ್ಧ ಶಿವಾಚಾರ್ಯರು ಸೂಳ್ನುಡಿಕಾರರಿಗೆ ಆಶ್ರಯವಾಗಿರುವಂತೆ, ತೆಲುಗಿನಲ್ಲಿ ಶ್ರೀ ವಿಶ್ವೇಶ್ವರ ಶಿವಾಚಾರ್ಯರು ತೆಲುಗು ಭಾಷಾಕವಿಗಳಿಗೆ ಕೃತಿಗಳಿಗೆ ಆಶ್ರಯದಾತರಾಗಿರುವರು. ವಿಶ್ವೇಶ್ವರ ಶಿವಾಚಾರ್ಯರು ಕಾಕತೀಯರ ನೆರವಿನಿಂದ ಶಿವಾಲಯಗಳ ನಿರ್ಮಾಣ ನೈಜ ಧ್ಯೇಯವಾದ ಶಿಲ್ಪಕಲೆಗೆ ಪ್ರೋತ್ಸಾಹವನ್ನುಂಟು ಮಾಡುವುದನ್ನಿಟ್ಟುಕೊಂಡಿದ್ದರು.ಇದರಿಂದ ಕಾಕತೀಯರ ಶಿಲ್ಪಕಲೆಯೇ ಕಲೆ ಎಂದು ಕೀರ್ತಿ ತಳೆದಿದೆ.ಆ ಕಲೆಯಲ್ಲಿ ಅಂತಹ ಜೀವಕಳೆಯಿದೆ ; ದಿವ್ಯಕಲೆಯಿದೆ. ಓರಂಗಲ್ಲು ರಾಜಧಾನಿಯ ಕೋಟೆಯಲ್ಲಿನ ಸ್ವಯಂಭು ಶಿವಾಲಯ ದ್ವಾರಗಳಲ್ಲಿ ಕಾಕತೀಯ ಶಿಲ್ಪ ಪ್ರಾಶಸ್ತ್ಯವನ್ನು ಪರಿಶೀಲಿಸಬಹುದು. ನೃತ್ಯ ಸಂಗೀತಾದಿ ಕಲೆಗಳಿಗೂ ಕಾಕತೀಯರಾಯರ ಪ್ರೋತ್ಸಾಹವಿದ್ದಿತು. ಅಲ್ಲಲ್ಲಿ ಕಲಾಶಾಲೆಗಳನ್ನು ಸ್ಥಾಪಿಸಿದ್ದರು. ಅವು ಚ್ಯುತಿಯಿಲ್ಲದೆ ನಡೆವಂತೆ ಅವುಗಳಿಗೂ ಕಾಕತೀಯರು ಭೂದಾನಗಳನ್ನಿತ್ತಿದ್ದಾರೆ ; ಶಾಸನಗಳನ್ನು ಬರೆದಿದ್ದಾರೆ. ಜನರಿಗಾಗಿ ಅಲ್ಲಲ್ಲಿ ಆರೋಗ್ಯ ಧಾಮುಗಳನ್ನು ನಿರ್ಮಿಸಿದ್ದರು. ಗ್ರಾಮ ರಕ್ಷಣೆಗಾಗಿ ದೈವೀಭಾವೋದ್ದೀಪನಕ್ಕಾಗಿ ವೀರಭದ್ರ ಮೂರ್ತಿಗಳನ್ನು ಪ್ರತಿಷ್ಠಾಪಿಸುತ್ತಿದ್ದರು. ಇದರಿಂದ ವೀರೇಶನ ಮೇಲಿರುವ ಅವರ ಆದರ ಭಾವಾಭಿವ್ಯಕ್ತಿಗೊಳ್ಳುತ್ತದೆ. ಅಲ್ಲದೆ ಅಲ್ಲಲ್ಲಿ ಭದ್ರಕಾಳೀ ಭವಾನಿ ಜಲಾಶಯಗಳನ್ನು ನಿರ್ಮಿಸುತ್ತಿದ್ದರು, ಆ ಜಲಾಶಯದ ಕೆಳಗೆ ಹೂವು ಹಣ್ಣುಗಳ ಸಸಿಗಳನ್ನು ನಾಟಿ ಬೆಳಸುತ್ತಿದ್ದರು. ನೆಯ್ಗೆ ಮೊದಲಾದ ಕರಕುಶಲ ಕಾರ್ಯಗಳಿಗೆ ನೆರವಿದ್ದಿತು. ವಾಣಿಜ್ಯಾದಿ ಎಲ್ಲ ಉದ್ಯಮಗಳಿಗೆ ಹೆಚ್ಚಿನ ಸೌಲಭ್ಯಗಳಿದ್ದವು.

## ಓರುಗಲ್ಲು ಕಾಕತೀಯ ಸಾಮ್ರಾಜ್ಯ

"ಮುನ್ನೂರು ವರುಷಗಳಿಗಿಂತ ಮಿಗಿಲಾಗಿ ಆಂಧ್ರದೇಶದಲ್ಲಿ ಪ್ರಭುತ್ವವನ್ನು ನೆರವೇರಿಸಿ ಅಂದರೆ ಆಡಳತೆಯನ್ನು ನಡಿಸಿ, ಪ್ರಜರಿಗೆ ಉಪಯೋಗವಾಗುವ ಅನೇಕ ಕಾರ್ಯಗಳನ್ನು ಕೈಕೊಂಡು, ಕವಿ, ಪಂಡಿತರನ್ನು ಪೋಷಿಸಿ, ಲಲಿತಕಲೆಗಳನ್ನು ಪ್ರೋತ್ಸಾಹಿಸಿ ಆಂಧ್ರದೇಶಕ್ಕೆ ಆಂಧ್ರಸಂಸ್ಕೃತಿಗೆ ಮಹೋಪಕಾರವ ಮಾಡಿದ ಕಾಕತೀಯ ರಾಜರ ಚರಿತ್ರೆಯು, ಆಂಧ್ರರ ಇತಿಹಾಸದಲ್ಲಿ ಒಂದು ಮಹೋಜ್ವಲ ಘಟ್ಟ. ಆದರೆ ದುರದೃಷ್ಟವಶದಿಂದ ಈ ವಂಶದವರಿಗೆ, ಅವರು ಮಾಡಿದ ಮಹತ್ತರ ಸೇವೆಗೆ ತಕ್ಕ ಗೌರವ-ಪ್ರಖ್ಯಾತಿಗಳು ಭಾರತೀಯ ಪ್ರಪಂಚದಲ್ಲಿ ಲಭಿಸಲಿಲ್ಲ. ಕಾಕತೀಯರ ಪ್ರಾಶಸ್ತ್ಯವು ಆಂಧ್ರ ಪ್ರಜರಿಗೆ ಚಾರಿತ್ರಕ ಪರಿಶೋಧಕರಿಗೆ ವಿದ್ವಾಂಸರಿಗೆ ಹಾಗು ಉಳಿದ ಪ್ರಾಂತೀಯರಿಗೆ ಮಾತ್ರ ತಿಳಿದಿದೆ. ಭಾರತೀಯ ಇತಿಹಾಸ ರಚನಗಳಲ್ಲಿ ಕೆಲವು ಸಂದರ್ಭಗಳಲ್ಲಿ ಕಾಕತೀಯರ ಹೆಸರು ಸಹ ಸ್ಮರಿಸುವಂತಿಲ್ಲವಾಗಿದೆ. ಇದು ಹೆಚ್ಚು ಶೋಚನೀಯ. ಇದಕ್ಕೆ ಕಾರಣ ಚರಿತ್ರ ರಚನಾಕಾರರಲ್ಲಿರುವ ಲೋಪವೇ ಹೊರತು ಬೇರೊಂದಿಲ್ಲ" ಎಂದು 'ಆಂಧ್ರುಲ ಚರಿತ್ರ-ಸಂಸ್ಕೃತಿ' ಎಂಬ ಗ್ರಂಥದಲ್ಲಿ ಉಲ್ಲಿಖಿತವಾಗಿದೆ.

ಕಾಕತೀಯರು ವೀರಶೈವರು. ಅವರು ಯುಗ ಪುರುಷರೆಂದು ಹೇಳಿಕೊಳ್ಳುವಷ್ಟು ಸಾಹಿತ್ಯ ಸಂಪತ್ತಿ, ಸಾಧನ ಸಾಮಗ್ರಿ ಸಿಕ್ಕುತ್ತಿದೆ. ಆಂಧ್ರದ ತೆಲುಂಗಾಣ ಪ್ರದೇಶಕ್ಕೆ ವೀರಶೈವ ಸಂಸ್ಕೃತಿಗೆ ಕಾಕತೀಯರಿಂದ ಸಾಕಷ್ಟು ಸೇವೆ ಸಂದಿದೆ. ಅವರು ಆ ಪ್ರದೇಶದಲ್ಲಿ ಬೇಕಾದಷ್ಟು ಕೆರೆ ಬಾವಿಗಳನ್ನು ನಿರ್ಮಿಸಿ ಅಲ್ಲಿನ ಜನರು ಸಮೃದ್ಧಿಯಾದ ಬೆಳೆಗಳನ್ನು ಬೆಳೆದು ಸುಖ ಜೀವಿಗಳಾಗುವಂತೆ ಮಾಡಿದರು. ಜಲಾಶಯಗಳನ್ನು ನಿರ್ಮಿಸುವಂತೆ ತಮ್ಮ ಸಾಮ್ರಾಜ್ಯದ ಶ್ರೀಮಂತರನ್ನು ಪ್ರೋತ್ಸಾಹಿಸುತ್ತಿದ್ದರು. ಶಿಕ್ಷಣಾಲಯ ನಿರ್ಮಾಣದಿಂದ ಪ್ರಜರನ್ನು ಸುಶಿಕ್ಷಿತರನ್ನಾಗಿಸುತ್ತಿದ್ದರು. ಕೃಷಿಕರಿಗೆ ಸಹಾಯ ಸೌಕರ್ಯಗಳನ್ನೊದಗಿಸುತ್ತಿದ್ದಂತೆ ಕಲಾವಿದರಿಗೆ ಕವಿಗಳಿಗೆ ಸಾಹಿತ್ಯೋಪಾಸಕರಿಗೆ ಚರಿತ್ರ ನಿರ್ಮಾಪಕರಿಗೆ ವಿಜ್ಞಾನಿಗಳಿಗೆ ಸಹಾಯ ಸೌಕರ್ಯಗಳನ್ನೊದಗಿಸುತ್ತಿದ್ದರು. ತಮ್ಮ ಸಾಮಂತ

ರಾಜರನ್ನು ಪ್ರೋತ್ಸಾಹಿಸುತ್ತಿದ್ದರು. ಧರ್ಮ, ದಾನ, ದರ್ಶನಾದಿ ಸತ್ಕಾರ್ಯಗಳನ್ನು ತಾವು ಮಾಡುತ್ತಿದ್ದರಲ್ಲದೆ ಮಾಡುವವರಿಗೂ ನೆರವನ್ನೀಯುತ್ತಿದ್ದರು. ಶಿವಾಚಾರ ಶಿವವಿಚಾರ ನಿರತರಾಗಿದ್ದರು. ಕಾಕತೀಯ ರಾಜಗುರು ವಿಶ್ವೇಶ್ವರ ಶಿವಾಚಾರ್ಯರು. ಇವರ ಪ್ರತಿಭಾನ್ವಿತ ಪ್ರಭಾವ ಅವರ ಮೇಲೆ ಅಪಾರವಾಗಿತ್ತು. ಶ್ರೀ ವಿಶ್ವೇಶ್ವರ ಶಿವಾಚಾರ್ಯರ ಮಹಾ ಮಣಿಹಗಳ ಮಹಾಕ್ರಾಂತಿಗಳ ಮಹಾಕಾಂತಿ ಮಹಾಕೀರ್ತಿ ಕಾಕತೀಯ ಸಾಮ್ರಾಜ್ಯದಲ್ಲೆಲ್ಲ ಹರಡಿ ಹಚ್ಚಹಸುರಾಗಿತ್ತು. ಇದರಿಂದಾಗಿ ಅನೇಕ ಶಾಸನಗಳು ಗ್ರಂಥಗಳು ರೂಪುಗೊಂಡವು. ಇವುಗಳಿಂದ ಅಂದಿನ ಅವರ ಚಾರಿತ್ರೇತಿಹಾಸಗಳನ್ನು ತಿಳಿಯಲು ತುಂಬಾ ಅನುವಾಗಿದೆ. ಕಾಕತೀಯರದು ವಿಧಾಯಕ ಕ್ರಾಂತಿ ! ಸಾಮಾಜಿಕ, ಆರ್ಥಿಕ, ಧಾರ್ಮಿಕ, ವೈಚಾರಿಕ, ಸ್ತ್ರೀಸ್ವಾತಂತ್ರ್ಯಾದಿ ಮಹಾಕಾರ್ಯಗಳು ಆದರ್ಶವಾಗಿ ನಡೆದಿರುತ್ತವೆ. ಶ್ರೀ ವಿಶ್ವೇಶ್ವರ ಶಿವಾಚಾರ್ಯರು ವೀರಶೈವ ಶಿವಾಚಾರ್ಯ ಸಂಸ್ಕೃತಿಯನ್ನು ಸಂವೃದ್ಧಿಸಿ ಸರ್ವಾದರ್ಶರಾಗಿದ್ದಾರೆ. ಸಂಸ್ಕೃತ, ಆಂಧ್ರ, ಕರ್ನಾಟಕ ಭಾಷೆಗಳಲ್ಲಿ ಸಾಕಷ್ಟು ಗ್ರಂಥ ರಚನೆಗಳಾಗಿವೆ. ಅವರ ಅನಂತರವೂ ಅನೇಕ ಕೃತಿಗಳ ರಚನೆಯಾಗಿದೆ. ಆ ಕೃತಿಗಳಿಂದ ಕಾಕತೀಯರ ಸ್ಥಿತಿ,ಗತಿ, ರೀತಿ ನೀತಿ, ರಾಜಕೀಯ, ಧಾರ್ಮಿಕಾಚಾರ ವಿಚಾರ, ಪರಂಪರೆ, ವ್ಯವಹಾರ ಮೊದಲಾದವುಗಳನ್ನು ಅರಿತುಕೊಳ್ಳಲು ಅಮೂಲ್ಯ ಸಾಧನಗಳಾಗಿವೆ. ಕಾಕತೀಯರಲ್ಲಿ ಪ್ರತಾಪರುದ್ರನ ಚಾರಿತ್ರ ರೋಮಾಂಚನಕಾರಿಯಾದುದು. ಓರಂಗಲ್ಲು ಅವರ ರಾಜಧಾನಿ. ಕಾಕತೀಯ ರಾಜರ ಕಾಲದಲ್ಲಿ ಅನೇಕ ಉತ್ತಮ ದೇವಾಲಯಗಳು ನಿರ್ಮಾಣಗೊಂಡವು. ಶಿಲ್ಪಕಲೆಗೆ ಪ್ರೋತ್ಸಾಹವಿದ್ದಿತು, ಪ್ರಾಶಸ್ತ್ಯವಿದ್ದಿತು, ಅವರು ಮಾಡಿದ ಪ್ರಜೋಪಕಾರಕ ಕಾರ್ಯಗಳು ಒಂದಲ್ಲ ಎರಡಲ್ಲ ಹಲವಾರು. ಕಾಕತೀಯ ಅರಸರಲ್ಲಿ ಹಿಂದು ಮುಸ್ಲಿಂ ಎಂಬ ಜಾತಿ ಭೇದವಿರಲಿಲ್ಲ.ವಿಂಗಡಿಸಿ ನೋಡುತ್ತಿರಲಿಲ್ಲ. ಹಿಂದುಗಳಲ್ಲಿರುವ ಒಳಕುಲ ಪಂಥಗಳ ಭೇದವನ್ನು ಅವರು ಮಾಡುತ್ತಿರಲಿಲ್ಲ.

ಆಂಧ್ರಪ್ರದೇಶದ ಚರಿತ್ರೆಯಲ್ಲಿ ಓರಂಗಲ್ಲು ಕಾಕತೀಯ ರಾಜವಂಶ ಚಾರಿತ್ರ ಪ್ರಶಸ್ತವಾಗಿದೆ. ತೆಲುಗು ಪಂಡಿತರು ಬಗೆಬಗೆಯಲ್ಲಿ ಅವರನ್ನು ಬಣ್ಣಿಸಿದ್ದಾರೆ. ಹಾಡು ಕಟ್ಟಿ ಹಾಡಿದ್ದಾರೆ. ಕಥೆ ಕಟ್ಟಿ ಹೇಳಿದ್ದಾರೆ. ಕಾವ್ಯ

ಕಟ್ಟಿ ಪಠಿಸಿದ್ದಾರೆ. ಪ್ರಬಂಧ ರೂಪಿಸಿ ವಚಿಸಿದ್ದಾರೆ. ಮನಸಾರೆ ಮನ್ನಿಸಿದ್ದಾರೆ. ಕಾಕತಿ ಎಂಬ ಹೆಸರಿನ ದೇವತೋಪಾಸಕರಾಗಿದ್ದುದರಿಂದ ಅವರ ಮನೆತನಕ್ಕೆ ಆ ಹೆಸರು ಬಂದಂತೆ ತಿಳಿಯುತ್ತದೆ. ಕಾಕತೀಯರು ಸ್ವಯಂಭುದೇವೋಪಾಸಕರೂ ಆಗಿದ್ದರು. ಕಾಕತೀಯರು ಕಲಿಗಳಾಗಿದ್ದರು. ವಿಜಯಶಾಲಿಗಳಾಗಿದ್ದರು. ಕರಿಕಾಲ ಚೋಳನ ವಂಶೀಯರೆಂದು ಹೇಳುವ ವಾಡಿಕೆಯಿದೆ. ಕಾಕತಿಯೆಂಬುದು ಒಂದು ಸ್ಥಲ, ಒಂದು ಊರು ಎಂದೂ ಹೇಳಲಾಗುತ್ತದ. ಕಾಕತಿ ಪ್ರದೇಶ ಸಾಕಷ್ಟು ವಿಸ್ತಾರವಾಗಿದ್ದಿತಂತೆ ! ವಿಶೇಷ ಪ್ರಸಿದ್ಧವೂ ಆಗಿದ್ದಿತಂತೆ ! ಬೆಳಗಾವಿ ಜಿಲ್ಲೆಯ ಒಂದು ಊರ ಹೆಸರು 'ಕಾಕತಿ' ಎಂದಿದೆ. ವಂಶನಾಮ, ಪ್ರದೇಶನಾಮ, ದೇವತಾ ನಾಮಗಳಾಗಿ ಕಾಕತಿ ಪದ ಪ್ರಯೋಗಾರ್ಹವಾಗಿದೆ.

ಕಾಕತೀಯರ ರಾಜವಂಶದ ಪ್ರಥಮರಾಜನ ಹೆಸರು ಬೇತರಾಜ ! ಈತನು ಕ್ರಿ.ಶ. ೧೦೦೦ ಹತ್ತನೆಯ ಶತಮಾನದಲ್ಲಿದ್ದು ರಾಜ್ಯಪರಿಪಾಲನವನ್ನು ಮಾಡಿದನೆಂದು ಹೇಳಲಾಗುತ್ತದೆ. ಈತನು ಕಾಕರ್ತ್ಯಗುಂಡ್ಯನ ವಂಶಸ್ಥನು. ಈ ಕಾಕರ್ತ್ಯ ಪದದಿಂದ ಕಾಕತಿಯಾಗಿ ಪರಿವರ್ತಿಸಿದೆಯೆಂದು ಚಾರಿತ್ರಕರು ಊಹಿಸುತ್ತಾರೆ. ಬೇತರಾಜನ ಬಳಿಕಬಂದ ಪ್ರೋಲರಾಜನು ಕ್ರಿ.ಶ. ೧೦೩೦ ರಿಂದ ೧೦೭೫ರವರೆಗೆ ಆಳಿದನು. ಈತನೇ ಮೊತ್ತಮೊದಲು ಕಾಕತೀಯ ರಾಜಸಿಂಹಾಸನವನ್ನು ಅಧಿಷ್ಠಿಸಿದನು. ಆರೋಹಿಸಿದನು. ರಾಜ್ಯವನ್ನು ವಿಸ್ತರಿಸಿದನು.

ಕಾಕತೀಯರು ಮುಮ್ಮೊದಲು ಕ್ಷತ್ರಿಯರಾಗಿದ್ದರೆಂದು ಸೂರ್ಯೇಂದು ವಂಶೀಯರೆಂದು ಪ್ರತಾಪಶಾಲಿಗಳೆಂದು ಹೇಳಲಾಗುತ್ತದೆ. ಹನ್ನೆರಡನೆಯ ಶತಮಾನದಲ್ಲಿದ್ದು ಹೆಚ್ಚು ಪ್ರಸಿದ್ಧನಾದವನು ಗಣಪತಿದೇವ ಚಕ್ರವರ್ತಿ ! ಈತನಿಗೆ ಮೇಲಾಂಚಿಕೆಯೆಂಬ ಒಬ್ಬ ತಂಗಿ (ಸೋದರಿ)ಯಿದ್ದಳು ಇವಳನ್ನು ದುರ್ಜಯ ವಂಶದ ನತವಾಟಿ ಬದ್ಧರಾಜಕುಮಾರನಾದ ರುದ್ರನೆಂಬವನಿಗೆ ಕೊಟ್ಟು ಮದುವೆ ಮಾಡಲಾಗಿತ್ತು. ಅದೇ ಗಣಪತಿ ರಾಜನ ಮಗಳಾದ ಗಣಪಾಂಬೆಯನ್ನು ಅದೇ ದುರ್ಜಯ ವಂಶದ ಕೋಟಿ ಬೇತರಾಜನಿಗಿತ್ತು ಮದುವೆ ಮಾಡಲಾಗಿತ್ತು. ಬೇತರಾಜನೇ ಕ್ರಿ.ಶ. ಹತ್ತನೆಯ ಶತಮಾನದಲ್ಲಿ ಕಾಕತೀಯ ರಾಜ್ಯಸ್ಥಾಪನ ಮಾಡಿದನೆಂದು ಚರಿತ್ರಕಾರರು ಒಪ್ಪಿಕೊಂಡಿರುವರು

ಕ್ರಿ.ಶ. ೧೧೨೦-೧೧೨೫ರಲ್ಲಿ ವೇಂಗೀ ರಾಜ್ಯವನ್ನು ಕಾಕತೀಯರು ಆಕ್ರಮಿಸಿ ಕೊಂಡರು ; ಬಲವಂತರಾದರು. ಮೊದಲು ಸಾಮಂತರಾಗಿದ್ದವರು ಆಮೇಲೆ ಚಕ್ರವರ್ತಿಗಳಾಗುವರು. ಶಾಂತಿ ನೆಲಸುವಂತೆಸಗುವರು. ಅಂದಿನಿಂದ ಕಾಕತೀಯ ಸಾಮ್ರಾಜ್ಯವೆಂದು ಹೆಸರಾಗುವುದು.

ಚಾಳುಕ್ಯರು ಪೂರ್ವಚಾಳುಕ್ಯರು, ಪಶ್ಚಿಮ ಚಾಳುಕ್ಯರು ಎಂದು ಇಬ್ಬಗೆ! ಕಾಕತೀಯರು ಪೂರ್ವಚಾಳುಕ್ಯರನ್ನು ಪ್ರಮುಖವಾಗಿ ಅನುಸರಿಸುತ್ತಿದ್ದರು. ಪೂರ್ವಚಾಳುಕ್ಯಲಾಂಛನ, ಶಿಲ್ಪಗಳನ್ನು ಮೆಚ್ಚಿ ಅಂಗೀಕರಿಸಿದ್ದರು. ಚಾಳುಕ್ಯ ವಿಕ್ರಮ ಶಕವನ್ನು ತಮ್ಮ ಕಾಲ ನಿರ್ಣಯಕ್ಕೆ ಒಪ್ಪಿ ಬಳಕೆಯಲ್ಲಿ ತಂದಿದ್ದರು. ಚಾಳುಕ್ಯರ ಆಧಿಕ್ಯವನ್ನು ಅಂಗೀಕರಿಸಿದ್ದರು.

ಕಾಕತೀಯರಲ್ಲಿ ಎರಡನೆಯ ಬೇತರಾಜನ ಕಾಲ ಕ್ರಿ.ಶ. ೧೦೭೫ ರಿಂದ ೧೧೧೦ರವರೆಗಿದ್ದಿತು. ಈತನಿಗೆ ತ್ರಿಭುವನಮಲ್ಲ ಎಂಬ ಬಿರುದಿದ್ದಿತು. ಈತನು ಪಶ್ಚಿಮ ಚಾಳುಕ್ಯ ಚಕ್ರವರ್ತಿಯಾದ ಆರನೆ ವಿಕ್ರಮಾದಿತ್ಯನಿಗೆ ಸಾಮಂತನಾಗಿದ್ದನು ಆದರೂ ಮಹಾವೀರನಾಗಿದ್ದನು. ಚೋಳಮಾಳವ ರಾಜನಿಗೆ ಸಿಂಹಸ್ವಪ್ನದಂತಿದ್ದನು. ಅದರಿಂದ 'ವಿಕ್ರಮಚಕ್ರಿ,' ತ್ರಿಭುವನ ಮಲ್ಲ ಎಂದು ಬಿರುದು ಹೊತ್ತಿದ್ದನು. ಈತನಿಗೆ ತಕ್ಕ ವೈಜನ ಎಂಬ ದಂಡನಾಥನಿದ್ದನು. ಈತನು ಪಶ್ಚಿಮ ಚಾಳುಕ್ಯ ವಿಕ್ರಮಾದಿತ್ಯನಿಂದ ಸಾವಿರ ಊರುಗಳ ಹರವುಳ್ಳ ಸಬ್ಬಿಮಂಡಲವನ್ನು ತನ್ನ ಪ್ರಭು ೨ನೆ ಬೇತರಾಜನಿಗೆ ಬರುವಂತೆ ಮಾಡಿದ್ದನು. ಇದನ್ನು ಅನುಮಕೊಂಡ ಶಾಸನ ಹೇಳುತ್ತಿದೆ. ಇದರಿಂದ ವೈಜನ ದಂಡನಾಥನು ಕೀರ್ತಿಗಳಿಸಿದ್ದನು. ಅದೇ ಅನುಮಕೊಂಡ ಕನ್ನಡ ಶಾಸನದಿಂದ ೨ನೇ ಬೋತರಾಜನು ಪರಮಮಾಹೇಶ್ವರನೆಂಬುದಾಗಿ ತಿಳಿದು ಬರುತ್ತದೆ. ಶ್ರೀರೇವಣಸಿದ್ಧ ಜಗದ್ಗುರುವಿನ ಪ್ರಭಾವದಿಂದ ಆಕರ್ಷಿತನಾಗಿ ದೀಕ್ಷಾಸಂಸ್ಕಾರವನ್ನು ಪಡೆದಿರಬೇಕೆಂದು ತಿಳಿದು ಬರುತ್ತದೆ.

೨ನೇ ಬೋತರಾಜ ಮಾಹೇಶ್ವರನ ಮಗನು ೨ನೆ ಪ್ರೋಲರಾಜನು. ಕೂತಿನ ಕಾಲ ಕ್ರಿ.ಶ. ೧೧೧೦-೧೧೫೮ ಎಂದು ತಿಳಿಯುತ್ತದೆ. ಈತನು ಕಾಕತೀಯ ರಾಜ್ಯವನ್ನು ಸಂಪೂರ್ಣ ಬಲಪಡಿಸಿ ಸ್ವತಂತ್ರನಾಗುವನು ; ಶೂರನು ಪಶ್ಚಿಮ ಚಾಳುಕ್ಯರಿಗೆ ಸಾಮಂತನಾಗಿರುವಿಕೆಯನ್ನು ತೆಗೆದು ಹಾಕುವನು. ಮಹಾಮಂಡಲೇಶ್ವರನೆಂಬ ಬಿರುದಾಂಕಿತನಾಗುವನು.

೨ನೇ ಪ್ರೋಲರಾಜ ಮಾಹೇಶ್ವರನ ಮಗ ರುದ್ರದೇವನು. ಈತನ ಕಾಲ ಕ್ರಿ.ಶ. ೧೧೫೮ ರಿಂದ ೧೧೯೫ ಈತನು ತನ್ನ ತಂದೆಗೆ ಮೀರಿದ ವೀರನು ಅನೇಕ ಕಾಳಗಗಳನ್ನೆಸಗಿ ವಿಜಯಶಾಲಿಯಾಗಿ ತನ್ನ ರಾಜ್ಯವನ್ನು ಇನ್ನೂ ವಿಸ್ತರಿಸುವನು. ಶ್ರೀ ಶೈಲ, ತ್ರಿಪುರಾಂತಕ ಮೊದಲಾದ ಪ್ರಾಂತಗಳು ಈತನ ಅಧೀನದಲ್ಲಿದ್ದವು. ಕಾಕತೀಯ ರುದ್ರದೇವನನ್ನು ಕುರಿತು ದ್ರಾಕ್ಷಾರಾಮದಲ್ಲಿ ಒಂದು ಶಾಸನವಿದೆಯೆಂದು ತಿಳಿದುಬರುತ್ತದೆ. ಈತನು ಗೋದಾವರೀ, ಕೃಷ್ಣಾಮಂಡಲಗಳನ್ನು ಆಕ್ರಮಿಸಿಕೊಂಡಿದ್ದನು. ಈತನ ರಾಜ್ಯ ಉತ್ತರಕ್ಕೆ ಗೋದಾವರೀ, ದಕ್ಷಿಣಕ್ಕೆ ಶ್ರೀಶೈಲ, ಪಶ್ಚಿಮಕ್ಕೆ ಕಲ್ಯಾಣ, ಪೂರ್ವಕ್ಕೆ ಪೂರ್ವ ಕನೂಮಲಗಳವರೆಗೆ ಹಬ್ಬಿದ್ದಿತು. ಈತನು ಕೊನೆಯಲ್ಲಿ ದೇವಗಿರಿ ಯಾದವ ರಾಜನಾದ ಜೈತುಗಿ ಎಂಬವನ ಕಾಳಗದಲ್ಲಿ ವೀರಸ್ವರ್ಗವನ್ನು ಹೊಂದುವನು. ಈತನ ಸೋದರನಾದ ಮಹಾದೇವನು ರಾಜ ಪಟ್ಟಕ್ಕೆ ಬರುವನು. ಬಂದು ತನ್ನ ಅಣ್ಣನನ್ನು ಸೋಲಿಸಿದ ಯಾದವರಾಜನ ಮೇಲೆ ಏರಿ ಹೋಗಿ ಸೋಲುವನು, ಕೊನೆಯುಸಿರಳಿಯುವನು. ಈತನ ಮಗನೇ ಗಣಪತಿ ದೇವನು. ಚಿಕ್ಕವಯಸ್ಸು ಆದರೂ ಅನಿವಾರ್ಯವಾಗಿ ಹಿರಿಯರಾಜ್ಯ ಭಾರವನ್ನು ಹೊರುವನು. ಈತನ ಕಾಲ ಕ್ರಿ.ಶ. ೧೧೯೮ ರಿಂದ ೧೨೬೨. ಕಾಕತೀಯ ಅರಸರಲ್ಲಿ ಈತನು ಅತ್ಯಂತ ಅಗ್ರಗಣ್ಯನು. ಈತನ ತಂದೆ ಮಹಾ ದೇವ ರಾಜನ ಕಾಲದಲ್ಲಿ ಕ್ಷೀಣದಶೆಗೆ ಬಂದಿದ್ದ ಕಾಕತೀಯ ರಾಜ್ಯವನ್ನು ಮತ್ತೆ ಎತ್ತಿ ಉದ್ಧರಿಸುವನು ; ಉತ್ತಮಸ್ಥಿತಿಗೆ ತರುವನು. ಮತ್ತಿಷ್ಟು ವಿಸ್ತರಿಸಿ ಶ್ರೇಷ್ಠ ಸಾಮ್ರಾಜ್ಯವನ್ನಾಗಿ ರೂಪಿಸುವನು ಗಣಪತಿ ಭೂಪತಿಯ ನೀತಿವಂತನು· ಜನಪ್ರಿಯನು.

ಕೊಯ್ಯೂರು ಪಾಲಕನಾದ ಜಾಯಪಭೂಪನು ಮಹಾವೀರನು, ಅಯ್ಯವಂಶೀಯನು ಆತನನ್ನು ಯುದ್ಧದಲ್ಲಿ ಓಡಿಸಿ ಕೊಯ್ಯೂರನ್ನು ಕೈವಶಕ್ಕೆ ತಕ್ಕೊಳ್ಳುವನು. ಮತ್ತು ಜಾಯಪಭೂಪನ ಸೋದರಿಯರಾದ ನಾರಮ್ಮ ವೀರಮ್ಮ ಎಂಬವರನ್ನು ಗಣಪತಿ ಭೂಪತಿಯು ಮದುವೆಯಾಗುವನು ಜಾಯ ಪಭೂತನನ್ನು ತನ್ನ ಬಂಧುವನ್ನಾಗಿಸಿಕೊಂಡು ಬಳಿಯಲ್ಲಿರಿಸಿಕೊಳ್ಳುವನು ಮತ್ತು ತನಗಿದ್ದ ಗಜ ಸೈನ್ಯಕ್ಕೆ ಅಧಿಪತಿಯನ್ನಾಗಿಸುವನು. ಅಂದಿನಿಂದ ಜಾಯಪನು ಗಜಸಾಹಿಣಿ ಜಾಯಪನಾಯಕನೆಂದು ಹೆಸರಾಗುವನು. ಗಣಪತಿ

ಭೂಪತಿಗೆ ಸೇನಾನಿಯಾಗಿ ಇಂದಲೂರ ಸೋಮಯ್ಯನಿರುವನು. ಈತನು ಕೊಲನಿರಾಜ್ಯಾಧಿಪತಿಯಾದ ಕೇಶವನಾಯಕನನ್ನು ಸೋಲಿಸಿ, ಆತನ ಆ ರಾಜ್ಯಭಾಗವನ್ನು ಅಂದರೆ ಕೊಲ್ಲೇರು ಪ್ರಾಂತವನ್ನು ಕಾಕತೀಯ ರಾಜ್ಯಕ್ಕೆ ಸೇರಿಸುವನು. ಬಳಿಕ ಗಣಪತಿ ಭೂಪತಿಯು ಕಳಿಂಗ ದೇಶದ ಮೇಲೆ ದಾಳಿ ಮಾಡಿ, ಇಂದಿನ ಗಂಜಾಂಮಂಡಲದಲ್ಲಿರುವ ಆಸ್ಕಾವರೆಗಿನ ಪ್ರಾಂತವನ್ನು ಜಯಿಸಿ ಸ್ವಾಧೀನ ಪಡಿಸಿಕೊಳ್ಳುವನು. ಆ ಬಳಿಕ ನೆಲ್ಲೂರು ಪ್ರಾಂತದಲ್ಲಿನ ತೆಲುಗು ಚೋಡಲನ್ನು ಗಣಪತಿ ಭೂಪತಿಯು ಜಯಿಸುವನು. ಆಗ ನೆಲ್ಲೂರು ಸೀಮೆಯನ್ನು ಪಾಲಿಸುತ್ತಿದ್ದ ಮನುಮಸಿದ್ಧಿರಾಜನು ಗಣಪತಿ ರಾಜನ ಸಹಾಯವನ್ನು ಪಡೆದು, ಕೈಬಿಟ್ಟು ಹೋದ ತನ್ನ ರಾಜ್ಯವನ್ನು ಮರಳಿ ಸಂಪಾದಿಸಿಕೊಳ್ಳುವನು. ಬಳಿಕ ಅನೇಕ ಸಾಮಂತ ರಾಜರು ಕಾಕತೀಯ ಗಣಪತಿ ಭೂಪತೀಂದ್ರನಿಗೆ ವಶರಾಗುವರು. ವೀರನಾದ ಗಂಗಯ ಸಾಹಿಣಿ ಸಹಿತ ಗಣಪತಿ ಭೂಪತಿಗೆ ಸಾಮಂತನಾಗುವನು. ಈತನಿಂದ ಪಾನುಗಲ್ಲು ಮೊದಲಾಗಿ ಕೈವಾರದವರೆಗೆ ವ್ಯಾಪಕವಾದ ರಾಜ್ಯದ ಮೇಲೆ ಪ್ರಭುತ್ವ ವುಂಟಾಗುವುದು ಕಾಕತೀಯ ರಾಜನಿಗೆ ! ಈ ಬಗೆಯಲ್ಲಿ ಇಂದಿನ ದತ್ತ ಮಂಡಲವೆಲ್ಲವೂ ಕಾಕತೀಯ ರಾಜ್ಯಾಂತರ್ಗತವಾಗುವುದು. ಇದಕ್ಕೆ ಗಂಗಯ ಸಾಹಿಣಿಯನ್ನು ಅಧಿಕಾರಿಯನ್ನಾಗಿ ನಿಯಮಿಸುವನು ಹೀಗೆ ಗಣಪತಿ ಭೂಪತಿಯೂ ಆಂಧ್ರದೇಶವನ್ನೆಲ್ಲ ಜಯಿಸುವನು. ಆತನ ರಾಜ್ಯವು ಉತ್ತರ ದಲ್ಲಿ ಗಂಜಾಂಮಂಡಲ, ದಕ್ಷಿಣದಲ್ಲಿ ಕಾಂಚೀಪುರಗಳವರೆಗೆ ಹಬ್ಬುವುದು. ಗಣಪತಿ ರಾಜನು ಓರುಗಲ್ಲು (ಒರುಂಗಲ್ಲು) ನಗರವನ್ನು ವೃದ್ಧಿ ಪಡಿಸಿ, ತನ್ನ ರಾಜಧಾನಿಯನ್ನಾಗಿಸಿಕೊಳ್ಳುವನು,

ಗಣಪತಿ ಭೂಪತಿಗೆ ರುದ್ರಾಂಬಾ, ಗಣಪಾಂಬಾ ಎಂಬಿಬ್ಬರು ಹೆಣ್ಣು ಮಕ್ಕಳಿರುವರು. ಗಂಡುಮಕ್ಕಳಿರಲಿಲ್ಲ. ಮೇಲಾಂಬಿಕೆಯೆಂಬ ಒಬ್ಬ ತಂಗಿ ಯಿದ್ದಳು. ಇವರಲ್ಲಿ ಮೊದಲು ಮಗಳಾದ ರುದ್ರಾಂಬೆಯನ್ನು ನಿಡದವೋಲಿನ ಅರಸನಾದ ಚಾಳುಕ್ಯ ವೀರಭದ್ರನಿಗೆ, ಎರಡನೆಯ ಮಗಳಾದ ಗಣಪಾಂಬೆ ಯನ್ನು ಕಾಕತಿ ಚಕ್ರವರ್ತಿ ಕೋಟಿ ಬೇತರಾಜನಿಗೆ, ತನ್ನ ತಂಗಿಯಾದ ಮೇಲಾಂಬಿಕೆಯನ್ನು ನತುಪಾಟಿ ಬುದ್ಧರಾಜನ ಕುಮಾರನಾದ ರುದ್ರನಿಗೆ

ಕೊಟ್ಟು ಮದುವೆ ಮಾಡುವನು. ಇವರನ್ನೆಲ್ಲ ತನ್ನ ಬಂಧು ಬಳಗವನ್ನಾಗಿಸಿ ಕೊಳ್ಳುವರು.

ರುದ್ರಾಂಬೆಯ ಗಂಡನಾದ ವೀರಭದ್ರರಾಜನು ಎರಡು ಹೆಣ್ಣು ಮಕ್ಕಳನ್ನು ಹಡೆದು ತಾರುಣ್ಯದಲ್ಲಿಯೆ ತೀರಿಹೋಗುವನು. ತಂದೆಯಾದ ಗಣಪತಿ ಭೂಪತಿಗೆ ಗಂಡು ಮಕ್ಕಳಿಲ್ಲದ ಕಾರಣ ತನ್ನ ಮಗಳಾದ ರುದ್ರಾಂಬೆ ಯನ್ನು ತನ್ನಲ್ಲಿಗೆ ಕರೆಯಿಸಿಕೊಂಡು ತನ್ನ ಬಳಿಕ ರಾಜ್ಯಭಾರವನ್ನು ವಹಿಸಿ ಕೊಳ್ಳಲು ಬೇಕಾದ ರಾಜ್ಯಪರಿಪಾಲನ ವಿಧಾನಗಳನ್ನು ಅವಳಿಗೆ ಶಿಕ್ಷಣ ಕೊಡಿಸುವನು. ರಾಜ್ಞಿಸ್ಥಾನಕ್ಕೆ ಸರ್ವಸಮರ್ಥಳನ್ನಾಗಿಸುವನು. ರುದ್ರಾಂಬೆ ಮಹಿಳೆಯಾದರೂ ಅತ್ಯಂತ ಪೌರುಷವಂತಳಾಗಿದ್ದಳು. ಪುರುಷ ವೇಷವನ್ನು ಧರಿಸುವಳು. ಪುರುಷರಿಗಿಂತಲೂ ಹೆಚ್ಚಿನ ಧೈರ್ಯ ಸ್ಥೈರ್ಯವುಳ್ಳವಳಾಗಿದ್ದಳು. ತಂದೆಯಿಂದ ರಾಜ್ಯಭಾವನ್ನು ತೆಗೆದುಕೊಂಡು ದಿಟ್ಟತನದಿಂದ ನಿರ್ವಹಿಸುವಳು. ಆದರೂ ಹಲವು ಜನ ಸಾಮಂತರು ಹೆಣ್ಣು ಅಬಲೆಯೆಂದು ಭ್ರಮಿಸಿ ದಾಳಿ ಮಾಡಿದರಾದರೂ ವೀರೆ ರುದ್ರಾಂಬೆ ಅವರಿಗೆ ಸೋಲದೆ ಅವರನ್ನೆಲ್ಲ ಸದೆ ಬಡಿದು ಅಣಗಿ ನಡೆದುಕೊಳ್ಳುವಂತೆ ಮಾಡುವಳು. ಇದಲ್ಲದೆ ಅತ್ತ ಚೋಳಪಾಂಡ್ಯರಾಜರು ಕಾಕತೀಯ ಸಾಮ್ರಾಜ್ಯದ ದಕ್ಷಿಣಪ್ರಾಂತದ ಮೇಲೆ ದಾಳಿಯನ್ನು ಸಾಗಿಸುವರು. ಅವರನ್ನೆಲ್ಲ ರುದ್ರಾಂಬೆ ತನ್ನ ಅಸಾಮಾನ್ಯ ಶಕ್ತಿಯಿಂದ ಪರಾಭವಗೊಳಿಸುವಳು. ಅಂತೆಯೇ ಉತ್ತರದಲ್ಲಿ ಯಾದವ ರಾಜನಾದ ಮಹಾದೇವನು ಕಾಕತೀಯ ರಾಜ್ಯದ ಮೇಲೆ ದಂಡೆತ್ತಿ ಬರುವನು. ರುದ್ರಾಂಬಾ ರಾಣಿಯ ಸೇನೆ ಆತನನ್ನು ಗೆದ್ದು ಗೋದಾವರೀತೀರದಾಚೆ ಓಡಿಸುವುದು. ಹೀಗೆ ಸುತ್ತಿ ಮುತ್ತಿಬಂದ ಶತ್ರುಗಳನ್ನು ಸಂಹರಿಸಿ, ಆಮೇಲೆ ರಾಜ್ಯವನ್ನು ನಿಷ್ಕಂಟಕವಾಗಿಸಿ ಶಾಂತಿ ಸಮಾಧಾನಗಳಿಂದ ಪರಿಪಾಲನವನ್ನು ಮಾಡಿ ಪ್ರತಾಪರುದ್ರನೆಂಬ ಪ್ರಶಸ್ತಿಯನ್ನು ಪಡೆಯುವಳು. ಪ್ರಜರ ಕ್ಷೇಮಕ್ಕಾಗಿ ಹೆಚ್ಚಾಗಿ ಶ್ರಮಿಸುವಳು ಪ್ರಜೆರ ಪ್ರೇಮವನ್ನು ಸಂಪಾದಿಸುವಳು. ಅಲ್ಲದೆ ಕವಿ, ಕಲಾವಿದರಿಗೆ ತುಂಬಾ ಆಶ್ರಯವನ್ನಿತ್ತಿದ್ದಳು. ವೀರಶೈವ ಧರ್ಮವೃದ್ಧಿಗಾಗಿ ವಿಶೇಷವಾಗಿ ವಿಶ್ವೇಶ್ವರ ಶಿವಾಚಾರ್ಯರ ಅನುಗ್ರಹವನ್ನು ಪಡೆದಿದ್ದಳು. ರುದ್ರಾಂಬೆ ರಾಜ್ಯಭಾರವನ್ನು ವಹಿಸಕೂಡದೆಂಬ ವೈದಿಕರ ವಿರೋಧವನ್ನು ನಿರೋಧಿಸಿ ನಿರುತ್ತರರನ್ನಾಗಿಸಿ ರುದ್ರಾಂಬೆಗೆ ರಾಜ್ಯ

ಪಟ್ಟಾಧಿಕಾರವನ್ನು ಸುಸೂತ್ರವಾಗಿ ನೆರವೇರಿಸುವಲ್ಲಿ ಶ್ರೀ ವಿಶ್ವೇಶ್ವರ ಶಿವಾಚಾರ್ಯರ ಪಾತ್ರ ಪ್ರಮುಖವಾದುದು. ಅದನ್ನು ಬೇರೊಂದು ಲೇಖನದಲ್ಲಿ ಬಿತ್ತರಿಸೋಣವಾಗುತ್ತದೆ. ಕಾಕತೀಯ ಸಾಮ್ರಾಜ್ಯವನ್ನು ಸರ್ವತೋಮುಖ ವಾಗಿ ಸುಭದ್ರ ಪಡಿಸಿದ ಕೀರ್ತಿ ರುದ್ರಾಂಬೆಯದಾಗಿದೆ. ಒಬ್ಬ ಮಹಿಳೆ ರಾಜ್ಯ ಪಟ್ಟಾಧಿಕಾರವನ್ನು ಪ್ರಪ್ರಥಮವಾಗಿ ವಹಿಸಿದ ಕ್ರಾಂತಿ ಶ್ರೀ ವಿಶ್ವೇಶ್ವರ ಶಿವಾಚಾರ್ಯರಿಂದ ಯಶಸ್ವಿಯಾಗಿ ವೀರಶೈವಕ್ಕೆ ಆಂಧ್ರಪ್ರದೇಶದಲ್ಲಿ ಅನನ್ಯ ಕೀರ್ತಿ ಬರುವಂತಾಗಿದೆ. ಕಲೆಗಳನ್ನು ಪೋಷಿಸಿದ ಕೀರ್ತಿ ರುದ್ರಾಂಬೆಯದಾಗಿದೆ.

ರುದ್ರಾಂಬೆಯ ತಂದೆ ಶ್ರೀ ವಿಶ್ವೇಶ್ವರ ಶಿವಾಚಾರ್ಯರಿಂದ ಶಿವದೀಕ್ಷೋಪದೇಶವನ್ನು ಪಡೆದಿದ್ದನು. ಶಾಸನೋಕ್ತನಾದ ವಿಶ್ವೇಶ್ವರ ಶಿವಾಚಾರ್ಯನು ರುದ್ರಾಂಬೆಗೂ ಶಿವಸಂಸ್ಕಾರವನ್ನಿತ್ತು ರಾಜಗುರುವಾಗಿದ್ದನು. ಗಣಪತಿ ಭೂಪತಿಯು ಮಂದರ ಗ್ರಾಮದಲ್ಲಿ ತನ್ನ ಗುರುವಾದ ವಿಶ್ವೇಶ್ವರ ಶಿವಾಚಾರ್ಯರಿಗೆ ಒಂದು ಭವ್ಯ ಗುರುಮಠವನ್ನು ಕಟ್ಟಿಸಿಕೊಟ್ಟಿರುವನೆಂದು ತಿಳಿದುಬರುತ್ತದೆ. ವಿಶ್ವೇಶ್ವರ ಶಿವಾಚಾರ್ಯರಿಂದ ವೀರಶೈವ ಪ್ರಚಾರ ವಿಶೇಷ ವಾಗಿ ಸಾಗಿದ್ದಿತು. ವೀರಶೈವ ಧರ್ಮಕೇಂದ್ರವಾಗಿದ್ದಿತು ಮಂದರಗ್ರಾಮದ ವಿಶ್ವೇಶ್ವರ ಶಿವಾಚಾರ್ಯರ ಗುರುಮಠವು. ಇದಕ್ಕೆ ಗಣಪತಿ ಭೂಪತಿ ಮತ್ತು ರುದ್ರಾಂಬೆಯರು ಅನೇಕ ಗ್ರಾಮಗಳನ್ನು ಭಕ್ತಿಭಾವದಿಂದ ಉದಾರವಾಗಿ ದಾನಮಾಡಿರುವರು. ಅತ್ಯಂತ ಅಭಿಮಾನದಿಂದ ವೀರಶೈವಧರ್ಮವೃದ್ಧಿಗೆ ಸಹಾಯ ಸಹಕಾರಗಳನ್ನಿತ್ತಿದ್ದರು.

## ಹನ್ನೊಂದನೆಯ ಶತಮಾನದ
## ಕ್ರಾಂತಿಯ ಕೇಂದ್ರಗಳು

ಶ್ರೀಶೈಲ ಪೊಟ್ಟಲಕೆರೆ, ಮುದನೂರು, ಮಂಗಳವಾಡ, ಕಂದಾರ, ಕೊಂಡಗುಳಿ–ಇವು ಮುಖ್ಯ ಕ್ರಾಂತಿಯ ಕೇಂದ್ರಗಳು. ಅನುಭಾವಗೋಷ್ಠಿ ಚಂಗಣಗಿಲ ಮಂಟಪ, ಕಂದಾರ ಗುರುಮಠ ಇವು ಗಮನಾರ್ಹವಾದವುಗಳು. ಚಂದ್ರಗುಂಡ ಶಿವಾಚಾರ್ಯರು, ದೇವರ ದಾಸಮಯ್ಯ, ರೇವಣಸಿದ್ಧ ಶಿವಾ

ಚಾರ್ಯರು, ಮರುಳಸಿದ್ಧ ಶಿವಾಚಾರ್ಯರು, ಉರಿಲಿಂಗದೇವ ಶಿವಾಚಾರ್ಯ ಕೊಂಡಗುಳಿ ಕೇಶಿರಾಜದಣ್ಣಾಯಕ ಇವರು ಉತ್ಕ್ರಾಂತಿ ಉದ್ಯಮದಲ್ಲಿ ಉದಾತ್ತರು. ಲೋಕಸಂಗ್ರಹಕ್ರಾಂತಿ ಜ್ಯೋತಿರ್ಮಯರು. ನಾಡಿನಲ್ಲಿ ಸಮಾಜದಲ್ಲಿ ಸಂಸ್ಕೃತಿಯಲ್ಲಿ ಹರವಾಗಿ ಬೆಳಗು ಬೆಳಗಿತು. ಎಲ್ಲೆಲ್ಲಿಯೂ ಶಿವಾಚಾರ ಸುಳುವು ಸುಳಿದಾಡಿತು. ಶಿವವಿಚಾರದ ಹೊಳಹು ಹೊಳಪೇರಿತು. ವೀರಶೈವ ವಿಶಿಷ್ಟ ಪರಿಮಳ ವಿಶಾಲವಾಗಿ ಹರಡಿತು. ಕಾಯಕ ದಾಸೋಹ ಅನುಭಾವ ಕ್ಷೀರ ಪ್ರವಾಹಗಳು ಪ್ರವಹಿಸಿದವು. ಸಾಂಸ್ಕಾರಿಕ ತಂಗಾಳಿ ತೀಡಿತು. ಮುಂದಿನ ಶತಮಾನದ ಕ್ರಾಂತಿಗೆ ಗಂಗೋತ್ರಿಯಾಗಿ ಪರಿಣಮಿಸಿತು. ಶ್ರೀಶೈಲ ಶಿಖರದಿಂದ ಚಂದ್ರಗುಂಡ ಶಿವಾಚಾರ್ಯರ ಚಿತ್ಕಳೆಯು ಚೈತನ್ಯವಾಗಿ ದೇವರ ದಾಸಮಯ್ಯಗಳ ರೂಪದಲ್ಲಿ ನಾಡಿಗೆ ಬಂದು ಹರಡುವುದು. ಅವರ ಮುಖಾಂತರ ಅನೇಕರು ಚಿತ್ಕಳೆಯ ಕಂಡರು; ಚಿನಮೃತರಸವನುಂಡರು. ಚಿಚ್ಚೈತನ್ಯವಂತರಾದರು. ಚಿನ್ಮಯಕ್ರಾಂತಿಯನೆಸಗಿದರು. ಚಿದ್ವಚನಗಳನ್ನು ಸೃಜಿಸಿದರು. ಚಿನ್ನಾದವನ್ನು ಮೊಳಗಿಸಿದರು. ಚಿದನುಭವರಸವರ್ಷವನ್ನು ಸುರಿಸಿದರು. ಇದಕ್ಕೆಲ್ಲ ಮೂಲಮಹಾಕಾರಣರು ಚಂದ್ರಗುಂಡ ಶಿವಾಚಾರ್ಯರು. ಅವರು ಅಸಾಮಾನ್ಯರು. ಅಜ್ಞಾನ ಅಕ್ರಿಯೆ ಅನನುಭವಗಳ ಅಂಧಕಾರ ಆವರಿಸಿ ಅಂದಿನ ಜನರು ಬಂಧನಕ್ಕೊಳಗಾಗಿದ್ದರು; ಅಂಧರಾಗಿದ್ದರು. ಎಲ್ಲರ ಮನಮನಕ್ಕೂ ಮಬ್ಬು ಮುಸುಗಿತ್ತು. ಅದನ್ನೆಲ್ಲ ಹೋಗಲಾಡಿಸಿದರು ಅವರ ಶಿಷ್ಯರು, ಆ ಬಳಿಕ ಬಂದ ಆಚಾರ್ಯರು. ಕಾಡಜೀವಿಗಳೆಲ್ಲ ನಾಡಜೀವಿಗಳಾದರು. ಅನೀತಿವಂತರು ನೀತಿವಂತರಾದರು. ಅಧರ್ಮಿಗಳು ಧರ್ಮಿಗಳಾದರು. ಸ್ವಾರ್ಥಿಗಳು ಉದಾರಿಗಳಾದರು. ಪರವಾದಿಗಳು ವೀರಶೈವರಾದರು. ದುಗ್ಗಳೆ ಸುಗ್ಗಳೆ ಶಾಂಭವಿ ಮೊದಲಾದ ಹೆಣ್ಣು ಮಕ್ಕಳು ಪ್ರತಿಭಾವಂತರಾದರು. ಅಸ್ಪೃಶ್ಯರು ಸ್ಪೃಶ್ಯರಾದರು. ಶುಷ್ಕ ತಾರ್ಕಿಕರು ಭಾವಜೀವಿಗಳಾದರು. ರಾಜರು ಪ್ರಜಾನುರಾಗಿಗಳಾದರು. ದಯೆಯಿಲ್ಲದವರು ದಯಾವಂತರಾದರು. ಒಂದು ಹೊಚ್ಚ ಹೊಸ ಮನ್ವಂತರವೇ ಉಂಟಾಯಿತು. ಕುಲ ಪಂಥ ಭೇದಗಳು ಕಡಿಮೆಯಾದವು. ಮಾನವತ್ವಕ್ಕೆ ಮೌಲ್ಯವುಂಟಾಯಿತು. ದೇವಾಂಗ ದೇವನಾದನು. ತವನಿಧಿಯ ಪಡೆದು ಅಸಂಖ್ಯಾತರಿಗೆ ದಾಸೋಹ ನಡೆಸುವನು. ಜೈನರನ್ನು ಜಯಿಸುವನು. ಅಸಂಖ್ಯಾತರನ್ನು ವೀರಶೈವರನ್ನಾಗಿಸುವನು. ಅಂತೆಯೇ

ರೇವಣಸಿದ್ಧಾದಿಗಳ ಮಹಾಮಹಿಮೆಗಳನ್ನು ಈ ಹಿಂದೆ ಓದಿ ಮನಗಂಡು ದಾಯಿತು. ಉರಿಲಿಂಗದೇವ ಶಿವಾಚಾರ್ಯನ ಅಸ್ಪೃಶ್ಯೋದ್ಧಾರಕಾರ್ಯ ಅಸಾಧಾರಣವಲ್ಲವೇನು? ಕೊಂಡಗುಳಿ ಕೇಶಿರಾಜನ ಲಿಂಗನಿಷ್ಠೆ ದಾಸೋಹಗಳು ಲೋಕೋತ್ತರವಲ್ಲವೇನು? ಪಾವಿನ ಪಾಳಕಲ್ಲಯ್ಯನ ಪವಾಡ ಪರಮಾದ್ಭುತವಲ್ಲ ವೇನು ? ಕಾಯಕತತ್ತ್ವಕ್ಕೆ ಮೊದಲು ನಾಂದಿಯನ್ನು ಹಾಕಿದವರೆಂದರೆ ನಮಗೆ ತಿಳಿದ ಮಟ್ಟಿಗೆ ಹತ್ತನೆಯ ಶತಮಾನದ ಶ್ರೀಶೈಲ ನಿಡುಮಾಮಿಡಿ ಪೀಠದ ವಿರೂಪಾಕ್ಷದೇಶಿಕೇಂದ್ರರು. ಕಾಶ್ಮೀರದ ಅರಸನಾದ ಶಿವದೇವ ಭೂಪಾಲನಿಗೆ ವೀರಶೈವದೀಕ್ಷೆಯನ್ನು ಅನುಗ್ರಹಿಸಿದ್ದಲ್ಲದೆ ಕಾಯಕಾಚರಣೆ ಯನ್ನು ಸಹ ಬೋಧಿಸಿ ಮಾಡಿಸಿದರು. ಶಿವಶರಣೆಯರಂತೆ ಶಿವಾಚಾರಿಣಿಯ ರಾದ ಗುರು ದೇವಿಯರೂ ಹನ್ನೊಂದನೆಯ ಶತಮಾನದಲ್ಲಿ ವಚನ ರಚಿಸಿದರು, ಕಾಯಕ ಮಾಡಿದರು. ಸ್ತ್ರೀ ಪುರುಷ ಸಾಮ್ಯವಾದವೂ ೧೧ನೆಯ ಶತಮಾನದ್ದು ಸೂಳ್ನುಡಿ ಕ್ರಾಂತಿ, ಲಿಂಗಕ್ರಾಂತಿ, ಪ್ರಾಸಾದಿಕಕ್ರಾಂತಿ, ಭವಿ–ಭಕ್ತಕ್ರಾಂತಿ. ಸ್ತ್ರೀಕ್ರಾಂತಿ, ಶಿವಪೂಜಾಕ್ರಾಂತಿ, ಸ್ವಾವಲಂಬನಕ್ರಾಂತಿ ಮೊದಲಾಗಿ ಎಲ್ಲ ಕ್ರಾಂತಿಗಳು ಅಂದೇ ಆಗಿವೆ. ಭಿಕ್ಷೆ ಬೇಡುವುದೆಂಥರೆ ದಾಸಮಯ್ಯನಿಗಾಗದು. 'ಮಂಡೆಯ ಬೋಳಿಸಿಕೊಂಡು, ನುಡಿದು ಗೋಷ್ಠಿಯ ಕಟ್ಟಿದರೇನು ? ಕಂಡವ ರಿಗೆ ಕೈಯೊಡ್ಡಿ ಬೇಡುವ ಭಂಡರನೊಲ್ಲ ನಮ್ಮ ರಾಮನಾಥ !'–ಎಂದು ಸಿಡಿ ದೆದ್ದು ನುಡಿದಿದ್ದಾನೆ. ಗೋಷ್ಠಿಯ ಮಾತು ಇಲ್ಲಿ ಗಮನಾರ್ಹ ! ತೀರ್ಥಯಾತ್ರೆ ಅದೊಂದು ಅರ್ಥವಿಲ್ಲದ ತಿರುಗಾಟ. ಅದರಲ್ಲಿಯೂ ಡಾಂಭಿಕವಾಗಿ ತೀರ್ಥ ಗಳಿಗೆ ತಿರುಗಿದರೇನು ಪ್ರಯೋಜನ ?–ಎಂದು ಕೇಳಿದ್ದಾನೆ. ಹಿರಿತನಕ್ಕಿಂತ ಕಿರಿತನವೇ ಲೇಸೆನ್ನುತ್ತಾನೆ. ವಿಶೇಷ ವಿನಯಶಾಲಿ; ವಿಚಾರಶಾಲಿ; ಕ್ರಿಯಾಶಾಲಿ! ನಡೆ ನುಡಿಯೊಂದಾದಾತ! ಒಂದಾಗಿರಬೇಕೆಂದು ಒರೆದಾತ ! ಎಡರು ತೊಡರು ಬಂದಾಗ ಮಾತ್ರ ಶಿವನನ್ನು ನೆನೆವುದು ಸರಿಯಲ್ಲೆಂದು ಹೇಳಿದ್ದಾನೆ. ಹಣಕ್ಕಿಂತ ಗುಣಪ್ರಧಾನ ಸಾವಿರ ಆಡುವುದಕ್ಕಿಂತ ಸತ್ವಶಾಲಿಯಾದ ಮಾತೊಂದೆ ಸಾಕೆನ್ನು ತ್ತಾನೆ. ತನು ಮನ ಮಾತುಗಳ ಮಾಯೆ ಮಾಟಗಳಿಗೊಳಗಾಗಬಾರದೆನ್ನು ತ್ತಾನೆ. ಏಕೇಶ್ವರವಾದಿ ಆತ ! ಸರ್ವಾಂಗ ಶಿವನಿಗೆ ಮೀಸಲಾಗಿರಬೇಕು. ಶಿವಾನುಭೂತಿಯಿಲ್ಲದ ಭಕ್ತಿ ಶಕ್ತಿ ವ್ಯರ್ಥ ಎಂದು ಮುಂತಾಗಿ ಸ್ಥೂಲ ಸೂಕ್ಷ್ಮ ತಮ ಕ್ರಾಂತಿಗಳನ್ನೆಲ್ಲ-ಕೈಕೊಂಡು ಕೊನೆಗಾಣಿಸಿದ ದಿವ್ಯಪ್ರಭಾವ ದೇವರ

ದಾಸಮಯ್ಯನದು. 'ತನ್ನನುಳಿದು ಘನವ ನೋಡಲದೇಕೆ ? ತಾನೆ ಘನ ವೆಂದರಿದಡೆ ಸಾಲದೆ ?' ಎಂಬೀ ಮಾತು ತ್ರೈಕಾಲಿಕ ಸತ್ಯ. ಇದಕ್ಕಾಗಿ ಇತ್ತ ಉಪಮಾನಗಳ ವೈಚಾರಿಕತೆ ಕಾವ್ಯಮಯತೆ ಅನುಭಾವಿಕತೆ ಅಸಾಧಾರಣ ! ದುಗ್ಗಳೆಯ ದಾಸೋಹಕ್ರಾಂತಿ, ಸುಗ್ಗಳೆಯ ಸಾಮಾಜಿಕ ಧಾರ್ಮಿಕ ಕ್ರಾಂತಿ ಅನನ್ಯ ಸಾಧಾರಣ ! ವಿಶ್ವವಿಭೂತಿ ರೇವಣಸಿದ್ಧ ಶಿವಾಚಾರ್ಯನು ಜನವನ ವಸಂತನಾಗಿ, ನಭದಂತೆ ವಿಭುವಾಗಿ, ಚರಿತದೊಳ್ ಭುವನ ಪಾವನ ದೇವ ಗಂಗೆಯಂತೆಯಾಗಿ, ಜಗದ ಸಂಸಾರಮಂ ಹೊದ್ದಿಯೂ ಹೊದ್ದದವನಾಗಿ, ಭವಕುಲದ ಭಾರವನ್ನು ನಿತ್ತರಿಸುತ್ತ ಕ್ರಾಂತಿಯನ್ನೆಸಗುವನು. ಸ್ತ್ರೀಜನ ಸಂಜೀವಿನಿಯಾಗಿ ಮುನಿಗಳಿಗೆ ಮೂರ್ತಿಜ್ಯೋತಿಯಾಗಿ, ಸಕಲ ಸಾಮರ್ಥ್ಯದ ಸಾಗರನಾಗಿ, ಶಿವಯೋಗಿ ಸಂಕುಳ ಲಲಾಮನಾಗಿ, ಲೋಕೋದ್ಧಾರಕರಾಗಿ ಕ್ರಾಂತಿಗೈದರು. ಬರೀ ವೀರಶೈವಕ್ಕೆ ಮೀಸಲಾಗದೆ ಸಾರ್ವಜನಿಕರ ಉದ್ಧಾರ ಕ್ಕಾಗಿ ಮಣಿಹಗಳನ್ನು ಕೈಕೊಂಡ ವೈಶಿಷ್ಟ್ಯ ರೇವಣಸಿದ್ಧ ಶಿವಾಚಾರ್ಯರದು. ಅಂತೆಯೇ 'ಜನವನವಸಂತ' ಎಂಬ ಹೆಸರಾಂತರು.

ಒಟ್ಟಿನಲ್ಲಿ ವೀರಶೈವ ಮಹಾಚಾರ್ಯರು ತಮ್ಮ ತಮ್ಮ ವಿಶಿಷ್ಟ ಶಕ್ತಿ ಯಿಂದ, ಸೂಕ್ಷ್ಮದೃಷ್ಟಿ ದೀಪ್ತಿಯಿಂದ, ಸಾಂಸ್ಕಾರಿಕ ಶೋಧನಶೀಲತೆಯಿಂದ ಲೋಕೋತ್ತರ ಪವಾಡಗಳಿಂದ, ಸ್ವಯಕ್ರಿಯಾ (ಕಾಯಕ) ಶೀಲತೆಯಿಂದ ನಾಡಿನ ಎಲ್ಲ ಕೋಮಿನ ಸ್ತ್ರೀ ಪುರುಷರನ್ನು, ಬಡವ ಬಲ್ಲಿದರನ್ನು ಉದ್ಧರಿಸಿದ ಕಾರಣಿಕ ಪುರುಷರಾಗಿದ್ದಾರೆ.

ವೀರಶೈವ ಸಂಸ್ಕೃತಿ-ಸಾಹಿತ್ಯಗಳ ಸೃಜನ, ಪರಿಷ್ಕರಣಕಾರ್ಯ ಶ್ರೀ ಶೈಲ ದಿಂದ ಸೆಲೆಯೊಡೆದು ಪೊಟ್ಟಲಕೆರೆ, ಮುದನೂರು, ಮಂಗಳವಾಡ, ಇಂಗಳೇಶ್ವರ ಶಿವಗಂಗೆ, ಕೊಲ್ಲಾಪುರ, ಕಂದಾರ, ನಂದವಾಡ, ಹಾವಿನಹಾಳ, ಕೊಂಡಗುಳಿ, ಕಂಚಿ, ಮಾಸನೂರು, ಸಿದ್ಧನಕೆರೆ ಮೊದಲಾದ ಊರುಗಳಿಗೆ ಹಬ್ಬಿ ಕರ್ಣಾಟಕ, ಆಂಧ್ರ, ಮಹಾರಾಷ್ಟ್ರ ಪ್ರಾಂತಗಳಲ್ಲಿ ಹರವಾಗಿ ನಿಲ್ಲುತ್ತದೆ. ಇವು ಚಂದ್ರಗುಂಡ ಶಿವಾಚಾರ್ಯ, ರೇವಣಸಿದ್ಧ, ಮರುಳಸಿದ್ಧ, ಏಕೋರಾಮಾರಾಧ್ಯ, ನಿರ್ಲಜ್ಜ ಶಾಂತ, ಶಿವಯೋಗಿ ಶಾಂತಮಯ್ಯ, ಕೋಟಿಪಲ್ಲಾರಾಧ್ಯ, ಉರಿಲಿಂಗದೇವ, ವಿಶ್ವೇಶ್ವರಾಚಾರ್ಯ-ಇವರೇ ಮೊದಲಾದ ಶಿವಾಚಾರ್ಯರ ಕ್ರಾಂತಿಯ ಕೇಂದ್ರ

ಗಳಾಗಿದ್ದವು. ಇವರುಗಳೊಡನೆ ದೇವರ ದಾಸಮಯ್ಯ, ಹಾವಿನಹಾಳ ಕಲ್ಲಯ್ಯ, ಶಿವಲೆಂಕಮಂಚಣ್ಣ, ಶಂಕರ ದಾಸಮಯ್ಯ, ಶಿವದಾಸಮಯ್ಯ ತುರುಗಾಹಿ ರಾಯಣ್ಣ ಮೊದಲಾದವರು ಸಹಕರಿಸಿ ಸೇವೆ ಸಲ್ಲಿಸಿದ್ದಾರೆ. ಇವರು ಗಳೆಲ್ಲ ಹನ್ನೊಂದನೆಯ ಶತಮಾನದಲ್ಲಿ ಶತಪ್ರಯತ್ನ ಮಾಡಿ ವೀರಶೈವವನ್ನು ಪುನರುಜ್ಜೀವನಗೊಳಿಸಿರುವರು, ವರ್ಣಭೇದ ಹಾಗೂ ವರ್ಗಬೇದ ನಿವಾರಣೆ, ಕಾಯಕಕಲೆ, ಸ್ತ್ರೀಪುರುಷ ಸಾಮ್ಯ, ಅಸ್ಪೃಶ್ಯೋದ್ಧಾರ, ಜೀವಕಾರುಣ್ಯ, ನೈತಿಕಮೌಲ್ಯ, ಇಷ್ಟಲಿಂಗಧಾರಣ ಮೂಲಕ ವೀರಶೈವ ವಿಸ್ತರಣ ಮೊದಲಾದ ಕ್ರಾಂತಿಗಳನ್ನು ಎಸಗಿದರು. ಆಚಾರ ವಿಚಾರ ಕ್ರಾಂತಿಯನ್ನೆಸಗಿದರು. ವಚನಗಳನ್ನು ಸೃಜಿಸಿ ಅನುಭಾವ ಮೌಲ್ಯವನ್ನು ಹೆಚ್ಚಿಸಿದರು. ಆಗಮಿಕ ತತ್ತ್ವಗಳನ್ನು ಎತ್ತಿಹಿಡಿದಿರುವರು.

ಹಾವಿನಹಾಳ ಕಲ್ಲಯ್ಯ, ಕಂದಾರ ಗುರುಮಠದ ಉರಿಲಿಂಗದೇವರ ಸಾಮಾಜಿಕ ಕ್ರಾಂತಿಗಳು ಸಾಮಾನ್ಯವೇನಲ್ಲ. ಏಕೋರಾಮ, ಏಕಾಂತರಾಮ ರನ್ನು ಮರೆಯುವಂತಿಲ್ಲ. ಇವರೆಲ್ಲರನ್ನೂ ಇವರುಗಳೆಸಗಿದ ಕ್ರಾಂತಿಗಳನ್ನೂ ಹನ್ನೊಂದನೆಯ ಶತಮಾನದವುಗಳೆಂಬುದನ್ನು ಅಲ್ಲಗಳೆಯುವಂತಿಲ್ಲ. ಅದೆಂದಿಗೂ ಮರೆಯುವಂತಿಲ್ಲ.

## ಶಿವಾಚಾರ್ಯರದು ಸಚ್ಚಾರಿತ್ರ ಕ್ರಾಂತಿ,
## ಮತ್ತು ಸತ್ಸಂತತಿ !

ಶಿವದ ಆಚಾರ ಶಿವಾಚಾರ ಏನೆಲ್ಲ ಬಗೆಯಲ್ಲಿ ಅಶಿವಜೀವನದಿಂದ ಶಿವ ಜೀವನವನ್ನು ಅಂದರೆ ಭದ್ರಬಾಳನ್ನು ರೂಪಿಸುವುದೆ ಶಿವಾಚಾರ. ಅವರಿವ ರೆನ್ನದೆ ಕುಲಮಲಕ್ಕೆ ಕಟ್ಟುಬೀಳದೆ ಸರ್ವೋದಯ ಹೃದಯದಿಂದ ಸರ್ವರಿಗೆ ಸರಿಬರಿಯಾಗಿ ಮಂಗಲಮಯ ನಡತೆಗೆ ಹಚ್ಚುವುದೇ ಶಿವಾಚಾರ. ಅಂತಹ ಶಿವಾಚಾರವೆ ಜೀವನದ ಉಸಿರಾಗಿರುವವರು ಶಿವಾಚಾರ್ಯರು. ಸಚ್ಚಾರಿತ್ರ ಶೀಲರು ಸತ್ಕ್ರಾಂತಿಯನ್ನೆಸಗಿದವರು ಮಾನವೀಯ ಮೌಲ್ಯಗಳನ್ನು ಮಂಡಿಸಿ ದವರು. ಈ ದಿಸೆಯಲ್ಲಿ ಉಜ್ವಲ ಪರಂಪರೆ ಶಿವಾಚಾರ್ಯರಿಗಿದೆ, ಮಾನ ವೀಯ ಹೃದಯವಿಲ್ಲದ ಕೇವಲ ಕಾಯಕ ದಾಸೋಹ ಅನುಭಾವಗೋಷ್ಠಿಗಳಿ ಗಿಂತ ಶಿವಾಚಾರ ಸಾವಿರ ಪಾಲಿಗೂ ಶ್ರೇಷ್ಠ ! ಶಿವಾಚಾರ್ಯರ ಶಿವಾಚಾರ ಧ್ಯೇಯ ಮಾನವರೆಲ್ಲರ ಬಾಳು ಬದುಕು ಏನೆಲ್ಲ ಬಗೆಗಳಲ್ಲಿ ಹಸನಾಗಿರಬೇಕೆಂ ಬುದೇ ಆಗಿದೆ. ಈ ದಿಸೆಯಲ್ಲಿ ೬ನೆಯ ಶತಮಾನದಿಂದ ೧೧ನೆಯ ಶತ ಮಾನದವರೆವಿಗೂ ಇರುವ ಆರ್ನೂರು ವರುಷಗಳ ಕಾಲ ಅತ್ಯಂತ ಮಹತ್ವ ವುಳ್ಳುದಾಗಿದೆ ; ಸಚ್ಚಾರಿತ್ರ್ಯವುಳ್ಳ ಶಿವಾಚಾರ್ಯರ ಉಜ್ವಲಕ್ರಾಂತಿ ಕಾಲ ವಾಗಿದೆ. ಆ ಮಹಾಕ್ರಾಂತಿಗಳನ್ನಾಗಲಿ, ಅವನ್ನೆಸಗಿದ ಆ ಆ ಕಾಲದ ಕಳಾ ಮಯ ಜೀವಿಗಳಾದ ಶಿವಾಚಾರ್ಯರನ್ನಾಗಲಿ ಗುರುತಿಸಿ ಬೆಳಕಿಗೆ ತಾರದಿರು ವುದು ಅತ್ಯಂತ ದುರದೃಷ್ಟಕರವೆಂದೇ ಹೇಳಬೇಕು. ಇದೊಂದು ಕರ್ನಾಟಕದ ಇತಿಹಾಸದಲ್ಲಿ ಅದರಲ್ಲಿಯೂ ಶಿವಾಚಾರ್ಯರ ಸಾಂಸ್ಕೃತಿಕ ಚಾರಿತ್ರ ಕ್ಷೇತ್ರದಲ್ಲಿ ತುಂಬಿಬಾರದ ಕೊರತೆ, ಕೊರಗು. ಶಿವಾಚಾರ್ಯರು, ಅವರ ಸಂಸ್ಕೃತ ಸತ್ಕೃತಿಗಳು, ಮತ್ತು ಅವರ ಕನ್ನಡ ಸೂಳ್ನುಡಿಗಳು ಅಂದಿನ ಜನಜೀವನದಲ್ಲಿ ಜ್ಯೋತಿರ್ಮಯ ಉತ್ಕ್ರಾಂತಿಯನ್ನು ಅಪ್ರತಿಮವಾಗಿ ಅತ್ಯಂತ ಪ್ರಭಾವಶಾಲಿ ಯಾಗಿ ಮಾಡಿದ್ದನ್ನು ಮನಗಾಣುತ್ತೇವೆ : ಮನೋಲ್ಲಾಸವನ್ನು ಪಡೆಯು ತ್ತೇವೆ. ಸಾಮಾಜಿಕ, ಸಾಂಸ್ಕೃತಿಕ, ಆಧ್ಯಾತ್ಮಿಕಾದಿ ಚಟುವಟಿಕೆಯುಳ್ಳ

ಉಜ್ವಲ ಕ್ರಾಂತಿಗಳಿಗೆ ಶಿವಾಚಾರ್ಯರು ನಿರತಿಶಯವಾಗಿ ನಾಂದಿ ಹಾಡಿರುವರು. ನಿಷ್ಕಂಟಕವಾಗಿ ನೆರವೇರಿಸಿ ಸಫಲರಾಗಿರುವರು. ಶಿವಾಚಾರ್ಯರು ಸತ್ಯ ಸಂಕಲ್ಪದಿಂದ ವಿಶಾಲ ಮನೋಭಾವದಿಂದ ಕೈಕೊಂಡ ಯಾವ ಕ್ರಾಂತಿಯೂ ವಿಫಲವಾಗಿಲ್ಲ ; ವಿಷಮ ವಾತಾವರಣವನ್ನುಂಟು ಮಾಡಿಲ್ಲ. ಯಾವ ಸ್ವಾರ್ಥ ಸಾಧನೆ, ಮತ್ಸರ ಭಾವನೆ, ಮೋಹ ಮದಗಳ ಕಲ್ಪನೆಗಳಿಗಿಂಬಿಲ್ಲದೆ ಮಾಡಿದ ಶಿವಾಚಾರ್ಯರ ಆ ಮಹಾ ಮಣಿಹಗಳು ಸತ್ಯಕ್ಕೂ ಚಿರಸ್ಮರಣೀಯವಾಗಿವೆ, ಅನುಕರಣೀಯವಾಗಿವೆ.

ಹನ್ನೆರಡನೆಯ ಶತಮಾನದ ಹಿಂದೆ ಆರುನೂರು ವರುಷಗಳಲ್ಲಿ ಅಂದರೆ ಆರನೆಯ ಶತಮಾನದಿಂದ ಹನ್ನೊಂದನೆಯ ಶತಮಾನದವರೆಗೆ ಅನೇಕ ಶಿವಾಚಾರ್ಯರು ಆಗಿ ಹೋಗಿದ್ದಾರೆ. ಪಂಡಿತಾಚಾರ್ಯರು, ಮುದ್ದದೇವ ಶಿವಾಚಾರ್ಯರು,ಸಿದ್ಧನಾಥ ಶಿವಾಚಾರ್ಯರು, ಶಿವಯೋಗಿ ಶಿವಾಚಾರ್ಯರು, ಚನ್ನಮಲ್ಲ ಶಿವಾಚಾರ್ಯರು, ಸಿದ್ಧಮಲ್ಲ ಶಿವಾಚಾರ್ಯರು, ಇಮ್ಮಡಿ ಪಂಡಿತಾರಾಧ್ಯರು, ವಿರೂಪಾಕ್ಷ ದೇಶಿಕೇಂದ್ರರು, ಚಂದ್ರಗುಂಡ ಶಿವಾಚಾರ್ಯರು, ದೇವರ ದಾಸಮಾರ್ಯರು, ರೇವಣಸಿದ್ಧ ಶಿವಾಚಾರ್ಯರು, ಮರುಳಸಿದ್ಧ ಶಿವಾಚಾರ್ಯರು, ಏಕೋರಾಮಾರಾಧ್ಯರು, ವಿಶ್ವಾರಾಧ್ಯರು, ಮಂಚಣ ಪಂಡಿತಾರಾಧ್ಯರು, ಶ್ರೀಪತಿ ಪಂಡಿತಾರಾಧ್ಯರು ಮಲ್ಲಿಕಾರ್ಜುನ ಪಂಡಿತಾರಾಧ್ಯರು ಉರಿಲಿಂಗ ಶಿವಾಚಾರ್ಯರು ಇವರೇ ಮೊದಲಾದವರು ಪ್ರಮುಖರು. ಇವರಲ್ಲಿ ಸೂಳ್ನುಡಿಕಾರರೆಂದರೆ ಇಮ್ಮಡಿ ಪಂಡಿತಾರಾಧ್ಯರು ಆದ್ಯರು. ಬಳಿಕ ಚಂದ್ರಗುಂಡ ಶಿವಾಚಾರ್ಯರು ದೇವರ ದಾಸಮಾರ್ಯರು, ರೇವಣಸಿದ್ಧ ಶಿವಾಚಾರ್ಯರು, ಮರುಳಸಿದ್ಧ ಶಿವಾಚಾರ್ಯರು, ಉರಿಲಿಂಗದೇವ ಶಿವಾಚಾರ್ಯರು. ಇವರ ಉತ್ತರಾಧಿಕಾರಿ ಉರಿಲಿಂಗ ಪೆದ್ದಿ ಶಿವಾಚಾರ್ಯರು ಪ್ರಸಿದ್ಧರು. ಇವರಲ್ಲದೆ ಸೂಳ್ನುಡಿಗಳನ್ನು ರಚಿಸಿದ ಶಿವಾಚಾರಿಣಿಯರೂ ಇದ್ದಾರೆ. ಅವರಿವರು :

ರೇಕಮ್ಮ ಶಿವಾಚಾರಿಣಿ, ಆಗಮ ಮೋಹಿನೀ ಶಿವಾಚಾರಿಣಿ, ವೇದ ಕುಂಚುಕಿ ಶಿವಾಚಾರಿಣಿ, ಸೌಂದರೀ ದೇವಿ ಶಿವಾಚಾರಿಣಿ, ಶಾಂಭವೀ ದೇವಿ ಶಿವಾಚಾರಿಣಿ, ಕೊಟ್ಟಣದ ಸೋಮವ್ವೆ, ಅಕ್ಕಮ್ಮ, ಕಾಳವ್ವೆ, ಮಸಣಮ್ಮ, ವೀರಮ್ಮ, ರೇಚವ್ವೆ, ಕೇತಲದೇವಿ, ಸತ್ಯಕ್ಕ, ಗುಡ್ಡವ್ವೆ, ಗೊಗ್ಗವ್ವೆ, ಸಂಕವ್ವೆ

ಮೊದಲಾದ ಶಿವಾಚಾರಿಣಿಯರು ಸೂಳ್ನುಡಿಕಾರ್ತಿಯರು, ಇವರೆಲ್ಲ ಶ್ರೀಶೈಲ ಪೀಠದ ಪ್ರಥಮ ಅನುಭವ ಮಂಟಪಕ್ಕೆ ಮುದನೂರು-ಪೊಟ್ಟಲಕೆರೆ ಅನುಭವ ಗೋಷ್ಠಿಗಳಿಗೆ, ಚಂಗಣಗಿಲ ಮಂಟಪಕ್ಕೆ ಸೇರಿದವರು. ಶಿವಾಚಾರ್ಯ ಸೂಳ್ನುಡಿಕಾರರಲ್ಲಿ ಮರುಳ ಸಿದ್ಧಶಿವಾಚಾರ್ಯರು ಗಣ್ಯರು. ೬೪ ಸಾವಿರ ಸೂಳ್ನುಡಿ ಸೃಜಕರು. ಅವರು ದಲಿತೋದ್ಧಾಕರೂ ಅಹುದು. ಈ ದಿಸೆ ಯಲ್ಲಿ ಚಂದ್ರಗುಂಡ ದೇಶಿಕೇಂದ್ರ ಶಿವಾಚಾರ್ಯರು, ರೇವಣಸಿದ್ಧ ಶಿವಾ ಚಾರ್ಯರು. ಉರಿಲಿಂಗದೇವ ಶಿವಾಚಾರ್ಯರು ಮಹೋನ್ನತರು. ಮನನೀ ಯರು, ಶಿವಾಚಾರಿಣಿಯರಲ್ಲಿ ಶಾಂಭವಿ, ಸುಗ್ಗಳೆ, ದುಗ್ಗಳೆ, ಕಾಳವ್ವೆ. ರೇಕವ್ವೆ. ಮೊದಲಾದವರು ಮುಖ್ಯರು. ಚಂಗಣಗಿಲ ಮಂಟಪದ ರೂವಾರಿ ಶಾಂಭವಿ. ಶಿವಾಚಾರಿಣಿಯರು ಮುಖ್ಯವಾಗಿ ಶಿವಾಚಾರ ನಿರತರು ; ಶಿವ ಯೋಗ ಸಂಪನ್ನೆಯರು. ಅವರದು ಶಿವ ನಡೆ, ಶಿವನುಡಿ ; ಶಿವ ಬಾಳು, ಶಿವ ಬದುಕು. ಶಿವಭಕ್ತಿ ಸಂಪನ್ನೆಯರು. ಸರಳ ಹೃದಯರು. ಸದ್ಭಾವ ಭರಿತರು. ನಿರ್ಮಲರು. ನಿರಾಡಂಬರು. ಹಮ್ಮು ಬಿಮ್ಮುಗಳಿಲ್ಲದವರು.

ಶಿವಾಚಾರ್ಯರು ಸಾಮಾಜಿಕ ಸಾಂಸ್ಕೃತಿಕ ಸಾಹಿತ್ಯಕ ಶೈಕ್ಷಣಿಕ ಮೊದ ಲಾದ ಕ್ಷೇತ್ರಗಳಲ್ಲಿ ಪೂರ್ವ ಪರಂಪರೆಯಲ್ಲಿ ಸಾಧಿಸಿದ ಸಾಧನಗಳ ಮಾಧ್ಯಮ ದಲ್ಲಿ ಶಿವಾಚಾರ್ಯರ ಇತಿಹಾಸ ರೂಪಗೊಂಡಿದೆ ; ಜೊತೆಗೆ ಅವರವರ ಚಾರಿತ್ರ್ಯ ಚಿತ್ರಿತವಾಗಿದೆ. ರಾಜಕೀಯ ಅಧಿಕಾರಕ್ಕೆ ಅಪೇಕ್ಷಿಸದೆ ಅಂಟಿ ಕೊಳ್ಳದೆ ಇರುವುದರಿಂದ ಶಿವಾಚಾರ್ಯರ ಶಾಸನಗಳು ಕಡಿಮೆ. ನಾಡಿನ ಇತಿ ಹಾಸದಲ್ಲಿ ಉಲ್ಲೇಖಿಸುವುದು ಇಲ್ಲವೆ ಇಲ್ಲ. ಇದು ತೀರ ಅನ್ಯಾಯ. ಅಸಹ ನೀಯ. ಶಿವಾಚಾರ್ಯರು ರಾಜಕೀಯ ಅಧಿಕಾರ ಸೂತ್ರವನ್ನು ವಹಿಸದಿದ್ದರೂ (ಕೈ ಹಿಡಿಯದಿದ್ದರೂ) ವಹಿಸಿದವರಿಗಿಂತ ವಿಶೇಷ ರೀತಿಯಲ್ಲಿ ಸಾಮಾಜಿಕ ಸಾಂಸ್ಕೃತಿಕ ಸೇವೆ ಸಲ್ಲಿಸಿದ್ದಾರೆ, ರಾಜಾಧಿರಾಜರನ್ನು ಅವರವರಿಗಿರುವ ಕೊರತೆ ಕೊರಗುಗಳನ್ನು ಪರಿಹರಿಸಿ ಉದ್ಧರಿಸಿದ್ದಾರೆ. ಇದು ದಿಟಕ್ಕೂ ಗಮನಿಸಬೇಕಾದ ವಿಚಾರವಾಗಿದೆ.

ಇಂದಿಗೆ ಸಾವಿರಾರು ವರುಷಗಳ ಹಿಂದೆ ಎಲ್ಲ ರಂಗಗಳಲ್ಲಿ ಸಾಧಿಸಿದ ಸತ್ ಸಾಧನೆಗಳು ಸರ್ವ್ವಾದರ್ಶವಾಗಿವೆ. ಅವು ಶಿವಾಚಾರ್ಯರ ಉಜ್ವಲ

ಪರಂಪರೆಗೆ ಆಧಾರವಾಗಿವೆ. ಆದಕ್ಕೆಲ್ಲ ಸಾಕಷ್ಟು ಸಾಹಿತ್ಯವಿದೆ ; ಆಧಾರವಿದೆ. ಆಧೇಯುವೂ ಆಗಿದೆ.

ವೀರಶೈವಕ್ಕೆ ಅತ್ಯಂತ ಪುರಾತನ ಇತಿಹಾಸವಿದೆ. ಉದ್ದಕ್ಕೂ ಶಿವಾಚಾರ್ಯರು ವೀರಶೈವ ಸಮಾಜವನ್ನು ಉತ್ಪಾದಿಸುವ ಪ್ರವರ್ತಿಸುವ ಸಂಸ್ಥಾಪಿಸುವ ಸೈದ್ಧಾಂತಿಸುವ ರೂಪಿಸುವ ಮೂಲಕ ಶಿವಾಚಾರ್ಯರು ಪರಿಪಾಲಿಸುತ್ತ ಬಂದಿದ್ದಾರೆ. ಶಿಷ್ಯರ ಹಿತವನ್ನೇ, ಏಳ್ಗೆಯನ್ನೇ ಲಕ್ಷಿಸುತ್ತ ಬಂದಿದ್ದಾರೆ. ಶಿವಾಚಾರ್ಯರ ಜೀವನವೇ ಶಿಷ್ಯ ಸಮಾಜ : ಶಿಷ್ಯ ಸಮಾಜವೇ ಜೀವನ. ಪರ ಸಮಯದವರ ಆಕರ್ಷಣ-ಆಕ್ರಮಣಗಳನ್ನು ಮೆಟ್ಟಿ ವೀರಶೈವವನ್ನು ಎತ್ತಿ ಹಿಡಿಯುತ್ತ ಬಂದಿರುವರು ; ಬರುತ್ತಿರುವರು, ವೀರಶೈವ ಧರ್ಮ ಸಂಸ್ಕೃತಿಯನ್ನು ಚೈತನ್ಯ ಪೂರ್ಣವಾಗಿಸಿ ಪ್ರಗತಿಶೀಲವನ್ನಾಗಿಸಿದ ನಿದರ್ಶನಗಳಿಗೇನೂ ಕಡಿಮೆಯಿಲ್ಲ. ಶಿವಾಚಾರ್ಯರು ಪರ ಧರ್ಮದವರನ್ನು ಕ್ರೂರವಾಗಿ ಕಂಡ ಉದಾಹರಣೆ ಒಂದೂ ಇಲ್ಲ. ಪರಧರ್ಮ ಸಹಿಷ್ಣುಗಳಾಗಿದ್ದರು. ಮತ ಮತಗಳ ಹೋರಾಟವಾಗಲಿ. ರಕ್ತಪಾತವಾಗಲಿ ಶಿವಾಚಾರ್ಯರ ಇತಿಹಾಸದಲ್ಲಿ ಆದುದಿಲ್ಲ ; ಆಗಿಲ್ಲ. ಶಿವಾಚಾರ್ಯರು ರಾಜರಂತೆ ಶಿಕ್ಷಣ ಶಿಲ್ಪ ಸಂಗೀತ-ಸಕ್ರಿಯತಾದಿಗಳಿಗೆ ಆಶ್ರಮವಿತ್ತು ಅಭಿವೃದ್ಧಿ ಪಡಿಸಿದರು. ಭಾಷೆ-ಕಲೆ ಮತ್ತು ಸಾಹಿತ್ಯಾದಿಗಳನ್ನು ಬೆಳೆಸಿರುವರು. ಶಿವಾಚಾರ್ಯರ ಇತಿಹಾಸವೆಂದರೆ ವೀರಶೈವವು ಮುಂದುವರಿದ ಸುಸಂಸ್ಕೃತವಾದ ಇತಿಹಾಸವೆಂದೇ ಹೇಳಬೇಕು. ಇದರಿಂದಾಗಿ ವೀರಶೈವವು ವಿಶಿಷ್ಟ ಧರ್ಮ-ಸಮನ್ವಯ ಧರ್ಮವೆಂದೆನಿಸಿಬೆ. ವೀರಶೈವದ ವಿಶಿಷ್ಟ ಪ್ರಗತಿಯ ನಾನಾ ಮುಖಗಳನ್ನು ತಿಳಿಯಬೇಕಾದರೆ ಶಿವರುದ್ರಾಗಮಗಳನ್ನು ಸಾದ್ಯಂತವಾಗಿ ಅಧ್ಯಯನಿಸಬೇಕಾಗುವುದು. ಆಗಮ ವಾಙ್ಮಯವೇ ವೀರಶೈವಾಕರ !

# ಕಾಯಕ - ದಾಸೋಹ ಉಗಮ-ನಿಗಮ :

## (ಒಂದು ಐತಿಹಾಸಿಕ ವಾಸ್ತವ ಚಿಂತನ)

ಕಾಯಕ ಎಂದಿನದು ? ದಾಸೋಹದ ಉಗಮ ಯಾವ ಕಾಲದ್ದು ? ಇವು ನಡೆದು ಬಂದ ಹೊಲಬು ಎಂತಹದು, ಯಾರಿಂದ ? ಇವು ಇಂದಿಗೂ ಬಿಡಿಸಲಾಗದ ಒಗಟಾಗಿವೆ ! ಬಿಚ್ಚಬಾರದ ಕಗ್ಗಂಟಾಗಿವೆ. ನಿರ್ಮತ್ಸರದ ಸಂಶೋಧನ ಹೊಲಬಿನಲ್ಲಿ ಹೆಜ್ಜೆ ಹಾಕಿದರೆ ಇವೇನು ಬಿಡಿಸಲಾರದ ಒಗಟಲ್ಲ ಬಿಚ್ಚಬಾರದ ಕಗ್ಗಂಟಲ್ಲ ಎಂಬುದು ಸಹಜವಾಗಿ ತಿಳಿದು ಬರುತ್ತದೆ.

ಇತ್ತೀಚೆಗೆ ಏನೆಲ್ಲವೂ ಹನ್ನೆರಡನೆಯ ಶತಮಾನದವೆಂದು ನಿರೂಪಿಸುವ ಅಸಹಜ ವೃತ್ತಿ ಬೆಳೆದು ಬರುತ್ತಿದೆ ! ಬಂದಿದೆ. 'ಸುಳ್ಳನ್ನು ನೂರು ಸಲ ಹೇಳಿದರೆ ಅದೇ ದಿಟ' ಎಂಬ ರೂಢಿ ನುಡಿಗೆ ಇದು ಹೊರತಾಗಿಲ್ಲ. ವಾಸ್ತವ ಗಾಗಿ, ವಿಶೋಧಿಸಿದಲ್ಲಿ ಇವು ಪರಿವಿಡಿದು ಅನಾದಿ–ಆದಿ ಕಾಲದವುಗಳೆಂಬುದು ಮನವರಿಕೆಯಾಗದಿರದು.

ಕಾಯಕ ಪುರಾತನದ್ದು. ಪುರಾತನ ಪ್ರಮುಥಾಗ್ರಗಣ್ಯನಾದ ವೀರ ಭದ್ರದೇವನ ಕಾಲದ್ದು. ಆತನ ಕಾಲ ಅದೊಂದು ಕಾಯಕ ಯುಗ. ಸಾಮಾಜಿಕವಾಗಿ ಕಾಯಕ ಸಿದ್ಧಾಂತ ಸಂಸ್ಥಾಪಕರು ವೀರಭದ್ರ–ಭದ್ರಕಾಳಿ ಭಾವನಿಯರು. ಅವರ ಆ ಕಾಯಕ ಕ್ರಾಂತಿಯಲ್ಲಿ ವೈಯಕ್ತಿಕ ಜೀವನದ ಸೋಂಕಿಲ್ಲ. ದುಡಿದು ತಂದು ದಾಸೋಹ ಮಾಡುವ, ಮಾಡಿ ಜಂಗಮ ರನ್ನು ನಿಷ್ಕ್ರಿಯರನ್ನಾಗಿಸುವ ಕಾಯಕಾಚರಣೆ ಅವರದಲ್ಲ. ಅವರ ಕಾಯಕ ತಂದುಣ್ಣುವ–ಉಣ್ಣಿಸುವ ವೃತ್ತಿಯಲ್ಲ. ಸಾಮಾಜಿಕರಿಗೆ ಬಂದೊದಗಿದ ಕಂಟಕಗಳನ್ನು ಅಸಹಾಯಕತೆಯನ್ನು ದಲಿತರನ್ನು ನಿರ್ವಾಸಿತರನ್ನು ಮನೆ ಮಠ ಗಳನ್ನು ಕಳೆದುಕೊಂಡು ನಿರಾಶ್ರಿತರಾದವರನ್ನು ಯಾವ ಪ್ರತಿಫಲಾಕಾಂಕ್ಷೆ ಯಿಲ್ಲದೆ ಪಡೆಯದೆ ತ್ಯಾಗ ಶೀಲರಾಗಿ ಸಹಜಶೀಲರಾಗಿ ಅವರವರಿಗೆ ನೆರವಾಗು ವುದೇ ವೀರಭದ್ರನ–ಮತ್ತು ಆತನ ವೀರಗಣರ ಕಾಯಕ ಕಲೆಯಾಗಿತ್ತು.

ಸ್ವಾರ್ಥ ಸುಖಕ್ಕಾಗಿ ಆಧ್ಯಾತ್ಮ ಸಾಧನಕ್ಕಾಗಿ ಮೋಕ್ಷಪ್ರಾಪ್ತಿಗಾಗಿ ಅವರೆಂದಿಗೂ ಕಾಯಕವಂತರಾಗಲಿಲ್ಲ. ಕೇವಲ ಸಾಮಾಜಿಕ ಸಂಸ್ಕೃತಿಯ ಮತ್ತು ಸಾಮಾಜಿಕರ ಮತ್ತು ಸಾರ್ವಜನಿಕರ ಅಭಿವೃದ್ಧಿ-ಅಭ್ಯುದಯಗಳಿಗಾಗಿ ಕಾಯಕಗಳನ್ನು ಕೈಕೊಳ್ಳುವಂತೆ ವೀರೇಶನು ವೀರಗಣರನ್ನು ನಿಯಮಿಸಿದ್ದನು. ತಾನೂ ತನ್ನ ಪತ್ನಿ ಭದ್ರಕಾಳಿ ಭವಾನಿಯೂ ಸಹಜ ಕಾಯಕ, ಸಾಮಾಜಿಕ, ಸಾಮೂಹಿಕ ಕಾಯಕಗಳನ್ನು ನೆರವೇರಿಸುತ್ತಿದ್ದರು. ನಿದರ್ಶನಕ್ಕಾಗಿ :

೧) ಪುರವಂತಿಕೆ ಕಾಯಕ : ಇದನ್ನು ವೀರ ದಂಪತಿಗಳು ವೀರಗಣರು ಸಹಜವಾಗಿ ನೆರವೇರಿಸುತ್ತಿದ್ದರು. ಅಂದು ಆರ್ಯರ ದಾಳಿ ವೀರಶೈವ ಸಾಮಾಜಿಕ ಮತ್ತು ದ್ರಾವಿಡ ಸಾರ್ವಜನಿಕ ಮನೆಗಳ ಮೇಲೆ ನಡೆದು, ಅವರುಗಳ ಮನೆಗಳನ್ನು ಕೆಡವಿ ಹೋಗುತ್ತಿದ್ದರು. ಅದರಿಂದ ಅವರನ್ನು ಪುರಂದರರೆನ್ನುತ್ತಿದ್ದರು ; ಈಗಲೂ ಅದೇ ಹೆಸರಿನಿಂದ ಹೆಸರಾಗಿದ್ದಾರೆ. ಇಂದ್ರ ಪ್ರಮುಖರಾದ ಆರ್ಯರು ಊರುಗಳನ್ನು ಹಾಳು ಮಾಡುವ ಪುರಂದರರಾದರು. ಮನೆಗಳನ್ನು ಕಳೆದುಕೊಂಡವರು ಸಾಮಾಜಿಕರೇ ಇರಲಿ, ಸಾರ್ವಜನಿಕರೇ ಇರಲಿ, ಅವನ್ನೆಲ್ಲ ಈ ಪುರವಂತ ಕಾಯಕದವರು ಹೋಗಿ ಪುನರ್ನಿರ್ಮಾಣ ಮಾಡಿ. ಕಳೆದುಕೊಂಡವರಿಗೆ ಒದಗಿಸಿ ಪುರವಂತ (ಊರುಳ್ಳವ)ರನ್ನಾಗಿಸುತ್ತಿದ್ದರು. ಈ ಕಾಯಕದಲ್ಲಿ ಅವರುಗಳಿಂದ ಏನನ್ನು ಪಡೆಯುತ್ತಿರಲಿಲ್ಲ. ಬೇರೆ ರುದ್ರದೇವನಿಂದ ಬಂದ ಕೃಷಿಕಾಯಕವನ್ನು ಪುರವಂತ ಕಾಯಕದವರು ಉಳಿದ ಕಾಲದಲ್ಲಿ ಮಾಡಿ ಬೆಳೆದು ಬಂದುದರಲ್ಲಿಯೇ ಬಾಳುತ್ತಿದ್ದರಲ್ಲದೆ, ಮನೆಕಳಕೊಂಡವರಿಂದ ಏನನ್ನು ಪಡೆಯುತ್ತಿರಲಿಲ್ಲ. ಈ ಸತ್ಯಶುದ್ಧ ಸಹಜ ಕಾಯಕದಲ್ಲಿ ಅಗ್ರಗಣ್ಯರಾದ ವೀರಭದ್ರ - ಭದ್ರಕಾಳಿಭವಾನಿಯರನ್ನು ಪುರದಪ್ಪ-ಪುರದವ್ವ ಎಂದು ಹೇಳುವ ವಾಡಿಕೆ ಇಂದಿಗೂ ನಡೆದು ಬಂದಿದೆ, ಆರ್ಯರ ದಾಳಿಯಿಂದ ಪುರಗಳನ್ನು ಕಳಕೊಂಡವರಿಗೆ ಮರಳಿ ಪುರಗಳನ್ನು ಒದಗಿಸಿಕೊಡುವವರಿಗೆ 'ಪುರದ' ಎಂಬ ಅನ್ವರ್ಥನಾಮುವದು.

೨) ಲಿಂಗದ ವೀರರು : ಇದು ವೀರೇಶನ ಎರಡನೇ ಕಾಯಕ. ಸಾಮಾಜಿಕ ಕಾಯಕ. ಆರ್ಯರು ಅಂದಿನ ಶಿರೋಧಾರಿಗಳಾದ ವೀರಶೈವರ ಲಿಂಗಗಳನ್ನು ಕಿತ್ತುಕೊಳ್ಳುವ ಮೂಲಕ ದಾಳಿ ಮಾಡುತ್ತಿದ್ದರು. ಅವರನ್ನು

ದಂಡಿಸಲು 'ಲಿಂಗದ ವೀರರು' ನಿಯಮಿತರಾಗಿದ್ದರು. ಆರ್ಯರು ದ್ವೇಷಾಸೂಯೆಗಳಿಂದ ಕಿತ್ತೊಯ್ಯುದ್ದಲಿಂಗಗಳನ್ನು ಲಿಂಗದ ವೀರರು ಮರಳಿ ಪಡೆಯುತ್ತಿದ್ದರಲ್ಲದೆ ಆರ್ಯರನ್ನು ಮರಳಿ ದಾಳಿಯನ್ನು ಮಾಡದಂತೆ ದಂಡಿಸುತ್ತಿದ್ದರು. ಇದಕ್ಕಾಗಿ ಲಿಂಗದ ವೀರರು ವೀರಶೈವರಿಂದ ಯಾವ ಪ್ರತಿಫಲವನ್ನು ಪಡೆಯುತ್ತಿರಲಿಲ್ಲ. ಸಾಮಾಜಿಕರಿಗೆ ಕಳೆದುಕೊಂಡ ಲಿಂಗಗಳನ್ನೊದಗಿಸಿ ಅವರ ಅಂಗರಕ್ಷಣೆಯನ್ನು ನಿಸ್ಪೃಹರಾಗಿ ನೆರವೇರಿಸುತ್ತಿದ್ದರು. ವೀರೇಶನಿಂದ ಪ್ರಚೋದಿತರಾಗಿ ತಮ್ಮ ವೀರಶ್ರೀಯಿಂದ ಲಿಂಗಕಾಯಕವನ್ನು ಕೈಕೊಂಡ ಕಾರಣ ಇವರಿಗೆ 'ಲಿಂಗದವೀರ'ರೆಂಬ ಸಂಗತವಾದ ಅನ್ವರ್ಥವಾದ ಹೆಸರು ಬಂದಿದೆ. ರೋಮಾಂಚನಕಾರಿಯಾದ ಈ ನಾಮ ಅಂದಿನ ಇಷ್ಟ ಲಿಂಗತತ್ತ್ವೇತಿಹಾಸವನ್ನು ನಿರೂಪಿಸುತ್ತದೆ. ಅಲ್ಲದೆ ಲಿಂಗದ ವೀರರ ಲಿಂಗವಂತಿಕೆಯ ಚಾರಿತ್ರ್ಯದ್ಯೋತಕವೂ ಆಗಿದೆ.

೩) ವೀರಗಾಸೆಯವರು : ಇವರದು ಸಾರ್ವಜನಿಕ ನಿಷ್ಠ ಕಾಯಕ ! ದ್ರಾವಿಡರು ಯಾರೇ ಇರಲಿ, ಅವರ ಧನ, ಧಾನ್ಯ, ಹಸು ಮೊದಲಾದ ಆಸ್ತಿಪಾಸ್ತಿಗಳ ಮೇಲೆ ಆರ್ಯರು ದಾಳಿ ಮಾಡಿ ದ್ರಾವಿಡರಿಂದ ಕಿತ್ತುಕೊಂಡೊಯ್ದಲ್ಲಿ, ಅವರ ಮೇಲೆ ವೀರಗಚ್ಚೆಯುಳ್ಳವರು ಏರಿ ಹೋಗಿ, ಅವರಿಂದ ದ್ರಾವಿಡರ ಆಸ್ತಿ ಪಾಸ್ತಿಗಳನ್ನು ಮರಳಿ ಪಡೆದು ದ್ರಾವಿಡ ದಲಿತರಿಗಿತ್ತು ಉದ್ಧರಿಸುತ್ತಿದ್ದರು.

ಅಂದಿನ ಈ ತ್ರಿವಿಧ ಕಾಯಕವಂತರು ಸ್ವಯಸಂಪಾದನೆಗಾಗಿಯಾಗಲಿ, ವೈಯಕ್ತಿಕ ಕೌಟುಂಬಿಕ ಸೀಮಿತ ದಾಸೋಹಕ್ಕಾಗಲಿ ತಮ್ಮ ಆ ಕಾಯಕಗಳನ್ನು ಬಳಸಿಕೊಳ್ಳುತ್ತಿರಲಿಲ್ಲ. ಸಮಾಜಕ್ಕೆ ಹೊರೆಯಾಗಿ ಬಾಳುತ್ತಿರಲಿಲ್ಲ. ಪರೋಪಜೀವಿಗಳಾಗಿ ಬದುಕುತ್ತಿರಲಿಲ್ಲ. ಹಾಗದ ಕಾಯಕ ಅವರಲ್ಲಿರಲಿಲ್ಲ. ಸಂಪಾದನೆಗೆ ಸಾಧನವಾದುದು ಸತ್ಕಾಯಕವಲ್ಲ. ಪುರಾತನ ಪ್ರಮಥರಿಗೆಲ್ಲ ಪ್ರಮುಖನಾದ ವೀರೇಶನು ಯಾವ ಅಧಿಕಾರದ ಆಸೆಗೆ ಬೀಳದೆ, ತಾನು ಮಹಾದಾನಿಯೆಂಬ ದುರಭಿಮಾನಕ್ಕೆಡೆಗುಡದೆ, ಯಾವ ಪ್ರಾಣಿಯನ್ನೂ ವಾಹನವನ್ನಾಗಿಸಿಕೊಂಡು ಪ್ರಾಣಿ ಹಿಂಸೆಗೆ ಗುರಿಯಾಗದೆ, ಪ್ರತಿಯಾಗಿ ಸಕಲ ಪ್ರಾಣಿಗಳಿಗೆ ಹಿತವನ್ನೆ ಬಯಸಿ, ದ್ವೇಷಿಗಳನ್ನೂ ಪುನರ್ಜೀವಂತರನ್ನಾಗಿಸಿ ಬಾಳಿ ಬೆಳಕಿಗೆ ಬಂದ ಮಹಾ

ಯುಗ ಪುರುಷ. ಆತನು ಅಂದು ಹಾಕಿಕೊಟ್ಟ ಕಾಯಕಗಳು ಸಾಮೂಹಿಕ ಸೂಚಕಗಳೇ ಹೊರತು ನೂತನ ಪ್ರಮಥರಂತೆ ವೈಯಕ್ತಿಕ ಸೂಚಕ ಕಾಯಕ ಗಳಾಗಿರಲಿಲ್ಲ. ವೈಯಕ್ತಿಕ ಕಾಯಕಗಳು ಕೀಳು ಮೇಲು ಎಂಬ ಬಗೆಗೆ ಇಂಬಾಗ ದಿರಲು ಸಾಧ್ಯವೇ ಇಲ್ಲ. ಪರಸ್ಪರ ವ್ಯತ್ಯಾಸಗಳ ಸೂಚಕಗಳೂ ಆಗಿ ನಿಂತಿವೆ, ನೂತನ ಪ್ರಮಥರಲ್ಲಿ ! ಸಮಾನತೆಯ ಭಾವನೆಗೆ ಮಾರಕಗಳಾಗಿ ಮುಂದು ವರಿದುದು ಮನವರಿಕೆಯಾಗದಿರದು. ಈ ಚಿಂತನೆಗೆ ಈ ವಿವರಣೆಗ ಇಂದಿನ ವಿಚಾರವಾದಿಗಳ ನೆರವಿದೆಯೆಂಬುದನ್ನು ಈ ಕೆಳಗೆ ಉದಹರಿಸಿದ ಡಾ|| ಪಿ. ವಿ. ನಾರಾಯಣ ಎಂಬವರು ೧೯೮೭ರಲ್ಲಿ ಪ್ರಕಟವಾದ 'ಮಹಾಂತ' ಎಂಬ ಇಲಕಿಲ್ಲಿನ ಶ್ರೀಗಳ ದ್ವಾದಶ ವಾರ್ಷಿಕೋತ್ಸವದ ಅಭಿನಂದನ ಗ್ರಂಥದಲ್ಲಿ ಬರೆ ದಿರುವ "ಕಾಯಕ-ದಾಸೋಹ" ಲೇಖನದ (ಪು-೨೯೯-೩೦೦) ಕೊನೆಯ ಅಭಿಪ್ರಾಯ ಇಂತಿದೆ :

"....ಕಾಯಕವು ಸೈದ್ಧಾಂತಿಕವಾಗಿ ಒಂದು ಆರ್ಥಿಕ ತತ್ತ್ವ ; ಆರ್ಥಿಕತೆ ಆಧ್ಯಾತ್ಮಿಕತೆಗಳನ್ನು ಒಗ್ಗೂಡಿಸುವ ಪ್ರಯತ್ನ. ಆದರೆ ಇಂತಹ ಅಮೂಲ್ಯ ತತ್ತ್ವವು ಅದೇಕೆ, ಕೊನೆಯ ಪಕ್ಷ, ವೀರಶೈವ ವ್ಯಾಪ್ತಿಯಲ್ಲಾದರೂ ಆಂತರಿಕ ವರ್ಗಗಳ ತರತಮ ಭಾವವನ್ನು ಅಳಿಸಲು ಕಾರಣವಾಗದೇ ಹೋಯಿತು ಎಂಬು ದನ್ನು ವಿವೇಚಿಸಬೇಕಾಗಿದೆ. ಮೊದಲನೆಯದಾಗಿ, ಕಾಯಕಗಳ ವ್ಯತ್ಯಾಸ ವೆಂದರೆ ಆಂತರಿಕ ವ್ಯಕ್ತಿ ಮೌಲ್ಯದ ವ್ಯತ್ಯಾಸವಲ್ಲ ಎಂಬ ವಚನಕಾರರ ಅಭಿ ಪ್ರಾಯವನ್ನು....ವೀರಶೈವ ಸಮಾಜವೇಕೆ ಅದನ್ನು ಅನುಷ್ಠಾನಕ್ಕೆ ತಾರದೆ ಹೋಯಿತು ? ಜಾತಿಗಳಿಗೆ ವ್ಯಕ್ತಿಗಳೇ ಅಥವಾ ಅವುಗಳ ಆನುವಂಶಿಕ ಪಾಲ ನೆಯೆ ಕಾರಣ. ಜಾತಿಗಳಲ್ಲಿನ ಪರಸ್ಪರ ಭಿನ್ನತೆಗೆ ವ್ಯಕ್ತಿಗಳ ಭಿನ್ನತೆಯೇ ಕಾರಣ. ಯಾವ ಜಾತಿ ಮೇಲೆಂದು ಅಥವಾ ಕೀಳೆಂದು ಪರಿಗಣಿತವಾಗಿತ್ತೊ ಅದಕ್ಕೆ ಆಯಾ ವ್ಯಕ್ತಿಗಳು ಮೇಲು ಅಥವಾ ಕೀಳೆಂದು ಪರಿಗಣಿತವಾದದ್ದೇ ಕಾರಣ-ಎಂಬಿತ್ಯಾದಿ ಅಂಶಗಳನ್ನು ಬಸವಾದಿಗಳು ಗಮನಿಸಿದ್ದರೆಂದು ನಾವಾ ಗಲೇ ನೋಡಿದ್ದೇವೆ. ಎಲ್ಲ ಕಾಯಕಗಳೂ ಮೂಲತಃ ಒಂದೇ ಎಂದು ಹೇಳಿದ ಶರಣರು ಒಂದು ರೀತಿಯಲ್ಲಿ ವ್ಯಕ್ತಿಗಳ ಆನುವಂಶಿಕತೆಯ ಮುಂದುವರಿಕೆ ಯನ್ನೇ ಅನುಮೋದಿಸಿದರು ; ಅಥವಾ....ಅಂತರ್ಜಾತೀಯ ವಿವಾಹಗಳಿಗೆ

ಪ್ರೋತ್ಸಾಹವಿತ್ತ ಶರಣರು ಆದಕ್ಕೂ ಮುಂದೆ ವ್ಯಕ್ತಿಗಳ ಅವಲಂಬನೆಗೆ ಮುಕ್ತ ಪರಿಸರವನ್ನು ಸೃಷ್ಟಿಸಿದ್ದಿದ್ದರೆ ಮುಂದೆ ವೀರಶೈವರಲ್ಲಿ ಜಾತಿ ವೈಷಮ್ಯವುಳಿಯು ತ್ತಿರಲಿಲ್ಲ, ಎನ್ನಿಸುತ್ತದೆ. ಪೂರ್ವಾಶ್ರಮದಲ್ಲಿ ಬುದ್ಧಿ ಜೀವಿಯಾದವನು ವೀರ ಶೈವಕ್ಕೆ ಬಂದ ಮೇಲೆಯೂ ಬುದ್ಧಿಜೀವಿಯಾಗಿಯೇ ಮುಂದುವರಿದ ; ಮಡಿ ವಾಳನಾಗಿಯೇ ಮುಂದುವರಿದ ; ತುರುಗಾಹಿ ತುರುಗಾಹಿಯೇ ; ಅಂಬಿಗ ಅಂಬಿಗನೇ ; ಹೀಗೆ ಇದರಿಂದಾಗಿ ವೀರಶೈವ ಪೂರ್ವದ ಶ್ರೇಣೀಕೃತ ಸಮಾಜ ವೀರಶೈವದಲ್ಲಿಯೂ ಮುಂದುವರಿಯಿತು ; ಮತ ಬದಲಾಯಿಸಿತು ; ಆದರೆ ಜಾತಿ ಹಾಗೇ ಉಳಿಯಿತು. ಇಡೀ ವಚನ ಅಥವಾ ವೀರಶೈವ ಸಾಹಿತ್ಯ ಸಮು ದಾಯದಲ್ಲಿ ತನ್ನ ಆನುವಂಶಿಕ ವ್ಯಕ್ತಿಯನ್ನು ಬದಲಾಯಿಸಿದ ವ್ಯಕ್ತಿಯೊಬ್ಬ ನಮಗೆ ಸಿಗುವುದಿಲ್ಲ. (ಈಚಿನವರೆಗೆ)." ಎಂಬೀ ಡಾ॥ ಪಿ. ವಿ. ನಾರಾಯಣರ ವೈಚಾರಿಕ ವಿಮರ್ಶಾ ಪರಿಪ್ಲುತ ಅಭಿಪ್ರಾಯ ನಮ್ಮ ಮೇಲಿನ ಅಭಿಪ್ರಾಯ ವನ್ನೇ ಸ್ಪಷ್ಟವಾಗಿ ಎತ್ತಿ ಹಿಡಿದೆ. ಆಚಾರ್ಯರು ಜಾತಿವಾದಿಗಳೆಂದು ಸುಳ್ಳಿನ ಕಂತೆಯನ್ನು ಕಟ್ಟುವ ಇಂದಿನ ಶರಣವಾದಿಗಳು ಇದನ್ನು ತಮ್ಮ ಕಣ್ಣರಳಿಸಿ ಕಾಣಬೇಕು. ಕಂಡು ತಮ್ಮ ಮತ್ಸರ ಭಾವವನ್ನು ಬಿಡಬೇಕು. ಪುರಾತನ ಮತ್ತು ನೂತನ ಕಾಯಕಗಳ ಗಜ–ಅಜಾಂತರಗಳನ್ನು ಗುರುತಿಸಿಕೊಳ್ಳಬೇಕು. ವೀರೇಶನಿಂದ ವಿಶಾಲ ಮನೋಭಾವದಲ್ಲಿ ಉಗಮಗೊಂಡು ನಡೆದು ಬಂದ ಕಾಯಕ ಕಲ್ಯಾಣದ ಶರಣರಲ್ಲಿ ಸಂಕುಚಿತಗೊಳ್ಳುವಂತಾದುದು ದುರದೃಷ್ಟಕರ! ಇದರಿಂದ ಇದು ನಿಲ್ಲಲಿಲ್ಲ. ಶ್ರೀ ರೇವಣಸಿದ್ಧ ಜಗದ್ಗುರುವರ್ಯರು ವೀರೇಶನ ವಿಶಾಲ ಕಾಯಕ ತತ್ತ್ವವನ್ನೇ ಅನುಸರಿಸಿ ಕಾಯಕ ತತ್ತ್ವದಲ್ಲಿ ಅಪ್ರತಿಮವಾಗಿ ಪ್ರಖ್ಯಾತರಾಗಿದ್ದಾರೆ. ಪ್ರತಿಫಲದ ಕಾಯಕವನ್ನಾಗಲಿ, ಸೀಮಿತ ಕಾಯಕ ಗಳನ್ನಾಗಲಿ ಅವರು ಕೈಕೊಳ್ಳಲಿಲ್ಲ. ಸಾರ್ವಜನಿಕೋಪಯೋಗಿಯಾದ ವೈವಿಧ್ಯ ಕಾಯಕಗಳನ್ನು ಕೈಕೊಂಡರು.

## ದಾಸೋಹ

ಕಾಯಕ ವೀರಭದ್ರನಿಂದ ಬಂದುದಾದರೆ, ದಾಸೋಹ ಜಗದಾಚಾರ್ಯ ರಾದ ಆದಿ ರೇಣುಕ ಭಗವತ್ಪಾದರಿಂದ ಬಂದುದು. ಶಿವಾಗಮ ನಿಷ್ಠವಾದುದು.

# ಸರ್ವಾದರ್ಶ ಸಮಾಜವಾದಿಗಳು ಶ್ರೀ ರೇಣುಕ ಜಗದಾಚಾರ್ಯರು

## (ಅದೊಂದು ದಾಸೋಹಯುಗ)

ಆದಿ ರೇಣುಕರ ಆ ಕಾಲ ಅದೊಂದು ದಾಸೋಹಯುಗ; ಭಾರತದ ಎಲ್ಲೆಲ್ಲಿಯೂ ದಾಸೋಹ; ಎಲ್ಲ ಜನಾಂಗದವರಿಗೂ ದಾಸೋಹ. ಈ ದಿಸೆಯಲ್ಲಿ ಜಗದಾಚಾರ್ಯರದು ಸರ್ವಾದರ್ಶ ಸಮಾಜವಾದ. ಅವರ ಆ ಸಮಾಜವಾದಕ್ಕೆ ಸರಿಬರಿಯೂ ಸಮಾಜವಾದ ಅಲ್ಲಿಂದೀಚೆಗೆ ಆಚರಣೆಯಲ್ಲಿ ಬಂದಿಲ್ಲ ಯಾರಿಂದಲು ! ಜಗದಾಚಾರರ ಸಮಾಜವಾದ ಅಸೀಮಿತ; ಅಪರಿಮಿತ, 'ಯತ್ರ ಜೀವಸ್ತತ್ರಶಿವಃ' ಎಂಬ ವಿಶಾಲ ಮನೋಭಾವದ ಸಮಾಜವಾದವನ್ನು ದಾಸೋಹದ ಮಾಧ್ಯಮದಲ್ಲಿ ವಿಶೇಷವಾಗಿ ವಿಸ್ತೃತಗೊಳಿಸಿದರು. ಪ್ರಸಾದಾಶೀರ್ವಾದ ಮೂಲಕ ಮೂಲಭೂತ ಮಾನವಕುಲಕ್ಕೆ ಕ್ಷೇಮವನ್ನು ಕಲ್ಯಾಣವನ್ನು ತಮ್ಮ ದಾಸೋಹ ಮೂಲಕ ಸಮಾಜವಾದವನ್ನು ಸವಿಸ್ತಾರಗೊಳಿಸಿದರು. ಪ್ರಗತಿಪಥದಲ್ಲಿ ಪ್ರಧಾನಕ್ರಾಂತಿಯನ್ನು ಪ್ರಧಾನವಾಗಿ ಪ್ರಗತಿ ಪಥದಲ್ಲಿ ನಡೆಸಿದರು; ಪ್ರಮುಖ ತಿರುವನ್ನು ಹರವನ್ನು ತಂದರು ಸಮಾಜವಾದಕ್ಕೆ ! ಜಗದಾಚಾರ್ಯರ ಆ ಮಹತ್ತಮ ದಾಸೋಹಾಚರಣೆಯಿಂದ ಬೃಹತ್ ಸಮಾಜವಾದದ ಬೃಹತ್‌ಕ್ರಾಂತಿಯು ಅಂದಿನ ಭಾರತೀಯ ಜೀವನಕ್ಕೊಂದು ಹೊಸ ಚೇತನವನ್ನೆ ತಂದಿತು; ಜೀವನವನ್ನೇ ತೃಪ್ತಿ ಮುಖಕ್ಕೆ ತಂದಿತು; ಕೋಟ್ಯಂತರ ಜನರನ್ನು ಪ್ರಸನ್ನಭಾವಕ್ಕೆ ತಂದುದಾಯಿತು. ಅಲ್ಲದೆ ದಾಸೋಹಧರ್ಮದ ಮೌಲ್ಯವನ್ನು ಅಸಂಖ್ಯಾತರಿಗೆ ಉಂಟುಮಾಡಿತು. ಮತ್ತು ಸರ್ವ ಸಹಜೀವನದ ಮಹಾಮಾರ್ಗವನ್ನು ತೋರಿಸಿದಂತಾಯಿತು. ಪ್ರಸಾದ ದಾನಿಗಳಾಗಿ ಮುಂದೆಬರಲು ವಿಡಂಬಕ ಶತಾನಂದಾದಿ ರಾಜಪ್ರಜೆಗಳಿಗೆ ಸ್ಫೂರ್ತಿಯನ್ನು ತಂದಿತು; ಯಶಸ್ವಿಯಾಗಿ ಸಾಗಿಸಲು ಸಾಟಿಲಯ ಶಕ್ತಿಯನ್ನು ತಂದಿತು, ಪರಸ್ಪರ ಪ್ರೇಮ ಪೂರ್ಣ ಸೌಹಾರ್ದತೆಗೆ ಎಡೆಮಾಡಿಕೊಟ್ಟಿತು. ದಾಸೋಹ ಕ್ರಾಂತಿಯ ಹೊಸ ಶಕೆಯನ್ನು ಆರಂಭಿಸಿತು. ದಾಸೋಹ ಧರ್ಮಕ್ಕೆ ಭಾವ್ಯ ಭವಿತವ್ಯವನ್ನು ತಂದಿತು. ಭಾವ

ಪೂರ್ಣ ಕ್ರಿಯಾಶೀಲತೆಯ ಭವಿತವ್ಯವನ್ನು ತಂದಿತು. ಅಂತೆಯೇ ದೇವರ ದಾಸಮಯ್ಯ ಬಸವಣ್ಣ ಮೊದಲಾದ ಆಧುನಿಕರಿಗೂ ಮಾರ್ಗದರ್ಶನವನ್ನು ಬರಿಸಿತು. ಸಂಘಟನ ಕಾರ್ಯಕ್ಕೆ ಸಹಜವೂ ಸುಲಭವೂ ಆದ ಹೆಬ್ಬೀದಿಯನ್ನು ಹಾಕಿಕೊಟ್ಟಿತು. ಮುನ್ನಡೆಯಲು ಪವಿತ್ರಪ್ರೇರಣೆಯನ್ನುಂಟು ಮಾಡಿತು. ಲೋಭ ಮೋಹ ಮದ ಮತ್ಸರಗಳಿಲ್ಲವಂತಾಗಿಸಿತು. ಶಾಂತಿಯುತ ಕಾಂತಿ ಸಹಿತ ಜೀವನವನ್ನು ರೂಪಿಸಲು ಅನುವಾಯಿತು. ಪ್ರಗತಿ ಸಾಧನೆಯ ನವ ಜೀವನವನ್ನು ರೂಪಿಸಿತು.

ಆದಿರೇಣುಕರ ದಾಸೋಹ ಧರ್ಮಕ್ಕೆ ಅವರಿವರು, ಅಲ್ಲಲ್ಲಿ ಎಂಬ ಕವಲಿರ ಲಿಲ್ಲ. ಸರ್ವಸಮತಾಭಾವದಿಂದ ನಡೆಯುತ್ತಿತ್ತು. ವ್ಯಾಪಕವಾಗಿ ನಡೆಯು ತ್ತಿತ್ತು. ಆ ಪ್ರಾಸಾದಿಕ ದಾಸೋಹ ಪ್ರಭಾವವು ಜನತೆಯಲ್ಲಿ ಸ್ಥಿರಮುದ್ರಿತ ವಾಗಿತ್ತು ಸಂತೃಪ್ತಿಯನ್ನು ಸರ್ವರಿಗೆ ತರುತ್ತಿತ್ತು. ಎಲ್ಲೆಲ್ಲಿ ನಡೆಯುತ್ತಿತ್ತೆಂಬು ದನ್ನಿಲ್ಲಿ ಆಲಿಸಿ.

"ಗಹನೇ ಗಹ್ವರೇ ಶೈಲೇ ಪಥಿ ಗ್ರಾಮೇ ಗೃಹೇಽಪಿಚ ।
ಅರಣ್ಯೇ ಚಾಹ್ನೀ ರಾತ್ರೌ ಚ ಜ್ವರ ಪೀಡಾಗತೇಷುಚ ॥
ಕಾರಾಗೃಹೇ ವಿಪ್ರಸಂಘೇ ಕ್ಷುದ್ರ ಜಂತು ಭಯಾನ್ವಿತೇ ।
ವ್ಯಾಘ್ರಗ್ರಸ್ತೇ ಜಲಭಯೇ ವೃಕ್ಷಪಾತೇ ಚ ಮಾರಣೇ ॥
ವಿಶೇಷೇಷು ಜನಸ್ತೋಮ ವ್ರತಗೋಷ್ಯೇಷು ಹೇಪ್ರಿಯೆ ।
ಪ್ರಸಾದಮೇವ ಶೀಲಾನಾಂ ಶೀಲಂ ಮಹತ್ತರಂ ಸ್ಮೃತಂ ॥
ಭಕ್ತಿದಂ ಮುಕ್ತಿದಂ ತತ್ತು ಕುರು ತ್ವಂ ಸರ್ವದಾಶಿವೇ ।"

ಧರ್ಮದಾಸೋಹಗಳನ್ನಿಡುವ ನೆಲೆಗಳಿವು. ಇದರಿಂದ ಧರ್ಮದಾಸೋಹ ವ್ಯಾಪ್ತಿ ದೀಪ್ತಿಗಳು ಹೆಚ್ಚಿದ್ದವು. ಜನಹಿತಕಾರ್ಯ ಜನಜನಿತವಾಯಿತು. ಸಮಾಜವಾದ ಬರೀ ಹಾದಿದಲ್ಲಿರಲಿಲ್ಲ. ವ್ಯಾಪಕವಾದ ವಿಶಿಷ್ಟವಾದ ಕಾರ್ಯ ಕರಣಗಳಲ್ಲಿದ್ದಿತು. ಇದರಿಂದ ಆದಿರೇಣುಕರು ಸಮಾಜವಾದಿಗಳೂ ಮಾನವತಾ ವಾದಿಗಳೂ ಆಗಿದ್ದರೆಂಬುದು ದಿಟಕ್ಕೆ ದಿಟ. ಸರ್ವಸನ್ಮಾನ್ಯರಾಗಿದ್ದರು.

## ೧೧ ನೆಯ ಶತಮಾನದ

# ಶಿವಾಚಾರ್ಯರ ಸರ್ವಾದರ್ಶ ಸಾಧನ !

ಹನ್ನೊಂದನೆಯ ಶತಮಾನದ ಶಿವಾಚಾರ್ಯರ ಸಾಧನ ಅಸಾಧಾರಣ ! ಶ್ರೀ ಸಾಮಾನ್ಯರನ್ನು ಸರ್ವಾಂಗೀಣವಾಗಿ ಎತ್ತಿ ಉದ್ಧರಿಸಿದ ಉದ್ದಾಮಕ್ರಾಂತಿ ಉದ್ದೀಪ್ತಕ್ರಾಂತಿ ! ಅಂದು ಬಡವರ ಬಾಳು ಗೋಳಿನದಾಗಿತ್ತು. ಅಸಹಾಯಕ ವಾಗಿತ್ತು. ಒಂದು ಕಡೆ ಬಡತನ; ಇನ್ನೊಂದು ಕಡೆ ಅರಸರ ಹಗರಣ; ಸಾಮಾಜಿಕ ಸಮಸ್ಯೆ. ಹೀಗೆ ಒಂದಲ್ಲ ಎರಡಲ್ಲ ಹಲವು ಹತ್ತು. ಜನತತ್ತರಿಸಿ ಹೋಗಿದ್ದಿತು. ಅಂತಹ ಸಮಯದಲ್ಲಿ ಸಾರ್ವಜನಿಕ ಪ್ರಧಾನವಾಗಿ ಕ್ರಾಂತಿ ಶಿವಾಚಾರ್ಯರಿಂದ ಆ ಶತಮಾನದುದ್ದಕ್ಕೂ ಸಾಗಿತ್ತು.

ಹನ್ನೊಂದನೆಯ ಶತಮಾನದ ಪೂರ್ವಾರ್ಧದಲ್ಲಿ ಶ್ರೀಶೈಲ ಪೀಠದ ಶ್ರೀ ಚಂದ್ರಗುಂಡ ಶಿವಾಚಾರ್ಯರು, ಶಿಷ್ಯ ದೇವರ ದಾಸಮಯ್ಯ ಮತ್ತು ಶಂಕರ ದಾಸಮಯ್ಯ, ದುಗ್ಗಳೆ ಸುಗ್ಗಳೆ ಅವರುಗಳಿಂದಾದರೆ, ಉತ್ತರಾರ್ಧದಲ್ಲಿ ಶ್ರೀ ಜ. ರೇವಣಸಿದ್ಧ ಶಿವಾಚಾರ್ಯ, ಶ್ರೀ ಜ. ಮರುಳಸಿದ್ಧ ಶಿವಾಚಾರ್ಯ, ಶ್ರೀ ಜ. ಏಕೋರಾಮಾರಾಧ್ಯರು ಮತ್ತು ಶ್ರೀ ಉರಿಲಿಂಗ ದೇವರು, ಕೊಂಡಗುಳಿ ಕೇಶಿ ರಾಜರು ಇವರುಗಳಿಂದ ಕ್ರಾಂತಿ ಸಾಗಿತು. ಮುಂದೆ ಇನ್ನಾರಿಂದಲೂ ಆಗದ ನೀಗದ ಅನನ್ಯ ಅಸಾಮಾನ್ಯ ಉತ್ಕ್ರಾಂತಿ ಉಜ್ವಲಿಸಿತು. ಹನ್ನೊಂದನೆಯ ಶತಮಾನದಲ್ಲಿಯೇ ವೀರಶೈವವು ವೈಭವದಿಂದ ಮೆರೆಯಿತು; ಸಮೃದ್ಧಿಯಾಗಿ ಸಂವೃದ್ಧಿಸಿತು. ಮುಂದಿನವರು ಏನನ್ನು ಮಾಡದಂತೆ ಮಾಡಲು ಉಳಿಯದಂತೆ ಕೊರತೆಯಿಲ್ಲದಂತೆ ಬೆಳದು ಬೆಳಗಿತು. ಅವರು ಒಂದೂರಲ್ಲಿ ನಿಂತು ಸೀಮಿತ ವಾಗಿ ಮಾಡಲಿಲ್ಲ. ಪ್ರಾಂತ ಮಾತ್ರವನ್ನಲ್ಲ ಪರಪ್ರಾಂತಗಳಲ್ಲಿಯೂ ಸುತ್ತಿ ಸುಳಿದು ನಿತ್ಯಶ್ರಮವ ಹೊತ್ತು ಅರ್ಥ ಅಧಿಕಾರಗಳಿಗೆ ಆಶಿಸದೆ ಅಧಿಕೃತ ಆತ್ಮ ಶಕ್ತಿಯಿಂದ ಕಳಾತ್ಮಕ ಕಾರಣಿಕ ತನದಿಂದ ಸ್ವಕೀಯ ಸತ್ಕಾಯಕಗಳಿಂದ ಬಡವ ಬಲ್ಲಿದರೆನ್ನದೆ ದಾಸೋಹಧರ್ಮವನ್ನು ಸೀಮಿತಗೊಳಿಸದೆ ಮಹಾಮಣಿಹಗಳನ್ನು

ಮಾಡಿದರು. ಅಂತಹ ಸರ್ವಾದರ್ಶ ಶಿವಾಚಾರ್ಯರ ಶಾಂತ ಸೂಕ್ತ ಕ್ರಾಂತಿಯನ್ನು ಕಾಣುವ ಕಣ್ಣಿಲ್ಲದಂತಾದುದು ಒಂದು ದುಸ್ಸಹನೀಯ ದುರದೃಷ್ಟ ! ಶಿವಾಚಾರ್ಯರ ಸಾಂಸ್ಕೃತಿಕ ಪ್ರಗತಿಯಾರಿಗಿಂತಲೂ ಕಡಿಮೆಯೇನಿಲ್ಲ. ಶಿವಾಚಾರ್ಯರಿಂದ ಸಂಸ್ಕೃತ ಸಾಹಿತ್ಯಕ್ಕೆ ಸಾಕಷ್ಟು ಸಲ್ಲದಂತೆ ಕನ್ನಡ ವಚನ ವಾಙ್ಮಯಕ್ಕೂ ಸೇವೆ ಸಂದಿದೆ. ಅಷ್ಟೇ ಅಲ್ಲ, ಸೂಳ್ನುಡಿ ಸ್ರಷ್ಟಾರರೂ ಸೂಳ್ನುಡಿ ದ್ರಷ್ಟಾರರೂ ಶಿವಾಚಾರ್ಯರೇ ಆಗಿದ್ದಾರೆ.

## ಶಿವಾಚಾರ್ಯರ ಶಿವಕವಿಗಳ ಶಾಶ್ವತ ಸಾಹಿತ್ಯ ಸಂಪತ್ತು

ಅತ್ಯಂತ ಪುರಾತನ ಕಾಲದ ರುದ್ರ-ಭದ್ರ-ರೇಣುಕಾದಿ ಶಿವಾಚಾರ್ಯರು ಶಿವಕವಿಗಳು ನಡೆದು-ನುಡಿದು ಹೋದುದರ ಫಲವಾಗಿ ಮತ್ತು ಧರ್ಮ-ದರ್ಶನಾದಿಗಳ ಉತ್ಪಾದನ ಪ್ರವರ್ತನ ಸಂಸ್ಥಾಪನಗಳ ಫಲವಾಗಿ ಉಂಟಾದ ಅಪಾರವಾದ ಅನುಪಮವಾದ ಸಂಸ್ಕೃತ ಕನ್ನಡ ಸಾಹಿತ್ಯ ಸಂಪತ್ತು ಭಾರತದಲ್ಲಿ ಕರ್ನಾಟಕದಲ್ಲಿ ವ್ಯಕ್ತಾವ್ಯಕ್ತವಾಗಿ ವಿರಾಜಿಸುತ್ತಿದೆ. ಸಾಕಷ್ಟು ಶ್ರೀಮಂತವಾಗಿದೆ. ಜೀವನ ಭವನದ ಆಧಾರಸ್ತಂಭವಾಗಿದೆ. ಶಾಶ್ವತ ಮೌಲ್ಯವುಳ್ಳುದಾಗಿದೆ. ಮಾನವೀಯ ಬಾಳಿಗೆ ಬೇಕಾದ ಕ್ರಿಯೆ ಜ್ಞಾನ ಯೋಗ ಚರ್ಯ ವಿಧಿವಿಧಾನ ಸ್ವಾನುಭವ, ದಾಸೋಹ ದಲಿತೋದ್ಧಾರ ಮೊದಲಾದ ನಾನಾವಿಧ ವಿಷಯ ವಿಚಾರಗಳನ್ನೊಳಗೊಂಡು ಎತ್ತರ ಬಿತ್ತರವಾಗಿ ಬೆಳೆದು ನಿಂತ ಶಿವಾಚಾರ್ಯ ಸಾಹಿತ್ಯದ ಪರಿಪೂರ್ಣವಾಗಿ ಅಧ್ಯಯನವನ್ನೆಸಗಲು ಒಬ್ಬಿಬ್ಬರ ಅಳವಿಗೆ ಎಟುಕದಷ್ಟಿದೆ. ಶಿವಾಚಾರ್ಯರ ಸಾಹಿತ್ಯ ಜನಜೀವನದಲ್ಲಿ ಹಾಸುಹೊಕ್ಕಾಗಿ ಆಯತ ಸ್ವಾಯುತ ಸನ್ನಿಹಿತಗೊಂಡಿದೆ. ಧಾರಣ, ಧ್ಯಾನ (ಮಂತ್ರ ಜಪ), ಪರಿಣಾಮಗಳ ಮುಖಾಂತರ, ಅರ್ಚನ ಅರ್ಪಣ ಅನುಭವಗಳ ಮುಖಾಂತರ, ಆಚಾರ ವಿಚಾರ ಸಂಸ್ಕಾರಗಳ ಮುಖಾಂತರ, ಕೃಷಿ ವಾಣಿಜ್ಯ ಅಸಿಮಸಿಗಳ ಮುಖಾಂತರ, ವಿಧಿ ವಿಧಾನಗಳ ವಸತಿಗಳ ಮುಖಾಂತರ ಮುಂತಾದವುಗಳ ಮುಖಾಂತರ ಬಾಳು ಬದುಕಿನಲ್ಲಿ ಬೆರೆತು ಬೆಸುಗೆಯಾಗಿದೆ. ಜೀವನೋಪಾಯಗಳೆಲ್ಲವೂ ಶಿವಾಚಾರ್ಯರ ವಿಧಾನಗಳು. ಶಿವಾಚಾರ್ಯರಿಂದ ಸಂಸ್ಕಾರ ಪಡೆದವರ ಉಸಿರಾಟದಲ್ಲಿಯೂ ಪ್ರಾಣ ಚೇತನವಾಗಿರುತ್ತದೆ. ಹೆಚ್ಚೇನು ಶಿವಾಚಾರ್ಯರ ಲಿಂಗಸಾಹಿತ್ಯ ಸರ್ವಾಂಗ ನಿಷ್ಠವಾಗಿ ಅವಿರಳಗೊಂಡಿರುತ್ತದೆ. ವಿಚಾರಾಚಾರಗಳಲ್ಲಿ ವಿಶಿಷ್ಟವಾಗಿ ವಿನ್ಯಾಸಗೊಂಡಿರುತ್ತದೆ. ಅಷ್ಟಾವರಣಗಳ ಮುಖಾಂತರ ಅಂಗವೇ ಆಗಿ, ಪಂಚಾಚಾರಗಳ ಮುಖಾಂತರ ಪ್ರಾಣವೇ ಆಗಿ, ಷಟ್‌ಸ್ಥಲಗಳ ಮುಖಾಂತರ ಚೇತನಾತ್ಮವೇ ಆಗಿ ತನ್ನೊಳಗೆ ತಾನೇ ಆಗಿರುತ್ತದೆ. ಸಾರ್ವಜನಿಕ ಸಾಂಸ್ಕೃತಿಕ ದೃಷ್ಟಿಯಿಂದ ವಿಶ್ವವ್ಯಾಪಕ

ವಾಗಿ ನಿಂತಿದೆ. ಮಹಾ ಸಂವಿತ್ಪ್ರಕಾಶ ಪರಿಪೂರಿತವಾಗಿ ವಿಶ್ವಾಧಾರವೂ ಆಗಿದೆ. ಶಿವಾಚಾರ್ಯರ ಸಾಹಿತ್ಯವೆಂಬ ಮಹಾಭಾಂಡದಲ್ಲಿ ಭಾಜನದಲ್ಲಿ ವಿಶ್ವ ತತ್ತ್ವಗಳೆಲ್ಲ ವಿಜೃಂಭಿಸಿವೆ, ವೆಗ್ಗಳಿಸಿವೆ. ಇವುಗಳಿಂದ ಸರ್ವಕರ್ತೃವೂ ಸರ್ವಜ್ಞನೂ ಸರ್ವಶಕ್ತನೂ ಆಗಲು ಯಾವ ಅಭ್ಯಂತರವಿಲ್ಲ. ವಿಶ್ವಗುರುವಾದ ಶಿವಾಚಾರ್ಯ ವಾಙ್ಮಯ ವಿಶ್ವಭಾಜನ, ದಿಕ್ಕಾಲಾದ್ಯನವಚ್ಛಿನ್ನ ಶಿವಾಚಾರ್ಯರದು ಶಿವಸಾಹಿತ್ಯ ಸರ್ವರಿಗೂ ಪಥ್ಯ, ಅದರಿಂದ ಲಭಿಸುತ್ತದೆ. ಶಿವೈಕತ್ವ ಅಂದರೆ ಶಿವಸಾಮರಸ್ಯತ್ವ. ಅದು ಅವರ ಪರಾಕಾಶ ಜನ್ಯ. ಅದು ಸತ್ವಪೂರ್ಣ; ತತ್ತ್ವಪೂರ್ಣ; ಪ್ರಬೋಧ ಪರಿಪೂರ್ಣ, ಪರಿಣಾಮ ಪ್ರಪೂರ್ಣ ಅದರಲ್ಲಿರುತ್ತದೆ ಪರಮ ಪ್ರಸಾದ ಸಂಪತ್ತಿ ಪರಮಾನುಭಾವನಿಷ್ಪತ್ತಿ. ಅದು ಶಿವಾದ್ವೈತ ಪರಮಾನಂದ ಪ್ರಬೋಧ ಪ್ರಕಾಶಕ ! ಜ್ಯೋತಿರ್ಮಯ ಜೀವನ್ಮುಕ್ತಿ ಪ್ರದಾಯಕ ! ಜನನ ಮರಣ ಗ್ರಂಥಿ ವಿನಾಶಕ ! ಅದರಿಂದ ಚಿದ್ವಿಲಾಸ ಪರಿಸ್ಫೂರ್ತಿ! ಕಾಯ ಕರಣೇಂದ್ರಿಯ ಭಾವನಿವೃತ್ತಿ !! ಶಿವಾಚಾರ್ಯ ಸಾಹಿತ್ಯದ ಶಬ್ದ ಶಬ್ದಗಳಲ್ಲಿ ಶೈವೀಜ್ಯೋತಿ ಜ್ವಲಿಸುತ್ತಿರುತ್ತದೆ. ಚಿದಾತ್ಮಕ ವಿಶ್ವವನ್ನು ಪ್ರಕಾಶಿಸಿ ಪ್ರದರ್ಶಿಸುತ್ತದೆ. ಅದು ನಿರಂಕುಶ ಪ್ರಬೋಧ ಪ್ರದೀಪ; ಅದು ಯಾವ ತೈಲವಿಲ್ಲದ ನಿರ್ವಾತ ಪ್ರದೀಪ; ನಿತ್ಯಪೂರ್ಣ ಪ್ರದೀಪ್ತಿ. ಶಿವಾಚಾರ್ಯ ಸಾಹಿತ್ಯ ಸುಧೆಯನ್ನು ವರ್ಣಿಸಿ ಪ್ರಯೋಜನ ವಿಲ್ಲ; ಸ್ವೀಕರಿಸಿ ಅನುಭವಿಸಬೇಕು; ಪರಿಣಮಿಸಬೇಕು. ಅದೊಂದು ಅಮೃತ ಧಾರೆ.

"ಸಂದೇಹ ವನಸಂದೋಹ ಸಮುಚ್ಛೇದ ಕುಠಾರಿಕಾ । ಯತ್ಸೂಕ್ತಿ ಧಾರಾ ವಿಮಲಾಯತ್ಸೂಕ್ತಿ ದರ್ಪಣ್ಯಾಭೋಗೇ ನಿರ್ಮಲೇದೃಶ್ಯತೇ ಸದಾ, ಮೋಕ್ಷಶ್ರೀರ್ಬಿಂಬರೂಪೇಣ...." "ಶಿಷ್ಯಾಣಾಂ ಹೃದಯಾಲೆಖ್ಯಂ ಪ್ರದ್ಯೋತ ಯತಿ ಯಃ ಸ್ವಯಂ । ಜ್ಞಾನ ದೀಪಿಕಯಾ ತೇನ ಗುರುಣಾ ಕಃಸಮೋ ಭವೇತ್ ? ॥"–ಶಿವಯೋಗಿ ಶಿವಾಚಾರ್ಯ ವಾಣಿಯಿದು.

ಸಂದೇಹಕ್ಕಿಂತ ಸಾವು ಬೇರಿಲ್ಲ. ಸಂದೇಹ ನಿವೃತ್ತಿಗೆ ಶಿವಾಚಾರ್ಯರ ಸೂಕ್ತಿ ಕೂರಲಗು, (ಕುಠಾರಾ); ಇದಿಲ್ಲದೆ ಸಂದೇಹ ತೊಲಗದು, ತರಿಸಂದ ಬಾಳು ಬದುಕು ರೂಪಗೊಳ್ಳದು. ಶಿವಾಚಾರ್ಯ ಸೂಕ್ತಿ ಒಂದು ಸ್ವಚ್ಛವಾದ ನಿಲುಗನ್ನಡಿ; ಅದರಲ್ಲಿ ಮೋಕ್ಷವೆಂಬ ಲಕ್ಷ್ಮಿಯ ಮೂಲ ಚಲುವನ್ನು ನಿಟ್ಟಿಸು

ತ್ತೇವೆ. ಮತ್ತು ಶಿವಾಚಾರ್ಯ ಸುಧಾಸೂಕ್ತಿ ಸಂಪತ್ತಿಯ ಸ್ವಯಂಜ್ಯೋತಿ; ಅದು ಶಿಷ್ಯರ ಹೃದಯ ವೇದಿಕೆಯ ಮೇಲೆ ಪ್ರತಿಷ್ಠಾಪಿಸಿದ ಸತ್ಯಶಿವ ಸೌಂದರ್ಯವನ್ನು ಸಂ-ದರ್ಶಿಸುವಂತೆ ಮಾಡುತ್ತದೆ. ಇದೆಲ್ಲವು ಶಿವಾಚಾರ್ಯರ ವಾಕ್‌ಶಕ್ತಿಯ ವಿಶಿಷ್ಟವೂ ಪ್ರಭಾವ ಪೂರ್ಣವೂ ಆದ ಮಹಾವೌಲ್ಯ. ವಾಕ್ ಶಕ್ತಿಯೇ ಇಂತಿರುವಾಗ ಇನ್ನು ವಾಙ್ಮಯಶಕ್ತಿ ದೀಪ್ತಿ ಪ್ರಾಪ್ತಿಗಳೆಂತಹದೆಂಬು ದನ್ನು ಈ ಕೆಳಗೆ ಕಾಣಿಸಿದ ಶಿವಾಚಾರ್ಯ ಸೂಕ್ತಿ ಪಂಕ್ತಿಗಳಿಂದ ಸಂವೇದಿಸಿ ಕೊಳ್ಳಬಹುದು.

"ಶ್ರೀ ವೇದಾಗಮ ವೀರಶೈವ ಸರಣಿ, ಶ್ರೀ ಷಟ್‌ಸ್ಥಲೋದ್ಯನ್ಮಣಿ;
ಶ್ರೀ ಜೀವೇಶ್ವರ ಯೋಗ ಪದ್ಮತರಣಿ, ಶ್ರೀ ಗೋಪ್ಯ ಚಿಂತಾಮಣಿ...."

ಈ ಸಲ್ಲಾತುಗಳು ಕೇವಲ ಸಿದ್ಧಾಂತ ಶಿಖಾಮಣಿ ಗ್ರಂಥವೊಂದಕ್ಕೆ ಮಾತ್ರವಲ್ಲ; ಇಡೀ ವೀರಶೈವ ಶಿವಾಚಾರ್ಯ ಸಾಹಿತ್ಯಕ್ಕೆ ಸಂಬಂಧ ಪಟ್ಟವು ಗಳೆಂದು ಭಾವಿಸಿದಲ್ಲಿ ಅತಿಶಯೋಕ್ತಿಯೇನಲ್ಲ; ಅನೌಚಿತ್ಯೋಕ್ತಿಯೇನಲ್ಲ. ಶಿವಾಚಾರ್ಯ ಸಾಹಿತ್ಯ ವೇದಾಗಮಗಳಿಂದಲೇ ಮೊದಲಾಗುತ್ತದೆ; ಶ್ರೀಮಂತ ವಾಗಿದೆ. ವೇದಾಗಮ ಸಾಹಿತ್ಯ ವೀರಶೈವ ಸರಣಿ. ಶ್ರೀಗೋಪ್ಯ ಚಿಂತಾ ಮಣಿ ಯಾವ ಕೊರತೆಯುಳ್ಳದಲ್ಲ.

ಶಿವಾಚಾರ್ಯರು ಅತ್ಯಂತ ಪುರಾತನರು. ಅವರು ಸಾಹಿತ್ಯವೂ ಪುರಾತ ನದ್ದು. ವಿಶ್ವ ವ್ಯಾಪಕವಾದದ್ದು; ಪೂರ್ಣ ಸ್ವರೂಪದ್ದು. ಅದನ್ನು ಅವ ಲೋಕಿಸದ-ಅರಿಯದ–ಅನುಭವಿಸಿ ಆನಂದಿಸದೆ ಇರುವವನು ಬೇರೆ ಅದೆಷ್ಟೇ ಅರಿತಿದ್ದರೂ ಪೂರ್ಣ ಪರಿಜ್ಞಾನಕ್ಕೆ ಪ್ರಾನುಭವಕ್ಕೆ ವಂಚಿತನು. ಫಲ ಬಿಡದ ವೃಕ್ಷದಂತೆ ಅಪೂರ್ಣನು.

# ಶಿವಾಚಾರ–ಶಿವಾಚಾರ್ಯರ ಪ್ರಾಚೀನತೆ, ಮತ್ತು ಅರ್ಥವ್ಯಾಪ್ತಿ ದೀಪ್ತಿ !

ಶಿವಾಚಾರ :–

"ರುದ್ರೇಣ ದೀಕ್ಷಿತೋ ಭೂತ್ವಾ ಸ್ಕಂದಃ ಶಿವಸಮೋऽಭವತ್ ।
ಶಿವಾಚಾರ ರಹಸ್ಯಸ್ಯ ಪಾತ್ರತಾಂ ಪ್ರಥಮಂ ಗತಃ ॥" —ಆದಿತ್ಯ ಪುರಾಣ.

"ಶಿವಾಚಾರೇ ಶಿವಧ್ಯಾನೇ ಶಿವಜ್ಞಾನೇ ಚ ನಿರ್ಮಲೇ ।
ಗುರೋರಾದೇಶ ಮಾತ್ರೇಣ ಪರಾಂ ನಿಷ್ಠಾಮವಾಪ್ನುಯಾತ್ ॥"
—ರೇಣುಕಾಗಮ.

"ರುದ್ರಲೋಕವ ಮರ್ತ್ಯಲೋಕಕ್ಕೆ ತಂದಾತ ಬಸವಣ್ಣ ;
ಶಿವಾಚಾರದ ಘನವ ಮೆರೆದಾತ ಬಸವಣ್ಣ ; – ಪ್ರಭುದೇವ

ಶಿವಾಚಾರ :–

"ಮಾತೃದೇವೋ ಭವ, ಪಿತೃದೇವೋ ಭವ ; ಆಚಾರ್ಯದೇವೋಭವ
– ಶ್ರುತಿ

"ಆಚಿನೋತಿ ಹಿ ಶಾಸ್ತ್ರಾರ್ಥಾನಾಚಾರೇ ಸ್ಥಾಪಯ ತ್ಯಪಿ ।
ಸ್ವಯ ಮಾಚರತೇಯಸ್ತು ಸ ಆಚಾರ್ಯ ಇತಿಸ್ಮೃತಃ ॥....—ರೇಣುಕಾಗಮ.

"ಶಿವ ಸಿದ್ಧಾಂತ ನಿರ್ಣೇತಾ ಶಿವಾಚಾರ್ಯಃ ಶಿವಾತ್ಮಕಃ ॥"....— "

"ತಸ್ಯ ವೀರಶಿವಾಚಾರ್ಯ ಶಿಖಾರತ್ನಸ್ಯ ನಂದನಃ.... — "

ಮೇಲೆ ಎತ್ತಿ ಉದ್ಧರಿಸಿದ ಉಕ್ತಿಗಳಿಂದ ಇವೆರಡರ ಪ್ರಾಚೀನತೆ ಎಂತ ವರ ಪ್ರಜ್ಞೆಗೆ ಬರುತ್ತದೆ. ಅನಾದಿ ಕಾಲದಿಂದ ಪರಂಪರೆಯಾಗಿ ಬಂದವು ಗಳಾಗಿವೆ. ಬಾಳ ಬಳಕೆಯಲ್ಲಿ ನಿಂದವುಗಳಾಗಿವೆ. ಇದಕ್ಕೊಂದು ಭಾವ್ಯ ಪರಂಪರೆ ಇದೆ. ಬಾಳ ಬೆಸುಗೆಯಿದೆ.

ಆದಿತ್ಯ ಪುರಾಣೋಕ್ತಿಯಂತೆ ಶಿವಾಚಾರ ಶ್ರೀರುದ್ರೋದಯ. ಶಿವಾಚಾರ ಪಾತ್ರತೆಯನ್ನು ಶ್ರೀರುದ್ರದೇವನಿಂದ ಸ್ಕಂದನು ಪ್ರಥಮದಲ್ಲಿ ಪಡೆದನು ಶ್ರೀ ರುದ್ರನು ಶಿವಾಚಾರರನ್ನು ಮೈಗೂಡಿಸಿಕೊಂಡ ಪ್ರಥಮ ಶಿವಾಚಾರ್ಯನು.

ಶ್ರೀರೇಣುಕ ಶಿವಾಚಾರ್ಯರ ಆದೇಶ ಮಾತ್ರದಿಂದ ಅಗಸ್ತ್ಯಮುನಿಯು

ನಿರ್ಮಲ ಶಿವಾಚಾರದಲ್ಲಿ ಶಿವ ಧ್ಯಾನದಲ್ಲಿ ಶಿವಜ್ಞಾನದಲ್ಲಿ ಪರಮ ನಿಷ್ಠೆಯನ್ನು ಪಡೆದನು.

ಬಸವಣ್ಣ ಶಿವಾಚಾರಕ್ಕೆ ಬಂದು, ಶಿವಾಚಾರದ ಘನತೆಯನ್ನು ಮೆರೆದಾತ !

ಆಚಾರ್ಯನೇ ದೇವನೆಂದಿತು ವೇದ. ಶಾಸ್ತ್ರಾರ್ಥಗಳನ್ನು ಸಂಗ್ರಹಿಸಿ ಅವನ್ನು ಆಚಾರದಲ್ಲಿ ಸ್ಥಾಪಿಸಿ, ಸ್ವತಃ ತಾನು ಆಚರಿಸುವಾತನೆ ಆಚಾರ್ಯನು. ಆಚಾರ್ಯನು ಶಿವಾತ್ಮನಾಗಿ ಶಿವಾಚಾರ್ಯನೆನಿಸುತ್ತಾನೆ ; ಶಿವ ಸಿದ್ಧಾಂತವನ್ನು ನಿರ್ಣಯಿಸುತ್ತಾನೆ ; ನಿರ್ಣಯಿಸಿದ್ದಾನೆ. ಅಂತವನೆ ವೀರಶಿವಾಚಾರ್ಯವೃಂದದ ಶಿಖಾರತ್ನನಾಗಿರುತ್ತಾನೆ.

ಒಳ್ನಡತೆ ಶಿವಾಚಾರ ; ಒಳ್ನಡತೆಯುಳ್ಳಾತನು ಶಿವಾಚಾರ್ಯ. ಒಳ್ನಡತೆಯ ಸಂಕೇತವಾದ ಶಿವಾಚಾರ ಒಂದು ಮತ ಧರ್ಮಕ್ಕೆ ಸೀಮಿತವಲ್ಲ. ಮಾನವೀಯತೆಯನ್ನು ಎತ್ತಿ ಹಿಡಿಯುವುದರಿಂದ ಅದು ಮಾನವೀಯ ಸಂಸ್ಕೃತಿಯಾಗುವ ಆದ ಮಹತಿಯುಳ್ಳದ್ದಾಗಿದೆ. ಈ ವಿಶಾಲವಾದ ಅರ್ಥ ಅದಕ್ಕಿದೆ ; ವಿಶುದ್ಧವಾದ ದೀಪ್ತಿ ಅದಕ್ಕಿದೆ. 'ಆ ಸಮಂತಾತ್, ಚರತೀತಿ ಆಚಾರ :' ಇದು ಅದರ ಉತ್ಪತ್ತಿ ; ಮತ್ತು ನಿರುಕ್ತಿ. ಶಿವಭಾವದಿಂದ ಚರಿತ ಅಂದರೆ ಸಂಚರಿತವಾಗುವುದರಿಂದ ಶಿವಾಚಾರ.

"ಆಚಾರ ಏವ ಸರ್ವೇಷಾಮಲಂಕಾರಾಯ ಕಲ್ಪತೇ ।
ಆಚಾರಹೀನಃ ಪುರುಷೋ ಲೋಕೇ ಭವತಿ ನಿಂದಿತಃ ॥
ಜ್ಞಾನೇನಾಚಾರಯುಕ್ತೇನ ಪ್ರಸೀದತಿ ಮಹೇಶ್ವರಃ ।
ತಸ್ಮಾದಾಚಾರವಾನ್ ಜ್ಞಾನೀ ಭವೇದಾದೇಹ ಪಾತನಂ ॥"

—ರೇ. ಗೀತೆ

ಅವರಿವರೆನ್ನದೆ ಎಲ್ಲ ಮಾನವರ ಆತ್ಮಾಲಂಕಾರಕ್ಕೆ ಆಚಾರವೇ ಆಶ್ರಯವಾಗಿದೆ. ಆಚಾರವನ್ನು ಆಚರಿಸುವವನ ಆತ್ಮಸತ್ವ ಸೌಂದರ್ಯಗಳು ಹೆಚ್ಚುತ್ತವೆ. ಜನಪ್ರಿಯನೂ ಜನಮಾನ್ಯನೂ ಆಗಿ ಶಿವಾನುಗ್ರಹಕ್ಕೆ ಕಾರಣನಾಗುತ್ತಾನೆ. ಅದೇ ಅನಾಚಾರಿಯು ಲೋಕನಿಂದೆಗೆ ಪಾತ್ರನಾಗುತ್ತಾನೆ.

"ಆಚಾರವೇ ಸ್ವರ್ಗ ಅನಾಚಾರವೇ ನರಕ" ಎಂಬೀ ಶರಣವಾಣಿಯನ್ನು ಸ್ಮರಿಸಬೇಕು. ಆಚಾರ ತಪ್ಪಿದ ನಲಮಹಾರಾಜನು ಪಟ್ಟ ಪಾಡು ಅಷ್ಟಿಷ್ಟಲ್ಲ.

ಆಚಾರದಿಂದ ಕೂಡಿದ ಶಿವಜ್ಞಾನದಿಂದ ಮಹೇಶ್ವರನು ಪ್ರಸನ್ನನಾಗುತ್ತಾನೆ. ಜ್ಞಾನೀ ಆದರೂ ಆಜನ್ಮದವರೆವಿಗೂ ಆಚಾರವಂತನಾಗಿ ಬಾಳುಬೇಕು.

ಶಿವಾಚಾರದಿಂದ ಸಚ್ಚಾರಿತ್ರ ಸುಸಂಸ್ಕೃತಿಗಳು ಬೆಳೆಯುತ್ತವೆ. ಅದರಲ್ಲಿಯೂ ವಿಚಾರ ವಿಶಿಷ್ಟ ಆಚಾರದ ಮೌಲ್ಯ ಮಾತಿಗೆ ಮೀರಿದ್ದು ! ವಿಚಾರಯುಕ್ತ ಆಚಾರಕ್ಕೆ ವೀರಶೈವ ಶಿವಾಚಾರ್ಯರು ಪ್ರಾಶಸ್ತ್ಯವನ್ನಿತ್ತಿದ್ದಾರೆ. ಅಂತೆಯೇ ವೀರಶಿವಾಚಾರ್ಯರು, ಕ್ರಿಯಾಚಾರ, ಜ್ಞಾನಾಚಾರ, ಭಾವಾಚಾರಗಳೆಂದು ಬಿಚ್ಚಳಿಸಿ ಬೆಡಗಿನಲ್ಲಿ ಬಿತ್ತರಿಸಿದ್ದಾರೆ.

ಶಿವಾಚಾರಕ್ಕೆ ನೈತಿಕಾಚರಣೆಯೇ ನಿಜವಾದ ಉಸಿರು, ನಿಜವಾದ ಬಸಿರು. ನೈತಿಕಾಚಾರವೆಂದರೆ ಸುಗುಣ ಸಂತತಿ! ಸತ್ಯ, ಅಹಿಂಸೆ, ಅಸ್ತೇಯ ವಿನಯ, ಮಿದುನುಡಿ, ಸದ್ವರ್ತನ, ದಾನ, ಧರ್ಮ, ಶಾಂತಿ, ದಾಂತಿ. ಒಳ್ನಡೆ ಒಳ್ನುಡಿ. ಒಳ್ಬಯಕೆ, ಸಂಯಮನ. ಗುರುಭಕ್ತಿ, ಅದರ, ಸನ್ಮೈತ್ರಿ, ನಿರಹಂಕಾರ. ಸರಳತೆ ಇವು ಮುಂತಾದವುಗಳು ಸುಗಣ ಸಂತತಿ ! ಇವುಗಳಿಂದ ಶಿವಾಚಾರವು ರೂಪುಗೊಳ್ಳುತ್ತದೆ. ಅಂದರೆ ಒಳ್ಳೆಯ ನಡತೆ ಆಚರಣೆಗೆ ಅಳವಡುತ್ತದೆ. ಅಳವಡುವಂತೆ ಮಾಡುತ್ತಾನೆ ಆಚಾರ್ಯನು. ಆ ಚಂದ್ರಾರ್ಕವಾಗಿ ಬಾಳ ಬೆಳಗುವಂತೆಸಗುತ್ತಾನೆ.

ಶಿವಾಚಾರ ಪದವು ವೀರಶೈವಕ್ಕೆ ಮತ್ತೊಂದು ಹೆಸರು. ಪುರಾತನವಾದುದು. ವಿಶ್ವಾಧಿಕನಾದ ರುದ್ರದೇವನಿಂದ ಉದಯವಾಗಿ ಇಂದಿಗೂ ಮುಂದುವರಿದು ಬಂದಿದೆ.

# ಶಿವಾಚಾರ್ಯರ ಸಾಹಿತ್ಯ ಮತ್ತು ಸಂಸ್ಕೃತಿ !

ವೀರಶೈವ ಧರ್ಮ ಸಿದ್ಧಾಂತವು ಮಹೋಜ್ವಲ ನಿಲವನ್ನು ತಾಳುವಂತಾದುದು ಶಿವಾಚಾರ್ಯರ ಸತ್ವಶಾಲಿ ತಾತ್ವಿಕ ಸಾಹಿತ್ಯ ಸಂಪತ್ತಿಯಿಂದ ! ಮತ್ತು ಸನಾತನ ರುದ್ರ ಭದ್ರ, ರೇಣುಕ-ದಾರುಕಾದಿ ಗುರು ಪರಂಪರೆಯ ಕ್ರಾಂತಿಮಯ ಸಚ್ಚಾರಿತ್ರದಿಂದ ! ಅನಾದಿ-ಆದಿ ವೀರಶೈವೇತಿಹಾಸವನ್ನುಳಿದು ವಿಚಾರಿಸಿದರೆ ಆಧುನಿಕ ವೀರಶೈವ ಶಿವಾಚಾರ್ಯರಾದ ಜ. ಪಂಡಿತಾಚಾರ್ಯರು, ಸಿದ್ಧನಾಥ ಶಿವಾಚಾರ್ಯರು, ಶಿವಯೋಗಿ ಶಿವಾಚಾರ್ಯರು ಇಮ್ಮಡಿ ಪಂಡಿತಚಾರಾಧ್ಯರು. ರೇವಣಸಿದ್ಧರು, ಮರುಳಸಿದ್ಧರು. ಉರಿಲಿಂಗದೇವರು. ಉರಿಲಿಂಗ ಪೆದ್ದಿಯವರು. ಚನ್ನಬಸವಣ್ಣ ಶಿವಾಚಾರ್ಯ, ಮೊಗ್ಗೆಯ ಮಾಯಿದೇವ ಶಿವಾಚಾರ್ಯರು ಕವಿ ಷಡಕ್ಷರಶಿವಾಚಾರ್ಯರು,ಮತ್ತು ಆಗಮ ಮೋಹಿನಿ, ರಾಜರಾಜೇಶ್ವರಿ, ಶಾಂಭವಿ, ಕಾಳವ್ವೆ ಮೊದಲಾದ ಶಿವಾಚಾರಿಣಿಯರು ಇವರೇ ಮೊದಲಾದವರು ಸಂಸ್ಕೃತ-ಕನ್ನಡ ಸಾಹಿತ್ಯವನ್ನು ಸೃಜಿಸಿ ವೀರಶೈವ ಧರ್ಮ ದರ್ಶನ ತತ್ತ್ವ ಸಾಹಿತ್ಯ ಸಂಸ್ಕೃತಿಗಳನ್ನು ಶ್ರೀಮಂತಗೊಳಿಸಿದ್ದಾರೆ. ಮಹತೋ ಮಹಂತಗೊಳಿಸಿದ್ದಾರೆ. ಸೂಳ್ನುಡಿ ಸಾಹಿತ್ಯದಿಂದ ಕನ್ನಡ ನುಡಿಯನ್ನು, ಸಂಸ್ಕೃತ ಸಾಹಿತ್ಯದಿಂದ ಕರ್ನಾಟಕ ಸಂಸ್ಕೃತ ಸಾಹಿತ್ಯವನ್ನು ಶಿವಾಚಾರ್ಯರು ಮತ್ತು ಶಿವಾಚಾರಿಣಿಯರು ಪ್ರತಿಭಾನ್ವಿತಗೊಳಿಸಿದ್ದಾರೆ. ಹೀಗೆ ಕನ್ನಡಕ್ಕೆ ಮಾತ್ರವಲ್ಲ ಇಡಿ ಭಾರತಕ್ಕೆ ಶಿವಾಚಾರ್ಯ-ಶಿವಾಚಾರಿಣಿಯರ ಕೊಡುಗೆ ಅಪೂರ್ವ ಮತ್ತು ಆದರ್ಶವಾದುದು ; ಅನನ್ಯವಾದುದು. ಇಂದಿಗೂ ಮುಂದಕ್ಕೂ ಅಚ್ಚಳಿಯದೆ ಉಳಿದ-ಉಳಿವ ಅವರ ಸಾಹಿತ್ಯ ಮತ್ತು ಸಂಸ್ಕೃತಿ ಅದ್ವಿತೀಯವಾದದು, ಅವರು ನಮಗೆ ಕೊಟ್ಟು ಬಿಟ್ಟು ಹೋದ ಪರಂಪರೆ ಪ್ರಭಾವ ಪೂರ್ಣವಾದುದು : ಪರಿಪೂರ್ಣವಾದುದು. ಊರ್ಜಿತವೂ ಉಜ್ವಲವೂ ಆದ ಕ್ರಾಂತಿಮಯ ಚಾರಿತ್ರ ಮತ್ತು ಇತಿಹಾಸದ ಬಳುವಳಿ ಇಂದಿನ-ಮುಂದಿನ ಶಿವಾಚಾರ್ಯರಿಗಿದೆ ; ಇಡೀ ವೀರಶೈವ ಧರ್ಮಕ್ಕಿದೆ. ಸಾಂಸ್ಕಾರಿಕ ಶ್ರೀಮಂತಿಕೆಯೋ ಅಪಾರ. ಇಡೀ ವಿಶ್ವಕ್ಕೆ ಸಾಂಸ್ಕಾರಿಕ ಸಾಂಸ್ಕೃತಿಕ ಸುಖಶಾಂತಿ ಸಮಾಧಾನಗಳನ್ನು ಕೊಡುವ ಶಕ್ತಿ ಸಂಪನ್ನವಾಗಿದೆ

ದೀಪ್ತಿ ನಿಷ್ಪನ್ನವಾಗಿದೆ. ಆ ದೀಪ್ತಿ ಚಿದಾಕಾಶ ಸ್ವರೂಪ ಸ್ವಾನುಭೂತಿ,-ಸಂಭೂತಿ ! ಇದೀಗ ವಿಶ್ವದ ದೃಷ್ಟಿ ಮನ ಭಾವಗಳನ್ನು ಗಮನಾರ್ಹವಾಗಿ ಸೆಳೆದಿದೆ. ಶಿವಾಚಾರ್ಯರ ಸಂಪೂರ್ಣ ತತ್ತ್ವಜ್ಞಾನಕ್ಕೆ ತತ್ತ್ವಾನುಭೂತಿಗೆ ಮನ ಮಾರುಹೋಗಿ ವಿದೇಶೀಯರು ಉತ್ತರ ಭಾರತದ ವಿದ್ವಾಂಸರು ಅರಿಯಲು ಅತ್ಯಂತ ಆಸಕ್ತಿಯುಳ್ಳವರಾಗಿದ್ದಾರೆ. ವೀರಶೈವ ಧರ್ಮವನ್ನು ದರ್ಶನವನ್ನು ಅತ್ಯಂತ ಕುತೂಹಲದಿಂದ ಕಾಣುತ್ತಿದ್ದಾರೆ.

ಈ ಬಗೆಯ ಭವ್ಯ ಧರ್ಮ ದರ್ಶನಗಳ ದಿವ್ಯ ಪರಂಪರೆಯನ್ನು ಸನಾತನ ಶಿವಾಚಾರ್ಯರು ಸಂಸ್ಕೃತ ಭಾಷೆಯಲ್ಲಿ ಘೋಷಿಸಿ ಗೀತಿಸಿ ಪ್ರಚಾರಗೈಯಲು ಅನೇಕ ಪ್ರಕಾರಗಳಲ್ಲಿ ಪ್ರಯತ್ನಿಸಿ ಸಫಲರಾಗಿದ್ದಾರೆ. ಅವರೆಲ್ಲರ ಆ ಸಮ್ಯಗ್‌ಜ್ಞಾನ ಸ್ವಯಾನುಭೂತಿ ಸಾತಿಶಯವಾಗಿದೆ. ಅವರೆಲ್ಲರು ಪಟ್ಟ ಪ್ರಯತ್ನ, ತೊಟ್ಟ ತ್ಯಾಗಮಯ ತಪಸ್ಸು, ತೊಳತೊಳಗಿದ ತೇಜಸ್ಸು, ಸೈದ್ಧಾಂತಿಕ ಪ್ರತಿಭೆ, ಸೌತ್ರಿಕ ಶಿವಾನುಭೂತಿ, ವಿಶೇಷಾರ್ಥ ಪ್ರಕಾಶಕೆ, ಶಿವಾಧಿಕ್ಯ, ಶಿವಭಕ್ತಾಧಿಕ್ಯ, ಷಟ್‌ಸ್ಥಲ ಸಮಗ್ರ ವಿವೇಚನೆ, ಭಾವಪೂರ್ಣ ಭಾಷ್ಯ. ಸರ್ವ ವೀರಶೈವಾಗಮ ಸಂಹಿತೆ, ಶ್ವೇತಾಶ್ವೇತರಾದಿ ಉಪನಿಷಚ್ಛೃತಿ ಮೊದಲಾದವು ಆದರಣೀಯವಾಗಿವೆ ; ಅನುಗಾಲ ಅಧ್ಯಯನೀಯವಾಗಿವೆ ; ಅವಿಸ್ಮರಣೀಯವಾಗಿವೆ. ಕನ್ನಡ ವಚನ ವಾಙ್ಮಯಕ್ಕೆ ಶತಕ ಸಾಹಿತ್ಯಕ್ಕೆ ಪುರಾಣಗಳಿಗೆ ಸಾಂಗತ್ಯ ಕೈವಲ್ಯಾದಿಗಳಿಗೆ ಆಕರಗಳಾಗಿವೆ, ಅನುಕರಣೀಯವಾಗಿವೆ.

# ಶಿವಾಚಾರ್ಯ–ಶಿವಶರಣ !

## (ಒಂದು ತೌಲನಿಕ ಪರಾಮರ್ಶೆ)

**ಶಿವಾಚಾರ್ಯ** :–ಶಿವಾಚಾರವುಳ್ಳವನು ಶಿವಾಚಾರ್ಯ. ಶಿವಾಚಾರ ಶಿವವಿಚಾರಗಳ ಶಿಕ್ಷಣ ಕೊಡುವವನು ಶಿವಾಚಾರ್ಯ. ಷಟ್‌ಸ್ಥಲ ಚಕ್ರವರ್ತಿ, ಅಷ್ಟಾವರಣಾಂಗ ಸ್ರಷ್ಟಾರ, ಪಂಚಾಚಾರ ಪರಾಯಣ-ಶಿವಾಚಾರ್ಯ. ವೀರಶೈವ ಧರ್ಮದ್ರಷ್ಟಾರ ಶಿವಾಚಾರ್ಯ. ದೀಕ್ಷ ಶಿಕ್ಷಮೋಕ್ಷಕರ್ತಾರ ಶಿವಾಚಾರ್ಯ. ಆತ್ಮತತ್ತ್ವ ಶಿವತತ್ತ್ವ ಆದು ಇದು ಏನು ? ಮೂವತ್ತಾರು ತತ್ತ್ವಜ್ಞಾನಿ ಶಿವಾಚಾರ್ಯ. ಲಿಂಗಾಂಗ ಯೋಗಾನುಭಾವಿ ಶಿವಾಚಾರ್ಯ. ಅಂಗಲಿಂಗ ಪ್ರತಿಷ್ಠಾಪಕ ಶಿವಾಚಾರ್ಯ.

**ಶಿವಶರಣ** :–ಶಿವನಲ್ಲಿ ಶ್ರೀಗುರುವಿನಲ್ಲಿ ಶರಣಾದವನು ಶರಣ. ಗುರು ಭಾನುವಿನ ಉಪಾಸನ ಉಪದೇಶಗಳಿಂದ ತಮೋಭಾವಗಳನ್ನು ತೊಡೆದು ಹಾಕುವಾತನು. ಅಷ್ಟಮದಗಳನ್ನು ಬಿಟ್ಟವನು ಶರಣ. ಸತ್ವಶಾಲಿ–ಭೃತ್ಯಭಾವಿ ಶರಣ. ತಮೋಗುಣ ಜನ್ಯರಾಗ ರಜೋಗುಣ ಜನ್ಯ ದ್ವೇಷಗಳನ್ನು ದೂರ ಮಾಡಿದಾತ ಶರಣ. ಅಸತ್ಯಭಾವವನ್ನು ಅಲ್ಲಗಳೆದಾತ ಶರಣ, ಸಮಷ್ಟಿಯಾದ ಆಕಾಶಂಗವುಳ್ಳಾತ ಶರಣ. ಪ್ರಸಾದಲಿಂಗಾರಾಧಕ ಶರಣ, ಈಶಾನ ಮುಖದಲ್ಲಿ ಶಬ್ದ ಪದಾರ್ಥವನ್ನರ್ಥಿಸಿ ಸುಶಬ್ದ ಪ್ರಸಾದವನ್ನಾಗಿಸುವಾತ ಶರಣ. ಸುಜ್ಞಾನ ಹಸ್ತ, ಆನಂದಭಕ್ತಿ, ಶ್ರವಣಾಂಗ ವಿಶುದ್ಧಿಸ್ಥಾನ (ಚಕ್ರ), ಮೀರಿದ ಕ್ರಿಯೆ ಶೀಲ ಸಂಪಾದನ, ಗುರುವೇ ಪರಶಿವತತ್ತ್ವಭಾವನ–ಇವು ಇರುವಾತ ಶಿವಶರಣ ! ಕಾಯಕರಣೇಂದ್ರಿಯ ಭಾವವಿಲ್ಲದಾತ ಶರಣ. ಸದಾಶಿವ ಭಾವಿಯಾದಾತ ಶಿವಶರಣ. ಮೂರ್ತಿರೂಪವಿದ್ದರೂ ಅಮೂರ್ತಿ ಸ್ವರೂಪನಾಗಿ ಶಬ್ದ ಮುಗ್ಧನಾದಾತ ಶರಣ. ಸತಿ–ಪತಿ ಎಂಬ ದ್ವೈತಭಾವ ಅಳಿದು ಏಕೋ ಭಾವವೊಂದೇ ಉಳಿದಾತ ಶಿವಶರಣ. ಕುರುಹು ಅರುಹಿನಲ್ಲಿ ಕರಿಗೊಂಡಾತ ಶರಣ. ಅಪರೋಕ್ಷಾನುಭವಾನಂದ ತುಂದಿಲನಾದಾತನೆ ಶರಣ. "ಲೋಕ ವಿರಹಿತ ಶರಣ, ಶರಣವಿರಹಿತ ಲೋಕ" ಅಂತರಂಗದಲ್ಲಿ ಭಾವಿಸುವವನಲ್ಲ,

ಬಹಿರಂಗದಲ್ಲಿ ಬಳಸುವವನಲ್ಲ, ಎರಡನತಿಗಳೆದು ತನ್ನಲ್ಲಿ ತಾನೆ ಸಹಜ ನೋಡಾ ! ಅಂತರಂಗವಿಲ್ಲ–ಬಹಿರಂಗವಿಲ್ಲ ಕೂಡಲ ಚನ್ನಸಂಗಾ, ನಿಮ್ಮ ಶರಣಂಗೆ !" "....ಸಾವಿರಕ್ಕೊಬ್ಬ ಭಕ್ತ, ಲಕ್ಷಕ್ಕೊಬ್ಬ ಜಂಗಮ ; ಕೋಟಿ ಗೊಬ್ಬ ಶರಣ !" "ಕೂಡಲ ಚನ್ನ ಸಂಗಯ್ಯ ನಿಮ್ಮ ಶರಣಸ್ಥಲವಾರಿಗೆಯೂ ಅಳವಡದು" ಎಂದು ಮುಂತಾಗಿ ಸಮ್ಯಗ್‌ಜ್ಞಾನಿ ಚನ್ನಬಸವಣ್ಣ ನಿರೂಪಿಸಿದ್ದಾನೆ.

**ಉಭಯ ನಿಷ್ಠ ನಿಲವು** :–ಶಿವಾಚಾರ್ಯನು ಶಿಕ್ಷಕನು ; ಶಿವಶರಣನು ವಿದ್ಯಾರ್ಥಿಯು. ಶಿವಾಚಾರ್ಯನು ಷಟ್‌ಸ್ಥಲ ಸಿದ್ಧಾಂತಸಿದ್ಧ ; ಶಿವಶರಣನು ಸಾಧಕ. ಶಿವಾಚಾರ್ಯನು ಶಿವತತ್ತ್ವದಲ್ಲಿ ಪ್ರತಿಭಾವಂತ ಶಿಕ್ಷಕ ; ಶಿವಶರಣನು ಪ್ರೌಢ ವಿದ್ಯಾರ್ಥಿಯು, ಭಕ್ತಸ್ಥಲದಿಂದ ಶರಣಸ್ಥಲಕ್ಕೇರಿರುತ್ತಾನೆ ಶಿವಶರಣನು. ಅಯ್ದನೆಯ ಸ್ಥಲ (ವರ್ಗ)ಕ್ಕೆ ಸೇರಿದಾತನು. ಶರಣನ ಗುರಿಕ್ರಿಯೆ ಜ್ಞಾನ ಭಾವಗಳು ನಿಷ್ಪತ್ತಿಗೊಂಡು, ಪಿಂಡಾಕಾಶ ಬಿಂದ್ವಾಕಾಶ ಮಹಾಕಾಶಗಳಲ್ಲಿ ಪರಿವಿಡಿದು ನಿಷ್ಪತ್ತಿಗೊಂಡ ಕ್ರಿಯೆ ಜ್ಞಾನ ಭಾವಗಳನ್ನು ಪ್ರಕಾಶಗೊಳಿಸಿ ಕೊಳ್ಳುವಿಕೆ ! ಗೊಳಿಸಿಕೊಂಡು ಮುಂದೆ ಐಕ್ಯಸ್ಥಲ ಸಂಪನ್ನನಾಗುವ ಹಂಚಿಕೆ ಯಲ್ಲಿರುತ್ತಾನೆ. ಅದುಂಟಾಗಲು ತಾಮಸ ನಿರಸನವಾಗಬೇಕು ; ಅಂದರೆ ಸಂಸಾರ ತಿಮಿರ ಸಂಹಾರವಾಗಬೇಕು ; ಧ್ಯೇಯ ನಿರ್ದೇಶಗೊಳ್ಳಬೇಕು : ಶೀಲಸಂಪಾದನವಾಗಬೇಕು. ಇಷ್ಟಾಗಬೇಕಾದರೆ ಶ್ರೀಗುರುಕೃಪೆ ಬೇಕು.

"ಗುರುರೇವ ಪರಂ ತತ್ತ್ವಂ ಪ್ರಕಾಶಯತಿ ದೇಹಿ ನಾಂ ।
ಕೋ ವಾ ಸೂರ್ಯಂ ವಿನಾ ಲೋಕೇ ತಮಸೋ ವಿನಿವರ್ತಕಃ ?" ॥
ಅಂತರೇಣ ಗುರುಂ ಸಿದ್ಧಂ ಕಥಂ ಸಂಸಾರ ನಿಷ್ಕೃತಿಃ ।
ನಿದಾನಜ್ಞಂ ವಿನಾ ವೈದ್ಯಂ ಕೋವಾ ರೋಗೋ ನಿವರ್ತತೇ ?"

ಸಿ.ಶಿ. ಶರಣಸ್ಥಲ.

ಸಂಸಾರ ಒಂದು ತಿಮಿರ, ಅಂದರೆ ಗಾಢಾಂಧಕಾರ. ಸಂಸಾರದ ಬಗೆಗೆ ಪೂರ್ಣ ಪ್ರಜ್ಞೆಯಿಲ್ಲದ ಶರಣರು ದೇಹಿಗಳು. ದೇಹ ವ್ಯಾಮೋಹಿಗಳು. ಇವರ ತಮಸ್ಸನ್ನು ತೊಡೆದು ಪರಶಿವ ತತ್ತ್ವವನ್ನು ಪ್ರಕಾಶಪಡಿಸುವವನೆಂದರೆ ಗುರುದೇವನೊಬ್ಬನೇ ! ಗುರುದೇವ ಚಿದ್ಭಾನು. ಲೋಕದ ಕತ್ತಲೆಯನ್ನು

ಕಳೆವವನು ಸೂರ್ಯನಲ್ಲದೆ ಬೇರೆ ಉಪಾಯವಿಲ್ಲ. ಅಂತೆಯೇ ಸಿದ್ಧನಾದ ಗುರುದೇವನನ್ನುಳಿದು ಸಂಸಾರ ನಿಷ್ಕೃತಿ ಅಂದರೆ ಸಂಸಾರ ನಿರಸನಕಾರ್ಯವೊದಗದು, ತಕ್ಕ ಚಿಕಿತ್ಸೆಯನ್ನು ಬಲ್ಲ ವೈದ್ಯನಿಂದಲ್ಲದೆ ತನುರೋಗ ತೊಲಗದು. ಅಂತೆಯೇ ಹುಟ್ಟುಸಾವೆಂಬ ಸಂಸಾರ ರೋಗ (ಭವರೋಗ), ಭವರೋಗ ವೈದ್ಯನಾದ ಶ್ರೀಗುರುವಿನಿಂದಲ್ಲದೆ ತೊಲಗದು. ಪರತತ್ತ್ವದ ಪೂರ್ಣಪ್ರಜ್ಞೆ ತೊಳಗದು, ಬಳಿಕ ಅಂತಃಕರಣದ ಅಜ್ಞಾನಾಂಧಕಾರ ಹರಿಯದು. ಹರಿಯದೆ ಸ್ವರೂಪ ಸಾಷಾತ್ಕಾರವಾಗದು. ಸಮರಸವುಂಟಾಗದು. ಅಪರತತ್ತ್ವ ನಿರ್ದೇಶಕ್ಕೆ ಆದಿತ್ಯನು ಹೇಗೋ, ಆ ಪರತತ್ತ್ವ ನಿರ್ದೇಶಕ್ಕೆ ಆಚಾರ್ಯನು ಹಾಗೆ ಅನಿವಾರ್ಯ!

"ಅಜ್ಞಾನಮಲಿನಂ ಚಿತ್ತದರ್ಪಣಂ ಯೋ ವಿಶೋಧಯೇತ್ ।
ಪ್ರಜ್ಞಾವಿಧೂತಿಯೋಗೇನ ತಮಾಹುರ್ಗುರುಸತ್ತಮಂ ॥
ಅಪರೋಕ್ಷಿತ ತತ್ತ್ವಸ್ಯ ಜೀವನ್ಮುಕ್ತ ಸ್ವಭಾವಿನಃ ।
ಗುರೋಃ ಕಟಾಕ್ಷೇ ಸಂಸಿದ್ಧೇ ಕೋ ವಾ ಲೋಕೇಷು ದುರ್ಲಭಃ ?॥
ಕೈವಲ್ಯ ಕಲ್ಪ ತರವೋ ಗುರವಃ ಕರುಣಾಲಯಾಃ।
ದುರ್ಲಭಾ ಹಿ ಜಗತ್ಯಸ್ಮಿನ್ ಶಿವಾದ್ವೈತ್ಯ ಪರಾಯಣಾಃ ॥..."ಸಿ.ಶಿ.
ಶರಣನಿರ್ದೇಶಸ್ಥಲ.

ಚಿತ್ತ ಅದೊಂದು ದರ್ಪಣ. ಅಜ್ಞಾನ ಅಕ್ರಿಯೆಗಳಿಂದ ಮಲಿನವಾಗುವುದು ಅದರ ಸ್ವಭಾವ. ಅದನ್ನು ಅಂದರೆ ಮಲಿನವಾದ ಚಿತ್ತದರ್ಪಣವನ್ನು ಪ್ರಜ್ಞಾ (ಚಿತ್) ವಿಭೂತಿಯೋಗದಿಂದ ಚನ್ನಾಗಿ ಶೋಧಿಸಿ ಶುಭ್ರಗೊಳಿಸುವಾತನೇ ಶ್ರೀಗುರುಸತ್ತಮನು.

ಪರತತ್ತ್ವವನ್ನು ಪ್ರತ್ಯಕ್ಷಗೊಳಿಸಿಕೊಂಡು ಜೀವನ್ಮುಕ್ತ ಸ್ವಭಾವವುಳ್ಳ ಗುರುಸರ್ವೋತ್ತಮನ ಕಾರುಣ್ಯ ಕಟಾಕ್ಷವನ್ನು ಪಡೆದ ಶರಣನಿಗೆ ಈ ಲೋಕಗಳಲ್ಲಿ ದುರ್ಲಭವೆಂಬುದೇ ಇಲ್ಲ.

ಕರುಣಾಲಯರೂ ಕೈವಲ್ಯ ಕಲ್ಪವೃಕ್ಷ ಸದೃಶ್ಯರೂ ಶಿವಾದ್ವೈತ ಸಿದ್ಧಾಂತ ಪರಾಯಣರೂ ಆದ ಗುರುವರ್ಯರು ಈ ಜಗತ್ತಿನಲ್ಲಿ ದುರ್ಲಭರು. ಅಂತಹ ಸರ್ವೋತ್ತಮರಾದ ಗುರುಸಾರ್ವಭೌಮರು, ಸಾಗರಗಳಲ್ಲಿ ಕ್ಷೀರಸಾಗರ

ಇದ್ದಂತೆ, ಬೆಟ್ಟಗಳಲ್ಲಿ ಮೇರು ಬೆಟ್ಟವಿದ್ದಂತೆ, ಗ್ರಹಗಳಲ್ಲಿ ಸೂರ್ಯಗ್ರಹ ವಿದ್ದಂತೆ, ಮಣಿಗಳಲ್ಲಿ ಕೌಸ್ತುಭಮಣಿಯಿದ್ದಂತೆ, ತರುಗಳಲ್ಲಿ ಸುರತರು ವಿದ್ದಂತೆ, ದೇವತೆಗಳಲ್ಲಿ ಶಂಕರನಿದ್ದಂತೆ ; ಪ್ರಾಕೃತಾಶ್ರರಾದ ಗುರುಗಳಲ್ಲಿ ಪರಶಿವಸ್ವರೂಪರಾದ ಗುರುವೇ ಶ್ಲಾಘ್ಯನು. ಇಲ್ಲಿ ಪ್ರಯೋಗಿಸಿದ ಶಿವಾದ್ವೈತ ಪರಾಯಣ ಎಂಬ ವಿಶೇಷ ವಿಶೇಷಣ ಪದಗಮನೀಯ ! ವಿಶ್ವತೋಮುಖ ವುಳ್ಳುದೂ ವಿಶ್ವೋತ್ತರವಾದುದೂ ಆಗಿದೆ. ಶರಣನ ಚಿತ್ತಕ್ಕೆ ಚಿತ್ಕಳೆಯ ತಂದಿಟ್ಟು ತೊಳಗಿಸುವಾತನೇ ಶಿವಾದ್ವೈತ ಶ್ರೀಗುರು ; ಅಥವಾ ಶಿವಾಚಾರ್ಯ. ಆತನೇ ಕರುಣಾಳು ; ಆತನೇ ಕೈವಲ್ಯ ಕಲ್ಪತರು. ಆತನೇ ಶರಣಾಗತ ಶರಣನ ಇಷ್ಟಾರ್ಥಗಳನ್ನೆಲ್ಲ ಕರುಣಿಸುವಾತನು. ಪರಶಿವ ತತ್ತ್ವಸ್ವರೂಪ ಪ್ರಸಾದಲಿಂಗದ ಪರಮಾನುಭವಾನಂದವನ್ನು ಶರಣನಿಗೆ ಸಂಪಾದಿಸುವಾತನು. ಅಂತಹ ಆ ಪರಮ ಪ್ರಸಾದಲಿಂಗಾನುಭವಾನಂದವನ್ನು ಪಡೆವುದೇ ಶರಣನ ಶೀಲಸಂಪಾದನ. ಶರಣಾಗತನ ತಾಪತ್ರಯವನ್ನು ತೊಡೆದು ಹಾಕುವ ಪರಮ ಪ್ರಸಾದಲಿಂಗದಲ್ಲಿ ಭಾವವನ್ನು ಸ್ಥಿರವಾಗಿರಿಸುವ ಯೋಗವೇ ಶೀಲ, ಪರಶಿವ ಸ್ವರೂಪ ಪ್ರಸಾದ ಲಿಂಗಧಾರಣ, ಜ್ಞಾನ, ಧ್ಯಾನ, ಸಾಮರಸ್ಯಗಳನ್ನು ಪಡೆವುದೇ ಮೀರಿದಕ್ರಿಯೆ ; ಅದುವೇ ಶೀಲಸ್ವರೂಪಸದ್ವೃತ್ತಿ ; ಚಿದ್ವೃತ್ತಿ !

"ಶೀಲಂ ಶಿವೈಕವಿಜ್ಞಾನಂ ಶಿವಧ್ಯಾನೈಕತಾನತಾ ।
ಶಿವಪ್ರಾಪ್ತಿ ಸಮುತ್ಕಂಠಾ ತದ್ಯೋಗೀ ಶೀಲವಾನ್ಸ್ಮೃತಃ ॥

ಶಿವಾದ್ವೈತ ಪರ ಶಿವಾಚಾರ್ಯನು ತನಗೆ ಅನನ್ಯಶರಣಾಗತನಾದ ಶರಣರಿಗೆ ಈ ಉಚ್ಚಮಟ್ಟದ ಶೀಲವನ್ನು ಬೋಧಿಸಿ ಶೀಲವಂತನನ್ನಾಗಿಸುತ್ತಾನೆ. ಶಿವೈಕ ವಿಜ್ಞಾನವೇ ಶೀಲ, ಶಿವಧ್ಯಾನೈಕತಾನತೆಯೇ ಮೀರಿದ ಕ್ರಿಯೆ ; ಆ ಸಮ್ಯಗ್ ಜ್ಞಾನ–ಸಮ್ಯಕ್‌ಕ್ರಿಯೆಗಳಿಂದ ಪರಶಿವ ಪ್ರಾಪ್ತಿಯಲ್ಲಿ ಸಮ್ಯಗುತ್ಕಂಠವುಳ್ಳಾತನೇ ಶಿವಯೋಗಿ ! ಆತನೇ ಶೀಲವಂತ !! ಇಲ್ಲಿದೆ ಶಿವಾಚಾರ್ಯ-ಶಿವಶರಣ ಸನ್ನಿಹಿತ ಸಂಬಂಧದ ಆಳವಾದ ಅನುಭಾವ ! ಅತ್ಯಂತ ಸೂಕ್ಷ್ಮತಮವಾದ ಪರಾಮರ್ಶ ಮಹಾಮನೋಭಾವ !!

ಷಟ್‌ಸ್ಥಲಗಳಲ್ಲಿ ಶಿವಾಚಾರ್ಯನ ಸಾಂಸ್ಕಾರಿಕ ಸಂಬಂಧ ಮಾರ್ಗಕ್ರಿಯೆ–ಮೀರಿದ ಕ್ರಿಯೆಗಳೆರಡರಲ್ಲಿಯೂ ಆಯುತ–ಸ್ವಾಯತ–ಸನ್ನಿಹಿತವಾಗಿ ಷಡಂಗ

ರನ್ನು ಸಮ್ಯಕ್ಕಾಗಿ ಸ್ಪಂದಿಸುವ ಸಚ್ಚಿನ್ಮಯ ಸರ್ವೋತ್ತಮ ಮಾಧ್ಯಮ: ಸಮ್ಯ ಗಾತ್ಮೀಯ ಸಂಬಂಧ. ಶಿವಾಚಾರ್ಯನ ಷಡಂಗ-ಷಡ್ಲಿಂಗ ಸಂಸ್ಕಾರ ವಿಕಾಸ ಜೀವನದ ಜೀವಾಳ. ಸರ್ವ ಸಮರಸ ಜೀವನದ ತಿರುಳು. ಶಿವಾಚಾರ್ಯರ ಕಾರುಣ್ಯ ರಸಪೂರ್ಣ ಸಂಸ್ಕಾರದಿಂದ ಜೀವನಕ್ಕೆ ಸತ್ಯ ಚೈತನ್ಯದಾವಿಷ್ಕಾರ! ಷಡಂಗರ ಕ್ರಿಯೆ ಜ್ಞಾನ ಭಾವ ಜೀವಗಳು ಪರಿಪಕ್ವಗೊಂಡು ಪರಮ ಪರಿ ಣಾಮಕಾರಿಗಳಾಗುತ್ತವೆ. ತತ್ತ್ವ ಸತ್ವಗಳಿಂದ ಭರಿತವಾಗುತ್ತವೆ. ವಿಶ್ವೋದ್ಧ ರಣ ಸಾಮರ್ಥ್ಯವುಳ್ಳವಾಗುತ್ತವೆ. ಅಪರ ವಿಜ್ಞಾನವು ಭೌತಿಕ ದೈಹಿಕ ಬೌದ್ಧಿಕ ಜೀವನದ ಬೆಳವಣಿಗೆಯನ್ನುಂಟು ಮಾಡಿದರೆ, ಶಿವಾಚಾರ್ಯರು ಕರುಣಿಸುವ ಪರತತ್ತ್ವ ವಿಜ್ಞಾನವು ಇವುಗಳೊಡನೆ ಮನ ಭಾವ ಆತ್ಮಗಳ ಬೆಳವಣಿಗೆ ಯನ್ನುಂಟು ಮಾಡುತ್ತದೆ. ಅತೀಂದ್ರಿಯ ಶಕ್ತಿಯನ್ನು ದೀಪ್ತಿಯನ್ನು ಹೆಚ್ಚಿಸು ತ್ತದೆ. ಶಿವಾಚಾರ್ಯ ಸಂಸ್ಕಾರದಿಂದ ಸರ್ವಾಂಗ-ಲಿಂಗಗಳ ಉದ್ದೀಪನ! ಜೀವನ ಸಾರಸರ್ವಸ್ವವಾದ ಚಿಚ್ಛಕ್ತಿಯ ಅಭಿವ್ಯಕ್ತಿ! ಅದರಿಂದ ಸರ್ವ ವಿಕಾರಗಳ ವಿಮುಕ್ತಿ!! ಶಿವಾಚಾರ್ಯ ಸಂಸ್ಕಾರ ಮಾನವೀಯ ಜೀವನವೃಕ್ಷದ ತಾಯ್ಬೇರು.

ಇಂತಹ ಅಮೋಘವಾದ ಶಿವಾಚಾರ್ಯರ ಶಿವಸಂಸ್ಕಾರ ಎಲ್ಲೋ ಕೆಲವ ರಿಗೆ ಮಾತ್ರ ಸೀಮಿತಗೊಂಡರೆ ಸಾಲದು; ಸಾಮಾಜಿಕರೆಲ್ಲರಿಗೂ ಸಲ್ಲುವಂತಾಗ ಬೇಕಾಗಿದೆ. ಸಲ್ಲುವಂತೆ ಸಂಸ್ಕಾರವನ್ನು ಸರ್ವರಿಗೆ ಆಕರ್ಷಣೀಯವಾಗುವಂತೆಸಗ ಬೇಕಾಗಿದೆ. ಈ ದಿಸೆಯಲ್ಲಿ ಇಂದಿನ ಶಿವಾಚಾರ್ಯರ ಸಾಹಸ ಸಾಲದೆನಿಸುತ್ತಿದೆ. ಕ್ರಿಯೆ ಮತ್ತು ಜ್ಞಾನಾತ್ಮಕ-ಭಾವಾತ್ಮಕ ಸಂಸ್ಕಾರ ಜೀವನಕ್ಕೆ ಅನಿವಾರ್ಯ. ಇದನ್ನು ಶಿವಾಚಾರ್ಯರು ಅದೆಂದೋ ಸಿದ್ಧಾಂತೀಕರಿಸಿದ್ದಾರೆ. ಮಾನವೀಯ ಜೀವನಕ್ಕೆ ತೀರ ಹತ್ತಿರವಾದ ಬದುಕಿನ ಮೌಲ್ಯಗಳನ್ನು ಮನಗಂಡು ಬಗೆ ಗೊಂಡು ೨೧ ಉಪದೀಕ್ಷೆಗಳನ್ನೊಳಗೊಂಡ ತ್ರಿವಿಧ ದೀಕ್ಷೆಗಳನ್ನು ಮಾತ್ರ ವಲ್ಲದೆ ಚಿನ್ಮಯ ದೀಕ್ಷೆಯನ್ನು ತೀರ್ಮಾನಿಸಿದ್ದಾರೆ. ಇದರಿಂದಾಗಿ ಮಾರ್ಗಕ್ರಿಯಾ ಮಾರ್ಗದಿಂದ ಮುಂದುವರಿದು ಮೀರಿದ ಕ್ರಿಯೆಯಲ್ಲಿ ಪ್ರಾಣಲಿಂಗಿ ಸ್ಥಲವನ್ನು ಸ್ವಾನುಭವದಿಂದ ಆಳವಡಿಸಿಕೊಂಡು ಭಾವನೆಗಳನ್ನು ಮಾಗಿಸಿಕೊಂಡು ಪರಾ ಶಕ್ತಿಯನ್ನು ಮೈಗೂಡಿಸಿಕೊಂಡು ಅಪರ ತತ್ತ್ವದಿಂದ ಪರತತ್ತ್ವದ ಉನ್ಮೇಷವಾಗಿ ಶರಣನನ್ನು ಪರಶಿವಾನಂದದಲ್ಲಿ ಮೈ ಮರೆವಂತೆ ಮಾಡುವನು ಶಿವಾಚಾರ್ಯನು,

ಅಂದರೆ ಪರಶಿವಾನಂದದಲ್ಲಿ ಪರವಶನಾಗಿರುವನು. ಆಗ ಈ ಸ್ಥಲಗಳ ನೆಲ ಗಟ್ಟನ್ನು ಮೀರಿ ಪರಮಾಕಾಶಸ್ವರೂಪ ಆ ಮಹಾಸ್ಥಲ ಅಂದರೆ ನಿಃಸ್ಥಲಕ್ಕೇರಿ ನಿಃಪತಿ ನಿಲವಿನಲ್ಲಿರುತ್ತಾನೆ. ಜಾಗತಿಕ ಜೀವನದ ಸಮಸ್ಯೆಗಳಿಗೆ ಸ್ವಾರ್ಥ ಸಂಕು ಚಿತ ಸಾಧನೆಗಳಿಗೆ ರಾಗ ದ್ವೇಷ ಮದ ಮತ್ಸರಗಳಿಗೆ ಆತನ ಬಗೆಯಲ್ಲಿ ಇಂಬಿ ರದು. ಭೂತಾಕಾಶದಿಂದಾಚೆ ಪರಮಾಕಾಶಕ್ಕೆ ಪಯಣಿಸುತ್ತಿರುವ ಶರಣನಲ್ಲಿ ಭೂತಾಕಾಶದಿಂದೀಚೆಗಿರುವ ವಾಯವೀಯ ಆಗ್ನೇಯ ಸಾಲೀಲ ಪಾರ್ಥಿವ ಕಿಂಚಿತ್ ಭಾವನೆಗಳಿರುವುದಾದರೂ ತಾನೆಲ್ಲಿ ? ಇಂದಿನ ನಾಟಕೀಯ ಶರಣ ವಾದಿಗಳು ಅತ್ಯಂತ ಜಡವಾದ ಪಾರ್ಥಿವ ಸಾಲೀಲ ಚಟವಟಿಕೆಯ ಚಳವಳಿ ಯಲ್ಲಿ ಚಂಚಲ ಚಿತ್ತರಾಗಿರುವಿಕೆಯು ಅದೆಂತಹ ಆಭಾಸ ? ಅದೇನು ಅಸತ್ಯ ಕೀಳ್ ಸಾಹಸ ? ಆ ಸತ್ಯ ಶರಣನ ಶಾಂತ್ಯತೀತ ಜೀವನವೆತ್ತ ? ಈ ಅಸತ್ಯ ಶರಣ ಸಂಪ್ರದಾಯದವರ ಅಶಾಂತಿ ಜೀವನವೆತ್ತ ?

"ಅಂಗದಾಪ್ಯಾಯನವಳಿಯದ ಕಾರಣ ಲಿಂಗ ಲಿಂಗವೆನುತಿರ್ದರು,
ಸಂಗದಾಪ್ಯಾಯನವಳಿಯದ ಕಾರಣ ಜಂಗಮ ಜಂಗಮವೆನುತ್ತಿರ್ದರು.
ಪರಿಣಾಮ ನೆಲೆಗೊಳ್ಳದ ಕಾರಣ ಪ್ರಸಾದ ಪ್ರಸಾದವೆನುತಿರ್ದರು
ಇಂತು ಒಂದೊಂದರಂಗವಿಡಿದು ನಾಮ ಭಂಗಿತರಾದರೆಲ್ಲರು
ಕೂಡಲ ಚನ್ನಸಂಗಾ, ನಿಮ್ಮ ಶರಣ ಅಂಗರಹಿತ !" —ಚನ್ನಬಸವಣ್ಣ.

ಅಂಗಭಾವ ಅರತುಹೋದರೆ ತಾಮಸ ನಿರಸನ ಸ್ಥಲದ ಶರಣ. ಅಂಗದಾ ಪ್ಯಾಯನ–ಸಂಗದಾಪ್ಯಾಯನಗಳು ಅಳಿಯದೆ ಶರಣನಾಗನು. ಪರಮ ಪರಿ ಣಾಮ ನೆಲೆಗೊಳ್ಳಬೇಕು. ಇಲ್ಲವಾದರೆ ನಾಮಾಭಿಮಾನವಿಡಿದು ಹಮ್ಮಿನಲ್ಲಿ, ಶೋಷಣೆಯಲ್ಲಿ, ಆಕ್ರಮಣದಲ್ಲಿ, ದ್ವೇಷಾಸೂಯೆಗಳಲ್ಲಿ ದಾಹ ಮೋಹಗಳಲ್ಲಿ ಭಂಗಿತರಾಗುವರು. ಮತ್ತು ಹೊನ್ನು ಮಣ್ಣುಗಳ ದುರಾರ್ಜನೆಯಲ್ಲಿ ದುಡುಕಿ ಧುಮ್ಮಿಕ್ಕುವವರು ಅಂಗರಹಿತರಲ್ಲ ; ಭಂಗಿತರು ದೇಹಿಗಳು, ದುರ್ಮೋಹಿಗಳು ಗುರು–ಲಿಂಗ–ಜಂಗಮ ದ್ರೋಹಿಗಳು.

"ಅರ್ಥೇಷಣ, ಪುತ್ರೇಷಣ, ದಾರೇಷಣವೆಂಬ
ಈಷಣ ತ್ರಯಂಗಳನೆ ಬಿಟ್ಟು ಮಂಡೆ ಬೋಳಿಸಿಕೊಂಡ ಬಳಿಕ,
ಮರಳಿ ಹೊನ್ನಿಂಗೆರಗಿದಡೆ ಗುರು ದ್ರೋಹ ;

ಹೆಣ್ಣಿಂಗೆರಗಿದಡೆ ಲಿಂಗದ್ರೋಹ ; ಮಣ್ಣಿಂಗೆರಗಿದಡೆ ಜಂಗಮದ್ರೋಹ ;
ಆತ ಪೂರ್ವಾಚಾರಿಯಲ್ಲ....ಕೂಡಲ ಚನ್ನಸಂಗಾ....!"
"ಲಿಂಗವೆಂದರಿದಂಗೆ ಹಿಂದಿಲ್ಲ ; ಜಂಗಮವೆಂದರಿದಂಗೆ ಮುಂದಿಲ್ಲ ;
ಇದೇ ನೋಡಾ ಶಿವಾಚಾರದ ತೊಡಕು !
'ಆತ್ಮನಃ ಪ್ರಕೃತಿಂ ಚ ಭಾವಯೇತ್'-ಎಂದುದಾಗಿ,
ಕೂಡಲ ಚನ್ನಸಂಗಮದೇವನು ಮುಟ್ಟಬಾರದ ಠಾವನು ಮರೆಗೊಂಡಿಪ್ಪನು."
"ಆದ್ಯರ ವಚನವೇನು ಬಟ್ಟೆಯ (ಬೀದಿಯ) ಸಂಬಳವೆ,
ಮನೆ ಮನೆಯ ಹೊಕ್ಕು ಬೋಧಿಸುವಂತಾಗಿ –
ಮನೆ ಮನೆಯ ಹೊಕ್ಕು ಮೆಚ್ಚಿಸುವಂತಾಗಿ ?
ಇದು ಭಕ್ತಿಸ್ಥಲವೆ ? ಇದು ಜಂಗಮಸ್ಥಲವೆ ?
ಭಕ್ತನಾದಡೆ ಭೃತ್ಯನಾಗಿರಬೇಕು ; ಜಂಗಮನಾದಡೆ ಕರ್ತನಾಗಿರಬೇಕು.
ಈ ಎರಡೂ ಅಲ್ಲದ ಎಡೆಹಂಚರ ತೋರದಿರು ;
ಕೂಡಲ ಚನ್ನಸಂಗಮದೇವಾ !" – ಚನ್ನಬಸವಣ್ಣ.

ಮೊದಲ ವಚನದಲ್ಲಿ ಈಷಣತ್ರಯ ಶರಣನಿಗಿರಬಾರದೆಂದು, ಇದ್ದರೆ ಆತ ಗುರು–ಲಿಂಗ–ಜಂಗಮದ್ರೋಹಿಯೆಂದು ಸ್ಪಷ್ಟವಾಗಿ ನಿರೂಪಿಸಿದೆ. ಎರಡನೆಯದರಲ್ಲಿ ಲಿಂಗ ಜಂಗಮರನ್ನು ಚನ್ನಾಗಿ ಅರಿತ ಶರಣನಿಗೆ ಕಾಲ ದೇಶ ವಸ್ತು ಪರಿಚ್ಛೇದಗಳಿಲ್ಲ ; ಪ್ರಾಪ್ತಿಯ ದಾಹವಿಲ್ಲ. ಇದ್ದರೆ ಇದು ಶಿವಾಚಾರದ ತೊಡಕು. ಮುಟ್ಟಬಾರದ ಠಾವಿಗೆ ಮೋಹಿಸುವಾತನು, ಹಿಂದು ಇಂದು ಮುಂದು ಈ ಕಾಲ ಪರಿಚ್ಛೇದಿಸುವಾತನು, ಶರಣನಲ್ಲ, ಶಿವಾಚಾರಿಯಲ್ಲ.

ಊರೂರು,ಬೀದಿ-ಬೀದಿ, ಮನೆ ಮನೆಗಳ ತಿರುಗಿ (ಕರೆಯಿಲ್ಲದೆ) ವಚನಗಳನ್ನು ಹೇಳುವ ಜನರನ್ನೂ ಮರುಳು ಮಾಡುವ, ಅನವಶ್ಯಕವಾಗಿ ಶೋಷಿಸುವ ಚಟವುಳ್ಳವನು ಭಕ್ತನಲ್ಲ, ಜಂಗಮನಲ್ಲ ; ಇವರು ಎಡೆಹಂಚರು. ಅಂತವರನ್ನು ತೋರದಿರೆಂದು ಚನ್ನಬಸವಣ್ಣನವರು ಶರಣಸ್ಥಲದಲ್ಲಿ ಸ್ಪಷ್ಟಗೊಳಿಸಿದ್ದಾರೆ. ಇದಕ್ಕೆ ವಿರುದ್ಧವಾಗಿ ನಡೆವವರು–ನುಡಿವವರು ಸತ್ಯಕ್ಕೂ ಶರಣಧರ್ಮವಾದಿಗಳೆ ? ಇನ್ನು ಶರಣಸ್ಥಲದ ಗುರುಲಿಂಗೋಪಾಸನ ಬಗೆಗೆ

"ಗುರು ಶಿಷ್ಯ ಸಂಬಂಧವನೇನೆಂದುಪಮಿಸುವೆನಯ್ಯಾ ?
ಜ್ಯೋತಿಯಲೊದಗಿದ ಜ್ಯೋತಿಯಂತಿರಬೇಕು,

ದರ್ಪಣದೊಳಡಗಿದ ಪ್ರತಿಬಿಂಬದಂತಿರಬೇಕು.
ಸ್ಫಟಿಕದ ಘಟದೊಳಗಿರಿಸಿದ ರತ್ನದಂತಿರಬೇಕು.
ರೂಪಿನ ನೆಳಲಿನ ಅಂತರಂಗದಂತಿರಬೇಕು. ಇದು ಕಾರಣ,
ಕೂಡಲ ಚನ್ನಸಂಗಯ್ಯಾ, ದರ್ಪಣವ ದರ್ಪಣಕ್ಕೆ ತೋರದಂತಿರಬೇಕು."

ಚನ್ನಬಸವಣ್ಣ ಚನ್ನಾಗಿ ಗುರು-ಶಿಷ್ಯ (ಶರಣ) ಸಂಬಂಧವನ್ನು ಅವಿರಳವಾಗಿ ನಿರೂಪಿಸಿದ್ದಾನೆ. ಗುರು ಪ್ರಥಮ ಪ್ರತಿಭಾನ್ವಿತ ಜ್ಯೋತಿ, ಅದರಿಂದ ಅಂಟಿಸಿಕೊಂಡ ಮರುಸೊಡರು ಶಿಷ್ಯ ಅಥವಾ ಶರಣ. ದರ್ಪಣ ಗುರು, ಅದರೊಳಗೆ ತೋರಿದ ಪ್ರತಿಬಿಂಬ ಶರಣ. ಸ್ಫಟಿಕಘಟ ಶ್ರೀ ಗುರು, ಅದರೊಳಗಿರಿಸಿದ ರತ್ನ ಶರಣ. ರೂಪಿನ ನೆಳಲು ಶ್ರೀ ಗುರು ; ಅದರೊಳಗಿನ ತಂಪು ಶರಣ. ಇಂತಿರುವಾಗ ಭೇದವೇನು, ಎಲ್ಲಿ ? ಶಿವಾಚಾರ್ಯನಿಲ್ಲದೆ ಭಕ್ತನಿಲ್ಲ, ಪ್ರಸಾದಿ ಪ್ರಾಣಲಿಂಗಿಗಳಿಲ್ಲ ; ಶಿಷ್ಯ–ಶರಣರಿಲ್ಲ.

ಶಿವಾಚಾರ್ಯ ಸಂತತಿಯಾಗಲಿ, ಶಿವಶರಣ ಸಂತತಿಯಾಗಲಿ ಇವೆರಡರ ಮೂಲ ವೀರಶೈವಧರ್ಮ ! ಶಿವಾಚಾರ್ಯ ತತ್ತ್ವ ಸಂಸ್ಕೃತಿ ಸಾಹಿತ್ಯ ಸಂಸ್ಕಾರಗಳಾಗಲಿ, ಶಿವಶರಣರ ತತ್ತ್ವ ಸಂಸ್ಕೃತಿ ಸಾಹಿತ್ಯಗಳಾಗಲಿ ಇವುಗಳಿಗೆ ಆದಿ ಆಕರ ವೀರಶೈವ ಧರ್ಮ ! ! ಎಂಬುದನ್ನು ಯಾರೂ ಮರೆಯುವಂತಿಲ್ಲ ; ಮರೆಮಾಚುವಂತಿಲ್ಲ. ವೀಳಶೈವ ಸಂಸ್ಕಾರಗಳಲ್ಲಿ ಒಂದು ಸಂಸ್ಕಾರವಾದ 'ಲಿಂಗಾಯುತ'ವೇ ವೀರಶೈವವೆಂದು ಹೇಳುವುದಾಗಲಿ ; ಷಟ್‌ಸ್ಥಲ ಸಾಧಕರಲ್ಲಿ ಒಬ್ಬನಾದ ಶರಣನೇ ಸರ್ವಸ್ವವೆಂದಾಗಲಿ, ಅಷ್ಟಾವರಣಾಂಗ–ಪಂಚಾಚಾರ ಪ್ರಾಣ, ಷಟ್‌ಸ್ಥಲಾತ್ಮರನ್ನು ರೂಪಿಸಲು ಅಂದರೆ ಉತ್ಪಾದಿಸಲು ಮೂಲ ಕಾರಣರಾದ ಶಿವಾಚಾರ್ಯರನ್ನು ಟೀಕಿಸಿ ದ್ವೇಷಿಸುವುದಾಗಲಿ ವಿಚಾರಶೀಲರಿಗೆ ಉಚಿತವಲ್ಲ ; ಖಚಿತವಾಗಿ ನಿಲ್ಲುವವಲ್ಲ ; ಸಲ್ಲುವವಲ್ಲ ; ವೀರಶೈವಾಗಸದ ಸೂರ್ಯ ಆಗಮ ವಾಙ್ಮಯ; ಅದರ ಕಿರಣಗಳು ವಚನಗಳು. ಆಗಮ ವಾಙ್ಮಯದಂತೆ ವಚನ ವಾಙ್ಮಯ ವೀರಶೈವರ ಪರಿಪೂರ್ಣ ಜೀವನವನ್ನು ಸ್ಪಂದಿಸುವಂತಿಲ್ಲ. ತತ್ತ್ವಗಳನ್ನು ವಿಧಿ ವಿಧಾನಗಳನ್ನು ಪರಿಪೂರ್ಣವಾಗಿ ನಿರೂಪಿಸುವಂತಿಲ್ಲ. ಆದರೆ ಹಲವು ಹತ್ತು ಅನುಭವಗಳ ಮೌಲ್ಯವನ್ನು ಎತ್ತರಿಸಿವೆಯೆಂಬುದನ್ನು ಎಂದಿಗೂ ಅಲ್ಲಗಳೆಯುವಂತಿಲ್ಲ. ವ್ಯಕ್ತಿ ನಿಷ್ಠ ವರ್ಣನೆಗೆ,

ವಾಸ್ತವ ವೇದಿಕೆಯ ಮೇಲೆ ನಿಲ್ಲದ ಪವಾಡ ಪವಣಿಕೆಗೆ ಮಿಗಿಲಾದ ಗಮನ ವಿದೆಯೆಂಬುದು ನಿಷ್ಠುರವಾದರೂ ನೈಜ ಸಂಗತಿ !

ಏನೇ ಆಗಲಿ, ಶಿವಾಚಾರ್ಯ ಮೌಲ್ಯವನ್ನಾಗಲಿ, ಶಿವಾಗಮ ಮೌಲ್ಯ ವನ್ನಾಗಲಿ ತಗ್ಗಿಸಲು ತಾತ್ತ್ವಿಕವಾಗಿ ಸಾಧ್ಯವಿಲ್ಲ. ಮಗನು ಅದೆಷ್ಟೇ ಬೆಳೆ ಯಲಿ, ಬೆಳಗಲಿ ತಂದೆಯ ಮೌಲ್ಯ ತಗ್ಗದು. ಮಗನಿಗೆ ಮೂಲವೆಂದು ಹೇಳಲು ಹಿಂಜರಿಯಬೇಕಾಗಿಲ್ಲ. ಹಿಂಜರಿದರೆ ಹಿಂಗುವಂತಿಲ್ಲ. ಶಿವಕ್ಕೆ ಆಚಾರ್ಯನು ಶಿವಾಚಾರ್ಯನು ; ಶಿವಕ್ಕೆ ಶರಣಾಗತನು ಶಿವಶರಣನು. ಒಂದು ಸಮರಸ ಸಂಬಂಧ ಅಥವಾ ಸಮವಾಯ ಸಂಬಂಧ ; ಇನ್ನೊಂದು ಸಂಯೋಗ ಸಂಬಂಧ 'ಹರ ಮುನಿದರೆ ಗುರು ಕಾಯುವ, ಗುರು ಮುನಿದರೆ ಹರಕಾಯ !' ತಾನೆ ?

## ವೀರಾಗಮ ವೀರಮಾಹೇಶ್ವರ ಸ್ವರೂಪ ನಿರೂಪ

ವೀರಾಗಮದ ನಾಲ್ಕನೆಯ ಪಟಲ ವೀರಮಾಹೇಶ್ವರ ಸ್ವರೂಪಕ್ಕೆ ಮೀಸಲಾಗಿದೆ. ಜಗದ ಜನತೆಯನ್ನೆಲ್ಲ ತನ್ನ ಲೀಲೆಯಿಂದ ಸೋಲಿಸಿದ ಅವಿದ್ಯಾತ್ಮಕ ಮಾಯೆಯನ್ನು ಗೆದ್ದ ವೀರಮಾಹೇಶ್ವರರ ಚಾರುಚರಿತ್ರೆ ಸುರ ವಿಸ್ಮೃತ ; ಸುವಿದಿತ ! ಮಾಯೆ ಮಾಟಗಾತಿ. ಜನದ ಮನೋಭೂಮಿಯಲ್ಲಿ ಪ್ರಾಕೃತಿಕ ಕಾಮಿನಿಯಾಗಿ ಅಲ್ಲಸಲ್ಲದ ಆಟವನಾಡಿಸಿ ವಿಕೃತಿಗೀಡು ಮಾಡು ವಳು. ಅಂತವಳನ್ನು ಗೆದ್ದು ದೂರವಿರಿಸಿದ ವೀರರು ವೀರಮಾಹೇಶ್ವರರು. ಸರ್ವ ಸಾಮಾನ್ಯರಲ್ಲಿ ಪ್ರಕೃತಿಯನ್ನು ವಿಕೃತಿಯನ್ನಾಗಿಸುವಳು ಈ ಮಾಯೆ ! ಸರ್ವ ಮಾನ್ಯರಾದ ವೀರ ಮಾಹೇಶ್ವರರು ಪ್ರಕೃತಿಯನ್ನು ಸಂಸ್ಕೃತಿಯನ್ನಾಗಿ ಸುವರು. ಅಂದರೆ ಪ್ರಕೃತಿಯಿಂದ ಸಂಸ್ಕೃತಿಯನ್ನು ಸಾಧಿಸುವರು, ಆದರಿಂದ ಸರ್ವ ಸಮರ್ಥನಾದ ಜವರಾಯನು ವೀರ ಮಾಹೇಶ್ವರರ ಮೇಲೆ ತನ್ನ ಕೈಯ ಮಾಡಲು ಮಾತ್ರ ಅಸಮರ್ಥನಾಗಿರುವನು. ಅಂದರೆ ಸಾವನ್ನು ಜಯಿಸಿ ನಿತ್ಯ ಸತ್ಯ ಜೀವಿಗಳಾಗಿರುವರು. ಶಿವ ಸಂಸ್ಕಾರಿಗಳಾಗಿ ಕೈವಲ್ಯ ಕಾರಣ ಜ್ಞಾನವುಳ್ಳವರಾಗಿ ತ್ರಿಲೋಕ ಜನವಂದಿತರಾಗಿರುವರು. ಜಾಗತಿಕ ಜನತೆಗೆ ಭವವಿಮೋಚನೆ ಮಾಡಿಸಲು ಸರ್ವ ಸಮರ್ಥರು. ಇದಕ್ಕೆ ಮಂಗಲಕರ ವಾದ ಲಿಂಗಧಾರಣವನ್ನು ಮಾಧ್ಯಮವನ್ನಾಗಿಸಿರುವರು. ಆತ್ಮಜ್ಞಾನಕ್ಕೆ ಆತ್ಮಾನುಭೂತಿಗೆ ಲಿಂಗಧಾರಣ ಕಾರಣ ಎಂದು ಬೋಧಿಸುವರು. ತಾವೂ ನಿತ್ಯಲಿಂಗ ಪೂಜಾ ನಿರತರು. ಚಿಲ್ಲಿಂಗ ಚಿತ್ಕಳಾಶಾಲಿಗಳಾಗಿ ಲಿಂಗ ವೀರರೂ ಎನಿಸುವರು.

ಸಾಮಾಜಿಕ ಮತ್ತು ನೈತಿಕಗಳಿಗೆ ಹೆಚ್ಚಿನ ಮೌಲ್ಯವನ್ನೀಯುವರು ವೀರ ಮಾಹೇಶ್ವರರು. ವೀರಾಗಮ ಕಾಲದ ಸಮಾಜವು ಹೆಚ್ಚು ನೈತಿಕ ಆಸ್ತಿಕ ಭಾವಗಳಿಂದ ಆಚರಣಗಳಿಂದ ಕೂಡಿತ್ತು. ಭೌತಿಕ ಪರಿಜ್ಞಾನವನ್ನು ಪಡೆ ದಿದ್ದರೂ ಆತ್ಮಿಕಾನಂದವು ಅಳವಡದೆಂದು ವೀರ ಮಾಹೇಶ್ವರರಿಂದ ಅರಿದು

ನೈತ್ರಿಕ ತಾತ್ವಿಕ ಜೀವನಕ್ಕೆ ಅಂಟಿಕೊಂಡಿದ್ದರು. ರಾಜಾಧಿರಾಜರೂ ಸಹ ಕ್ರಿಯಾಶೀಲರಾಗಿ ತತ್ತ್ವಜ್ಞರಾಗಿ ದಾಸೋಹ ಧರ್ಮ ಪಶು ಪರಿಪಾಲಿಸುತ್ತಿದ್ದರು. ಮತ್ತು ಚಿಚ್ಛಕ್ತಿಜ್ಞಾನ ನಿಲಯಗಳಲ್ಲಿ ನಡೆವ ಅನುಭಾವ ಗೋಷ್ಠಿಗಳಲ್ಲಿ ಭಾಗವಹಿಸಿ ಜಗದ್ಗುರು ರೇಣುಕ ಭಗವತ್ಪಾದರ ಕೃಪೆಗೆ ಪಾತ್ರರಾಗುತ್ತಿದರು ; ಆಗಿದ್ದರು.

ವೀರಭದ್ರಾನುಯಾಯಿಗಳಾದ ವೀರಮಾಹೇಶ್ವರರು, ಜಗದ್ಗುರು ರೇಣುಕರಿಂದ ಸೃಜನಗೊಂಡ ಚಿಚ್ಛಕ್ತಿಜ್ಞಾನನಿಲಯುಗಳಲ್ಲಿ ನಿಚ್ಚ ನಿಚ್ಚ ಅಚ್ಚ ಮನಸ್ಸಿನಿಂದ ಎಚ್ಚತ್ತ ಬಗೆಯಿಂದ ಭಾಗವಹಿಸಿ ಚಿನ್ನಾದ ಚಿತ್ಕಳೆ ಚಿದ್ರಸಗಳ ಚಿತ್ಕ್ರಿಯೇ ಚಿದನುಭಾವಗಳ ಉಪಾಸನೆಯನ್ನು ಉತ್ಸಾಹ ಉಲ್ಲಾಸಗಳಿಂದ ನಿರತಿಶಯವಾಗಿ ನೆರವೇರಿಸುತ್ತಿದ್ದರು. ಚಿದಾನಂದ ಪರಿಣಾಮದಲ್ಲಿ ಪರವಶರಾಗಿರುತ್ತಿದ್ದರು. ಇದರಿಂದಾಗಿ ಅವರಿಗೆ ಐಹಿಕ ದೈಹಿಕ ಸುಖಭೋಗೇಚ್ಛೆ ಎಳ್ಳಷ್ಟೂ ಇರಲಿಲ್ಲ. ಇಷ್ಟೇ ಅಲ್ಲ,

"ತೃಣೀಕುರ್ವಂತಿ ಬ್ರಹ್ಮಾಣಂ, ಜಡೀ ಕುರ್ವಂತಿ ಮಾಧವಂ ।
ವೀರ ಮಾಹೇಶ್ವರಾಃ ಸರ್ವೇ ಭಕ್ತಾಭೀಷ್ಟ ಫಲ ಪ್ರದಾಃ ॥"

— ವೀರಾಗಮ

ಬ್ರಹ್ಮ ಪದವಿ, ವಿಷ್ಣು ಪದವಿಗಳನ್ನು ಆ ಆ ಲೋಕ ಸುಖದಾಸೆಗಳನ್ನು ತೃಣೀಕರಿಸಿದ್ದರು. ಭಕ್ತ ಜನರ ಉದ್ಧಾರವೇ ಅವರ ಪ್ರತಿನಿತ್ಯದ ಮಣಿಹವಾಗಿತ್ತು. ಸ್ವಾರ್ಥ ಅದೆಷ್ಟೂ ಅವರಲ್ಲಿರಲಿಲ್ಲ. "ಬ್ರಹ್ಮ ಪದವಿಯನೊಲ್ಲೆ ವಿಷ್ಣು ಪದವಿಯನೊಲ್ಲೆ....ಎಂಬೀ ಬಸವಣ್ಣನವರ ವಚನವನ್ನಿಲ್ಲಿ ನೆನೆಯಬೇಕು. ಈ ಆಗಮೋಕ್ತಿಯ ಛಾಯೇ ವಚನದಲ್ಲಿ ಮೂಡಿ ಬಂದುದು ಮನವರಿಕೆಯಾಗದಿರದು. ವೀರಾಗಮವು ಸಂಸ್ಕೃತದ ಸನಾತನ 'ಶೂನ್ಯ ಸಂಪಾದನೆ' ಎಂದು ಹೇಳಲು ಯಾವ ಅಭ್ಯಂತರವಿಲ್ಲ. ಇದರ ರೀತಿಯೇ ಕನ್ನಡ ಶೂನ್ಯ ಸಂಪಾದನೆಯುದಾಗಿದೆಯೆಂದು ಚೆನ್ನಾಗಿ ಅಧ್ಯಯನ ಮಾಡಿದರೆ ಅನುಭವಕ್ಕೆ ಬಾರದಿರದು. ಸಂವಾದಕ್ಕೆಂಬಿಲ್ಲದಿದ್ದರೂ ವಿಷಯ ನಿರೂಪಣೆ ವಿಚಾರ ವಿಸ್ತರಣೆ ಇವುಗಳಿಗೆ ತಕ್ಕ ಶಿವಾಚಾರದವರ ಮಿಗಿಲಾಗಿ ಶ್ರೀ ರೇಣುಕ

ಶಿವಾಚಾರ್ಯರ ಕಥಾತ್ಮಕ ಚಾರಿತ್ರ ಜೋಡಣೆ ವೀರಾಗಮದ್ದೇ ಆದ ವಿಶಿಷ್ಟ ರೀತಿಯಾಗಿದೆ. ವೀರ ಮಾಹೇಶ್ವರರನ್ನು ಭೂರುದ್ರರನ್ನಾಗಿಸಿದೆ ಭೂಸುರರಿಗೆ ಪ್ರತಿಯಾಗಿ ! ವಿಪ್ರಭೂಸುರರಿಗಿಂತ ಭೂರುದ್ರ ಮಾಹೇಶ್ವರರು ವಿಶಿಷ್ಟ ಶಕ್ತಿ ಸಂಪನ್ನರೆಂಬುದನ್ನು ಸುದೀರ್ಘವಾಗಿ ಸಾಧಿಸಿದೆ. ಇದೇ ಕ್ರಮವನ್ನು ನೂತನ ವಚನಕಾರರು ಮಾಹೇಶ್ವರ ಸ್ಥಲದಲ್ಲಿ ವಿಪ್ರರನ್ನು ವಿಡಂಬಿಸುವ ಸಂಪ್ರದಾಯ ವೀರಾಗಮದಿಂದ ಬಂದಿದೆಯೆಂದು ಭಾವಕ್ಕೆ ಬಂದು ತೀರುತ್ತದೆ.

ವೀರಮಾಹೇಶ್ವರರು ಭೂರುದ್ರರು ಮಹಾಶ್ರೇಷ್ಠರು ಸಂಪೂಜ್ಯರು ಸರ್ವಾದರ್ಶರು ಆಗುವಂತೆ ಶ್ರೀ ರೇಣುಕ ಭಗವತ್ಪಾದರು ಸಾಂಸ್ಕಾರಿಕ ಶಿಕ್ಷಣ ವನ್ನಿತ್ತರು. ಸಾರ್ವಜನಿಕರ ಉದ್ಧಾರ ಒಂದೆತ್ತಾದರೆ ವೀರಮಾಹೇಶ್ವರರ ಉದ್ಧಾರ 'ಇನ್ನೊಂದೆತ್ತಾಗಿದ್ದಿತು. ವೀರಶೈವ ಪ್ರವರ್ತಕರನ್ನಾಗಿ ಶಿವಾ ದ್ವೈತ ಸಿದ್ಧಾಂತಾನುಭಾವಿಗಳನ್ನಾಗಿ ತ್ರಿಷಷ್ಠಿ ಶೀಲ ಸಂಪನ್ನರನ್ನಾಗಿ ಮಾಡಿ ದರು. ಇದರಿಂದ ವೀರಮಾಹೇಶ್ವರರು ಅಂದಿನ ಆ ಸಾಮಾಜಿಕ ಭಕ್ತರನ್ನು ತ್ರಿಷಷ್ಠಿ ಶೀಲಾಚರಣೆಯಿಂದ ಹುಣ್ಣಿಮೆ ಚಂದ್ರನ ಬೆಳ್ದಿಂಗಳಂತೆ ಬೆಳ್ಳಂ ಬೆಳಗುವ ಚಾರಿತ್ರವುಳ್ಳವರನ್ನಾಗಿ ಮಾಡುತ್ತಿದ್ದರು. ಇದರಿಂದಾಗಿ ಶಿವಾ ಚಾರದ ಶಿವಭಕ್ತರುಗಳು ವೀರಮಾಹೇಶ್ವರರನ್ನು ಪರಮ ಪ್ರೀತಿಯಿಂದ ಪೂಜಿಸಿ ಗೌರವದಿಂದ ಕಾಣುತ್ತಿದ್ದರು. ದಿಟಕ್ಕೂ ಭೂರುದ್ರರೆಂದೆ ಭಾವಿಸು ತ್ತಿದ್ದರು.

## ಧರ್ಮಜ್ಞ ಧರ್ಮಗುಪ್ತನ ಧರ್ಮ ದೀಪ್ತಿ !

ವೀರ ಮಾಹೇಶ್ವರ ಕಟ್ಟು ಕಟ್ಟಳೆಗಳನ್ನು ಕಟ್ಟುನಿಟ್ಟಾಗಿ ನಿಜನಿಷ್ಠೆಯಿಂದ ನಡೆಯಿಸಿಕೊಂಡು ಬರುತ್ತಿದ್ದನೊಬ್ಬ ಧರ್ಮಗುಪ್ತನೆಂಬ ಮಹಾರಾಜ. ಆತನು ವೀರಮಾಹೇಶ್ವರ ಶಿವದೀಕ್ಷೆಯನ್ನು ಪಡೆದಿದ್ದನು. ಅದರಿಂದಾಗಿ ಆತ ಧರ್ಮಜ್ಞನು, ಸತ್ಯಸಂಧನು, ತತ್ತ್ವನಿಧಿಯು, ಸರ್ವ ಶಾಸ್ತ್ರಾಸ್ತ್ರ ಕೋವಿದನು ನವಯವ್ವನ ಸಂಪನ್ನನು, ಆಗ ಮಾರ್ಥ ವಿಶಾರದನು, ಶ್ರೀಮಂತನು, ಮಂತ್ರ ನಿಧಿಯೂ ಆಗಿದ್ದನು. ಇದರಿಂದಾಗಿ ಈತನನ್ನು ಅಂದು ಜನರು 'ದ್ವಿತೀಯ ಪರಮೇಶ್ವರ' ಎಂದು ಮನಸಾರೆ ಮೆಚ್ಚಿ ಕರೆಯುತ್ತಿದ್ದರೆಂದರೆ ಧರ್ಮಗುಪ್ತನ

ಧರ್ಮದೀಪ್ತಿಯ ಪ್ರಭಾವ ಪ್ರಭೂತತ್ತ್ವವನ್ನು ಬೇರೆ ಹೇಳಬೇಕಾಗಿಲ್ಲ. ಅರವತ್ತು ನಾಲ್ಕು ಕಳಾವಿದ್ಯೆಯೆಂಬ ಸುಂದರಿಯನ್ನು ತನ್ನ ಧರ್ಮ ಪತ್ನಿಯನ್ನಾಗಿ ಮಾಡಿಕೊಂಡಿದ್ದನಂತೆ ! ಯಂತ್ರ ತಂತ್ರ ಮಂತ್ರಗಳಲ್ಲಿ ಮಂತ್ರಿಗಳೊಡನೆ ಮಂತ್ರಾಲೋಚನದಲ್ಲಿ ನಿಪುಣನೂ ನಿತ್ಯ ತತ್ಪರನೂ ಆಗಿ ತನ್ನ ನಿತ್ಯ ಕ್ರಿಯಾಶೀಲತೆಯಲ್ಲಿ ಕಿಂಚಿತ್ತೂ ತಪ್ಪದೆ ತತ್ಪರನಾಗಿರುತ್ತಿದ್ದನು.

ಆತನ ಆ ಗಂಧವತಿ ನಗರದಲ್ಲಿ ದ್ವಿಜರಿರುತ್ತಿದ್ದರು. ಇವರು ದುರಾಚಾರಿಗಳೂ ದುರಾಲಾಪರೂ ಗೂಢಪಾಪಾನ್ವಿತರೂ ಸೋಮಪಾನಾಸಕ್ತರೂ ಯಾಗ ಮಾಂಸ ಭಕ್ಷಕರೂ ಕುಲಾಭಿಮಾನಿಗಳೂ ಶಿವಸಂಸ್ಕಾರ ವರ್ಜಿತರೂ ಪುರಾಣಾರ್ಥ ವಿಶಾರದರೂ ಋಷಿಗೋತ್ರಾನ್ವಯ ನಿರತರೂ ಕುತ್ಸಿತರೂ ಕುಲಜಾಲಕರೂ ಪಾಪರತರೂ ಪಾಪಾತ್ಮರೂ ಆಗಿದ್ದರು. ವೀರಮಾಹೇಶ್ವರನೇ ಶಿವನು ಶಿವನೇ ವೀರಮಾಹೇಶ್ವರ ಎಂದು ನಿತಾಂತವಾಗಿ ನಂಬಿದ್ದ ಧರ್ಮಗುಪ್ತ ಮಹಾಭೂಪನು ಭೂಸುರರಾದ ನಾವೇ ಹೆಚ್ಚೆಂದು ಹೇಳಿಕೊಳ್ಳುವ ವಿಪ್ರರನ್ನು ಗಂಧವತೀ ನಗರದಿಂದ ಹೊರಕ್ಕೆ ಅಟ್ಟುವನು. ಇದನ್ನು ಕೇಳಿ ತಾಯಿಯಾದ ವಜ್ರಶೀಲೆಗೆ ವಜ್ರಕೋಪ ಉದಿಸುವುದು :

"ಮಂತ್ರಾಧೀನಂ ಜಗತ್ಸರ್ವಂ ತನ್ಮಂತ್ರಂ ಮಂತ್ರಲಕ್ಷಿತಾನ್ ।
ದ್ವಿಜಾಧೀನಮಿತಿ ಸರ್ವೇ ಪುರಾಣಾರ್ಥೈರ್ವಿಪಕ್ಷಿತಃ ॥"

ಎಂದು ಉಸುರುವಳು.

ಹಾ ! ಏನು ? ಜಗತ್ತಿಗೆಲ್ಲ ಬೇಕಾದ ಮಂತ್ರ, ಮಂತ್ರಲಕ್ಷಿತರಾದ ದ್ವಿಜರ ಅಧೀನವೇ ? ಇದು ಪುರಾಣೋಕ್ತವಾಗಿ ಪ್ರಸಿದ್ಧವಾಗಿದೆಯೇ ? ನಿನಗಾರು ಹೇಳಿದರು ? ಒಂದು ವೇಳೆ ಇದ್ದರೂ ಧರ್ಮಶಾಸ್ತ್ರ ಬಲ್ಲಿದಳೂ ಸಾಧ್ವಿಯೂ ವಜ್ರದಂತೆ ಅಭೇದ್ಯ ಶೀಲಾಚರಣೆಯುಳ್ಳ ಶಿವಾಚಾರಿಣಿಯ ಬಾಯಿಂದ ಬರುವ ಮಾತೇ ಇದು ? ಇನ್ನು ನೀನು ನನ್ನ ಮಾತೆಯಲ್ಲ ; ಮಾರಿ ಎಂದು ರೋಷಾವೇಷ ತಳೆದು ತಕ್ಷಣವೇ ಕೆಲವು ದ್ವಿಜಾಧಮರೊಡನೆ ತಾಯಿಯನ್ನು ಖಡ್ಗದಿಂದ ಕಡಿದು ಹಾಕುವನು, ವೀರಮಾಹೇಶ್ವರತ್ವದ ಸದಭಿಮಾನದಿಂದ ನಿರ್ಮೋಹ ನಿಲುಹಿಸಿಂದ.

ಇದನ್ನು ನೋಡಿ ವಿನೆಲ್ಲ ದೇವತೆಗಳು ಮುನಿದರು. ತತ್ತ್ವ ತತ್ತ್ವಾರ್ಥ ಸಾಧನ ಕಾರಣಾತ್ಮಕನಾದ ಧರ್ಮಗುಪ್ತ ನೃಪನೊಡನೆ ಅತ್ಯದ್ಭುತ ವಾಗಿ ಯುದ್ಧ ಮಾಡುವರು. ಧರ್ಮಗುಪ್ತನ ಬಾಹು ದಂಡ ಬಲವಾಗಿದ್ದಿತು. ವೀರಮಾಹೇಶ್ವರ ಧರ್ಮ ಶ್ರೀಯ ವೀರತ್ವ ಆತನ ಬಾಹುಗಳಲಿ ಅವತರಣ ಗೊಂಡಿತ್ತು. ಸಾಲದ್ದಕ್ಕೆ ವೀರ ರೇಣುಕರ ವಿಶಿಷ್ಟ ವಿಶ್ವೈಕ ವೀರತನವೂ ಅವರ ಅಪಾರ ಕರುಣೆಯಿಂದ ಅಳವಟ್ಟಿತ್ತು. ಇದರಿಂದಾಗಿ ಆತನ ಬಾಹು ಗಳು ವ್ಯಕ್ತಿನಿಷ್ಠ ಬಾಹುಗಳಾಗಿರಲಿಲ್ಲ. ವಿಶ್ವನಿಷ್ಠ ವಿಶಿಷ್ಟ ವೀರಬಾಹು ಗಳಾಗಿದ್ದವು. ಇತಿಹಾಸದಲ್ಲಿ ಸುಪ್ರಸಿದ್ಧ ಅಸದೃಶ ಶಕ್ತಿ ಸಂಪನ್ನ ರುದ್ರ ದೇವನ ಪಾಶುಪತಾಸ್ತ್ರಗಳಾಗಿದ್ದವು. ಆತನ ಆ ಪ್ರಪುಷ್ಟಿ ಮುಷ್ಟಿಪಾತದಿಂದ ವಿಷ್ಣು ಮೊದಲಾದ ದೇವತಾ ಸಮೂಹವು ಸೋತು ಹೋಗುವರು. ವಿಜಯ ಅದ್ವಿತೀಯ ಧೀರನಾದ ಧರ್ಮ ಗುಪ್ತನದಾಗುವುದು. ಇದನರಿತು ರುದ್ರಗಣ ಪ್ರಮಥಗಣರು ಧರ್ಮಗುಪ್ತನ ಗಂಧವತೀ ಪಟ್ಟಣಕ್ಕೆ ಉಲ್ಲಾಸ ಉತ್ಸಾಹ ಗಳಿಂದ ಭಾವಿಸಿ ಬಂದು ಧರ್ಮಗುಪ್ತನನ್ನು ದರ್ಶಿಸಿ ಜಯ ಸೂಚಕ ಧನ್ಯವಾದ ಗಳನ್ನೆಸಗುವರು. ರುದ್ರಕನ್ನೆಯರು ಧರ್ಮಗುಪ್ತನ ಮಂಡೆಯ ಮೇಲೆ ಪರಮ ಸಂತೋಷದಿಂದ ಪುಷ್ಪವೃಷ್ಟಿಯನ್ನು ಮಾಡುವರು. ಮನಸಾರೆ ಬಣ್ಣಿಸುವರು. ಎಲ್ಲ ಗಾಳಿಗಳು ದಕ್ಷಿಣ ವಾಯುಗಳಾಗಿ ತಂಪು ಕಂಪುಗಳನ್ನು ಒಯ್ಯನೊಯ್ಯನೇ ಬೀಸಿದವು. ಮಂತ್ರ ಪಾರಗನಾದ ಮಹಾತೇಜಸ್ವಿಯಾದ ಷಣ್ಮುಖನು ಮುಂದೆ ಬಂದು ಧರ್ಮಗುಪ್ತನ ಸುವರ್ಣ ವರ್ಣದ ಮತ್ತು ಸಂಪಿಗೆ ಹೂವಿನಂತೆ ಕೋಮಲವಾದ ಅಂಗವನ್ನು ತನ್ನ ಅಳವಿಗೆ ತೆಗೆದುಕೊಂಡು ಗಾಢವಾಗಿ ಆಲಂಗಿಸುವನು. ಮತ್ತು ನೂರು ಕೌಸ್ತುಭಗಳಂತೆ ತಳ ತಳಿಸುವ ವಿರುಂಜ ವ್ವಸದ ಧರ್ಮಗುಪ್ತನ ಅಂಗಕ್ಕೆ ಚಿಂತಾಮಣಿಗಳ ಮಾಲೆಯನ್ನು ಹಾಕುವನು. ಅಂತಹ ಆ ಅಮೂಲ್ಯವಾದ ಕಾರ್ತಿಕೇಯನ ಚಿಂತಾಮಣಿಗಳ ಹಾರವನ್ನು ಒಡನೆ ಧರ್ಮಗುಪ್ತನು ತೆಗೆದು, ಮುಕ್ತಿ ಮೂಲ ನೆಲೆಯಲ್ಲಿರುವ ಒಂದು ಮುಖದ ರುದ್ರಾಕ್ಷಿಯನ್ನು ಹಿರಿದಾದ ಹರುಷದಿಂದ ಕೊರಳಲ್ಲಿ ಹಾಕಿಕೊಳ್ಳು ವನು. ಚಿಂತಾಮಣಿಗೆ ಚಿಂತಾಮಣಿಯಾದ ಈ ಏಕ ಮುಖದ ರುದ್ರಾಕ್ಷಿ, ರುದ್ರ ರಕ್ಷೆಯಾಗಿರುವಾಗ ಕ್ಷುದ್ರ ದೇವತೆಗಳು ನನ್ನನೇನು ಮಾಡುವರು ? ಎಂದು ವೀರಮಾಹೇಶ್ವರರ ಪ್ರಾಸಾದಿಕ ರುದ್ರಾಕ್ಷಾನುಗ್ರಹದಿಂದ ಧೈರ್ಯ ಸ್ಥೈರ್ಯವುಳ್ಳ

ವನಾಗಿ ನಿಷ್ಕಂಟಕನಾಗಿ ನಿರಂತರ ವೀರಮಾಹೇಶ್ವರರ ವಿಶಿಷ್ಟಾರಾಧಕನಾಗಿ ಸುಸ್ವಸ್ಥನಾಗಿ ಬಾಳುತ್ತಿದ್ದನು-ಬೆಳಕಾಗಿ ಬೃಹತ್ತಾಗಿ ! ಪ್ರತಿಯಾಗಿ ವಿರೋಧಿಗಳು ವಿಶ್ವಾಸಿಗಳಾಗಿ ಆರಾಧಕರಾದರು. “ಋಷಯಃ ಪೂರ್ವ ತತ್ತ್ವಜ್ಞಾಃ ಶಂಭುಧ್ಯಾನ ಪರಾಯಣಾಃ ! ಏತಸ್ಮಿನ್ನಂತರೇ ದೇವಾ ವಿಷ್ಣು ಬ್ರಹ್ಮೇಂದ್ರ ವಾಯುವಃ ॥ ಅಂಧಕಾಃ ಪ್ರಕೃತ ಜ್ಞಾನಾ ಆಗಮಾಚಾರ ವರ್ಜಿತಾಃ । ಧರ್ಮ ಗುಪ್ತಂ ನೃಪಂ ಸ್ತೋತುಂ ತಾಂಕ್ಷಂತಿ ಗಗನಾಂತರೇ ॥ ಎಂದು ಅದೇ ವೀರಾಗಮ ವಾಣಿ ಉಗ್ಗಡಿಸಿದೆ.



*ಶ್ರೀ ಜ.ಚ.ನಿ. ಸನ್ನಿಧಿಯ ಅಧ್ಯಯನ ಪೀಠವು ಹೊರತರಲು ಉದ್ದೇಶಿಸಿದ ಆರು ಗ್ರಂಥಗಳಿವು:

೧) ವಿಶ್ವ ಸಂಸ್ಕೃತಿಗೆ ಭಾರತೀಯ ಕೊಡುಗೆ

೨) ಭಾರತೀಯ ಸಂಸ್ಕೃತಿಗೆ ಕನ್ನಡದ ಕೊಡುಗೆ

೩) ಕರ್ನಾಟಕ ಸಂಸ್ಕೃತಿಗೆ ವೀರಶೈವ ಕೊಡುಗೆ

೪) ವೀರಶೈವ ಸಂಸ್ಕೃತಿಗೆ ಶಿವಾಚಾರ್ಯರ ಕೊಡುಗೆ

೫) ಶಿವಾಚಾರ್ಯ ಸಂಸ್ಕೃತಿಗೆ ಶಿವಾಗಮಗಳ ಕೊಡುಗೆ

೬) ತತ್ತ್ವಾರ್ಥ ಚಿಂತನೆ

---

* ಮೊದಲಿನವೆರಡನ್ನುಳಿದು ಉಳಿದವು ಉಪಲಬ್ಧವಾಗುತ್ತವೆ.